# ಸಂಧ್ಯಾವಂದನೆಯ ತತ್ವಾರ್ಥ

ಮತ್ತು

# ವೇದಪ್ರಕಾಶಿಕೆ (ವೀಣಾರಹಸ್ಯ)

---

ಯಡತೊರೆ ಸುಬ್ಬರಾಯಶರ್ಮ ವಿರಚಿತ

---

ಬೆಂಗಳೂರು
ರಾಧಾ ಪ್ರೆಸ್ಸಿನಲ್ಲಿ
ಮುದ್ರಿಸಲ್ಪಟ್ಟಿತು

೧೯೩೭

 [ಬೆಲೆ ೨—೮—೦

# ಸಂಧ್ಯಾವಂದನೆಯ ತತ್ವಾರ್ಥ

ಮತ್ತು

# ವೇದಪ್ರಕಾಶಿಕೆ ( ವೀಣಾರಹಸ್ಯ)



## ಸಂಧ್ಯಾವಂದನೆಯ ತತ್ವಾರ್ಥ :—

ಬ್ರಹ್ಮ ಕ್ಷತ್ರಿಯ ವೈಶ್ಯರು ಆಚರಿಸುತ್ತಿರುವ ಋಗ್ಯಜುಸ್ಸಾಮ ಶಾಖೆಗಳ ಸಂಧ್ಯಾವಂದನೆಯ ಮಂತ್ರಗಳ ತಾತ್ಪರ್ಯ ಮತ್ತು ಆಂತರ್ಯವಾದ ತತ್ವಗಳು.

**ಪ್ರ ಕ ರ ಣ ಗ ಳು** **ಪೇಜು**



## ವೇದಪ್ರಕಾಶಿಕೆ (ವೀಣಾರಹಸ್ಯ)

**ಪ್ರ ಕ ರ ಣ ಗ ಳು**

---

## ಈ ಗ್ರಂಥದಲ್ಲಿರುವ ಚಿತ್ರಗಳು



---

## ಅಭಿಪ್ರಾಯಗಳು





ಶ್ರೀ:



## ಶ್ರೀ ಶಾರದಾ ಗುರುಭ್ಯಾಂನಮಃ

ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀತಥಾ |
ವಾರಾಹೀ ಚೈವ ಚೇಂದ್ರಾಣೀ ಚಾಮುಂಡಾ ಸಪ್ತಮಾತರಃ ||೧||

ಯಾತ್ರಯೀ ಮಧ್ಯಗಾದೇವೀ ಯಾತ್ರಯ್ಯಂತೇ ಪ್ರತಿಷ್ಠಿತಾ |
ಯಾಬ್ರಾಹ್ಮೀ ಪರಮಾಶಕ್ತಿಃ ತಾಂ ವಂದೇ ಸಪ್ತಮಾತೃಕಾಂ ||೨||

ಯಾವಿಶ್ವ ಜನನೀ ದೇವೀ ಯಾತ್ರಿಮೂರ್ತಿ ಸ್ವರೂಪಿಣೀ |
ಗಾಯತ್ರೀ ರೂಪಿಣೀ ಯಾಹಿ ತಾಂವಂದೇ ಸಪ್ತಮಾತೃಕಾಂ ||೩||

ಯಾ ವರ್ಣರೂಪಾ ಕಲ್ಯಾಣೀ ಯಾಚವ್ಯಾಹೃತಿ ರೂಪಿಣೀ |
ತೀರ್ಥರಾಮೇಶ ದುರ್ಗಸ್ಥಾ ತಾಂವಂದೇ ಸಪ್ತಮಾತೃಕಾಂ ||೪||

ತಯಾದೇವ್ಯಾ ಪ್ರೇರಿತೋಽಹಂ ವೀಣಾತತ್ವಾರ್ಥ ಸಮ್ಮಿತಾಂ |
ಅರ್ಪಯಾಮಿ ಕೃತಿಂ ಭಕ್ತ್ಯಾ ಶ್ರೀದೇವ್ಯಾಶ್ಚರಣಾಂಬುಜೇ ||೫||

ಶ್ರೀ ವಿದ್ಯಾರಣ್ಯಸ್ವಾಮಿಗಳಿಂದ ಪ್ರಾರ್ಥಿತಳಾಗಿ ಹಾಗಲವಾಡಿ ಸಂಸ್ಥಾನದ ಶ್ರೀರಾಮೇಶದುರ್ಗದ ತಪ್ಪಲಿನಲ್ಲಿ ಪ್ರತಿಷ್ಠಿತಳಾಗಿ ನೆಲೆಸಿರುವ ತ್ರಿಮೂರ್ತಿರೂಪಿಣಿಯೂ, ಗಾಯತ್ರೀರೂಪಿಣಿಯೂ, ಸಪ್ತವ್ಯಾಹೃತಿ ಸಪ್ತಸ್ವರ ಮತ್ತು ಸಪ್ತ ಲೋಕಗಳಿಗೆ ಮೂಲಶಕ್ತಿರೂಪಳೂ, ವೇದದ ಆದಿಮಧ್ಯಾಂತದಲ್ಲಿ

ಪ್ರತಿಷ್ಠಿತಳೂ ಆದ ಎಲೌ ಜಗನ್ಮಾತೆಯೇ! ನಿನ್ನ ಅನುಗ್ರಹದ ಪ್ರೇರಣೆಯಿಂದ ಬರೆದ ಈ ವೀಣಾಸಂಧ್ಯಾ ತತ್ವಾರ್ಥ ಲೇಖನವನ್ನು ನಿನ್ನ ಚರಣಾರವಿಂದಗಳಲ್ಲಿ ಭಕ್ತಿಪೂರ್ವಕವಾಗಿ ಸಾಷ್ಟಾಂಗಪ್ರಣಾಮಗಳಿಂದ ಅರ್ಪಿಸಿರುವೆನು. ಈ ಗ್ರಂಥಕ್ಕೆ ನೀನೇ ಕಾರಣಕರ್ತಳಾದುದರಿಂದ ಇದರಲ್ಲಿರುವ ಗುಣ ಲೋಪದೋಷಗಳೆಲ್ಲವೂ ನಿನ್ನನ್ನೇ ವಹಿಸಿರುವುವು.

**ಈ ಗ್ರಂಥರಚನೆಗೆ ಕಾರಣ:—**

ಕೆಲವು ಶತಮಾನಗಳ ಹಿಂದೆ ವಿಜಯನಗರದ ರಾಜ್ಯಕ್ಕೆ ಸೇರಿದ ಹಾಗಲ ವಾಡಿ ಪಾಳಯ'ಸಂಸ್ಥಾನವೆಂಬುದಕ್ಕೆ ಸೇರಿದ್ದು, ಈಗ ಚಿಕ್ಕನಾಯ್ಕನಹಳ್ಳಿ ತಾಲ್ಲೂಕಿಗೆ ಸೇರಿರುವ ಗುಡ್ಡಗಳ ಮಧ್ಯದಲ್ಲಿ ಶ್ರೀರಾಮೇಶ್ವರ ಮತ್ತು ಶ್ರೀಸಪ್ತಮಾತೃಕಾಂಬಾ ದೇವಸ್ಥಾನಗಳಿರುವುವು. ನಾನು ಜನ್ಮಾಂತರದಲ್ಲಿ ಆ ಸ್ಥಳದಲ್ಲಿ ಪಾಳೆಯಗಾರನಾಗಿದ್ದೆನೆಂಬದಾಗಿ ಕಾರಣಾಂತರದಿಂದ ಕೆಲವು ಸನ್ನಿವೇಶಗಳು ಪ್ರಾಪ್ತವಾದುದನ್ನು ಶ್ರೀಮದ್ರಾಮಾಯಣದ ಅಂತರಾರ್ಥ ಗ್ರಂಥದಲ್ಲಿ ತಿಳಿಸಿರುವೆನಷ್ಟೆ! ಋಣಾನುಬಂಧವು ಪ್ರಾಪ್ತವಾಗಿ ಒಂದು ವರುಷದಕೆಳಗೆ ಶ್ರೀರಾಮೇಶ್ವರ ಶ್ರೀಸಪ್ತಮಾತೃಕಾಂಬಾ ಸೇವೆಗೆ ಹೋಗಿದ್ದಕಾಲದಲ್ಲಿ ಶ್ರೀಸಪ್ತಮಾತೃಕಾದೇವಿಯು ಕರುಣಾಕಟಾಕ್ಷದಿಂದ ಅನುಗ್ರಹಿಸಿದ ಪ್ರೇರಣೆಯಿಂದ ಆ ಮಾತೆಯ ಮಹಿಮೆಯು ಸ್ಫುರಣೆಗೆ ಬಂದುದರಲ್ಲಿ ತಕ್ಕಮಟ್ಟಿಗೆ ಈ ಗ್ರಂಥರೂಪವಾಗಿ ಬರೆದಿರುವೆನು.

ಸಪ್ತಮಾತೃಕಾದೇವಿಯು ಯಾರೆಂದು ಕೆಲವರಿಗೆ ಅನುಮಾನ ಬರಬಹುದು. ಪರಾಶಕ್ತಿಯಾದ ಓಂಕಾರವು ಅ, ಉ, ಮ, ಎಂಬ ಮೂರು ಮಾತ್ರೆಗಳೆಂದರೆ ತ್ರಿಮೂರ್ತಿಶಕ್ತಿಗಳಾಗಿ ತದನಂತರ ಸಪ್ತಮಾತೃಕಾ ಶಕ್ತಿಗಳಾಗುವುದು. ಆದುದರಿಂದ ಪರಾತ್ಪರವಸ್ತುವಾದ ಓಂಕಾರವೇ ಕಾರ್ಯಕ್ಕೋಸ್ಕರ, ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಎಂಬ ಶಕ್ತಿಯಾಗಿರುವುದು. ಆದುದರಿಂದ ಸಪ್ತಮಾತೃಕಾದೇವಿಯೆಂದರೆ ಈ ಏಳು ಶಕ್ತಿಯೂ ಸೇರಿದ ಬ್ರಾಹ್ಮೀಶಕ್ತಿಯೆಂದರೆ ಪರಾತ್ಪರವಸ್ತುವು. ಈ ಸಪ್ತಮಾತೃಕಾಶಕ್ತಿಯೇ ಸಪ್ತವ್ಯಾಹೃತಿ, ಸಪ್ತಸ್ವರ, ಸಪ್ತಲೋಕಗಳ ಮೂಲಕಾರಣಶಕ್ತಿಯಾಗಿಯೂ, ಗಾಯತ್ರೀ ವಿರಾಟ್‌ಸ್ವರೂಪದ ಶಕ್ತಿಯಾಗಿಯೂ ಇರುವುದು. ಈ ಸಪ್ತಮಾತೃಕಾ ಶಕ್ತಿಯು ಜಗತ್ತಿಗೆ ತಾಯಿಯಾಗಿ ಓಂಕಾರದ ವಿವರಣೆಯಾದ ವೇದವೆನಿಸುವ ನಾದಬ್ರಹ್ಮರೂಪವಾಗಿ ಚರಾಚರರೂಪವಾದ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನುಂಟುಮಾಡುವುದು.

ಈ ಸಪ್ತಮಾತೃಕಾಂಬಾ ದೇವಸ್ಥಾನವು ಭರತಖಂಡದಲ್ಲಿ ಅಲ್ಲಲ್ಲಿರುವುದು. ಆದರೆ ಬಹು ವಿರಳ. ಶ್ರೀಶಂಕರಾಚಾರ್ಯರವರ ಜನ್ಮಸ್ಥಳವಾದ ಕಾಲಟಿಯಲ್ಲಿ ಶ್ರೀಶಂಕರರ ಮಾತೃಸ್ಥಾನವಾದುದರಿಂದ ಶ್ರೀ ಸಚ್ಚಿದಾನಂದ ಶಿವಾಭಿನವ ಶ್ರೀನೃಸಿಂಹಭಾರತೀಮಹಾಸ್ವಾಮಿಗಳಿಂದ ಪ್ರತಿಷ್ಠಿತವಾದ ಮಾತೃಕಾಶಕ್ತಿಯೊಡಗೂಡಿದ ಬ್ರಾಹ್ಮೀಎಂದರೆ ಸಪ್ತಮಾತೃಕಾದೇವಿಯ ದೇವಸ್ಥಾನವು ಇರುವುದು. ಇದರಂತೆಯೇ ಬಹುಸುಂದರ ವಿಗ್ರಹಮೂರ್ತಿಯಾಗಿ ಮಹಾಯೋಗಿಗಳಾದ ಶ್ರೀವಿದ್ಯಾರಣ್ಯರವರಿಂದ ಪ್ರತಿಷ್ಠಿತವಾದ ದೇವರು ಹಾಗಲವಾಡಿ ಸಂಸ್ಥಾನದ ಶ್ರೀತೀರ್ಥರಾಮೇಶ್ವರ ದುರ್ಗದಲ್ಲಿಯೂ ಇರುವುದು. ಅಲ್ಲಿರತಕ್ಕ ಶ್ರೀರಾಮೇಶ್ವರನ ಮಹಿಮೆಯಾಗಿ ಶ್ರೀಮದ್ರಾಮಾಯಣದ ಅಂತರಾರ್ಥವೂ ಶ್ರೀಸಪ್ತಮಾತೃಕಾಂಬಾ ಮಹಿಮೆಯಾಗಿ ವೀಣಾಸಂಧ್ಯಾ ತತ್ವಾರ್ಥವೂ ಅನುಗ್ರಹವಾಗಿ ಹೊರಪಟ್ಟಿರುವುದು.

## ಗ್ರಂಥಪ್ರಚಾರಕ್ಕೆ ಕಾರಣ :—

೧ನೆಯದು:— ಭರತಖಂಡದಲ್ಲಿ ಅನೇಕ ಸಂಧ್ಯಾಭಾಷ್ಯಗಳಿವೆ ಯಾವ ಭಾಷ್ಯಗಳಿಂದಲೂ ತಿಳಿಯಲಸಾಧ್ಯವಾದ ಅನೇಕ ಸಂಧ್ಯಾತತ್ವವಿಚಾರಗಳೂ, ವೀಣೆಗೂ ಗಾಯತ್ರಿಗೂ ಸಮನ್ವಯ ಮಾಡಿರುವುದರಲ್ಲಿ ಹೊರಸೂಸಿರುವ ವೇದದ ಅಸದೃಶವಾದ ಮಹಿಮೆ, ಸಂಗೀತಕ್ಕೆ ವೇದವೇ ಮೂಲಾಧಾರವಾಗಿರುವ ವಿಚಾರಗಳು, ಭಗವತಿಯ ಅನುಗ್ರಹದಿಂದ ಲಭ್ಯವಾಗಿ ಇದರಲ್ಲಿರುವುದರಿಂದ ಈ ಗ್ರಂಥಾಮೃತವನ್ನು ಸರ್ವರೂ ಆದರದಿಂದ ಸ್ವೀಕರಿಸಿ ಇದರ ಸವಿಯನ್ನು ಅನುಭವಿಸಬೇಕೆಂಬ ಉದ್ದೇಶದಿಂದ ಈ ಗ್ರಂಥವನ್ನು ಹೊರಪಡಿಸಿರುವೆನು.

೨ನೆಯದು:— ಶ್ರೀರಾಮೇಶ್ವರ ಮತ್ತು ಶ್ರೀಸಪ್ತಮಾತೃಕಾಂಬಾ ದೇವಸ್ಥಾನಗಳು ಋಷ್ಯಾಶ್ರಮದಂತೆ ಬಹುರಮ್ಯವಾದ ವನಮಧ್ಯದಲ್ಲಿವೆ. ಪಾಳೆಯಗಾರನ ಕೋಟೆ ಮುಂತಾದವುಗಳೆಲ್ಲವೂ ನಿರ್ಮೂಲವಾಗಿ ಆ ಪ್ರದೇಶವೆಲ್ಲಾ ಈಗ ಕಾಡಾಗಿರುವುದು. ಪಾಳೆಯಗಾರನ ಕಾಲದಲ್ಲಿ ಬಹುಭಕ್ತಿವೈಭವಗಳಿಂದ ಸೇವೆ ಮಾಡಿಸಿಕೊಳ್ಳುತ್ತಿದ್ದ ಶ್ರೀರಾಮೇಶ್ವರ ಶ್ರೀಸಪ್ತಮಾತೃಕಾದೇವಿಯರು ಈಗ ಸರ್ವಸಂಗ ಪರಿತ್ಯಾಗಮಾಡಿದಂತೆ ನಿರ್ಜನವಾದ ವನಮಧ್ಯದಲ್ಲಿದ್ದುಕೊಂಡು ವ್ಯಾಘ್ರ ಚಿರತೆ, ಕರಡಿ ಮುಂತಾದ ಭಕ್ತಾದಿಗಳಿಂದಲೂ, ಅತ್ಯಲ್ಪ ಮಾನುಷ ಭಕ್ತಾದಿಗಳಿಂದಲೂ ಪರಿವೃತರಾಗಿರುವರು. ದೇವಸ್ಥಾನಗಳು ಕೇವಲ ಶಿಥಿಲವಾಗಿರುವುವಲ್ಲದೆ ವಿಧಿವತ್ತಾದ ಅರ್ಚನೆಗಳಿಲ್ಲದೆ ಇರುವುವು. ಶ್ರೀವಿದ್ಯಾರಣ್ಯರವರಿಂದ ಪ್ರತಿಷ್ಠಿತವಾದುದರಿಂದ ಮಹಿಮಾಶಕ್ತಿಯುಳ್ಳವೆಂದು ರಾಮಾಯಣದ ಅಂತರಾರ್ಥ ಮತ್ತು ಈ ಗ್ರಂಥಕಾರಣಗಳ ನನ್ನ ಸ್ವಾನುಭವದ ನಿದರ್ಶನಗಳಿಂದ ಹೇಳುತ್ತೇನೆ. ಅಲ್ಲದೆ

ಆ ಸ್ಥಳದ ಸುತ್ತಮುತ್ತ ವಾಸಿಸುತ್ತಿರುವ ಪ್ರಜೆಗಳಿಂದಲೂ ಪ್ರಖ್ಯಾತಿಗೊಂಡಿವೆ. ಶಿಥಿಲವಾಗಿರುವ ದೇವಸ್ಥಾನಗಳನ್ನು ಪುಣ್ಯಾತ್ಮರು ಜೀರ್ಣೋದ್ಧಾರಮಾಡಿ ಪುಣ್ಯಕ್ಕೆ ಭಾಗಿಗಳಾಗಿರುವ ಕಾರ್ಯವನ್ನು ಕೈಗೊಳ್ಳಲೆಂಬ ನನ್ನ ವಿನಯಪೂರ್ವಕವಾದ ಪ್ರಾರ್ಥನೆಯನ್ನು ಸೂಚಿಸುವ ಉದ್ದೇಶದಿಂದಲೂ ಈ ಗ್ರಂಥವನ್ನು ಪ್ರಚುರಕ್ಕೆತಂದಿರುವೆನು.

ನಾನು ದೇವರ ಸೇವೆಗೆ ಹೋಗಿದ್ದಕಾಲದಲ್ಲಿ ನಿರ್ಜನವಾದ ವನಮಧ್ಯದಲ್ಲಿ ಸಕಲ ಸಲಕರಣೆಗಳನ್ನೊದಗಿಸಿಕೊಟ್ಟು ನನ್ನ ಜೊತೆಯಲ್ಲಿಯೂ ಕೆಲವು ದಿನಗಳಿದ್ದು ದೇವತಾಸೇವೆಗೆ ಸಹಾಯಮಾಡಿದ ಮ|| ರಾ|| ತೀರ್ಥಪುರದ ನಂಜುಂಡಯ್ಯನವರಿಗೂ, ಮ|| ರಾ|| ಎಂ|| ಗೋಪಾಲಕೃಷ್ಣಯ್ಯನವರಿಗೂ, ಮ|| ರಾ|| ಸಾಹುಕಾರ್ ಹಾಲ್ಕುರಿಕೆ ಗುಂಡಪ್ಪನವರಿಗೂ, ಅಲ್ಲಿ ಅಮುಲ್ದಾರರಾಗಿದ್ದ ಮ|| ರಾ|| ಬಿ. ಸೂರ್ಯನಾರಾಯಣರಾಯರಿಗೂ ನಾನು ತುಂಬಾ ಕೃತಜ್ಞನಾಗಿರುವೆನು. ಈ ಗ್ರಂಥವನ್ನು ಪ್ರಕಾಶಕ್ಕೆತರಲು ಸಹಾಯಮಾಡುವ ಮಹನೀಯರುಗಳಿಗೆ ಸರ್ವಮಂಗಳವನ್ನುಂಟುಮಾಡಲೆಂದು ಶ್ರೀಶಾರದಾಂಬೆಯನ್ನು ಪ್ರಾರ್ಥಿಸುತ್ತೇನೆ.

ಧಾತು ಸಂ||
ಮಾರ್ಗಶೀರ್ಷ ಶುದ್ಧ
ಏಕಾದಶಿ ಗುರುವಾರ
ತಾ|| ೨೪-೧೨-೧೯೩೬



**ಯಡತೊರೆ ಸುಬ್ಬರಾಯಶರ್ಮ.**

ನಂ ೮ ಸಂಪಿಗೆರಸ್ತೆ
ಮಲ್ಲೇಶ್ವರ, ಬೆಂಗಳೂರು.



ಸಂಬಪು ಳ, ಯುವನಾಮ ಸಂ|| ಮಾರ್ಗಶೀರ್ಷ
ಶುಕ್ಲ ೧೪ ಚಂದ್ರವಾಸರೇ
ಮೊಕ್ಕಾಂ ಮೈಸೂರು.

ಶ್ರೀಮಜ್ಜಗದ್ಗುರು ಕೂಡಲಿ ಶೃಂಗೇರಿ
ಮಹಾಸಂಸ್ಥಾನ

|| ಶ್ರೀಃ ||

ಮೈಸೂರು ಶ್ರೀಮನ್ಮಹಾರಾಜರವರ ಆಸ್ಥಾನದ ಧರ್ಮಾಧಿಕಾರಿಗಳಾಗಿ ಮಹಾವಿದ್ವಾನ್ ಮಹಾಮಹೋಪಾಧ್ಯಾಯ ವಿದ್ಯಾನಿಧಿ ವಿದ್ಯಾವಾಚಸ್ಪತಿ **ವೇ ||ಬ್ರಹ್ಮಶ್ರೀ|| ವಿರೂಪಾಕ್ಷಶಾಸ್ತ್ರಿಗಳೆಂಬ** ನಾಮಾಂಕಿತದಿಂದಿದ್ದು ಸನ್ಯಾಸಾಶ್ರಮ ಸ್ವೀಕರಿಸಿ ಶ್ರೀಕೂಡಲಿಶೃಂಗೇರೀ ಪೀಠವನ್ನಲಂಕರಿಸಿದ್ದ ಶ್ರೀಮತ್ಪರಮಹಂಸ ಇತ್ಯಾದಿ ಬಿರುದಾಂಕಿತರಾದ ಶ್ರೀಮಜ್ಜಗದ್ಗುರು **ಶ್ರೀವಿದ್ಯಾಭಿನವ ವಾಲುಕೇಶ್ವರ ಭಾರತೀ ಮಹಾಸ್ವಾಮಿಗಳವರ** ಅನುಗ್ರಹಪೂರ್ವಕವಾದ ಅಭಿಪ್ರಾಯವು.

"ಶ್ರುತಿಸ್ಮೃತ್ಯಾದಿ ಪ್ರಮಾಣಾವಿರೋಧೇನ ಪರದೇವತಾ ಪರಮಾನುಗ್ರಹ ಮಾತ್ರ ಸಂಸ್ಫುರಿತ ಸದ್ಯುಕ್ತಿನಿಚಯೇನ ವಿರಚಿತಃ **ಸಂಧ್ಯಾವೀಣಾತತ್ವಾರ್ಥ** ನಾಮಕೋऽಯಂ ಗ್ರಂಥಃ ಸಮಗ್ರ್ಯಲೋಕಿ। ಅತ್ರ ಅನೇಕ ದುರವಗಾಹಾ ವಿಷಯಾಃ ಪ್ರತಿಪಾದಿತಾಃ। ಕಿಂಚಾಸ್ಮಿನ್ಗ್ರಂಥೇ ವಾಣೀಪಾಣಿಸ್ಥ ವೀಣಾದಂಡಃ ಗಾಯತ್ರೀ ಸಮತಯಾ ಶ್ಲಾಘ್ಯತಯಾ ನಿರೂಪಿತಃ | ಅಪಿಚ ಶಾಸ್ತ್ರಾನುಸಾರೇಣ ವೇದಾಪೌರುಷೇಯತ್ವಂ ಸಮ್ಯಕ್ ನಿರೂಪಿತಂ। ಏತದ್ಗ್ರಂಥಕರ್ತುಃ ಏತಾದೃಶ ಗ್ರಂಥರಚನಾಶಕ್ತಿಃ ದೇವತಾನುಗ್ರಹ ಬಲಾದೇವ ಸಂಜಾತಾ ನಾನ್ಯಥೇತಿ ಮನ್ಯಾ ಮಹೇ | ಅಯಂಗ್ರಂಥಃ ಸಕಲ ಜನಾನಾಮಾನಂದದಾಯಕೋ ವರ್ತತ ಇತಿ ದೃಢ ಮಾವೇದಯಾಮಃ।"

ಕನ್ನಡಕ್ಕೆ ತರ್ಜುಮೆ|| ಶ್ರುತಿಸ್ಮೃತಿ ಪ್ರಮಾಣಗಳಿಗೆ ವಿರೋಧವಿಲ್ಲದೆ ಪರದೇವತಾ ಪರಮಾನುಗ್ರಹದಿಂದ ಸ್ಫುರಿತವಾದ ಸಮೀಚೀನವಾದ ಯುಕ್ತಿ ಸಮುದಾಯಗಳಿಂದ ಕೂಡಿ ರಚಿಸಲ್ಪಟ್ಟಿರುವ ಸಂಧ್ಯಾವೀಣಾತತ್ವಾರ್ಥವೆಂಬ ಈ ಗ್ರಂಥವು ಚೆನ್ನಾಗಿ ಅವಲೋಕಿಸಲ್ಪಟ್ಟಿತು. ಈ ಗ್ರಂಥದಲ್ಲಿ ಅವಗಾಹನೆಗೂ

ಕಷ್ಟವಾದ ಅನೇಕ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ಮತ್ತು ಶ್ರೀಶಾರದಾ ದೇವಿಯ ಹಸ್ತದಲ್ಲಿರುವ ವೀಣೆಗೂ ಗಾಯತ್ರಿಗೂ ಶ್ಲಾಘ್ಯತರವಾಗಿಯೂ ಮುದ್ದಾಗಿಯೂ ಅನ್ವಯಿಸಿರುವುದು. ಅಲ್ಲದೆ ವೇದವು ಅಪೌರುಷೇಯವೆಂಬುದನ್ನು ಶಾಸ್ತ್ರಕ್ಕೆಅನುಸಾರವಾಗಿ ಬಹುಚೆನ್ನಾಗಿ ನಿರೂಪಿಸಲ್ಪಟ್ಟಿರುವುದು. ಈ ಗ್ರಂಥ ಕರ್ತನಿಗೆ ಇಂತಹ ಗ್ರಂಥರಚನಾಶಕ್ತಿಯು ದೇವತಾನುಗ್ರಹ ಬಲದಿಂದಲೇ ಉಂಟಾಗಿರುವುದಲ್ಲದೆ ಅನ್ಯಥಾ ಇಲ್ಲ. ಈ ಗ್ರಂಥವು ಸಕಲರಿಗೂ ಆನಂದ ವನ್ನುಂಟುಮಾಡುವುದೆಂದು ದೃಢವಾಗಿ ಆಶಿಸುವೆವು.



ಶ್ರೀಃ

# ಸಂಧ್ಯಾವಂದನೆಯ ತತ್ವಾರ್ಥ

ಯಾ ಸಂಧ್ಯಾ ಮಂಡಲ ಗತಾ ಯಾ ತ್ರಿಮೂರ್ತಿ ಸ್ವರೂಪಿಣೀ |
ಸರಸ್ವತೀ ಯಾ ಸಾವಿತ್ರೀ ತಾಂ ವಂದೇ ವೇದಮಾತರಂ ||



## ೧ ನೆಯ ಪ್ರಕರಣ

### ಸಂಧ್ಯಾಕರ್ಮ, ಸಂಧ್ಯಾಕಾಲ, ಸಂಧ್ಯಾಶಕ್ತಿ ವಿಚಾರಗಳು.



### ಸಂಧ್ಯಾಕರ್ಮವಿಚಾರ.

ಸಂಧ್ಯಾವಂದನೆಯೆಂದರೆ:— ಸಂಧಿಕಾಲದಲ್ಲುತ್ಪನ್ನವಾಗುವ ಪರಮೇಶ್ವರೀ ಶಕ್ತಿಯನ್ನು ವಂದಿಸುವಿಕೆ, ಗಾಯತ್ರೀದೇವತೋಪಾಸನೆ, ಈ ಉಪಾಸನಾಧಿಕಾರವನ್ನುಂಟುಮಾಡುವ ಮಾರ್ಜನೆ, ಅರ್ಘ್ಯಪ್ರದಾನ ಮುಂತಾದ ಅಂಗಭೂತವಾದ ಕರ್ಮಗಳೂ ಸೇರಿ ಸಂಧ್ಯಾವಂದನೆ ಎನಿಸಿಕೊಳ್ಳುವುದು. ಬ್ರಹ್ಮ, ಕ್ಷತ್ರಿಯ ವೈಶ್ಯರೆಂಬ ತ್ರಿವರ್ಣದವರೂ ಉಪನಯನ ಸಂಸ್ಕಾರವಾದ ಅನಂತರ ಈ ಸಂಧ್ಯಾಕರ್ಮವನ್ನಾಚರಿಸಲು ಅಧಿಕಾರಿಗಳು. ಈ ಸಂಧ್ಯಾಕರ್ಮವನ್ನ ಪ್ರತಿನಿತ್ಯವೂ ಪ್ರಾತಃ ಸಾಯಂ ಮಧ್ಯಾನ್ಹಗಳಾದ ತ್ರಿಕಾಲಗಳಲ್ಲೂ ಆಚರಿಸತಕ್ಕದ್ದಾಗಿದೆ.

ಸಂಧ್ಯಾವಂದನೆಯನ್ನು ಏತಕ್ಕೆ ಮಾಡಬೇಕೆಂದರೆ:— ಪ್ರತಿನಿತ್ಯವೂ ನಾವು ತಿಳಿದು ಅಥವಾ ತಿಳಿಯದೆ ಮಾಡಿದ ಅಧರ್ಮವಾದ ನಡೆವಳಿಕೆಗಳ ಪಾಪಗಳನ್ನು ಪರಿಹರಿಸಿಕೊಳ್ಳುವುದಕ್ಕೂ, ನಮ್ಮ ನಡೆವಳಿಕೆಗಳನ್ನು ಅಧರ್ಮಮಾರ್ಗದಿಂದ ಹಿಮ್ಮೆಟ್ಟಿಸಿ ಧರ್ಮಮಾರ್ಗದಲ್ಲಿ ಚರಿಸುವುದಕ್ಕೂ, ವೇದದಲ್ಲಿ ವಿಧಿಸಿರುವಂತೆ ದ್ವಿಜನೆಂಬ ನಾಮದ ಸಾರ್ಥಕತೆಯನ್ನುಂಟುಮಾಡುವ ಗಾಯತ್ರೀದೇವಿಯನ್ನು ಉಪಾಸನೆಮಾಡಿ ಆ ದೇವಿಯ ಅನುಗ್ರಹಕ್ಕೆ ಪಾತ್ರರಾಗಿ ಕರ್ಮ, ಭಕ್ತಿ, ಜ್ಞಾನ ಶಕ್ತಿಗಳನ್ನು ಹೆಚ್ಚಿಸಿಕೊಂಡು ಮೋಕ್ಷಸಾಮ್ರಾಜ್ಯವನ್ನು ಹೊಂದುವುದಕ್ಕೂ

ಸಂಧ್ಯಾವಂದನೆಯನ್ನು ಮಾಡಬೇಕು. ಸಂಧ್ಯಾವಂದನೆಯು ಸರ್ವಕರ್ಮ ಗಳಲ್ಲಿಯೂ ಅತ್ಯಂತ ಮುಖ್ಯವಾದ ನಿತ್ಯಕರ್ಮವಾಗಿರುವುದು. ಅಂದರೆ ಎಲ್ಲಾ ದೇವತಾ ಮತ್ತು ದೇಹಯಾತ್ರಾ ಕರ್ಮಗಳಿಗೂ ಸಂಧ್ಯಾಕರ್ಮವು ಅಸ್ತಿಭಾರ ದಂತಿದೆ. ಮನುಷ್ಯನ ದೇಹಧಾರಣೆಗೆ ಅತ್ಯವಶ್ಯಕವಾಗಿ ಬೇಕಾದ ಆಹಾರವನ್ನು ಪ್ರತಿನಿತ್ಯವೂ ತಪ್ಪದೆ ಸೇವಿಸುವಂತೆ ಸಂಧ್ಯಾಕರ್ಮವು ಬ್ರಹ್ಮ, ಕ್ಷತ್ರಿಯ, ವೈಶ್ಯರಿಗೆ ಪ್ರತಿನಿತ್ಯವೂ ಅತ್ಯವಶ್ಯಕವಾಗಿ ಅನುಷ್ಠೇಯವಾದ ಕರ್ಮವಾಗಿರುವುದು. ಅತ್ಯವ ಶ್ಯಕವಾದ ಆಹಾರವನ್ನು ಸೇವಿಸದಿದ್ದರೆ ದೇಹವು ಹೇಗೆ ನಶಿಸಿ ಪತನವಾಗುವುದೋ ಹಾಗೆ ಅತ್ಯವಶ್ಯಕವಾದ ಸಂಧ್ಯಾಕರ್ಮವನ್ನು ತ್ರೈವರ್ಣಿಕರು ಆಚರಿಸದಿದ್ದರೆ ಮನುಷ್ಯಜನ್ಮದಲ್ಲಿಯೂ ಬಹು ಪಾಪಸಂಬಂಧವಾದ ಜನ್ಮಗಳು ಬರುವುವಲ್ಲದೆ ಇನ್ನೂ ಕೀಳು ಜನ್ಮಗಳು ಬಂದು ಅನೇಕ ದುಃಖಗಳಿಗೂ ಭಾಗಿಗಳಾಗುತ್ತಾರೆ. ನಾವು ಆಹಾರ ಮುಂತಾದ ಪದಾರ್ಥಗಳನ್ನು ಮುಂದಿನ ದಿನ, ಮುಂದಿನ ತಿಂಗಳು ಮುಂದಿನ ಸಂವತ್ಸರಕ್ಕೂ ಮತ್ತು ಜನ್ಮವಿರುವವರೆಗೂ ಸಾಕಾಗುವಷ್ಟು ಶೇಖರಿಸ ಬೇಕೆಂದು ಪ್ರಯತ್ನಿಸಿ ಕಾರ್ಯಮಾಡುವಂತೆ ಈ ಜನ್ಮದಿಂದ ಮುಂದಕ್ಕೂ ಏನು ಶೇಖರಿಸಿಕೊಳ್ಳಬೇಕು ಮತ್ತು ಈ ಜನ್ಮದಲ್ಲೂ ಯಾವ ಮಾರ್ಗವನ್ನು ಅನುಸರಿ ಸಿದರೆ ನಿಶ್ಚಯವಾದ ಹಿತವಾಗುವುದು ಎಂಬುವುಗಳಿಗೂ ಚೆನ್ನಾಗಿ ಮನಸ್ಸುಕೊಡ ಬೇಕು. ಸಂಧ್ಯಾವಂದನೆಯು ಇಹಕ್ಕೂ ಪರಕ್ಕೂ ಸಾಧನವಾದ ಬಹು ಉತ್ತಮ ವಾದ ಕರ್ಮಸಂಸ್ಕಾರವಾಗಿದೆ ಪರಕ್ಕೂ ಸಾಧನವಾದ ಕರ್ಮವಾದುದರಿಂದಲೇ ನಿತ್ಯಕರ್ಮವೆಂದು ಕರೆಯಲ್ಪಡುವುದು. ನಿತ್ಯವಾದುದೇ ಪರಾತ್ಪರವಸ್ತುವು. ಅನಿತ್ಯವಾದವುಗಳನ್ನೆಲ್ಲಾ ದಾಟಿಸಿ ನಿತ್ಯವಾದ ಪರಾತ್ಪರವಸ್ತುವನ್ನು ಹೊಂದಿಸುವ ಕರ್ಮವಾಗಿರುವುದು. ಅಲ್ಲದೆ ಜನ್ಮಪ್ರತವಾಗಿ ಪ್ರತಿನಿತ್ಯವೂ ತಪ್ಪದೆ ಆಚರಿಸುವ ಕರ್ಮವಾದುದರಿಂದ ಬಹುಪ್ರಾಮುಖ್ಯವಾದ ನಿತ್ಯಕರ್ಮವೆನಿಸಿಕೊಂಡಿದೆ. ತ್ರೈವರ್ಣಿಕರು ನಿತ್ಯವಾದ ಸಂಧ್ಯಾಕರ್ಮವನ್ನು ಆಚರಿಸದ ಇತರ ಯಾವ ದೇವತಾಕರ್ಮಗಳನ್ನಾಚರಿಸಿದರೂ, ದಾನ ಧರ್ಮ ಪರೋಪಕಾರಗಳನ್ನು ಮಾಡಿದರೂ, ಸಾರ್ಥಕವುಳ್ಳದ್ದಾಗುವುದಿಲ್ಲ.

ಸಂಧ್ಯಾವಂದನೆಯು ಕರ್ಮ, ಭಕ್ತಿ, ಜ್ಞಾನಮಾರ್ಗಗಳ ಸಾರವನ್ನೆಲ್ಲಾ ಬೀಜರೂಪವಾಗಿ ಒಳಗೊಂಡಿರುವುದು. ಮಂತ್ರಗಳಲ್ಲಿರತಕ್ಕ ಕರ್ಮ ಜ್ಞಾನಮಾರ್ಗ ಗಳಿಗನುಸಾರವಾದ ರಹಸ್ಯಾರ್ಥಗಳನ್ನು ಗ್ರಾಹ್ಯಮಾಡಿಕೊಳ್ಳಲು ಪ್ರಥಮದಲ್ಲಿ ಎಲ್ಲರಿಗೂ ಸಾಧ್ಯವಾಗುವುದಿಲ್ಲ ಕರ್ಮಮಾಡುತ್ತಾ ಕ್ರಮೇಣ ಕರ್ಮಶಕ್ತಿ ಯಾದ ತಪಶ್ಶಕ್ತಿಯನ್ನೂ ಅಂತರವಾಗಿರುವ ಜ್ಞಾನಶಕ್ತಿಯನ್ನೂ ಅಭಿವೃದ್ಧಿ ಪಡಿಸಿಕೊಳ್ಳಬೇಕು. ಎಷ್ಟೇ ಪ್ರಜ್ಞಾವಂತನಾದರೂ ಕಾರ್ಯರೂಪವಾದ ಆಚರಣೆ ಯಲ್ಲಿ ತರದಿದ್ದರೆ ಸಾರ್ಥಕವಾಗುವುದಿಲ್ಲ. ಹೇಗಾದರೂ ಆಗಲಿ ಕರ್ಮಮಾಡಿದರೆ

ಅದಕ್ಕೆ ತಕ್ಕ ಪ್ರಯೋಜನವು ಇದ್ದೇ ಇರುವುದು. ಕಾರ್ಯಮಾಡುತ್ತಾಬರುವುದ ರಿಂದಲೇ ಅನುಭವವೂ ತಿಳಿವಳಿಕೆಯೂ ಉಂಟಾಗುವುವು. ಕರ್ಮಾಚರಣೆಯು ಪರಿಪೂರ್ಣ ಸಂಸ್ಕಾರಿಯನ್ನಾಗಿ ಮಾಡುವುದು. ಈ ತತ್ತ್ವದ ಮೇಲೆಯೇ ಜ್ಞಾನ ಮಾರ್ಗಕ್ಕೆ ಕರ್ಮಮಾರ್ಗವು ತಳಪಾಯದಂತಿರುವುದೆಂದು ಶಾಸ್ತ್ರವು ತಿಳಿಸುವುದು. ಮನುಷ್ಯರಲ್ಲಿ ಅನ್ಯೋನ್ಯವಿಶ್ವಾಸದ ಪ್ರದರ್ಶನವು ಕಾರ್ಯದಲ್ಲೇ ಆಗಬೇಕು. ಇದ ರಂತೆ ಭಕ್ತಿಪ್ರದರ್ಶನವೂ ಕರ್ಮದಲ್ಲಿಯೇ ಆಗಬೇಕಾಗಿದೆ. ಪ್ರತಿಕರ್ಮ ದಲ್ಲಿಯೂ ದೇವತಾಶಕ್ತಿಯ ಗುಣಕಥನ ಬರುವುದಲ್ಲದೆ ದೇವತಾಭಾವನೆ ಯೊಡನೆ ಕರ್ಮಮಾಡಬೇಕಾದ್ದರಿಂದ ಕರ್ಮಕ್ಕೂ ಉಪಾಸನೆಗೂ ನಿಕಟ ಸಂಬಂಧವು ಇದ್ದೇ ಇರುವುದು. ಆದುದರಿಂದ ಇಹಪರಗಳೆರಡಕ್ಕೂ ಸಾಧನವಾದ ಸಂಧ್ಯಾಕರ್ಮವನ್ನು ಪ್ರತಿನಿತ್ಯವೂ ಅವಶ್ಯಕವಾಗಿ ಆಚರಿಸಬೇಕು.

ಸದಾಚಾರವು ನಿರ್ಬಂಧದಿಂದಲೇ ನಡೆಯಬೇಕು. ಕಾರಣವೇನೆಂದರೆ ದುರಾಚಾರವು ಮನುಷ್ಯನನ್ನು ಸದಾಚಾರದಿಂದ ಎಳೆಯುತ್ತಲೇ ಇರುತ್ತದೆ. ಆದುದರಿಂದ ಅಧರ್ಮಮಾರ್ಗದಿಂದ ಹಿಮ್ಮೆಟ್ಟಿ ಸನ್ಮಾರ್ಗದಲ್ಲಿರಲು ಮನುಷ್ಯನಿಗೆ ನಿರ್ಬಂಧವಿದ್ದೇ ಇರಬೇಕು. ಸದಾಚಾರದಲ್ಲಿಡಿಸುವ ನಿರ್ಬಂಧಗಳು ಯಾವು ವೆಂದರೆ:— ೧. ಶಾಸ್ತ್ರ ೨. ಗುರು ಮತ್ತು ರಾಜಾಜ್ಞೆ ೩. ಆಯಾವರ್ಣದವರ ಸಂಗಡಗಳಲ್ಲಿನ ನಿರ್ಬಂಧ ೪. ಚಿಕ್ಕವಯಸ್ಸಿನವರಿಗೆ ಮಾತಾಪಿತೃಗಳ ನಿರ್ಬಂಧ. ಈ ನಿರ್ಬಂಧಗಳೆಲ್ಲವೂ ಒಟ್ಟುಗೂಡಿದ್ದರೆ ಬಹು ಉತ್ತಮ ಫಲಕಾರಿಯಾಗುವುದು. ಹಾಗಿಲ್ಲವಾದರೆ ಶಾಸ್ತ್ರನಿಯಮವನ್ನು ಅನುಸರಿಸಿ ಇತರ ನಿಬಂಧನೆಗಳಲ್ಲಿ ಯಾವ ಒಂದಾದರೂ ಪ್ರಬಲವಾಗಿರಬೇಕು. ಎಲ್ಲರಿಗೂ ಶಾಸ್ತ್ರತಿಳಿವಳಿಕೆ ಪ್ರಥಮದಲ್ಲಿಯೇ ಉಂಟಾಗುವುದಿಲ್ಲ. ಆದ್ದರಿಂದ ತ್ರೈವರ್ಣಿಕರಲ್ಲೂ ಈ ಸಂಧ್ಯಾಕರ್ಮ ಒಂದ ನ್ನಾದರೂ ಆಚರಿಸುತ್ತಿರುವಂತೆ ರಾಜನ ಕಟ್ಟಾಜ್ಞೆಯಂತೆ ಪ್ರಬಲವಾದ ನಿರ್ಬಂಧ ವಿದ್ದರೇನೆ ಇಹಕ್ಕೂ ಪರಕ್ಕೂ ಸಾಧನವಾಗುವುದು.

ದೇಹಪತನಾನಂತರಕ್ಕೆ ಸಂಪಾದಿಸಿಕೊಳ್ಳಬೇಕಾದುದೂ ಮತ್ತು ಇಹದಲ್ಲಿ ಸದಾಚಾರದಿಂದ ಹೊಂದಬಹುದಾದ ಉತ್ತಮಫಲವೂ ಬಾಲ್ಯ ಯೌವನಗಳಲ್ಲಿ ಸ್ವಾಭಾವಿಕವಾಗಿ ಮನಸ್ಸಿಗೆ ಹತ್ತುವುದಿಲ್ಲ. ವಯಸ್ಸಾದಮೇಲೆ ಪರಲೋಕದ ಗತಿಗೆ ಏನೂ ಗಳಿಸಿಕೊಳ್ಳಲಿಲ್ಲವೆಂಬ ದುಃಖವುಂಟಾಗುವುದು. ಸದಾಚಾರದಲ್ಲಿದ್ದು ಸದ್ಗತಿಗೆ ಸಂಪಾದಿಸಿಕೊಳ್ಳಲಿಲ್ಲವೆಂದು ಶಿಶುವು ಮಾತೃಗರ್ಭದಲ್ಲಿದ್ದಾಗ ದುಃಖ ಪಡುವುದೆಂದು ಗರ್ಭೋಪನಿಷತ್ತಿನಲ್ಲಿ ಹೇಳಿದೆ. ಪ್ರಾಣೋತ್ಕ್ರಮಣಕಾಲದಲ್ಲಿ ಕಾಪಾಡುವುದು ಸದಾಚಾರದಿಂದ ಸಂಪಾದಿಸಲ್ಪಟ್ಟ ಧನವೊಂದೇ. ವೃದ್ಧಾಪ್ಯದಲ್ಲಿ ದೇವರಕಡೆಯ ಕರ್ಮಜ್ಞಾನಗಳಲ್ಲಿ ಪ್ರವರ್ತನೆಯುಂಟಾಗಬೇಕಲ್ಲದೆ ಬಾಲ್ಯ ಯೌವನಗಳಲ್ಲಿ ಅಲ್ಲವೆಂಬ ಹೇಳಿಕೆಯ ಪಿಶಾಚಿಯು ಭಾರತಮಾತೆಯ ಪುತ್ರರಿಗಲ್ಲ.

ಆದುದರಿಂದ ಎಲ್ಲಾ ಕರ್ಮಗಳನ್ನಾಚರಿಸಲು ಅವಕಾಶವಾಗದಿದ್ದರೂ ಬಾಲ್ಯ ಯೌವನಗಳಲ್ಲಿ ನಿರ್ಬಂಧದಿಂದಲಾದರೂ ಬ್ರಹ್ಮ ಕ್ಷತ್ರಿಯ ವೈಶ್ಯರು ಸಂಧ್ಯಾಕರ್ಮ ಒಂದನ್ನಾದರೂ ತಪ್ಪದೆ ಆಚರಿಸುವಂತೆ ಮಾಡಿಕೊಂಡಿರುವುದು ಶ್ರೇಯಸ್ಕರ ವೆಂಬುದರಲ್ಲಿ ಸಂದೇಹವಿಲ್ಲ. ಬ್ರಾಹ್ಮಣನು ಅನುಷ್ಠಿಸುವ ಶ್ರೌತಸ್ಮಾರ್ತ ನಿತ್ಯ ಕರ್ಮಗಳಿಗೆ ಕ್ಷತ್ರಿಯ ವೈಶ್ಯ ಶೂದ್ರರು ಸಹಾಯಕರಾದ್ದರಿಂದ ಇವರೆಲ್ಲರೂ ಆ ಕರ್ಮದ ಪುಣ್ಯಕ್ಕೆ ಭಾಗಿಗಳು. ಬ್ರಹ್ಮ ಕ್ಷತ್ರಿಯ ವೈಶ್ಯರಿಗೆ ಸ್ತ್ರೀಯರೂ ಶೂದ್ರರೂ ಸಹಾಯಕರಾದ್ದರಿಂದ ಸಂಧ್ಯಾಕರ್ಮದ ಪುಣ್ಯಕ್ಕೆ ಅವರೂ ಭಾಗಿಗಳು. ಸಹಾಯಕರೂ ಆ ಕಾರ್ಯದ ಪುಣ್ಯಕ್ಕೆ ಭಾಗಿಗಳಾಗಿರುವರೆಂಬ ವಿಚಾರವು ನಿರ್ವಿವಾದವಾದದ್ದಾಗಿದೆ. ಆದ್ದರಿಂದ ಸರ್ವರ ಹಿತಕ್ಕೂ ಅವಶ್ಯಕವಾಗಿ ಸಂಧ್ಯಾ ಕರ್ಮವು ಅನುಷ್ಠೇಯವಾದದ್ದಾಗಿದೆ.

ಕಾಲವೈಪರೀತ್ಯದಿಂದ ಇತರ ಎಲ್ಲಾಕರ್ಮಗಳನ್ನು ಆಚರಿಸುವುದಕ್ಕೆ ಅವಕಾಶವಾಗದಿರಬಹುದು ಆದರೆ ಸಂಧ್ಯಾವಂದನೆಯನ್ನು ಆಚರಿಸುವಷ್ಟು ಅವಕಾಶವು ದೊರೆಯುವುದಿಲ್ಲವೆಂಬ ಕಾರಣವನ್ನು ಯಾರ ಅಂತರಾತ್ಮನೂ ಒಪ್ಪು ವುದಿಲ್ಲ. ಎಂತೆಂತಹ ಮಹತ್ವವಾದ ಪ್ರಾಪಂಚಿಕಕಾರ್ಯ ಮತ್ತು ರಾಜ್ಯಾಡಳಿತ ಗಳಲ್ಲಿದ್ದರೂ ಅನೇಕರು ಸಂಧ್ಯಾಕರ್ಮವನ್ನು ತಪ್ಪದೆ ಆಚರಿಸಿಕೊಂಡು ಬರು ತ್ತಿರುವರು. ಆದುದರಿಂದ ಸೋಮಾರಿತನವನ್ನೂ ನಾಸ್ತಿಕತೆಯನ್ನೂ ಬಿಟ್ಟು ಒಂದು ಘಳಿಗೆಯ ಕಾಲವನ್ನಾದರೂ ಈ ಕರ್ಮಕ್ಕೋಸ್ಕರ ಕಳೆಯುವ ಕಟ್ಟಳೆಯನ್ನು ಮಾಡಿಕೊಳ್ಳಬೇಕು. ವ್ಯಾಧಿಪೀಡಿತರಾಗಿ ಮಲಗಿರುವ ಕಾಲದಲ್ಲಿ ಇತರರು ರೋಗ ದಿಂದ ನರಳುತ್ತಿರುವವನಿಗೋಸ್ಕರ ಸಂಧ್ಯಾವಂದನೆಯನ್ನು ಮಾಡಿ ಧಾರೆಯೆರೆಯ ಬೇಕೆಂದು ಶಾಸ್ತ್ರವು ತಿಳಿಸುತ್ತಿರುವಾಗ ಈ ಕರ್ಮವು ಎಂತಹ ಮುಖ್ಯವಾದದ್ದೆಂಬು ದನ್ನು ತ್ರೈವರ್ಣಿಕರು ತಮ್ಮ ಮೃದುವಾದ ಅಂತಃಕರಣಕ್ಕೆ ತಂದುಕೊಳ್ಳಬೇಕು. ಸಂಧ್ಯಾಕರ್ಮದಿಂದುಂಟಾಗುವ ಸಂಸ್ಕಾರವೊಂದನ್ನಾದರೂ ವಂಶಪಾರಂಪರ್ಯವಾಗಿ ತ್ರೈವರ್ಣಿಕರು ಕಾಪಾಡಿಕೊಳ್ಳದೆ ಪ್ರಕೃತಕಾಲಸ್ಥಿತಿಯ ಬೆಡಗಿಗೆ ಬೆರಗಾಗಿ ನಿರ್ಜೀವಿಗಳಾಗಬಾರದು. ಸಂಧ್ಯಾವಂದನೆಯಲ್ಲಿರುವ ಉತ್ತಮ ತತ್ವಾರ್ಥಗಳನ್ನು ಸಾಧ್ಯವಾದಮಟ್ಟಿಗೆ ತಿಳಿದು ಮನನಮಾಡಿಕೊಂಡು ಕರ್ಮಾನುಷ್ಠಾನ ಮಾಡುತ್ತಾ ಬಂದರೆ ಉತ್ತಮ ಫಲದಾಯಕವಾಗುವುದು. ಮಂತ್ರಾರ್ಥವನ್ನು ಮನನ ಮಾಡುತ್ತಾ ಸಾವಧಾನದಿಂದ ಕರ್ಮಮಾಡಿದರೆ ಕರ್ಮವು ವೀರ್ಯವತ್ತಾಗುವುದು. ಮೆಟ್ಟಲು ಮೆಟ್ಟಲಾಗಿ ಮಹಡಿಗೆ ಹತ್ತಿಕೊಂಡು ಹೋಗುವಂತೆ ಮಂದಾಧಿಕಾರ ದಿಂದಲೇ ಕ್ರಮೇಣ ಉತ್ತಮಾಧಿಕಾರವನ್ನು ಪಡೆಯಬೇಕು.

ಸಕಲ ಸಂಪ್ರದಾಯದ ಮಂತ್ರಗಳ ತತ್ವಾರ್ಥಗಳೂ ಒಂದೇ ಆಗಿರುತ್ತವೆ. ಋಗ್ಯಜುಸ್ಸಾಮಶಾಖಾ ಸಂಪ್ರದಾಯದ ಸಂಧ್ಯಾಮಂತ್ರಗಳ ವಿಚಾರಕ್ಕೆ ಭರತ

ಖಂಡದ ಅನೇಕ ಭಾಗಗಳಿಂದ ಗ್ರಂಥಗಳನ್ನು ತರಿಸಿ ಬಹು ಜನಗಳಿಂದ ಆಚರಿಸಲ್ಪಡುತ್ತಿರುವ ಮತ್ತು ಬಹುಮುಖ್ಯವಾಗಿ ಆಚರಿಸಬೇಕಾದ ಮಂತ್ರಗಳನ್ನೇ ಈ ಗ್ರಂಥದಲ್ಲಿ ತೆಗೆದುಕೊಂಡಿರುವುದು. ಮೈಸೂರು ಶ್ರೀಮನ್ಮಹಾರಾಜರವರ ಅರಸುಮನೆತನದವರು ಆಚರಿಸುತ್ತಿರುವ ಸಂಪ್ರದಾಯದ ಮಂತ್ರವನ್ನು ಮುದ್ರಿಸಿರುವ ಪುಸ್ತಕದಿಂದಲೇ ಕ್ಷತ್ರಿಯರ ಸಂಧ್ಯಾಮಂತ್ರವನ್ನು ತೆಗೆದುಕೊಂಡಿರುವುದು. ಮದ್ರಾಸು ಬೌರಿಂಗಪೇಟೆಗಳಲ್ಲಿ ದೊರೆತ ಅಚ್ಚಾದ ಪುಸ್ತಕಗಳಿಂದಲೇ ವೈಶ್ಯರ ಸಂಧ್ಯಾಮಂತ್ರವನ್ನು ತೆಗೆದುಕೊಂಡಿರುವುದು. ಕ್ಷತ್ರಿಯ ವೈಶ್ಯರ ಮಂತ್ರಗಳು ಶ್ಲೋಕರೂಪವಾಗಿವೆ. ಬ್ರಾಹ್ಮಣರಲ್ಲಿಯೂ ಕೆಲವು ಶ್ಲೋಕರೂಪವಾದ ಮಂತ್ರಗಳಿವೆ. ಕರ್ಮಾಚರಣೆ ಮತ್ತು ತತ್ತ್ವಗಳೆರಡರಲ್ಲೂ ಬ್ರಹ್ಮ ಕ್ಷತ್ರಿಯ ವೈಶ್ಯರಿಗೆ ಯಾವ ಭೇದವೂ ಇಲ್ಲ. ಶ್ಲೋಕರೂಪವಾದ ಮಂತ್ರಗಳು ಕೂಡ ಕರ್ಮಶಕ್ತಿಯನ್ನೂ ಕೊಡುವುವು ಮತ್ತು ವೇದೋಕ್ತವಾಗಿಯೂ ಇರುವುವೇ ಹೊರತು ವೇದಬಾಹ್ಯಗಳಲ್ಲವೆಂದು ವೀಣೆಗೂ ವೇದಕ್ಕೂ ಅನ್ವಯಮಾಡಿರುವ ತತ್ತ್ವಗಳಿಂದ ನಿರೂಪಿತವಾಗುವುದು.

ಸಂಧ್ಯಾವಂದನೆಯಲ್ಲಿ ಅರ್ಘ್ಯಪ್ರದಾನಾಂತ್ಯದವರೆಗೆ ದೇಹಶುದ್ಧಿಗೂ ಚಿತ್ತಶುದ್ಧಿಗೂ ಆಚರಿಸಬೇಕಾದ ಮಾರ್ಜನೆ, ಆಚಮನ, ಮಂತ್ರಾಚಮನದ ಮೂಲಕ ಆತ್ಮಾರ್ಪಣೆ, ಅಘಮರ್ಷಣ, ಸೂರ್ಯಪ್ರೀತ್ಯರ್ಥವಾಗಿ ಅರ್ಘ್ಯಪ್ರದಾನ, ಸಂಧ್ಯಾದೇವಿಯ ಪ್ರಾರ್ಥನೆ ಮುಂತಾದ ವಿಚಾರಗಳಿವೆ. ಅರ್ಘ್ಯಪ್ರದಾನಾಂತ್ಯದವರೆಗಿರುವ ಕರ್ಮವನ್ನು ಆಚರಿಸಿದ ಅನಂತರವೇ ಗಾಯತ್ರೀದೇವಿಯನ್ನು ಉಪಾಸನೆಮಾಡುವ ಅಧಿಕಾರವುಂಟಾಗುವುದು. ಗಾಯತ್ರೀ ಉಪಾಸನಾಂಗವಾದ ಭೂದೇವಿಯ ಪ್ರಾರ್ಥನೆ ಆಸನದವಿಚಾರ ಗಾಯತ್ರೀಹೃದಯವಾದ ಓಂಕಾರದ ವಿಚಾರ, ಗಾಯತ್ರೀ ಆಹ್ವಾನ ಮತ್ತು ಆವಾಹನೆ, ಗಾಯತ್ರೀಋಷಿದೇವತಾ ನಮಸ್ಕಾರ, ಪ್ರಾಣಾಯಾಮ ಮತ್ತು ಸಂಕಲ್ಪ, ಅಂಗನ್ಯಾಸ, ಕರನ್ಯಾಸ, ಈ ವಿಚಾರಗಳ ಗುಣಕಥನಗಳನ್ನು ಮನನಮಾಡಿಕೊಂಡು ಗಾಯತ್ರೀ ದೇವಿಯನ್ನು ಉಪಾಸನೆಮಾಡಬೇಕು. ಗಾಯತ್ರೀ ಉಪಾಸನಾಂಗಗಳ ವಿಚಾರಗಳನ್ನು ನೆರವೇರಿಸದೆ ಇದ್ದರೆ ಗಾಯತ್ರೀ ಉಪಾಸನೆಯು ವೀರ್ಯವತ್ತಾಗುವುದಿಲ್ಲ. ಗಾಯತ್ರೀ ಉಪಾಸನಾನಂತರ ಉಪಸ್ಥಾನಮಂತ್ರಗಳಿರುವುವು. ಉಪಸ್ಥಾನದಲ್ಲಿ ಗಾಯತ್ರೀ ಸಂಧ್ಯಾದೇವತಾ ಉದ್ವಾಸನೆ, ಸೂರ್ಯ ಮತ್ತು ಇತರ ದೇವತಾ ಪ್ರಾರ್ಥನೆಗಳೂ ಬರುವುವು.

ಪ್ರತಿಯೊಂದು ಮಂತ್ರದಲ್ಲಿರುವ ಆಂತರ್ಯವಾದ ತತ್ತ್ವಗಳನ್ನು ವಿವರಿಸಿ ಬರೆಯಬೇಕಾದರೆ ಅನೇಕ ಶಾಸ್ತ್ರಗಳ ವಿಚಾರಗಳು ಬರಬೇಕಾಗುವುದರಿಂದ ಒಂದೊಂದು ಮಂತ್ರದ ವಿವರಣೆಯನ್ನೇ ಒಂದೊಂದು ಗ್ರಂಥರೂಪವಾಗಿ ಬರೆಯ

ಬೇಕಾಗುವುದು. ಆದುದರಿಂದ ಮಂತ್ರಗಳಲ್ಲಿರುವ ತತ್ವಗಳನ್ನು ಕ್ರೋಢೀಕರಿಸಿ ಸೂಕ್ಷ್ಮವಾಗಿ ಬರೆದಿರುವುದು. ಮಂತ್ರಗಳಲ್ಲಿರುವ ಇನ್ನೂ ಅತಿಶಯವಾದ ತತ್ವಗಳ ವಿವರಣೆಗೆ ಶ್ರೀಮದ್ರಾಮಾಯಣದ ಅಂತರಾರ್ಥಗ್ರಂಥವನ್ನು ಸಹಾಯಕವಾಗಿ ತೆಗೆದುಕೊಂಡು ಆ ಗ್ರಂಥದ ಯಾವ ಯಾವ ಭಾಗದಲ್ಲಿ ಸಂಧ್ಯಾಮಂತ್ರಗಳ ತತ್ವಗಳಿವೆಯೋ ಅವುಗಳನ್ನೂ ಸಂದರ್ಭಾನುಸಾರ ಇಲ್ಲಿ ಸೂಚಿಸಿರುವುದು. ರಾಮಾಯಣದ ಅಂತರಾರ್ಥಗ್ರಂಥದ ಆಧಾರವನ್ನು ಕೊಡಲು ಕಾರಣವೇನೆಂದರೆ, ಸಂಧ್ಯಾವಂದನೆಯ ಅನೇಕ ಮಂತ್ರಗಳ ತತ್ವವಿಚಾರಗಳು ಅಂತರಾರ್ಥಗ್ರಂಥ ಒಂದರಲ್ಲಿಯೇ ದೊರಕುವುದರಿಂದಲೂ, ಶ್ರೀಮದ್ರಾಮಾಯಣವು ಗಾಯತ್ರೀ ಸ್ವರೂಪವಾದುದರಿಂದಲೂ, ಈ ಅಂತರಾರ್ಥಗ್ರಂಥವನ್ನು ಇದರಲ್ಲಿ ಆಧಾರವಾಗಿ ಕೊಟ್ಟಿರುವುದು.

## ಸಂಧ್ಯಾಕಾಲ ವಿಚಾರ.

ಸಂಧಿಕಾಲವು ಯಾವುದೆಂದರೆ:— "ಉಷಾಸ್ತ್ವೇ ಸನ್ಧಿವೇಳಾಯಾಂ ನಿಶಾಯಾಂ ದಿವಸಸ್ಯಚ" ಎಂಬ ವೇದವ್ಯಾಸಮಹರ್ಷಿಗಳ ವಾಕ್ಯದಂತೆ ರಾತ್ರಿ ಹಗಲುಗಳನ್ನು ಸಂಬಂಧಿಸುವ ಕಾಲಗಳಾದ ಪ್ರಾತಸ್ಸಾಯಂಕಾಲಗಳೆರಡೂ ಸಂಧಿ ಕಾಲಗಳಾಗಿವೆ. ಈಶ್ವರನು ಪ್ರಪಂಚವನ್ನು ಸೃಷ್ಟಿಸಿದ ಕಾಲದಲ್ಲಿ ಒಂದು ದಿವಸ ವನ್ನು ಮೂರುಭಾಗಮಾಡಿ ಸತ್ವರಜಸ್ತಮೋಗುಣಗಳಾದ ಮೂರಕ್ಕೂ ಕಾಲಾಧಿ ಕಾರದ ವಿಭಾಗಮಾಡಿರುವನು. ಹೇಗೆಂದರೆ:—

ತಮೋಗುಣಕ್ಕೆ:—ರಾತ್ರಿ ಎಂಟು ಘಂಟೆಯಿಂದ ಬೆಳಗಿನಝಾವ ನಾಲ್ಕು ಘಂಟೆ (೨೦ ಘಳಿಗೆ) ಯವರೆಗಿನ ಎಂಟು ಘಂಟೆಗಳ ಕಾಲದ ಅಧಿಕಾರ.

ರಜೋಗುಣಕ್ಕೆ:—ಪ್ರಾತಃಕಾಲ ಎಂಟು ಘಂಟೆಯಿಂದ ಮಧ್ಯಾಹ್ನ ನಾಲ್ಕು ಘಂಟೆಯವರೆಗಿನ (೨೦ ಘಳಿಗೆ) ಎಂಟು ಘಂಟೆಗಳ ಕಾಲದ ಅಧಿಕಾರ.

ಸತ್ವಗುಣಕ್ಕೆ:—ಬೆಳಗಿನಝಾವ ನಾಲ್ಕು ಘಂಟೆಯಿಂದ ಪ್ರಾತಃಕಾಲದ ಎಂಟು ಘಂಟೆಯವರೆಗೆ ಆಗುವ ನಾಲ್ಕು ಘಂಟೆಗಳ ಕಾಲವೂ ಮಧ್ಯಾಹ್ನ ನಾಲ್ಕು ಘಂಟೆಯಿಂದ ರಾತ್ರಿ ಎಂಟು ಘಂಟೆಯ ವರೆಗೆ ಆಗುವ ನಾಲ್ಕು ಘಂಟೆಗಳಕಾಲವೂ ಸೇರಿ ಆಗುವ ಎಂಟು ಘಂಟೆಗಳ (೨೦ ಘಳಿಗೆ) ಕಾಲದ ಅಧಿಕಾರ.

ನಿದ್ರಾರೂಪವಾದ ತಮೋ ಅವಸ್ಥೆಯನ್ನು ಹೊಂದಿ ಪ್ರಪಂಚವ್ಯಾಪಾರಕ್ಕೆ ಬರುವುದಕ್ಕೆ ಪ್ರಥಮದಲ್ಲಿಯೂ ರಜೋಗುಣಸ್ವರೂಪವಾದ ಪ್ರಪಂಚವ್ಯವಹಾರದ ಅವಸ್ಥೆಯನ್ನು ಹೊಂದಿದ ಅನಂತರದಲ್ಲಿಯೂ ಆಹ್ಲಾದಕರವಾದ ಮತ್ತು ಶಾಂತ ಸ್ವಭಾವವುಳ್ಳ ಸತ್ವಗುಣವನ್ನು ಪ್ರಪಂಚವು ಹೊಂದಿರಬೇಕೆಂದು ಈಶ್ವರನು ನಿಯಮಿಸಿರುವನು. ನಿರ್ಗುಣನಾದ ಪರಮಾತ್ಮನನ್ನು ಹೊಂದಲು ರಜಸ್ತಮೋ ಗುಣಗಳ ಸೋಪಾನದಿಂದ ಹತ್ತಲು ಸಾಧ್ಯವಿಲ್ಲವೆಂಬ ಮತ್ತು ಸತ್ವಗುಣ ಸೋಪಾನದಿಂದಲೇ ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ತತ್ವಾರ್ಥವನ್ನನು ಸರಿಸಿ ಗಾಯತ್ರೀದೇವಿಯನ್ನು ಉಪಾಸನೆಮಾಡಲು ಸ್ವಾಭಾವಿಕವಾಗಿ ಶಾಂತ ವಾಗಿರುವ ಬೆಳಗಿನಝಾವ ನಾಲ್ಕು ಘಂಟೆಯಿಂದ ಬೆಳಿಗ್ಗೆ ಎಂಟು ಘಂಟೆಯ ವರೆಗಿನ ಕಾಲದಲ್ಲಿ ಮಧ್ಯಕರಾದ ಪ್ರಾತಃಕಾಲದ ಆರುಘಂಟೆಯ ಸಮಯವು ಸೂರ್ಯೋದಯಕಾಲವಾದ್ದರಿಂದ ಬಹುಪ್ರಶಸ್ತವಾದ ಕಾಲವಾಗಿದೆ. ಕಾರಣ ವೇನೆಂದರೆ, ಸತ್ವಗುಣಕಾಲದಲ್ಲಿಯೂ ಮಧ್ಯದ ಸ್ಥಿತಿಯು ಸತ್ವಗುಣದ ಪೂರ್ಣ ಕಲಾಕಾಲವಾದ್ದರಿಂದ ಇದು ಸಂಧಿಕಾಲವೆನಿಸಿಕೊಳ್ಳುವುದು ಇದರಂತೆಯೆ ಸೂರ್ಯಾಸ್ತಮಯಸಮಯವೂ ಸತ್ವಗುಣದ ಮಧ್ಯಕಾಲವಾಗಿ ಸಂಧ್ಯಾಕಾಲ ವೆನಿ ಸುವುದು ಇಂತಹ ಸಂಧಿಕಾಲಗಳಲ್ಲಿ ಗಾಯತ್ರೀಧ್ಯಾನಮಾಡುವವನು ಆ ಕಾಲದ ಸ್ವಾಭಾವಿಕವಾದ ಸತ್ವಗುಣದಶಕ್ತಿಗೆ ಒಳಗಾದವನಾಗಿ ಗಾಯತ್ರೀದೇವಿಯ ಅನು ಗ್ರಹಕ್ಕೆ ಪಾತ್ರನಾಗಿ ತಪಶ್ಶಕ್ತಿಯನ್ನು ಹೊಂದುವನಲ್ಲದೆ ಪಾಪರಹಿತನೂ ಆಗು ವನು. ಮೋಕ್ಷಕಾಮನಾಗಿ ಧ್ಯಾನಮಾಡಿದರೆ ಸತ್ವಗುಣದ ಸಹಾಯದಿಂದ ಆತ್ಮ ಸಾಕ್ಷಾತ್ಕಾರವನ್ನು ಪಡೆಯುವನು. ಸೂರ್ಯೋದಯ ಮತ್ತು ಸೂರ್ಯಾಸ್ತಮಯಕ್ಕೆ ಸರಿಯಾಗಿ ಗಾಯತ್ರೀಜಪ ಮಾಡುತ್ತಿರಬೇಕಾದರೆ ಸ್ನಾನಾದಿಗಳಿಂದ ಶುಚಿ ಭೂತನಾಗಿ ಸಂಧ್ಯಾಕರ್ಮದಲ್ಲಿ ಮಾರ್ಜನೆ, ಅರ್ಘ್ಯಪ್ರದಾನ ಮುಂತಾದವು ಗಳನ್ನೆಲ್ಲಾ ಮೊದಲೇ ಪೂರಯಿಸಿಕೊಂಡಿರಬೇಕು.

ಇಂತಹ ನಿರ್ದಿಷ್ಟವಾದ ಕಾಲದಲ್ಲಿಯೇ ಸಂಧ್ಯಾಕರ್ಮವನ್ನು ಆಚರಿಸ ಬೇಕೆಂದು ಶಾಸ್ತ್ರವು ವಿಧಿಸಿದೆ. ಅತ್ಯುತ್ತಮಫಲದಾಯಕವಾಗಿರುವ ಈ ಕಾಲ ಗಳನ್ನು ನಿಯಮದಿಂದ ಅನುಸರಿಸಲು ಅಶಕ್ತರಾದವರಿಗೆ ಸತ್ವಗುಣಕಾಲವು ಅಂತ್ಯವಾಗುವದರೊಳಗಾದರೂ ಅನುಷ್ಠಿಸಬೇಕೆಂದು ವಿಧಿಸಿರುವರು. ಆದರೆ ಈ ಕಾಲದಲ್ಲಿನ ಆಚರಣೆಯು ಮಧ್ಯಮಪಕ್ಷವೆಂದು ಹೇಳಲ್ಪಟ್ಟಿರುವುದು. ಸತ್ವಗುಣ ಕಾಲದಲ್ಲಿಯೂ ಮಾಡಲು ಅಶಕ್ತರಾದರೆ ಕರ್ಮವನ್ನು ಖಂಡಿತ ಬಿಡದೆ ಅಧಮ ಪಕ್ಷವಾದ ಸತ್ವಗುಣಕಾಲ ಕಳೆದ ಅನಂತರದಲ್ಲಾದರೂ ಆಚರಿಸಿ ಪುನೀತರಾಗ ಲೆಂಬ ಔದಾರ್ಯವನ್ನೂ ಮಹರ್ಷಿಗಳು ತೋರಿಸಿರುವರು ಕರ್ಮಕ್ಕೆ ಉತ್ತಮ ವಾದ ಕಾಲವು ಎಂತಹುದಾಗಿರುವುದೆಂದರೆ, ಆರೋಗ್ಯಭಾಗ್ಯಕ್ಕೆ ಅನುಕೂಲ

ವಾಗುವ ಬೆಳಗಿನಝಾವದಲ್ಲಿ ನಿದ್ರೆಯಿಂದ ಏಳುವ ಕಾಲವಾಗಿಯೂ, ಪ್ರಾತಃಕಾಲ ವಾದಮೇಲೆ ತಮ್ಮತಮ್ಮಕಾರ್ಯಗಳಿಗೆ ಹೋಗುವುದಕ್ಕೆ ಅನುಕೂಲವಾಗಿಯೂ ಇರುವ ಕಾಲವಾಗಿರುವುದು. ಸಾಯಂಕಾಲದಲ್ಲಿಯೂ ಸೂರ್ಯಾಸ್ತಮಯಕ್ಕೆ ಸರಿಯಾಗಿ ಸಂಧ್ಯಾಕರ್ಮವನ್ನು ಆಚರಿಸುವುದು ಉತ್ತಮ. ಪ್ರಬಲತರವಾದ ರಾಷ್ಟ್ರಭಂಗ, ವಿಪತ್ತು, ವ್ಯಾಧಿ ಮುಂತಾದವುಗಳಲ್ಲಿ ಸಂಧ್ಯಾಕಾಲಾತಿಕ್ರಮಣದ ಲೋಪವು ದೋಷಾರ್ಹವಲ್ಲವು.

ಸೃಷ್ಟಿ ಸ್ಥಿತಿ ಲಯಗಳನ್ನನುಸರಿಸಿಯೂ ಸಂಧ್ಯಾಕಾಲದ ವಿಚಾರವನ್ನು ತಿಳಿಯಬಹುದು.

೧. ರಾತ್ರಿ ೧೨ ಘಂಟೆಯಿಂದ ಸೃಷ್ಟಿಗೆ ಪ್ರಾರಂಭ. ಬೆಳಗಿನ ೬ ಘಂಟೆಗೆ ಸೃಷ್ಟಿಪೂರ್ಣ.

೨. ಬೆಳಗಿನ ೬ ಘಂಟೆಯಿಂದ ವ್ಯಾಪಾರಕ್ಕೆ ಪ್ರಾರಂಭ ಮಧ್ಯಾಹ್ನ ೧೨ ಘಂಟೆಗೆ ವ್ಯಾಪಾರದ ಉನ್ನತಸ್ಥಿತಿ.

೩. ಮಧ್ಯಾಹ್ನ ೧೨ ಘಂಟೆಯಿಂದ ವ್ಯಾಪಾರಕ್ಷಯಿಸಲು ಪ್ರಾರಂಭ. ಸಾಯಂಕಾಲ ೬ ಘಂಟೆಗೆ ವ್ಯಾಪಾರದ ಸಂಪೂರ್ಣಲಯ.

೪. ಸಾಯಂಕಾಲ ೬ ಘಂಟೆಯಿಂದ ಸೃಷ್ಟಿಯೂ ಲಯವಾಗಲು ಪ್ರಾರಂಭ. ರಾತ್ರಿ ೧೨ ಘಂಟೆಗೆ ಸೃಷ್ಟಿಯಸಂಪೂರ್ಣಲಯ.

ಆದುದರಿಂದ ರಾತ್ರಿ ೧೨ ಘಂಟೆಯ ಸಮಯವು ಸೃಷ್ಟಿ ಸ್ಥಿತಿ ಲಯಗಳಿಲ್ಲದೆ ಪರಬ್ರಹ್ಮ ಒಂದೇ ಇರುವಕಾಲದ ತತ್ವವಾಗಿರುವುದು. ಕಾರಣರೂಪವಾದ ಬೀಜದಿಂದ ಕಾರ್ಯರೂಪವಾದ ವೃಕ್ಷವಾಗುವಂತೆ ಸೃಷ್ಟಿಗೆಪ್ರಾರಂಭವಾಗಿ ತಮಃಪ್ರಧಾನ ಪ್ರಕೃತಿಯಿಂದ ಜಗತ್ತಿನ ಸ್ಥೂಲ ಸೃಷ್ಟಿಗಾರಂಭವಾಗಿ ಸತ್ವಗುಣ ಪ್ರಕಾಶದೊಡನೆ ಸೃಷ್ಟಿಯು ಪೂರ್ಣವಾಗುವ ಕಾಲವೇ ಸೂರ್ಯೋದಯದ ಸಂಧಿಕಾಲಕ್ಕೆ ಬರುವುದಾಗಿದೆ. ಸೃಷ್ಟಿಯಾದ್ದು ವ್ಯಾಪಾರಕ್ಕೆ ಪ್ರಾರಂಭವಾಗುವುದೇ ಸೂರ್ಯೋದಯದ ತತ್ವವಾಗಿರುವುದು. ಸೂರ್ಯೋದಯಕ್ಕೆ ಮುಂಚೆ ೨ ಘಂಟೆಯೂ ಸೂರ್ಯೋದಯಾನಂತರ ೨ ಘಂಟೆಯೂ ಸತ್ವಗುಣದ ಅಧಿಕಾರಕ್ಕೆ ಸೇರಿದ್ದೆಂದು ಪ್ರಥಮದಲ್ಲಿಯೇ ತಿಳಿಸಿದೆ. ಸೂರ್ಯೋದಯಕ್ಕೆ ಮುಂಚೆ ಇರುವ ಭಾಗವೇ ಸೃಷ್ಟಿಕಾಲದಲ್ಲಿ ತಮಃಪ್ರಧಾನಪ್ರಕೃತಿಯನ್ನು ಮೆಟ್ಟಿ ಸತ್ವಗುಣವು ಪ್ರಕಾಶವಾಗಿ ಇರುವುದಾಗಿದೆ. ಸೂರ್ಯೋದಯಾನಂತರ ೨ ಘಂಟೆಗಳ ಕಾಲವೂ ಸತ್ವಗುಣಕಾಲವಾದ್ದರಿಂದ ಸೂರ್ಯೋದಯಾನಂತರ ಉಂಟಾಗುವ ವ್ಯಾಪಾರಕ್ಕೆ ಸತ್ವಗುಣವು ಅಸ್ತಿಭಾರದಂತೆ ಒಳಗೇ ಪ್ರಕಾಶವಾಗಿದೆಯೆಂಬ ತತ್ವವಾಗಿರುವುದು. ಆದುದರಿಂದ ಸೃಷ್ಟಿಯನ್ನೂ

ವ್ಯಾಪಾರವನ್ನೂ ಸಂಧಿಮಾಡಿಕೊಂಡು ಪ್ರಾತಸ್ಸಂಧ್ಯಾಕಾಲವಿದೆ. ಬೆಳಗಿನ ೬ ಘಂಟೆಯಿಂದ ವ್ಯಾಪಾರವು ಪ್ರಾರಂಭವಾಗಿ ಮಧ್ಯಾಹ್ನ ೧೨ ಘಂಟೆಗೆ ಉನ್ನತ ಸ್ಥಿತಿಯನ್ನು ಪಡೆದು ಆ ಉನ್ನತ ಸ್ಥಿತಿಯಿಂದ ಇಳಿದು ಸಾಯಂಕಾಲ ೬ ಘಂಟೆಗೆ ವ್ಯಾಪಾರವೇ ಲಯವಾಗಿ ಅನಂತರ ಸೃಷ್ಟಿಯೂ ಲಯಮಾರ್ಗವನ್ನನುಸರಿಸುವುದು. ವ್ಯಾಪಾರದ ಪೂರ್ಣಲಯಸ್ಥಿತಿಯನ್ನೂ ಸೃಷ್ಟಿಯೂ ಲಯಿಸುವ ಪ್ರಾರಂಭದ ಸ್ಥಿತಿಯನ್ನೂ ಸೇರಿಸಿಕೊಂಡಿರುವುದೇ ಸಾಯಂಸಂಧ್ಯಾತತ್ವ ಸೃಷ್ಟಿ ಕೂಡ ಸಂಪೂರ್ಣಲಯವಾಗಿ ಪರಬ್ರಹ್ಮ ಒಂದೇ ಇರುವ ಸ್ಥಿತಿಯೇ ರಾತ್ರಿ ೧೨ ನೆ ಘಂಟೆಯ ತತ್ವವಾಗಿರುವುದು. ಪುನಃ ಸೃಷ್ಟಿಯು ರಾತ್ರಿ ೧೨ ಘಂಟೆಯ ಕಾಲದ ತತ್ವದಿಂದಲೇ ಪ್ರಾರಂಭವಾಗುವುದು.

ಮೇಲಿನ ತತ್ವಗಳನ್ನೆಲ್ಲಾ ಸೂರ್ಯನು ಸೃಷ್ಟಿಯಾದ ಸ್ಥಿತಿಯನ್ನು ಪಡೆದ ಮತ್ತು ಪ್ರಳಯದಲ್ಲಿ ಲಯವಾಗುವ ಕ್ರಮಗಳನ್ನನುಸರಿಸಿಯೂ ವಿಚಾರ ಮಾಡೋಣ. ರಾತ್ರಿ ೧೨ ಘಂಟೆಯಕಾಲದ ಸ್ಥಿತಿಯೇ ಸ್ವಯಂಪ್ರಕಾಶನಾದ ಪರಬ್ರಹ್ಮ ಒಂದೇ ಇರುವ ಸ್ಥಿತಿಯು ತತ್ವವಾಗಿರುವುದು. ಸ್ವಯಂಪ್ರಕಾಶನಾದ ಪರಬ್ರಹ್ಮನಿಂದ ಸೂರ್ಯನ ಪ್ರಥಮರೂಪವಾದ ಅಗ್ನಿರೂಪವು ಕ್ರಮೇಣ ಉದಯವಾಗುತ್ತಾ ಪ್ರಾತಸ್ಸಂಧ್ಯಾಕಾಲಕ್ಕೆ ಅಗ್ನಿರೂಪವು ಪೂರ್ಣವಾಗುವುದು. ಅನಂತರ ಅಗ್ನಿರೂಪವು ಜ್ವಾಲೆ (ಕಿರಣ) ಯನ್ನುಹೊಂದಿ ಜ್ವಾಲೆಯೂ ಕ್ರಮೇಣ ಉನ್ನತ ಸ್ಥಿತಿಯೆನಿಸುವ ಶ್ವೇತಜ್ವಾಲೆಗೆ ಬರುವುದು. ಇದೇ ಮಧ್ಯಾಹ್ನ ೧೨ ಘಂಟೆಯ ಕಾಲದಸ್ಥಿತಿ. ಶ್ವೇತಜ್ವಾಲೆಯೂ ತಗ್ಗುತ್ತಾ ಸಾಯಂಕಾಲಕ್ಕೆ ಪುನಃ ಅಗ್ನಿರೂಪವನ್ನು ಹೊಂದುವುದು. ಸಾಯಂಕಾಲದಿಂದ ಅಗ್ನಿರೂಪವೂ ಕ್ರಮೇಣ ಸ್ವಯಂಪ್ರಕಾಶವಾದ ಪರಬ್ರಹ್ಮನಲ್ಲಿ ಲಯವಾಗಿ ಪರಬ್ರಹ್ಮ ಒಂದೇ ಇರುವ ಸ್ಥಿತಿಯಾಗುವುದು. ಅಂದರೆ ಪುನಃ ರಾತ್ರಿ ೧೨ನೆ ಘಂಟೆಯಕಾಲದ ತತ್ವಕ್ಕೆ ಬರುವುದು. ಅಗ್ನಿರೂಪದಿಂದ ಸೂರ್ಯರೂಪವಾಗುವ ಕಾಲವೇ ಪ್ರಾತಸ್ಸಂಧ್ಯಾಕಾಲವಾಗಿರುವುದು. ಸೂರ್ಯರೂಪವೂ ಲಯವಾಗಿ ಪುನಃ ಅಗ್ನಿರೂಪವಾಗುವ ಮತ್ತು ಅಗ್ನಿಯೂ ಸ್ವಯಂಪ್ರಕಾಶವಾದ ಪರಬ್ರಹ್ಮವಾಗಲು ಪ್ರಾರಂಭಿಸುವ ಕಾಲವೇ ಸಾಯಂಸಂಧ್ಯಾಕಾಲದ ತತ್ವವಾಗಿರುವುದು. "ಅಗ್ನಿಃ ಪೂರ್ವರೂಪಂ ಆದಿತ್ಯಉತ್ತರರೂಪಂ" ಎಂಬ ತೈತ್ತಿರೀಯಶ್ರುತಿ ಪ್ರಮಾಣದಂತೆಯೂ ಸೂರ್ಯನ ಪ್ರಥಮರೂಪವೇ ಅಗ್ನಿ. ಹಗಲಿಗೆ ಸೂರ್ಯನೂ ರಾತ್ರಿಗೆ ಅಗ್ನಿಯೂ ಅಧಿದೇವತೆಗಳು. ಈ ತತ್ವಸಮರ್ಥನೆಗೆ:—

ಅಗ್ನಿರ್ಜ್ಯೋತಿ ರ್ಜ್ಯೋತಿರಗ್ನಿ ಸ್ವಾಹೇತಿ ಸಾಯಂ ಜುಹೋತಿ |
ಸೂರ್ಯೋಜ್ಯೋತಿ ರ್ಜ್ಯೋತಿಸ್ಸೂರ್ಯ ಸ್ವಾಹೇತಿ ಪ್ರಾತರಿತಿ ||

ಎಂಬ ಶ್ರುತ್ಯಾಧಾರವೂ ಇರುವುದು. ಅಗ್ನಿಯು ಜ್ವಾಲೆಯಾಗುವ, ಜ್ವಾಲೆಯು ತಗ್ಗಿ ಅಗ್ನಿರೂಪಕ್ಕೆ ಬರುವ ವಿಧಾನಕ್ಕೆ ಕಬ್ಬಿಣವನ್ನು ಕುಲುಮೆಯಲ್ಲಿ ಕಾಯಿಸುವ ಉದಾಹರಣೆಯನ್ನು ಕೊಡಬಹುದು. ಸಾಯಂಸಂಧ್ಯಾಕಾಲವು ವ್ಯಾಪಾರವನ್ನು ಪೂರ್ಣವಾಗಿ ಲಯಮಾಡಿಕೊಂಡಿರುವ ಮತ್ತು ಸೃಷ್ಟಿಯೂ ಲಯವನ್ನು ಅನುಸರಿಸಿರುವ ತತ್ವವುಳ್ಳದ್ದಾದುದರಿಂದ ಸಾಯಂಸಂಧ್ಯಾಕಾಲದ ತತ್ವವೇ ಮೋಕ್ಷರೂಪವಾದುದು. ಮನುಷ್ಯನು ಮೋಕ್ಷಪಡೆಯುವ ಕಾಲದಲ್ಲಿ ಸಾಯಂಸಂಧ್ಯಾತತ್ವವನ್ನೇ ಹೊಂದಿ ಸಾಕ್ಷಾತ್ ಜ್ಞಾನಾಗ್ನಿರೂಪನಾಗುವನು. ಈ ತತ್ವವು "ಓಂ ಇತ್ಯೇಕಾಕ್ಷರಂ ಬ್ರಹ್ಮ ಅಗ್ನಿರ್ದೇವತಾ" ಎಂಬ ಮಂತ್ರದ ತತ್ವಾರ್ಥದಲ್ಲಿ ವಿವರವಾಗಿರುವುದು. ಸೃಷ್ಟಿಯುಂಟಾಗುವಿಕೆ ಮತ್ತು ಇದರ ಲಯವು ರಾತ್ರಿಕಾಲದ ತತ್ವದಲ್ಲಿರುವುದರಿಂದ ಸೃಷ್ಟಿಯ ವಿಚಾರವು ಇಂದ್ರಿಯ ಗ್ರಾಹ್ಯವಲ್ಲದ್ದಾಗಿ ಅಸ್ಪಷ್ಟವಾಗಿರುವುದು. ರಾತ್ರಿ ಹನ್ನೆರಡನೇ ಘಂಟೆಯ ಕಾಲದ ತತ್ವವು ಸೃಷ್ಟಿಯೇ ಇಲ್ಲದೆ ಪರಬ್ರಹ್ಮ ಒಂದೇ ಇರುವ ತತ್ವವಾಗಿರುವುದರಿಂದ ಪರಬ್ರಹ್ಮವು ಹೀಗಿರುವುದೆಂದು ತಿಳಿಯಲಸಾಧ್ಯವಾಗಿರುವುದು. ತಮೋರೂಪವಾದ ಗಾಢಾಂಧಕಾರವಲ್ಲಿಯೂ ಸುಷುಪ್ತಿಯಲ್ಲಿಯೂ ಯಾವುದನ್ನೂ ತಿಳಿಯುವುದಕ್ಕಾಗುವುದಿಲ್ಲ. ಸಮರಾತ್ರಿಯಲ್ಲಿ ವ್ಯಾಪಾರವೆಲ್ಲ ಲಯವಾಗಿ ನಿಶ್ಶಬ್ದವಾಗಿರುವುದು. ಪರಬ್ರಹ್ಮವು ಹೀಗಿರುವುದೆಂದು ತಿಳಿಯಲು ಸಾಧ್ಯವಿಲ್ಲವೆನ್ನುವುದನ್ನು ತಮಸ್ಸಿನ ಉಪಮಾನದಿಂದ ಶ್ರುತಿಯುಕೂಡ "ತಮ ಆಸೀತ್ತಮಸಾ ಗೂಢಮಗ್ರೇ ಪ್ರಕೇತಂ" ಎಂದು ತಿಳಿಸುತ್ತದೆ. ಆದುದರಿಂದ ರಾತ್ರಿ ಹನ್ನೆರಡನೆ ಘಂಟೆಯಕಾಲವು ಪರಬ್ರಹ್ಮ ಒಂದೇ ಇರುವ ಸ್ಥಿತಿಯ ತತ್ವವಾಗಿದೆ.

ಸಂಧ್ಯಾಕಾಲವನ್ನು ಪಿಂಡಾಂಡವಾದ ಮನುಷ್ಯದೇಹಕ್ಕೂ ಅನ್ವಯಿಸಬಹುದು. "ಯಾನಿಶಾ ಸರ್ವಭೂತಾನಾಂ" ಎಂದು ಶ್ರೀಕೃಷ್ಣಪರಮಾತ್ಮನು ಹೇಳಿರುವಂತೆ ಆತ್ಮಜ್ಞಾನವಿಲ್ಲದೆ ಪ್ರಾಪಂಚಿಕವಿಷಯ ಜ್ಞಾನದಲ್ಲಿಯೇ ಇರುವವರು ಅಂಧಕಾರದಲ್ಲಿರುವರೆಂಬ ತತ್ವವಾಗಿದೆ. ಸೂರ್ಯೋದಯ ಕಾಲದಸ್ಥಿತಿಯೇ ಧ್ಯಾನಾಭ್ಯಾಸಕ್ಕೆ ಪ್ರಾರಂಭವೆಂಬ ತತ್ವ. ಧ್ಯಾನಕ್ಕೆ ಬರುವವರೆಗಿನ ಆತ್ಮವಿಚಾರ ನಿಯಮ, ಪ್ರಾಣಾಯಾಮ ಮುಂತಾದುವುಗಳೆಲ್ಲಾ ಅಜ್ಞಾನರೂಪವಾದ ಬಾಹ್ಯ ವ್ಯಾಪಾರದಲ್ಲೇ ನಡೆಯುವ ಕಾರ್ಯಗಳಾಗಿವೆ. ಆದುದರಿಂದ ಧ್ಯಾನದ ಪ್ರಾರಂಭದಿಂದಲೇ ಸೂರ್ಯೋದಯದ ತತ್ವವುಂಟಾಗುವುದು. ಅಂದರೆ ಅಂಧಕಾರರೂಪವಾದ ಅಜ್ಞಾನ ತೊಲಗಿ ಜ್ಞಾನಮಯವಾದ ಅಂತರತೇಜಸ್ಸಿನ ಉದಯದ ಪ್ರಾರಂಭಕಾಲ. ಧ್ಯಾನದ ಪ್ರಥಮಸ್ಥಿತಿಯು ಅಂತರ್ಮುಖ ಬಹಿರ್ಮುಖಗಳೆರಡನ್ನೂ ಸೇರಿಸಿಕೊಂಡಿರುವುದರಿಂದ ಇದು ಪ್ರಾತಸಂಧ್ಯಾಕಾಲ. ಉದಯವಾದ ಸೂರ್ಯನ ತೇಜಸ್ಸು ಹೇಗೆ ಹೆಚ್ಚುವುದೋ ಹಾಗೆಯೇ ಧ್ಯಾನದಲ್ಲಿಯೂ ಅಂತರ್ಮುಖದಲ್ಲಿ

ತೇಜಸ್ಸು ಅಧಿಕವಾಗುವುದು. ಮಧ್ಯಾಹ್ನ ಹನ್ನೆರಡು ಘಂಟೆಯವರೆಗೆ ಸೂರ್ಯ ತೇಜಸ್ಸು ಹೆಚ್ಚಿ ಸಾಯಂಕಾಲಕ್ಕೆ ಹೇಗೆತಗ್ಗುವುದೋ ಹಾಗೆ ಅಧಿಕಾರಿಯಲ್ಲಿ ಅಧಿಕ ವಾಗಿದ್ದ ಅಂತರತೇಜಸ್ಸು ತಗ್ಗುತ್ತಾಬರುವುದು. ಸಾಯಂಸಂಧ್ಯಾಕಾಲದಲ್ಲಿ ಸೂರ್ಯನು ಹೇಗೆ ಅಸ್ತಮಯನಾಗುವನೋ ಹಾಗೆಯೇ ಅಂತರ್ಮುಖದಲ್ಲಿ ತಾನು ನೋಡುತ್ತಿದ್ದ ತೇಜಸ್ಸು ಅಗೋಚರವಾಗಿ ಜೀವನು ಇಂದ್ರಿಯಾತೀತವಾದ ಸ್ವಯಂಪ್ರಕಾಶವಾದ ಪರಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವನು. ಅಂತ ರ್ಮುಖದ ತೇಜಸ್ಸು ಅಡಗುವ ಸಮಯವೇ ಶುದ್ಧಸತ್ವಗುಣದ ಕಾಲವಾಗಿ ಸಾಯಂ ಸಂಧ್ಯಾಕಾಲದ ತತ್ವವಾಗಿದೆ ತೇಜಸ್ಸು ಅಗೋಚರವಾಗುವಿಕೆಯೇ ಸತ್ವಗುಣ ವನ್ನೂ ದಾಟಿ ನಿರ್ಗುಣನಾದ ಪರಮಾತ್ಮನ ಸಾಕ್ಷಾತ್ಕಾರದ ಕಾಲ ಆದುದರಿಂದ ಸಾಯಂಸಂಧ್ಯಾಕಾಲವೇ ಮೋಕ್ಷದ ಕಾಲವು.

ಸಂಧ್ಯಾಕಾಲದ ತತ್ವವನ್ನು ಸಂಗೀತದ ಮಂದ್ರ, ಮಧ್ಯಮ, ತಾರಸ್ಥಾಯಿ ಗಳಿಗೂ ಅನ್ವಯಮಾಡಬಹುದು. ಈ ಮೂರು ಸ್ಥಾಯಿಗಳೇ ಸೃಷ್ಟಿ ಸ್ಥಿತಿ ಲಯ ಗಳ ತತ್ವವಾಗಿವೆ. ಮಂದ್ರಕ್ಕೂ ಮಧ್ಯಮಕ್ಕೂ ಇರುವ ಸಂಧಿಕಾಲವೇ ಪ್ರಾತಸಂಧ್ಯಾಕಾಲ. ಮಧ್ಯಮಕ್ಕೂ ತಾರಕ್ಕೂ ಇರುವ ಸಂಧಿಕಾಲವೇ ಸಾಯಂ ಸಂಧ್ಯಾಕಾಲ. "ತಮೋನಾಶಯತೀತಿ ತಾರ" ಎಂದರೆ ಅಜ್ಞಾನ ನಾಶವಾಗುವ ಕಾಲ. ಈ ವಿಧವಿಂದಲೂ ಸಾಯಂಸಂಧ್ಯಾಕಾಲವೇ ಮೋಕ್ಷಕಾಲವಾಗಿರುವುದು

[ಈ ಸಂಧಿಕಾಲದ ತತ್ವಗಳು ಶ್ರೀಮದ್ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಹನುಮಂತನು ಋಕ್ಷಬಿಲಪ್ರವೇಶಮಾಡಿದ, ರಾವಣನು ರಾಮನ ಮಾಯಾಶಿರಸ್ಸನ್ನು ಸೀತೆಗೆತೋರಿಸಿದ, ರಾವಣನ ವಧೆಯಾದ ನಂತರ ಸೀತಾದೇವಿಯು ಶ್ರೀರಾಮನ ಸಮೀಪಕ್ಕೆ ಬಂದ ಪ್ರಕರಣಗಳ ತತ್ವಗಳಲ್ಲಿವೆ.]

## ಸಂಧ್ಯಾಶಕ್ತಿ ವಿಚಾರ.

ಸಂಧ್ಯಾಶಕ್ತಿಯೆಂದರೆ, "ಸಂಧೌ ಭವಾ ಸಂಧ್ಯಾ" ಎಂಬ ವ್ಯುತ್ಪತ್ತಿಯಂತೆ ಸಂಧಿಕಾಲದಲ್ಲಿ ಉತ್ಪನ್ನವಾಗುವ ಪರಮೇಶ್ವರೀಶಕ್ತಿಯು. ಆ ಶಕ್ತಿಯಾವುದು? ಸಂಧಿಕಾರ್ಯವೇನು ? ಎಂಬುದನ್ನು ವಿಚಾರಮಾಡೋಣ.

ಸಂಧಿಕಾಲದಲ್ಲಿ ಉತ್ಪನ್ನವಾಗುವ ದೇವತಾಶಕ್ತಿಗೆ ವಂದನೆ ಮಾಡುವುದಕ್ಕೆ ಸಂಧ್ಯಾವಂದನೆಯೆಂದು ಹೆಸರು. ಕಾಲವನ್ನುಂಟುಮಾಡಲು ಒಂದು ದೇವತಾ ಶಕ್ತಿಯು ಇದ್ದೇ ಇರಬೇಕು. ಅಲ್ಲದೆ ಸಂಧ್ಯಾಪದವು ಸ್ತ್ರೀಲಿಂಗವು. ಆದುದರಿಂದ ಸಂಧ್ಯಾ ಎನ್ನುವುದು ದೇವತಾಶಕ್ತಿಯಾಗಿರುವುದು. ಈ ತಾತ್ಪರ್ಯಕ್ಕೆ ಶ್ರುತಿವಾಕ್ಯ ಗಳೂ ಮಹರ್ಷಿಗಳ ವಾಕ್ಯಗಳೂ ಇರುವುವು

ಯಾ ಸಂಧ್ಯಾ ಸಾ ಜಗತ್ಸೂತಿ ರ್ಮಾಯಾತೀತಾಹಿ ನಿಷ್ಕಳಾ |
ಈಶ್ವರೀ ಕೇವಲಾಶಕ್ತಿ ಸ್ತತ್ವತ್ರಯ ಸಮುದ್ಭವಾ ||

ತಾ|| ಸಂಧ್ಯಾದೇವತೆಯು ಲೋಕಸೃಷ್ಟಿಗೆ ಕಾರಣಳು. ಸಮಸ್ತ ಮಾಯೆಗಳನ್ನೂ ಮೀರಿದವಳು, ಕಳಾತೀತಳು, ಸರ್ವಕ್ಕೂ ನಿಯಾಮಕಳು, ಪರಾಶಕ್ತಿಸ್ವರೂಪಳು, ಸಗುಣದಲ್ಲಿ ಅಕಾರ ಉಕಾರ ಮಕಾರಗಳಾದ ಮೂರುರೂಪದಿಂದ ಉದಯಿಸುವವಳು ಎಂಬದಾಗಿ ವಸಿಷ್ಠಮಹರ್ಷಿಗಳು ಹೇಳಿರುವರು

ಉಪಾಸ್ತೇ ಸಂಧಿವೇಳಾಯಾಂ ನಿಶಾಯಾಂ ದಿವಸಸ್ಯಚ |
ತಾಮೇವ ಸನ್ಧ್ಯಾಂ ತಸ್ಮಾತ್ತು ಪ್ರವದನ್ತಿ ಮನೀಷಿಣಃ ||

ತಾ|| ಹಗಲು ರಾತ್ರಿಗಳ ಸಂಧಿಕಾಲಗಳಲ್ಲಿ ಉಪಾಸಿಸಲ್ಪಡುವ ದೇವತೆಯಾದುದರಿಂದ ಸಂಧ್ಯಾ ಎಂಬದಾಗಿ ವ್ಯಾಸಮಹರ್ಷಿಗಳು ಹೇಳಿರುವರು

ಸನ್ಧೌ ಸನ್ಧ್ಯಾಮುಪಾಸೀತ ನಾಸ್ತಗೇ ನೋದ್ಗತೇರವೌ ||

ತಾ|| ಸೂರ್ಯನ ಉದಯಾಸ್ತಮಯ ಕಾಲಗಳಿಗೆ ಕೊಂಚ ಮುಂಚಿತವಾಗಿ ಸನ್ಧ್ಯಾದೇವತೆಯನ್ನು ಉಪಾಸನೆಮಾಡಬೇಕು ಎಂದು ಯಾಜ್ಞವಲ್ಕ್ಯಮಹರ್ಷಿಗಳು ಹೇಳಿರುವರು.

ಅಹರಹಸ್ಸನ್ಧ್ಯಾಮುಪಾಸೀತ |
ಯಸ್ಸನ್ಧ್ಯಾಮುಪಾಸ್ತೆ ಬ್ರಹ್ಮೈವ ತಮುಪಾಸ್ತೆ ||

ತಾ|| ಸನ್ಧ್ಯೋಪಾಸನೆಯನ್ನು ತಪ್ಪದೆ ನಿತ್ಯವೂ ಅನುಷ್ಠಿಸಬೇಕು. ಸನ್ಧ್ಯಾದೇವತೆಯನ್ನು ಉಪಾಸನೆಮಾಡುವವನು ಪರಬ್ರಹ್ಮನನ್ನೇ ಉಪಾಸನೆಮಾಡುವವನಲ್ಲದೆ ಅನ್ಯಥಾ ಇಲ್ಲ ಎಂಬದಾಗಿ ಶ್ರುತಿವಾಕ್ಯವೂ ಇದೆ ಆದುದರಿಂದ ಸಂಧ್ಯಾ ಎನ್ನುವುದು ಸಾಕ್ಷಾತ್ ಪರಾಶಕ್ತಿಯಾಗಿರುವುದು. ಸಂಧ್ಯಾವಂದನೆಯಲ್ಲಿ ಉಪಾಸನೆಮಾಡುವುದು ಸಂಧ್ಯಾದೇವಿಯನ್ನೋ ಅಥವಾ ಗಾಯತ್ರೀದೇವಿಯನ್ನೋ ಎಂಬ ಸಂದೇಹಬರಬಹುದು. ಗಾಯತ್ರೀ, ಸಾವಿತ್ರೀ, ಸರಸ್ವತೀ, ಲಕ್ಷ್ಮೀ, ಸಂಧ್ಯಾದೇವಿಯರು ಪ್ರತ್ಯೇಕರಲ್ಲ. ಎಲ್ಲರೂ ಒಂದಾದ ಪರಾಶಕ್ತಿಯಸ್ವರೂಪವೇ. ಒಬ್ಬ ಅಧಿಕಾರಿಯು ಕಾರ್ಯಬೇಧಗಳಿಂದ ಅನೇಕ ಅಧಿಕಾರದ ನಾಮಗಳನ್ನು ಪಡೆಯುವಂತೆ ಒಂದಾದ ಪರಾಶಕ್ತಿಯಾದ ಗಾಯತ್ರೀದೇವಿಯೆ ಕಾರ್ಯಭೇದಗಳಿಂದ ಸೂರ್ಯಶಕ್ತಿಯಾಗಿ ಸಾವಿತ್ರೀ ಎಂದೂ, ನಾದಬ್ರಹ್ಮಶಕ್ತಿಯಾಗಿ ಸರಸ್ವತೀ ಎಂದೂ, ಸಂಧಿಶಕ್ತಿಯಾಗಿ ಸಂಧ್ಯಾ ಎಂದೂ, ಆನಂದಸ್ವರೂಪಳಾಗಿ ಲಕ್ಷ್ಮೀ ಎಂದೂ ಕರೆಯಲ್ಪಡುವಳು. ಈ ಕಾರ್ಯಗಳೆಲ್ಲಾ ಪರಾಶಕ್ತಿಯದಾದುದರಿಂದ ಯಾವ

ಶಕ್ತಿಯಾವದೂ ಪರಾಶಕ್ತಿಯಾಗಿರುತ್ತಾಳೆ. ಕಾರ್ಯಭೇದಗಳಿಂದ ಪರಾಶಕ್ತಿಯು ನಾಮಭೇದಗಳನ್ನು ಪಡೆಯುವ ತತ್ವಕ್ಕೂ ಸಂಧ್ಯಾಶಕ್ತಿಯೊಂದು ಇರುವ ತತ್ವಕ್ಕೂ ಸಾವಿತ್ರ್ಯೈನಮಃ ಗಾಯತ್ರ್ಯೈನಮಃ ಸರಸ್ವತ್ಯೈನಮಃ ಎಂಬೀ ಶ್ರುತಿ ವಾಕ್ಯಗಳ ಜೊತೆಗೆ ಸಂಧ್ಯಾಯೈನಮಃ ಎಂಬ ಶ್ರುತಿವಾಕ್ಯವೂ ಇರುವುದು ಆದುದರಿಂದ ಸಂಧ್ಯಾ ಎನ್ನುವುದು ದೇವತಾಶಕ್ತಿಯಾಗಿರುವುದು.

ಸಂಧ್ಯಾಶಕ್ತಿಯು ಬ್ರಹ್ಮಾಂಡ ಪಿಂಡಾಂಡಗಳೆರಡರಲ್ಲಿಯೂ ಇರುವುದು. ಸಂಧಿಯಲ್ಲಿರುವ ಶಕ್ತಿಯಾದುದರಿಂದ ಸಂಧ್ಯಾಯೆಂದು ಹೆಸರುಬಂದಿರುವುದೆಂದು ಮೇಲೆ ತಿಳಿಸಿತಷ್ಟೆ! ಹಗಲು ರಾತ್ರಿಗಳು ಸಂಧಿಯಾಗುವ ಕಾಲವನ್ನುಂಟು ಮಾಡುವ ಶಕ್ತಿಯು ಶೇಷಶಕ್ತಿಯೆನಿಸಿಕೊಂಡು ಭೂಮಂಡಲದ ಮೇಲ್ಭಾಗದ ಉತ್ತರ ಮೇರುವಿನ ಮಧ್ಯಶೃಂಗದಲ್ಲಿರುವುದು. (ಆಧಾರ.—ಲಲಿತಾಸಹಸ್ರನಾಮ "ಸುಮೇರು ಮಧ್ಯಶೃಙ್ಗಸ್ಥಾ") ಸೃಷ್ಟಿಯಾದ ಪ್ರಪಂಚವು ಸ್ಥಿತಿಯಲ್ಲಿರುವುದಕ್ಕೆ ಈ ಶಕ್ತಿಯು ಆಕರ್ಷಣಾರೂಪದಲ್ಲಿ ಭೂಮಂಡಲಕ್ಕೆ ಶಿಖರವೆನಿಸುವ ಉತ್ತರ ಮೇರುವಿನಲ್ಲಿದ್ದುಕೊಂಡು ಭೂಮಂಡಲವನ್ನು ಧರಿಸಿ ಭೂಮಂಡಲದಲ್ಲಿ ಒಂದು ಭಾಗದಲ್ಲಿ ಸೂರ್ಯನ ಬೆಳಕಿದ್ದರೆ ಮತ್ತೊಂದುಭಾಗದಲ್ಲಿ ಕತ್ತಲೆ ಇರುವಂತೆ ನಡೆಸಿ ಕೊಂಡು ಬರುತ್ತಿರುವುದು. ಪ್ರಳಯಕಾಲದಲ್ಲಿ ಹಗಲು ರಾತ್ರಿಗಳಾಗುವುದನ್ನು ನಿಲ್ಲಿಸಿ ಸರ್ವವನ್ನೂ ಲಯಮಾಡಿಕೊಂಡು ಪರಬ್ರಹ್ಮಸ್ಥಿತಿಯಾಗುವುದು. ಈ ಸಂಧ್ಯಾಶಕ್ತಿಯು ಬ್ರಹ್ಮಾಂಡದಲ್ಲಿ ಲಯಶಕ್ತಿಯಾಗಿಯೂ, ಪಿಂಡಾಂಡವಾದ ನಮ್ಮಲ್ಲಿ ನಿವೃತ್ತಿಮಾರ್ಗದ ಶಕ್ತಿಯಾಗಿಯೂ ಇರುವುದು. ಅಂದರೆ ಸಂಧ್ಯಾ ಶಕ್ತಿಯು ಪ್ರವೃತ್ತಿ ನಿವೃತ್ತಿ ಮಾರ್ಗಗಳಲ್ಲಿ ನಿವೃತ್ತಿಮಾರ್ಗವೆಂದರೆ ಮೋಕ್ಷ ವನ್ನುಂಟುಮಾಡಿಸುವ ಶಕ್ತಿಯಾಗಿರುವುದು. ಸೃಷ್ಟಿ ವ್ಯಾಪಾರಗಳ ಬಂಧನ ಪರಿ ಹಾರವಾಗಲು ನಿವೃತ್ತಿಮಾರ್ಗಕ್ಕೆ ಅಧಿಕಾರಿಣಿಯಾದ ಈ ಸಂಧ್ಯಾಶಕ್ತಿಯ ಅನು ಗ್ರಹವು ನಮಗೆ ಅತ್ಯವಶ್ಯಕವಾಗಿ ಬೇಕಾಗಿರುವುದರಿಂದಲೇ ಸಂಧ್ಯಾವಂದನೆಗೆ ಸಂಧ್ಯಾಕರ್ಮವೆಂದು ಹೆಸರುಬಂದಿರುವುದು. ಕರ್ಮವು ಜ್ಞಾನಕ್ಕೆ ತಳವಾಯ ದಂತೆ ಇರುವುದರಿಂದ ಯಾವ ಕರ್ಮಮಾಡುವುದಕ್ಕೂ ಸಂಧ್ಯಾವಂದನೆಯು ತಳವಾಯವಾಗಿರುವುದು. ಇದಕ್ಕೆ ಕಾರಣವೇನೆಂದರೆ ನಿವೃತ್ತಿಮಾರ್ಗದ ಶಕ್ತಿಯಾದ ಸಂಧ್ಯಾಶಕ್ತಿಯ ಅನುಗ್ರಹವು ಕರ್ಮಜ್ಞಾನಗಳೆರಡಕ್ಕೂ ಅತ್ಯವಶ್ಯಕ ವಾಗಿ ಬೇಕಾಗಿರುವುದು. ಸಂಧ್ಯಾವಂದನೆಯೆಂದರೆ, ಸಂಧ್ಯಾಪ್ರಾರ್ಥನೆ ಮತ್ತು ಗಾಯತ್ರೀ ಉಪಾಸನೆಗಳೆರಡೂ ಸೇರಿರುವುವು.

ಬ್ರಹ್ಮಾಂಡದಲ್ಲಿ ಸಂಧ್ಯಾಶಕ್ತಿಯು ಭೂಮಂಡಲಕ್ಕೆ ಶಿಖರವೆನಿಸುವ ಉತ್ತರ ಮೇರುವಿನಲ್ಲಿರುವಂತೆ ಪಿಂಡಾಂಡವಾದ ನಮ್ಮಲ್ಲೂ ಭೂತತ್ವಕ್ಕೆ ಪ್ರಧಾನವಾಗಿ

ಸೊಂಟದಲ್ಲಿರುವ ಮೂಲಾಧಾರಚಕ್ರದ ಅಂತ್ಯದಲ್ಲಿ ಸರ್ವಕ್ಕೂ ಆಧಾರ ಭೂತಳಾಗಿರುವಳು. ಈ ತಾತ್ಪರ್ಯಕ್ಕೆ ಶ್ರೀಶಂಕರಾಚಾರ್ಯರವರು :—

ಸುಧಾಧಾರಾಸಾರೈ ಶ್ಚರಣಯುಗಳಾಂತರ್ವಿಗಳಿತೈಃ ।
ಪ್ರಪಂಚಂ ಸಿಂಚಂತೀ ಪುನರಪಿ ರಸಾಮ್ನಾಯ ಮಹಸಃ ॥
ಅವಾಪ್ಯಂಸ್ವಾಂ ಭೂಮಿಂ ಭುಜಗನಿಭ ಮಧ್ಯುಷ್ಟವಲಯಂ ।
ಸ್ವಮಾತ್ಮಾನಂ ಕೃತ್ವಾ ಸ್ವಪಿಷಿ ಕುಲಕುಂಡೇ ಕುಹರಿಣಿ ॥

ತಾ॥ ಎಲೌ ಜನನಿಯೆ ! ನೀನು ಸಹಸ್ರಾರಕಮಲದಲ್ಲಿರುವ ನಿನ್ನ ಚರಣ ಯುಗಳದಿಂದ ಜನಿಸಿದ ಅಮೃತವೃಷ್ಟಿಪ್ರವಾಹದಿಂದ ದೇಹದಲ್ಲಿರುವ ಎಪ್ಪತ್ತೆರಡು ಸಾವಿರ ನಾಡಿಗಳನ್ನೂ ತೋಯಿಸಿ ಅಮೃತರಸದ ಅತಿಶಯವಾದ ಕಾಂತಿಯುಳ್ಳ ಚಂದ್ರನ ಮೂಲಕ ಪುನಃ ಮೂಲಾಧಾರಚಕ್ರವನ್ನು ಸೇರಿ ಸರ್ಪದಂತೆ ಕುಂಡಲಾ ಕಾರವಾಗಿ ತೆಕ್ಕೆಹಾಕಿಕೊಂಡು ನಿನ್ನ ಶಕ್ತಿ ರೂಪವನ್ನು ತಾಳಿ ತಾವರೆದಂಟಿನೊಳ ಗಿರುವ ರಂಧ್ರದಂತೆ ಸೂಕ್ಷ್ಮವಾದ ರಂಧ್ರವುಳ್ಳ ಪೃಥ್ವೀತತ್ವವು ಲಯವಾಗುವ ಸುಷುಮ್ನಾನಾಡಿಯ ಮೂಲದಲ್ಲಿರುವ ಆಧಾರಚಕ್ರದಲ್ಲ ನಿದ್ದೆಗೈಯುವೆ, ಎಂದು ಹೇಳಿರುತ್ತಾರೆ. ನಮ್ಮಲ್ಲಿ ಭೂತತ್ವವಾದ ಮೂಲಾಧಾರಚಕ್ರವು ಚಂದ್ರಸೂರ್ಯ (ಇಡಾ ಪಿಂಗಳಾ) ನಾಡಿಗಳ ಮತ್ತು ಸುಷುಮ್ನಾನಾಡಿಯ ಸಂಗಮಸ್ಥಳವೆಂದರೆ ಸಂಧಿಸ್ಥಳವಾಗಿರುವುದು. ಈ ಸ್ಥಳಕ್ಕೆ ತ್ರಿಕೂಟವೆಂದು ಶ್ರುತಿಯು ತಿಳಿಸುವುದಲ್ಲದೆ ಶ್ರೀಶಂಕರಾಚಾರ್ಯರೂ "ತ್ರಿಕೂಟನಾಮ್ನೀ ಸ್ಥಿಮಿತೇಽಂತರಂಗೇ" ಎಂಬದಾಗಿ ಹೇಳಿರುವರು. ದರ್ಶನೋಪನಿಷತ್ತಿನಲ್ಲಿ "ಇಡಾಪಿಂಗಳಯೋಸ್ಸಂಧಿಂ ಯದಾ ಪ್ರಾಣಸ್ಸಮಾಗತಃ" ಎಂದು ಹೇಳಿದೆ. ಈ ಸಂಧಿಸ್ಥಳದಲ್ಲಿ ಪರಾಶಕ್ತಿಯಾದ ಕುಂಡಲಿನೀಶಕ್ತಿಯು ಇರುವುದರಿಂದ ಇವಳಿಗೇ ಸಂಧ್ಯಾಶಕ್ತಿಯೆಂದು ಹೆಸರು. "ಇಡಾ ತಿಷ್ಠತಿ ವಾಮೇನ ಪಿಂಗಳಾ ದಕ್ಷಿಣೇನತು ತಯೋರ್ಮಧ್ಯೇ ಪರಂಸ್ಥಾನಂ" ಎಂಬ "ಆಧಾರಶಕ್ತಿರವ್ಯಕ್ತಾ ಯಯಾ ವಿಶ್ವಂ ಪ್ರವರ್ತತೇ" ಎಂಬ "ಚಂದ್ರಾರ್ಕ ಮಧ್ಯಮಾಶಕ್ತಿ ರ್ಯತ್ರಸ್ಥಾ ತತ್ರಬನ್ಧನಂ" ಎಂಬ ಶ್ರುತ್ಯಾಧಾರಗಳಿಂದಲೂ ನಮ್ಮಲ್ಲಿ ಸೂರ್ಯ ಚಂದ್ರ ಬ್ರಹ್ಮರಂಧ್ರನಾಡಿಗಳ ಸಂಧಿಸ್ಥಳದಲ್ಲೂ ಬ್ರಹ್ಮಾಂಡದಲ್ಲಿ ಉತ್ತರಮೇರುವಿನಲ್ಲಿಯೂ, ಇರುವ ಪರಾಶಕ್ತಿಯೇ ಸಂಧ್ಯಾದೇವಿಯಾಗಿರುವಳು.

ಸಂಧ್ಯಾಶಕ್ತಿಯು ಭೂಲೋಕದ ಶಿಖರವೆನಿಸುವ ಉತ್ತರ ಮೇರುವಿನಲ್ಲಿರುವ ಮತ್ತು ನಮ್ಮಲ್ಲಿ ಭೂತತ್ವವಾದ ಮೂಲಾಧಾರಚಕ್ರದಲ್ಲಿರುವ ತತ್ವಕ್ಕೂ ಉಪಸ್ಥಾನ ಪ್ರಕರಣದಲ್ಲಿ ಬರುವ "ಉತ್ತಮೇ ಶಿಖರೇಜಾತೇ ಭೂಮ್ಯಾಂ ಪರ್ವತಮೂರ್ಧನಿ" ಎಂಬ ಶ್ರುತಿವಾಕ್ಯವೂ ಆಧಾರವಾಗಿರುವುದು. ಅಲ್ಲದೆ ಅರ್ಘ್ಯಪ್ರದಾನಾನಂತರ ಬರುವ "ಉತ್ತಿಷ್ಠದೇವಿ ಗಂತವ್ಯಂ" ಎಂಬ ಮಂತ್ರದಲ್ಲಿ "ಎಲೌದೇವಿ ! ಏಳು"

ಎಂಬ ಪ್ರಾರ್ಥನೆಯು ಇರುವುದು. ಇದರ ತತ್ವವೇನೆಂದರೆ- ಭೂಮಂಡಲದ ಶಿಖರವಾದ ಉತ್ತರಮೇರುವಿನಲ್ಲಿರುವ ಸಂಧ್ಯಾಶಕ್ತಿಯು ಲಯಕಾಲದಲ್ಲಿ ಮೇರುವಿನಿಂದೆದ್ದು ಭೂಲೋಕ ಭುವರ್ಲೋಕ ಸುವರ್ಲೋಕ ಮಹರ್ಲೋಕ ಜನೋಲೋಕ ತಪೋಲೋಕಗಳನ್ನೆಲ್ಲಾ ಕ್ರಮವಾಗಿ ಲಯಮಾಡಿಕೊಂಡು ಪರಮಾತ್ಮ ಒಂದೇ ಉಳಿಯುವ ಸ್ಥಿತಿಯಾಗುವುದು. ಇದರಂತೆ ನಮ್ಮಲ್ಲಿಯೂ ಮೂಲಾಧಾರಚಕ್ರದಲ್ಲಿರುವ ಸಂಧ್ಯಾಶಕ್ತಿಯು (ಕುಂಡಲಿನೀಶಕ್ತಿಯು) ಎದ್ದು ನಮ್ಮಲ್ಲಿರುವ ಲೋಕಗಳ ತತ್ವಗಳನ್ನು ದಾಟಿ ಶಿರಸ್ಸಿನಲ್ಲಿ ಬ್ರಹ್ಮರಂಧ್ರದಲ್ಲಿರುವ ಓಂಕಾರ (ಸತ್ಯಲೋಕ) ಸ್ಥಾನವನ್ನು ನೇರುವುದು ಇದೇ ಮೋಕ್ಷಸ್ವರೂಪ. ಇಂತಹ ಮೋಕ್ಷಸ್ವರೂಪವನ್ನು ಅನುಗ್ರಹಿಸಲು ಪ್ರಾರ್ಥಿಸುವುದೇ "ಉತ್ತಿಷ್ಠದೇವಿ ಗಂತವ್ಯಂ ಎಂಬ ಮಂತ್ರದ ತತ್ವವಾಗಿದೆ.

ಸಂಧ್ಯಾಶಕ್ತಿಯ ಕಾರ್ಯವೇನೆಂದರೆ.— ಜೀವನನ್ನು ಅಜ್ಞಾನಬಂಧನದಿಂದ ಬಿಡಿಸಿಪರಮಾತ್ಮಸಾಕ್ಷಾತ್ಕಾರವನ್ನುಂಟುಮಾಡಿಕೊಡುವುದು ಇದಕ್ಕೆ ಸರಿಯಾಗಿ "ಸಮ್ಯಕ್ ಧೀಯತ ಇತಿ ಸಂಧಿಃ" ಚೆನ್ನಾಗಿ ಸೇರಿಸುವಿಕೆಯೆಂಬ ವ್ಯುತ್ಪತ್ತಿಯು ಇರುವುದು ಅಲ್ಲದೆ "ಸಂಧಾನಂ ಏಕತ್ರ ಇತಿ ಸಂಧಿಃ" ಏಕತ್ವವಾಗುವಿಕೆಯೇ ಸಂಧಿ. ಅಂದರೆ ಜೀವ ಬ್ರಹ್ಮರ ಏಕತ್ವವನ್ನುಂಟುಮಾಡುವ ಶಕ್ತಿಯೇ 'ಸಂಧ್ಯಾ' ಎನ್ನಲ್ಪಡುವಳು. ಈ ಅರ್ಥಪ್ರತಿಪಾದನೆಗ "ಸಂಧೀಯತೇ ಸಂಪದಾ ಯಜಮಾನಃ ಅನಯೇತಿ ಸಂಧ್ಯಾ, ಸಾಚಸಾವಿದ್ಯಾಚ ಸಂಧ್ಯಾವಿದ್ಯಾ-ಜ್ಞಾನರೂಪಾ" ಅಂದರೆ ಯಾವಶಕ್ತಿಯು ಉಪಾಸಕನಿಗೆ ಸಂಪತ್ತೆಂದನೆ ಮೋಕ್ಷ (ಜ್ಞಾನ) ವನ್ನುಂಟುಮಾಡುತ್ತಾಳೋ ಅವಳಿಗೆ ಸಂಧ್ಯಾ ಎಂದು ಹೆಸರು. ಇಂತಹ ಮೋಕ್ಷವನ್ನುಂಟುಮಾಡುವ ವಿದ್ಯೆಯೇ ಜ್ಞಾನರೂಪವಾದುದು. ಪ್ರಥಮದಲ್ಲಿ ವಿವರಿಸಿರುವ ತತ್ವಗಳಿಂದಲೂ ಮೇಲಿನ ತತ್ವಗಳಿಂದಲೂ ಸಂಧ್ಯಾ ಎಂದರೆ ದೇವತಾಶಕ್ತಿಯೆಂಬ ವಿಚಾರವು ನಿಸ್ಸಂಶಯವಾದುದಾಗಿರುವುದು. ಸಂಧ್ಯಾಕಾಲದಲ್ಲಿರುವ ದೇವತಾಶಕ್ತಿಯನ್ನು ಸರ್ವಭೂತಗಳೂ ವಂದನೆಮಾಡುತ್ತವೆಂದು ಸಂಧ್ಯಾವಂದನೆಯ ಉಪಸ್ಥಾನದ ಮಂತ್ರದಲ್ಲಿ.

ಯಾಗ್ಂ ಸದಾ ಸರ್ವಭೂತಾನಿ ಚರಾಣಿ ಸ್ಥಾವರಾಣಿಚ ।
ಸಾಯಂಪ್ರಾತ ರ್ನಮಸ್ಯಂತಿ ಸಾಮಾ ಸಂಧ್ಯಾಽಭಿರಕ್ಷತು ॥

ತಾ॥ ಚರಾಚರಾತ್ಮಕವಾದ ಸರ್ವಭೂತಗಳೂ ನಿತ್ಯವೂ ಸಾಯಂ ಪ್ರಾತಃ ಕಾಲಗಳಲ್ಲಿ ಯಾವ ಸಂಧ್ಯಾದೇವಿಗೆ ನಮಸ್ಕರಿಸುತ್ತಿವೆಯೋ ಪರಾಶಕ್ತಿಯಾದ ಆ ಸಂಧ್ಯಾದೇವಿಗೆ ಅಭಿವಂದಿಸುವೆನು. ಆ ದೇವಿಯು ನನ್ನನ್ನು ರಕ್ಷಿಸಲಿ, ಎಂದು ಹೇಳಿದೆ. ಅಂದರೆ ಚರಾಚರಗಳಾದ ಸರ್ವ ಪ್ರಾಣಿಸಮುದಾಯವೂ ರಾತ್ರಿರೂಪ

ವಾದ ಅಂಧಕಾರದಿಂದಲೂ, ಹಗಲಿನ ಸೂರ್ಯತಾಪದಿಂದಲೂ ಬಿಡಲ್ಪಟ್ಟು ಪ್ರಾತ ಸ್ಸಾಯಂಕಾಲದ ಸತ್ವಗುಣಶಕ್ತಿಯಿಂದ ಸಂಧ್ಯಾಕಾಲಗಳಲ್ಲಿ ಪ್ರಫುಲ್ಲತೆಯನ್ನು ಹೊಂದುವುದರಿಂದ ಸಂಧ್ಯಾಶಕ್ತಿಯ ಮಹಿಮೆಯು ಎಂತಹುದೆಂಬುದು ವ್ಯಕ್ತ ಪಡುವುದು.

ಪ್ರಾತರ್ಮಾಧ್ಯಾಹ್ನಿಕ ಸಾಯಂಸಂಧ್ಯಾಕಾರ್ಯದ ತತ್ವಗಳು ಸಂಧ್ಯಾದೇವತಾ ಶಕ್ತಿಯ ಪ್ರಭಾವದಿಂದ ನಮ್ಮಲ್ಲುಂಟಾಗಿ ಮೋಕ್ಷಸಾಮ್ರಾಜ್ಯಲಾಭವಾಗುವ ಕ್ರಮವನ್ನು ತಿಳಿದುಕೊಳ್ಳೋಣ.

"ಉತ್ತಿಷ್ಠ ದೇವಿ ಗಂತವ್ಯಂ" ಎಂಬ ಮಂತ್ರದಿಂದ ಸಂಧ್ಯಾದೇವಿಯನ್ನು ಪ್ರಸನ್ನಳಾಗಿ ಕರ್ಮಾನುಷ್ಠಾನಶಕ್ತಿಯನ್ನೂ ಜ್ಞಾನಮಾರ್ಗವನ್ನೂ ಚೆನ್ನಾಗಿ ಅನುಗ್ರಹಮಾಡೆಂದು ಪ್ರಾರ್ಥಿಸಬೇಕು. ಮತ್ತು ಗಾಯತ್ರೀದೇವಿಯನ್ನು ಉಪಾಸನೆ ಮಾಡಬೇಕು. ಧ್ಯಾನಮಾಡಲು ಅರ್ಹತೆಯಿರುವವರೇ ತ್ರಿಸಂಧ್ಯಾ ತತ್ವವನ್ನು ಪಡೆದು ಶಾಶ್ವತವಾದ ಮೋಕ್ಷಸಾಮ್ರಾಜ್ಯಸುಖವನ್ನು ಹೊಂದುವರು. ಹಿಂದೆ ಸಂಧ್ಯಾಕಾಲದ ವಿಚಾರದಲ್ಲಿ ತಿಳಿಸಿದಂತೆ ಮನುಷ್ಯನು ಅಂತರ್ಮುಖದದಾರಿಗೆ ತಿರುಗದೆ ಬಹಿರ್ವ್ಯಾಪಾರೋನ್ಮುಖನಾಗಿರುವವರೆಗೂ ಅಜ್ಞಾನಸ್ವರೂಪವಾದ ಅಂಧಕಾರವಷ್ಟೆ! ಆದುದರಿಂದ ಅಂತರ್ಮುಖದಮಾರ್ಗಕ್ಕೆ ತಿರುಗಿ ಧ್ಯಾನಕ್ಕೆ ಪ್ರಾರಂಭಿಸುವ ಕಾಲದಲ್ಲಿ ಪ್ರಾತಸ್ಸಂಧ್ಯಾಕಾಲವು ಪ್ರಾರಂಭವಾಗುವುದು. ಹೇಗೆಂದರೆ ಅಧಿಕಾರಿಯು ಭ್ರೂಮಧ್ಯದಲ್ಲಿ ದೃಷ್ಟಿಯಿಟ್ಟು ಅಂತರ್ಮುಖದ ತೇಜಸ್ಸಿನಲ್ಲಿ ಗಾಯತ್ರೀಭಾವವನ್ನು ಧರಿಸಿ ಧ್ಯಾನಿಸಲು ಪ್ರಾರಂಭಿಸುವನು. ಈ ಕಾಲದಲ್ಲಿ ಅಧಿಕಾರಿಗೆ ಅಂತರ್ಮುಖದಲ್ಲಿ ಗೋಚರವಾಗುವ ತೇಜಸ್ಸು ಬಾಲಸೂರ್ಯನ ತೇಜಸ್ಸು ಹೇಗೆ ರಕ್ತವರ್ಣವಾಗಿರುವುದೋ ಹಾಗೆಯೇ ಇರುವುದು. ಈ ಕಾಲದಲ್ಲಿ ಸಂಧ್ಯಾಶಕ್ತಿಯು ಅಧಿಕಾರಿಯ ಬುದ್ಧಿವೃತ್ತಿಯನ್ನು ಬಹಿರ್ವ್ಯಾಪಾರದಿಂದ ತಪ್ಪಿಸಿ ಅಂತರ್ಮುಖದಲ್ಲಿ ಗೋಚರವಾಗುವ ಬಾಲಸೂರ್ಯತೇಜಸ್ಸಿನೊಡನೆ ಸಂಧಿಮಾಡಿ ಸುತ್ತಾಳೆ. ಗಾಯತ್ರಿಯು ಈ ತತ್ವದಲ್ಲಿ ಇರುತ್ತಾಳೆಂಬುದಕ್ಕೆ 'ತಾಂ ಪ್ರಾತರ್ಬಾಲಾಂ ಬಾಲಾದಿತ್ಯಮಂಡಲಮಧ್ಯಸ್ಥಾಂ ರಕ್ತವರ್ಣಾಂ ಗಾಯತ್ರೀನಾಮದೇವತಾಂ" ಎಂಬ ಆಧಾರವಾಕ್ಯವಿರುವುದು. ಇದೇ ಪ್ರಾತಸ್ಸಂಧ್ಯಾ ತತ್ವ.

ಸೂರ್ಯೋದಯಾನಂತರ ಸೂರ್ಯನ ತೇಜಸ್ಸು ಅಧಿಕವಾಗುತ್ತಾ ಬಂದಂತೆ ಅಧಿಕಾರಿಯ ಅನ್ತರ್ಮುಖದಲ್ಲೂ ಗೋಚರವಾಗುವ ತೇಜಸ್ಸು ಧ್ಯಾನಾಭ್ಯಾಸದಿಂದ ಅಧಿಕವಾಗುತ್ತಾಬಂದು ಮಧ್ಯಾಹ್ನದ ಸೂರ್ಯಸೋಪಾದಿಯಲ್ಲಿ ಅಂತರ್ಮುಖದಲ್ಲಿ ಶ್ವೇತವರ್ಣದ ಪೂರ್ಣತೇಜಸ್ಸಿಗೆ ಬಂದು ಅದರಲ್ಲಿ ಧ್ಯಾನಮಾಡುತ್ತಾ ಇರುತ್ತಾನೆ. ಈ ಕಾಲದಲ್ಲಿ ಸಂಧ್ಯಾಶಕ್ತಿಯು ಅಂತರ್ಮುಖದಲ್ಲಿರುವ ತರುಣಾದಿತ್ಯಮಂಡಲದ

ತೇಜಸ್ಸಿನೊಡನೆ ಅಧಿಕಾರಿಯ ಬುದ್ಧಿವೃತ್ತಿಯನ್ನು ಸಂಧಿಮಾಡಿಸುತ್ತಾಳೆ ಅಂದರೆ ಗಾಯತ್ರೀದೇವಿಗೆ ತರುಣಾದಿತ್ಯಮಂಡಲದೊಳಗೆ ಇರುವ ಕಾಲದಲ್ಲಿ "ಸಾವಿತ್ರೀ" ದೇವಿಯೆಂದು ಹೆಸರು. ಇಂತಹ ಸಾವಿತ್ರಿಯೊಡನೆ ಸಂಧ್ಯಾದೇವಿಯು ಅಧಿಕಾರಿಯ ಬುದ್ಧಿವೃತ್ತಿಯನ್ನು ಸಂಬಂಧಿಸುವಿಕೆಯೇ ಮಾಧ್ಯಾಹ್ನಿಕದ ತತ್ವವಾಗಿದೆ. ಈ ತತ್ವಕ್ಕೆ "ತಾಂ ಯುವತೀಂ ಯುವಾದಿತ್ಯಮಂಡಲ ಮಧ್ಯಸ್ಥಾಂಶ್ವೇತವರ್ಣಾಂ ಸಾವಿತ್ರೀನಾಮ ದೇವತಾಂ" ಎಂಬ ಮಹರ್ಷಿಗಳ ಆಧಾರವಾಕ್ಯವೂ ಇದೆ.

ಮಧ್ಯಾಹ್ನ ಹನ್ನೆರಡು ಘಂಟೆಯಿಂದ ಸಾಯಂಕಾಲಕ್ಕೆ ಸೂರ್ಯನ ತೇಜಸ್ಸು ತಗ್ಗುವಂತೆ ಅಧಿಕಾರಿಯು ಅಂತರ್ಮುಖದಲ್ಲಿ ಅಧಿಕವಾಗಿದ್ದ ತೇಜಸ್ಸು ತಗ್ಗುತ್ತಾ ಬರುವುದು. ಸೂರ್ಯಾಸ್ತಮಯಸಮಯದಲ್ಲಿ ವೃದ್ಧಸೂರ್ಯಮಂಡಲ ಮಧ್ಯವರ್ತಿನಿಯಾಗಿ ಶ್ಯಾಮವರ್ಣವಾಗಿರುವ ಗಾಯತ್ರೀದೇವಿಯು 'ಸರಸ್ವತೀ' ಯೆಂದು ಕರೆಯಲ್ಪಡುವಳು. ಈ ತತ್ವ ಸಮರ್ಥನೆಗೆ "ಸಾಯಂವೃದ್ಧಾಂ ವೃದ್ಧಾದಿತ್ಯಮಂಡಲ ಮಧ್ಯಸ್ಥಾಂ ಶ್ಯಾಮವರ್ಣಾಂ ಸರಸ್ವತೀನಾಮದೇವತಾಂ"ಎಂಬ ಆಧಾರವಾಕ್ಯವೂ ಇರುವುದು. ಸರಸ್ವತಿ ಯೆಂದರೆ "ಸರಃ ಪ್ರಸರಣಂ ಸರ್ವತ್ರಾಸ್ತೀತಿ ವಾ ಸರಸ್ವತೀ (ಈ ಸೀ)" ಎಂಬ ಅಮರದ ವ್ಯುತ್ಪತ್ತಿಯಂತೆ ಸರ್ವತ್ರವ್ಯಾಪನೆಯುಳ್ಳವಳು. ಅಂದರೆ ಅಂತರ್ಮುಖದಲ್ಲಿ ತೇಜಸ್ಸು ತಗ್ಗುತ್ತಾಬಂದರೂ ಅಧಿಕಾರಿಯು ಧ್ಯಾನದಲ್ಲಿ ಮುಳುಗಿದರೆ ಬುದ್ಧಿವೃತ್ತಿಯು ಸರ್ವವ್ಯಾಪಕತೆಯಲ್ಲಿ ಲಯವಾಗುವುದು. ಸರ್ವವ್ಯಾಪಕವಾಗುವ ಸ್ಥಿತಿಯೇ ಮೋಕ್ಷಸಾಮ್ರಾಜ್ಯದ ಸ್ಥಿತಿ. ಇಂತಹ ಸರ್ವವ್ಯಾಪಕತೆಯಲ್ಲಿ ಸಂಧ್ಯಾದೇವಿಯು ಬುದ್ಧಿಯನ್ನು ಲಯಮಾಡಿಸುವುದರಿಂದ ಸಂಧ್ಯಾಶಕ್ತಿಯು ಕೂಡ ಸರ್ವವ್ಯಾಪಕಳಾಗುವಳು. ಅಂದರೆ ಪರಮಾತ್ಮಸ್ಥಿತಿಯೊಂದೇ ಉಳಿದುಕೊಳ್ಳುವ ಸ್ಥಿತಿಯಾಗುವುದು. ಸಮರಾತ್ರಿಯ ತತ್ವವೇ ಹಿಂದೆ ಸಂಧ್ಯಾಕಾಲದ ತತ್ವದಲ್ಲಿ ಹೇಳಿದ ಅಗ್ನಿನಾಮಕನಾದ ಪರಬ್ರಹ್ಮ ಒಂದೇ ಉಳಿದುಕೊಳ್ಳುವ ಸ್ಥಿತಿಯಾಗಿರುವುದು. ಇದೇ ಸಾಯಂಸಂಧ್ಯಾ ತತ್ವ.

ಈ ಸಂಧ್ಯಾತತ್ವಗಳಲ್ಲಿ ಬಹು ಅಮೋಘವಾದ ವಿಚಾರಗಳಿವೆ ವಿಷಯಗಳನ್ನು ಲಂಬಿಸದೆ ತತ್ವದ ಸಾರವು ಮಾತ್ರ ಬರೆಯಲ್ಪಟ್ಟಿರುವುದು. ಈ ಸಂಧ್ಯಾತತ್ವ ಸಮರ್ಥನೆಗೆ ಎರಡು ವೇದವಾಕ್ಯಗಳ ಆಧಾರಗಳನ್ನೇ ಬರೆದು ಈ ವಿಚಾರವನ್ನು ಪೂರ್ಣಮಾಡೋಣ.

ಯತ್ಕುಮಾರೀ ಮಂದ್ರಯತೇ ಯದ್ಯೋಷಿ ದ್ಯತ್ಪತಿವ್ರತಾ |
ಅರಿಷ್ಟಂ ಯತ್ಕಿಂಚ ಕ್ರಿಯತೇ ಅಗ್ನಿ ಸ್ತದನು ವೇಧತಿ ||

ತಾ|| ಕುಂಡಲಿನೀ (ಸಂಧ್ಯಾ) ಶಕ್ತಿಯು ಅವಸ್ಥಾತ್ರಯವುಳ್ಳದ್ದು. ಕೌಮಾರಾವಸ್ಥೆಯಲ್ಲಿ ಮಂದ್ರಸ್ಥಿತಿಯಲ್ಲಿರುವುದು. ಯೋಷಿದವಸ್ಥೆಯಲ್ಲಿ ಪತಿ

ವೃತೆಯಾಗಿರುವಳು. ಅನಂತರ ಅಗ್ನಿನಾಮಕನಾದ ಪರಬ್ರಹ್ಮನು ಸಾಕ್ಷಾತ್ಕಾರವಾಗುವಲ್ಲಿ ಯಾವ ಅರಿಷ್ಟ ತಾನೇ ಏನು ಮಾಡೀತು.

ಕುಂಡಲಿನ್ಯಾಃ ಸಮುದ್ಭೂತಾ ಗಾಯತ್ರೀ ಪ್ರಾಣಧಾರಿಣೀ |
ಪ್ರಾಣವಿದ್ಯಾ ಮಹಾವಿದ್ಯಾಯಸ್ತಾಂವೇದಸವೇದವಿತ್ ||

ತಾ|| ಕುಂಡಿಲಿನಿಯೆಂದರೆ ಸಂಧ್ಯಾಶಕ್ತಿಯಿಂದ ಗೋಚರವಾಗುವ ಗಾಯತ್ರೀ ದೇವಿಯು ಪ್ರಾಣವನ್ನು ಧರಿಸಿರುವಳೆಂದರೆ ಬ್ರಹ್ಮಾಂಡವನ್ನು ಧರಿಸಿರುವಳು. ಗಾಯತ್ರೀದೇವಿಯನ್ನು ಅರಿಯುವುದೇ ಮಹಾವಿದ್ಯೆಯೆನಿಸಿಕೊಳ್ಳುವುದು. ಈ ಮಹಾವಿದ್ಯೆ ಎನಿಸುವ ಗಾಯತ್ರೀ ದೇವಿಯನ್ನು ತಿಳಿದವರೇ ವೇದವಿದರೆನ್ನಿಸಿಕೊಳ್ಳುವರೆಂದರೆ ಜ್ಞಾನಿಗಳಾಗಿರುವರೆಂದರ್ಥ.



# ೨ ನೆಯ ಪ್ರಕರಣ
# ಅರ್ಘ್ಯಪ್ರದಾನಾಂತ್ಯದವರೆಗೆ

## ಪ್ರಾತಸ್ಸಂಧ್ಯಾವಂದನೆ
## ೧ ಮಾರ್ಜನೆ
### ಋಗ್ಯಜುಸ್ಸಾಮಶಾಖಾ ಬ್ರಾಹ್ಮಣಕ್ಷತ್ರಿಯವೈಶ್ಯರಿಗೆ

ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂಗತೋಽಪಿವಾ |
ಯಃಸ್ಮರೇ ತ್ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಶ್ಶುಚಿಃ ||

ತಾತ್ಪರ್ಯ|| ಅಪರಿಶುದ್ಧನಾದರೂ, ಪರಿಶುದ್ಧನಾದರೂ ಸಮಸ್ತವಿಧವಾದ ಅವಸ್ಥೆಗಳನ್ನು ಹೊಂದಿದವನಾದರೂ ಪರಿಶುದ್ಧನಾಗಬೇಕೆಂದು ಯಾವ ಮನುಷ್ಯನು ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಧ್ಯಾನಮಾಡುತ್ತಾನೋ ಆ ಮನುಷ್ಯನು ದೇಹದ ಹೊರಗೂ ಒಳಗೂ ಪರಿಶುದ್ಧನಾಗುತ್ತಾನೆ. ಬ್ರಾಹ್ಮಣರಲ್ಲಿ ಕೆಲವರು ಮೇಲಿನ ಮಂತ್ರಕ್ಕೆ ಬದಲಾಗಿ ಕೆಳಗಿನ ವಿಘ್ನೇಶ್ವರನ ಪ್ರಾರ್ಥನೆಯನ್ನು ಹೇಳಿ ಕರ್ಮಪ್ರಾರಂಭಮಾಡುತ್ತಾರೆ.

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ |
ಪ್ರಸನ್ನವದನಂ ಧ್ಯಾಯೇ ತ್ಸರ್ವವಿಘ್ನೋಪ ಶಾನ್ತಯೇ ||

ಪರಮಾತ್ಮನನ್ನು ಸ್ಮರಣೆಮಾಡುತ್ತ ಭಕ್ತಿಯಿಂದಲೇ ಸಂಧ್ಯಾಕರ್ಮವನ್ನು ಪ್ರಾರಂಭಮಾಡಬೇಕಾದುದು ಮುಖ್ಯವಾದುದೆಂದು ಸೂಚಿಸುತ್ತದೆ. ದೇಹದಲ್ಲಿಯೂ

ಮನಸ್ಸಿನಲ್ಲಿಯೂ ಪರಿಶುದ್ಧತೆಯಿಲ್ಲದೆ ದೇವರ ನಾಮಸ್ಮರಣೆ ಮಾಡಿದಾಕ್ಷಣ ಸಾಕಾದಷ್ಟು ಪವಿತ್ರರಾಗುವುದಿಲ್ಲ. ಶೌಚಾದಿಗಳಿಂದ ಶುಚಿರ್ಭೂತರಾಗಬೇಕಲ್ಲದೆ ಸಾತ್ವಿಕ ಮನಸ್ಸಿನಿಂದಲೂ ಭಕ್ತಿಯಿಂದಲೂ ಕರ್ಮಮಾಡಬೇಕು. ಅಂದರೆ ಪವಿತ್ರತೆಯಿಂದಲೇ ಕರ್ಮಮಾಡಬೇಕು. ಈ ತತ್ವಪ್ರತಿಪಾದನೆಯ ಸೂಚನೆ ಗೋಸ್ಕರವೇ ದರ್ಭೆಯಿಂದ ಮಾಡಿದ ಪವಿತ್ರವನ್ನು ಕರ್ಮಮಾಡತಕ್ಕ ಕಾಲದಲ್ಲಿ ಅನಾಮಿಕಾ ಬೆರಳಿನಲ್ಲಿ ಧರಿಸುವುದಾಗಿರುವುದು. ಕರ್ಮವು ನಿರ್ವಿಘ್ನವಾಗಿ ನೆರವೇರಲು ಆದಿಯಲ್ಲಿ ವಿಘ್ನೇಶ್ವರನ ಪ್ರಾರ್ಥನೆಯೂ "ಅಪವಿತ್ರಃ ಪವಿತ್ರೋವಾ" ಎಂಬ ಮಂತ್ರದ ತತ್ವಾರ್ಥವನ್ನೇ ಸೂಚಿಸುವುದು. ಸಂಧ್ಯಾಕರ್ಮ ಮಾಡದೆ ಇರುವಕಾಲದಲ್ಲಿಯೂ ಪರಮಾತ್ಮನನ್ನು ಸ್ಮರಣೆಮಾಡುತ್ತಾ ಇದ್ದರೆ ಮನಸ್ಸಿಗೆ ದುಷ್ಟವಾಸನೆಗಳು ಬರುವುದು ತಪ್ಪಿ ಚಿತ್ತಶುದ್ಧಿಗೆ ಬಹು ಸಹಾಯವಾಗುವುದು.

## ೨ ಆಚಮನ

### ಋಗ್ಯಜುಸ್ಸಾಮಶಾಖಾ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೂ

ಕೇಶವಾಯಸ್ವಾಹಾ । ನಾರಾಯಣಾಯಸ್ವಾಹಾ । ಮಾಧವಾಯಸ್ವಾಹಾ । ಗೋವಿಂದಾಯನಮಃ । ವಿಷ್ಣವೇನಮಃ । ಮಧುಸೂದನಾಯನಮಃ । ತ್ರಿವಿಕ್ರಮಾಯನಮಃ । ವಾಮನಾಯನಮಃ । ಶ್ರೀಧರಾಯನಮಃ । ಹೃಷೀಕೇಶಾಯನಮಃ । ಪದ್ಮನಾಭಾಯನಮಃ । ದಾಮೋದರಾಯನಮಃ । ಸಂಕರ್ಷಣಾಯನಮಃ । ವಾಸುದೇವಾಯನಮಃ । ಪ್ರದ್ಯುಮ್ನಾಯನಮಃ । ಅನಿರುದ್ಧಾಯನಮಃ । ಪುರುಷೋತ್ತಮಾಯನಮಃ । ಅಧೋಕ್ಷಜಾಯನಮಃ । ನಾರಸಿಂಹಾಯನಮಃ । ಅಚ್ಯುತಾಯನಮಃ । ಜನಾರ್ದನಾಯನಮಃ । ಉಪೇಂದ್ರಾಯನಮಃ । ಹರಯೇನಮಃ । ಶ್ರೀಕೃಷ್ಣಾಯನಮಃ ॥

ಕ್ಷತ್ರಿಯರು ಮತ್ತು ವೈಶ್ಯರು ಪ್ರಥಮ ಮೂರು ನಾಮಗಳಲ್ಲಿರುವ ಸ್ವಾಹಾಕ್ಕೆ ಬದಲಾಗಿ ನಮಃ (ಕೇಶವಾಯನಮಃ ನಾರಾಯಣಾಯನಮಃ ಮಾಧವಾಯನಮಃ) ಎಂದು ಹೇಳುತ್ತಾರೆ. ಪರಿಶುದ್ಧವಾದ ಜಲದಿಂದ ಪ್ರಥಮ ಮೂರು ನಾಮಗಳಿಂದ ಆಚಮನಮಾಡಿ ಇತರನಾಮಗಳಿಂದ ಕರನ್ಯಾಸ ಮತ್ತು ಅಂಗನ್ಯಾಸಗಳನ್ನು ಮಾಡಬೇಕು. ನಾಮೋಚ್ಚಾರಣೆಯೊಡನೆ ಆಯಾಯ ಅಂಗನ್ಯಾಸಮಾಡುವುದರಿಂದ ಆಯಾ ಅಂಗಗಳ ಭೂತಾಭಿಮಾನ ದೇವತಾಶಕ್ತಿಗಳು ಪ್ರಫುಲ್ಲವಾಗಿ ಕರ್ಮಮಾಡುವವನಿಗೆ ಅನುಗ್ರಹಾಭಿಮುಖರಾಗುತ್ತಾರೆ.

## ೩ ಪ್ರಾಣಾಯಾಮ ಮತ್ತು ಸಂಕಲ್ಪ

### ಋಗ್ಯಜುಸ್ಸಾಮಶಾಖಾ ಬ್ರಾಹ್ಮಣರು

ಪ್ರಣವಸ್ಯ ಪರಬ್ರಹ್ಮಋಷಿಃ । ಪರಮಾತ್ಮಾ ದೇವತಾ । ದೈವೀಗಾಯತ್ರೀ

ಚ್ಛಂದಃ । ಪ್ರಾಣಾಯಾಮೇ ವಿನಿಯೋಗಃ ॥ ಓಂ ಭೂಃ ಓಂ ಭುವಃ ಓಗ್ಂಸುವಃ ಓಂ ಮಹಃ ಓಂ ಜನಃ ಓಂ ತಪಃ ಓಗ್ಂಸತ್ಯಂ । ಓಂ ತತ್ಸವಿತುರ್ವರೇಣಿಯಂ ಭರ್ಗೋ ದೇವಸ್ಯಧೀಮಹಿ ಧಿಯೋಯೋನಃ ಪ್ರಚೋದಯಾತ್ । ಓಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಸ್ಸುವರೋಂ। ಮಮ ಉಪಾತ್ತ ಸಮಸ್ತ ದುರಿತಕ್ಷಯದ್ವಾರಾ ಶ್ರೀಪರಮೇಶ್ವರ ಪ್ರೀತ್ಯರ್ಥಂ ಪ್ರಾತರ್ಮಾಧ್ಯಾನ್ಹಿಕ ಸಾಯಂ ಸಂಧ್ಯಾಮುಪಾಸೇ ಎಂದು ಸ್ಮಾರ್ತರೂ, ಸೂರ್ಯಾನ್ತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಮಧ್ವ ವಲ್ಲಭ ಸವಿತೃನಾಮಕ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ ಅಥವಾ ಶ್ರೀವಿಷ್ಣು ಪ್ರೇರಣಯಾ, ಶ್ರೀವಿಷ್ಣು ಪ್ರೀತ್ಯರ್ಥಂ ಎಂದು ವೈಷ್ಣವರೂ, ಶ್ರೀಭಗವದಾಜ್ಞಯಾ ಶ್ರೀಮನ್ನಾರಾಯಣ ಪ್ರೀತ್ಯರ್ಥಂ ಭಗವತ್ಕೈಂಕರ್ಯರೂಪಂ ಎಂದು ಶ್ರೀವೈಷ್ಣವರೂ ಹೇಳುತ್ತಾರೆ.

## ಕ್ಷತ್ರಿಯರು

ಭೂಮ್ಯಾದಿ ಊರ್ಧ್ವಲೋಕಸ್ತು ಉಪರಿಸ್ಥೋ ದಿವಾಕರಃ । ದಶಪ್ರಣವ ಸಂಯುಕ್ತಃ ಪ್ರಾಣಾಯಾಮಃ ಪ್ರಕೀರ್ತಿತಃ ॥ ಮಮ ಉಪಾತ್ತ ಸಮಸ್ತ ದುರಿತಕ್ಷಯದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ ಪ್ರಾತಸಂಧ್ಯಾ ವಂದನಂ ಕರಿಷ್ಯೇ ಎಂದು ಹೇಳುತ್ತಾರೆ.

## ವೈಶ್ಯರು

ಭೂಮ್ಯಾದೇರೂರ್ಧ್ವಲೋಕಸ್ಯ ಉಪರಿಸ್ಥೋದಿವಾಕರಃ । ದಶಪ್ರಣವ ಸಂಯುಕ್ತಂ ತ್ರಿರಾವೃತ್ಯಾ ಪುನಃಪುನಃ ॥ ಅಂಗುಳ್ಯಗ್ರೈರ್ನಾಸಿಕಾಗ್ರಂ ಧಾರಣಂ ಪಾಪನಾಶನಂ ಪ್ರಾಣಾಯಾಮ ಮಿದಂಪ್ರೋಕ್ತಂ ಋಷಿಭಿಃ ಪರಿಕಲ್ಪಿತಮ್ ॥ ಶ್ರೀಪರಮೇಶ್ವರ ಶ್ರೀಕನ್ಯಕಾಪರಮೇಶ್ವರೀ ಪ್ರೀತ್ಯರ್ಥಂ ಪ್ರಾತಸ್ಸಂಧ್ಯಾವನ್ದನಂಕರಿಷ್ಯೇ ಎಂದು ಹೇಳುತ್ತಾರೆ.

ಸಂವತ್ಸರ ಮಾಸ ತಿಥಿ ಮೊದಲಾದ ದೇಶಕಾಲಾದಿ ಸಂಕೀರ್ತನ ಪೂರ್ವಕವಾಗಿ ಕೆಲವರು ಸಂಕಲ್ಪವನ್ನು ಹೇಳುತ್ತಾರೆ. ಅವರವರ ಸಂಪ್ರದಾಯದಂತೆ ಮಾಡಬಹುದು. ಮಾಧ್ಯಾನ್ಹಿಕ ಮತ್ತು ಸಾಯಂಸಂಧ್ಯಾ ಸಂಕಲ್ಪಗಳಲ್ಲಿ "ಮಾಧ್ಯಾನ್ಹಿಕ ಸಂಧ್ಯಾ ಮುಪಾಸೇ" "ಸಾಯಂ ಸಂಧ್ಯಾ ಮುಪಾಸೇ" ಎಂದು ಹೇಳಬೇಕು.

ಪ್ರಾಣಾಯಾಮ ಮತ್ತು ಸಂಕಲ್ಪಗಳಲ್ಲಿರುವ ತತ್ವವಿಚಾರಗಳನ್ನು **ಗಾಯತ್ರೀ ಜಪಪ್ರಕರಣದಲ್ಲಿ ವಿವರಿಸಿರುತ್ತೆ.**

## ೪ ಮಾರ್ಜನೆ

### ಋಗ್ಯಜುಸ್ಸಾಮಶಾಖಾ ಬ್ರಾಹ್ಮಣರು

ಆಪೋಹಿಷ್ಠಾ ಮಯೋಭುವ ಸ್ತಾನಊರ್ಜೇ ದಧಾತನ | ಮಹೇರಣಾಯ ಚಕ್ಷಸೇ | ಯೋವಶ್ಶಿವತಮೋರಸ ಸ್ತಸ್ಯಭಾಜಯತೇ ಹನಃ | ಉಶತೀರಿವ ಮಾತರಃ ತಸ್ಮಾ ಅರಂಗಮಾಮವೋ | ಯಸ್ಯಕ್ಷಯಾಯ ಜಿನ್ವಥ | ಆಪೋ ಜನಯಥಾಚನಃ ||

ಋಗ್ವೇದಿಗಳಲ್ಲಿ ಆಯಾಯ ಮಂತ್ರದ್ರಷ್ಟ್ರಗಳನ್ನೂ ದೇವತೆಗಳನ್ನೂ ಸೇರಿಸಿ ಹೇಳುತ್ತಾರೆ. ಋಗ್ವೇದಿಗಳು ಈ ಕೆಳಗಿನ ಮಂತ್ರವನ್ನು ಹೇಳಿ ಅನಂತರ "ಆಪೋಹಿಷ್ಠಾ" ಮಂತ್ರವನ್ನು ಹೇಳುತ್ತಾರೆ

ಅಪೋಹಿಷ್ಠೇತಿ ತ್ರಯಾಣಾಂ ಮಂತ್ರಾಣಾಂ | ಅಂಬರೀಷ ಸಿಂಧು ದ್ವೀಪ ಋಷಿಃ | ಆಪೋದೇವತಾ | ಗಾಯತ್ರೀಚ್ಛಂದಃ ಮಾರ್ಜನೇವಿನಿಯೋಗಃ ||

ತಾ| ಎಲೈ! ಜಲಾಧಿಷ್ಠಾನ ದೇವತೆಗಳಿರಾ, ನೀವು ನಮಗೆ ಸುಖ ಸಾಧಕರಾಗಿ ಅನ್ನಕ್ಕೂ ರಮಣೀಯವಾದ ಜ್ಞಾನಕ್ಕೂ ನಮ್ಮನ್ನು ಪಾತ್ರರನ್ನಾಗಿ ಮಾಡಿರಿ. ಪ್ರೀತಿಯುಕ್ತಳಾದ ಜನನಿಯು ಮಗುವಿಗೆ ಸ್ತನ್ಯವೆಂಬ ಅಮೃತವನ್ನು ಕೊಟ್ಟು ಕಾಪಾಡುವಂತೆ, ನಿಮ್ಮಲ್ಲಿರುವ ಅತ್ಯಂತ ಮಂಗಳಪ್ರದವಾದ ಅಮೃತ (ಪರಮಾತ್ಮ) ವನ್ನು ಈ ಜನ್ಮದಲ್ಲಿಯೇ ನಾವು ಹೊಂದುವಂತೆಮಾಡಿ ಅಮೃತವು (ಪರಮಾತ್ಮನು) ನಿಮ್ಮಲ್ಲಿ ವಾಸವಾಗಿರುವುದರಿಂದ ಅಂತಹ ಅಮೃತವನ್ನು ಹೊಂದಲು ನಾವು ನಿಮ್ಮನ್ನು ಶರಣುಹೊಂದಿರುತ್ತೇವೆ. ಅಲ್ಲದೆ ಪುರುಷಸಾಮರ್ಥ್ಯವನ್ನು ನಮಗೆ ಕೊಡಬೇಕಾಗಿ ಪ್ರಾರ್ಥನೆ.

### ಕ್ಷತ್ರಿಯರು

ಗಂಗೇಚ ಯಮುನೇಚೈವ ಗೋದಾವರಿ ಸರಸ್ವತಿ |
ನರ್ಮದೇ ಸಿಂಧುಕಾವೇರಿ ಜಲೇಽಸ್ಮಿನ್ ಸನ್ನಿಧಿಂಕುರು ||
ಗಂಗಾ ಗೋದಾವರೀಚೈವ ತುಂಗಭದ್ರಾ ಸರಸ್ವತೀ |
ಕಾವೇರೀಚೇತಿ ವಿಖ್ಯಾತಾಃ ಪಂಚಗಂಗಾಃ ಪ್ರಕೀರ್ತಿತಾಃ ||

ತಾ|| ಜಲಾಧಿಷ್ಠಾನ ಶಕ್ತಿಗಳಾದ ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು, ಕಾವೇರಿಗಳು ಈ ಜಲದಲ್ಲಿ ಸನ್ನಿಧಿಯನ್ನು ಪಡೆದು ನನಗೆ ಆತ್ಮಸುಖಸಾಧಕಗಳಾಗಿ ಆಗಲಿ ಎಂಬದಾಗಿ ಮಾರ್ಜನೆಮಾಡಿಕೊಳ್ಳಬೇಕು.

### ವೈಶ್ಯರು

ಗಂಗೇಚ ಯಮುನೇಚೈವ ಗೋದಾವರಿ ಸರಸ್ವತಿ |
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂಕುರು ||

ಕಾವೇರೀ ತುಂಗಭದ್ರಾಚ ಕೃಷ್ಣವೇಣೀಚ ಗೌತಮೀ।
ಭಾಗೀರಥೀತಿವಿಖ್ಯಾತಾಃ ಪಂಚಗಂಗಾಃ ಪ್ರಕೀರ್ತಿತಾಃ॥

ಎಂಬದಾಗಿ ಮಾರ್ಜನೆ ಮಾಡಿಕೊಳ್ಳುತ್ತಾರೆ. ತಾತ್ಪರ್ಯವನ್ನು ಮೇಲೆಯೇ ಬರೆದಿರುವುದು.

ತತ್ವ॥ ಕ್ಷತ್ರಿಯರೂ, ವೈಶ್ಯರೂ ಪ್ರಾರ್ಥಿಸುವ ಐದು ನದಿಗಳ ಶಕ್ತಿಗಳೂ ಜಲಾಧಿಷ್ಠಾನದೇವತಾಶಕ್ತಿಗಳಾಗಿರುತ್ತವೆ. ಬ್ರಾಹ್ಮಣರು ಕೂಡ ಅನೇಕ ಕರ್ಮಗಳಲ್ಲಿ ಈ ಮಂತ್ರಗಳನ್ನು ಉಪಯೋಗಿಸುತ್ತಾರೆ. ಈ ಜಲಾಭಿಮಾನದೇವತಾ ಶಕ್ತಿಗಳ ತತ್ವವು ಬಹು ಅಮೋಘವಾದುದಾಗಿದೆ. ಹೇಗೆಂದರೆ, ಗಂಗಾ ಎಂಬ ಪದಕ್ಕೆ "ಗಮಯತಿ=ಪ್ರಾಪಯತಿ, ಜ್ಞಾಪಯತಿವಾ, ಭಗವತ್ಪದಂ ಯಾಶಕ್ತಿಸ್ಸಾ ಗಂಗಾ" ಅಂದರೆ ಪರಮಾತ್ಮನ ಕಡೆಗೆ ಹೋಗಲು ಮನಸ್ಸುಂಟು ಮಾಡುವುದು, ಪರಮಾತ್ಮನೊಡನೆ ಸೇರಿಸುವುದು, ಪರಮಾತ್ಮನನ್ನು ಜ್ಞಾಪಿಸಿ ಕೊಡುವುದು, ಯಾವಶಕ್ತಿಯೋ ಅದೇ ಗಂಗಾ. ಗೋದಾವರಿ ಎಂಬಪದಕ್ಕೆ "ಗಾಂ ದದಾತಿ ಇತಿ ಗೋದಾ (ತಥಾ ಋಗ್ವೇದೇ-ಗೋದಾ ಇದ್ರೇವತೋಮದಃ)" ಅಲ್ಲದೆ 'ಗಾಂ' ಎಂದರೆ ಜಲವೆಂದೂ ಅರ್ಥವಾಗುವುದು. ಆದುದರಿಂದ ಭೂತತ್ವವಾದ ಸ್ಥೂಲದೇಹದ ಸ್ಥಿತಿಗೆ ಬೇಕಾದ ಅನ್ನವನ್ನು ಅಥವಾ ರಸವನ್ನು ಕೊಡತಕ್ಕವರಲ್ಲಿ ಗೋದಾವರಿಯು ಶ್ರೇಷ್ಠಳು

[ಈ ತತ್ವವನ್ನು ರಾಮಾಯಣದ ಅಂತರಾರ್ಥ ಗ್ರಂಥದ ಬಾಲಕಾಂಡ ೪ ನೆಯ ಪ್ರಕರಣ ಮತ್ತು ಅರಣ್ಯಕಾಂಡ ೬ ನೆಯ ಪ್ರಕರಣಗಳಲ್ಲಿ ವಿವರಿಸಿದೆ ]

ಮೇಲಿನ ಮಾರ್ಜನೆಯಮಂತ್ರದಲ್ಲಿ ಜಲಾಧಿಷ್ಠಾನ ದೇವತೆಗಳನ್ನು ಕುರಿತು ನಮಗೆ ಅನ್ನವನ್ನೂ ಅಮೃತಸ್ವರೂಪವಾದ ಆತ್ಮಜ್ಞಾನವನ್ನೂ ಅನುಗ್ರಹಿಸಿ ಕೊಡುವ ಪ್ರಾರ್ಥನಾ ತತ್ವವಿರುವುದು. ಜಲಾಧಿದೇವತೆಗಳು ಸುವೃಷ್ಟಿಯಿಂದ ಸಸ್ಯಾಭಿವೃದ್ಧಿಯನ್ನುಂಟುಮಾಡಿ ಅಂತಹ ಸಸ್ಯಸಮೃದ್ಧಿಯಿಂದಲೂ ಜಲಪಾನದಿಂದಲೂ ಹೊಂದಬಹುದಾದ ಅನ್ನವನ್ನು ಕೊಡಲೆಂಬ ಪ್ರಾರ್ಥನೆಯು ಸರ್ವ ಪ್ರಾಣಿಗಳಿಗೂ ಹಿತವನ್ನುಂಟುಮಾಡುವ ಪ್ರಾರ್ಥನೆಯು ತತ್ವವಾಗಿರುವುದು. ವೃಷ್ಟಿಯಾಗಿ ಧಾನ್ಯಾದಿಗಳು ಬೆಳೆಯದಿದ್ದರೆ ಚಿನ್ನವನ್ನು ಅರೆದು ಕುಡಿಯುವುದಕ್ಕಾಗುವುದೆ? ಆದುದರಿಂದ "ನನಗೆ ದ್ರವ್ಯಕೊಡು, ಸಂಪತ್ತುಕೊಡು" ಎಂಬ ಸ್ವಾರ್ಥಪರಾಯಣತೆಯ ಪ್ರಾರ್ಥನೆಯಾಗಿಲ್ಲದೆ ಸಕಲ ಜೀವರಾಶಿಗಳಿಗೂ ಅನ್ನ ದೊರಕಲೆಂಬ ಪ್ರಾರ್ಥನಾ ತತ್ವವಾಗಿರುವುದು.

ಈ ತತ್ವಾರ್ಥವನ್ನು ಮನಸ್ಸಿಗೆ ತಂದುಕೊಂಡು ಮಂತ್ರದಿಂದ ಜಲವನ್ನು ಅಭಿಮಂತ್ರಿಸಿ ಶರೀರಕ್ಕೆ ಪ್ರೋಕ್ಷಿಸಿಕೊಳ್ಳಬೇಕು. ಇದು ಮಂತ್ರಸ್ನಾನರೂಪವಾಗಿ ಮನಸ್ಸಿಗೂ ದೇಹಕ್ಕೂ ಶುಚಿದಾಯಕವಾಗಿರುವುದು.

## ೫ ಮಂತ್ರಾಚಮನದ ಮೂಲಕ ಆತ್ಮಾರ್ಪಣೆ

### ಋಗ್ಯಜುಶ್ಶಾಖಾ ಬ್ರಾಹ್ಮಣರು

ಸೂರ್ಯಶ್ಚ ಮಾಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ | ಪಾಪೇಭ್ಯೋರಕ್ಷನ್ತಾಂ | ಯದ್ರಾತ್ರ್ಯಾಪಾಪಮಕಾರ್ಷಂ | ಮನಸಾ ವಾಚಾಹಸ್ತಾಭ್ಯಾಂ | ಪದ್ಭ್ಯಾಮುದರೇಣಶಿಶ್ನಾ | ರಾತ್ರಿಸ್ತದವಲುಂಪತು | ಯತ್ಕಿಂಚ ದುರಿತಂಮಯಿ | ಇದಮಹಂ ಮಾಮಮೃತಯೋನೌ | ಸೂರ್ಯೇಜ್ಯೋತಿಷಿ ಜುಹೋಮಿಸ್ವಾಹಾ ||

ಋಗ್ವೇದಿಗಳು ಈ ಕೆಳಗಿನ ಋಷಿ, ದೇವತಾ ಛಂದಸ್ಸನ್ನು ಹೇಳಿ ಅನಂತರ ಮಂತ್ರವನ್ನು ಹೇಳುತ್ತಾರೆ.

ಸೂರ್ಯಶ್ಚೇತ್ಯಸ್ಯ ಮಂತ್ರಸ್ಯ | ಯಾಜ್ಞವಲ್ಕ್ಯೋಪನಿಷದಋಷಿಃ | ಸೂರ್ಯಮಾಮನ್ಯು | ಮನ್ಯುಪತಯೋ ರಾತ್ರಿರ್ದೇವತಾ | ಪ್ರಕೃತಿಃ ಛಂದಃ | ಅಪಾಂಪ್ರಾಶನೇ ವಿನಿಯೋಗಃ ||

### ಸಾಮಶಾಖೆಯವರಿಗೆ

ಅಹಶ್ಚ ಇತಿಯಜುಃ | ಪರಮೇಷ್ಠಿನಃ | ಪ್ರಾಜಾಪತ್ಯಸ್ಯಾರ್ಷಂ | ಅಹರಾದಿತ್ಯೋ ದೇವತಾ | ಪ್ರಾತಸಂಧ್ಯಾ ಮುಪಾಮಾಚಮನೆ ವಿನಿಯೋಗಃ |
ಎಂದುಹೇಳಿ ಮೇಲಿನ ಮಂತ್ರಕ್ಕೆ ಪ್ರತಿಯಾಗಿ "ಅಹಶ್ಚಮಾದಿತ್ಯಶ್ಚ ಪುನಾತು ಸ್ವಾಹಾ" ಎಂಬ ಮಂತ್ರವನ್ನು ಹೇಳುತ್ತಾರೆ.

ತಾ|| ಸೂರ್ಯಪರಮಾತ್ಮನೆ! ಕಾಮ ಕ್ರೋಧಾದಿಗಳ ದೆಶೆಯಿಂದ ಮಾಡಿದ ಪಾಪಗಳಿಂದ ಬಿಡಿಸಿ ಕಾಮ ಕ್ರೋಧಾದಿಗಳು ನಮ್ಮ ಹತ್ತಿರ ಬರದಂತೆ ಅನುಗ್ರಹ ಮಾಡು ರಾತ್ರ್ಯಭಿಮಾನ ದೇವತೆಯೇ! ಮನಸ್ಸು ವಾಕ್ಕು ಕೈಕಾಲುಗಳು ಹೊಟ್ಟೆ ಗುಹ್ಯೇಂದ್ರಿಯಗಳಿಂದ ರಾತ್ರಿಯಲ್ಲಿ ಮಾಡಿದ ಪಾಪಗಳನ್ನೆಲ್ಲ ಪರಿಹರಿಸು.

ಈ ಪಾಪಸಮುದಾಯದಲ್ಲಿ ಯಾವ ಅಲ್ಪಭಾಗವಿದ್ದರೂ ಅದನ್ನೂ, ಅಭಿಮಾನರೂಪವಾದ "ನಾನು, ನನ್ನದು" ಎಂಬ ಅಜ್ಞಾನವನ್ನೂ, ಮೋಕ್ಷಕಾರಣವೂ ಸ್ವಯಂಪ್ರಕಾಶವೂ ಆದ ಆತ್ಮತೇಜಸ್ಸಿನಲ್ಲಿ ಈ ನೀರಿನ ಮೂಲಕ ಚೆನ್ನಾಗಿ ಹೋಮಮಾಡುತ್ತೇನೆ ಅಂದರೆ ಅರ್ಪಿಸುತ್ತೇನೆ.

### ಕ್ಷತ್ರಿಯರು

ಕಾಲವೇದಿ ಜ್ಯೋತಿರೂಪಿ ಕಾಮಕ್ರೋಧ ವಿನಾಶಿನಿ |
ರಾತ್ರಿಕಾಲ ಕೃತಂಪಾಪಂ ಸೂರ್ಯೇಜ್ಯೋತಿಷಿ ಹೂಯತೇ ||

**ತಾ || ಕಾಲಾಗ್ನಿಯು ಜ್ಯೋತಿಸ್ವರೂಪನೂ ಕಾಮಕ್ರೋಧಪರಿಹಾರಕನೂ**

ಆದ ಸೂರ್ಯಭಗವಂತನೆ! ರಾತ್ರಿಕಾಲವಲ್ಲಿ ಮಾಡಿದ ಪಾಪವನ್ನು ನಿನ್ನತೇಜಸ್ಸಿನಲ್ಲಿ ಹೋಮಮಾಡುತ್ತೇನೆ ಅಂದರೆ ಅರ್ಪಿಸುತ್ತೇನೆ.

## ವೈಶ್ಯರು

ಮನ್ಯುಸಂಭೂತ ಪಾಪೇಭ್ಯೋ ಮನ್ಯುರಾತ್ರಿ ದಿವಾಕರಾಃ |
ರಕ್ಷಂತಾಂ ರಾತ್ರಿಸಂಭೂತಂ ಪಾಪಂ ರಾತ್ರಿರ್ವ್ಯಪೋಹತು |
ಮಯಾಹ್ಯ ಮೃತರೂಪೇಽಸ್ಮಿನ್ ಸೂರ್ಯೇಜ್ಯೋತಿಷಿ ಹೂಯತೇ |

ತಾ|| (ಕ್ರೋಧದಿಂದ ಮಾಡಿದ) ಪಾಪಗಳ ದೆಸೆಯಿಂದ ಸೂರ್ಯಭಗವಂತನೆ ನನ್ನನ್ನು ಕಾಪಾಡು ರಾತ್ರಿಯಲ್ಲಿ ನಾನು ಮನಸ್ಸಿನಿಂದಲೂ, ವಾಕ್ಕಿನಿಂದಲೂ, ದೇಹದಿಂದಲೂ ಮಾಡಿದ ಪಾಪಗಳನ್ನು ರಾತ್ರ್ಯಭಿಮಾನದೇವತೆಯು ನಾಶ ಹೊಂದಿಸಲಿ ಇತರ ಯಾವವಿಧವಾದ ಪಾಪಗಳಿದ್ದರೂ ತೇಜೋಮಯನಾದ ಆತ್ಮತೇಜಸ್ಸಿನಲ್ಲಿ ಅರ್ಪಿಸುತ್ತೇನೆ.

ಸಕಲವಿಧವಾದ ಪಾಪಗಳನ್ನೂ ಪರಿಹರಿಸಿ ಕಾಪಾಡೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತಾ ಮಂತ್ರಾಚಮನ ಮಾಡಬೇಕು.

ತತ್ವ|| ನಾವು ಮಾಡಿದ ಪಾಪಗಳನ್ನು ಪ್ರತಿ ಸಂಧ್ಯಾಕಾಲದಲ್ಲಿಯೂ ಪರಮಾತ್ಮನಲ್ಲಿ ಅರ್ಪಣೆಮಾಡುತ್ತೇವೆಂಬ ಧೈರ್ಯದಿಂದ ಮನಸ್ವಿಯಾಗಿ ಪಾಪ ಕಾರ್ಯಗಳನ್ನು ಮಾಡಿಕೊಂಡು ಬರಬಾರದು. ಈ ಮಂತ್ರದ ತತ್ವಾರ್ಥವು ತಿಳಿವ ಳಿಕೆಯಿಲ್ಲದೆ ಮಾಡಿದ ಪಾಪಪರಿಹಾರಕವಾದ ಪ್ರಾಯಶ್ಚಿತ್ತವಾಗಿರುವುದು. ಮನಸ್ಸಿನಿಂದಲೂ, ಮಾತಿನಿಂದಲೂ, ಕಾರ್ಯಗಳಿಂದಲೂ, ಪಾಪಗಳನ್ನು ಉದ್ದೇಶ ಪೂರ್ವಕವಾಗಿ ಮಾಡುತ್ತಾ ಪರಮಾತ್ಮನನ್ನು ಪರಿಹರಿಸೆಂದು ಪ್ರಾರ್ಥನೆಮಾಡಿದರೆ ಆತನು ಕ್ಷಮಿಸಲಾರನು. ಆ ಪಾಪಫಲಗಳನ್ನು ಎಂದಿದ್ದರೂ ಅನುಭವಿಸಲೇಬೇಕಾ ಗುವುದು. ಆದುದರಿಂದ ಪರಮಾತ್ಮನು ಅನುಗ್ರಹಿಸಿರುವ ವಿವೇಚನಾಶಕ್ತಿಯಿಂದ ಪಾಪಕಾರ್ಯಗಳಲ್ಲಿ ಪ್ರವರ್ತಿಸದಂತೆ ತಡೆದು, ಶಾಸ್ತ್ರಗಳು ವಿಧಿಸಿರುವಂತೆ ನಿಯಮ ವುಳ್ಳವನಾಗಿರಬೇಕು. ಕಾಮಕ್ರೋಧಾದಿಗಳು ಮತ್ತು ಇತರ ಪಾಪಕಾರ್ಯಗಳು ರಜಸ್ತಮೋಗುಣಗಳ ನಡೆವಳಿಕೆಗಳಿಂದ ಉಂಟಾಗುತ್ತವೆ. ಅಧರ್ಮರೂಪವಾದ ಪ್ರಬಲವಾದ ರಜಸ್ತಮೋಗುಣಗಳ ನಡೆವಳಿಕೆಗಳಿಂದುಂಟಾಗುವ ಕಾಮ ಕ್ರೋಧಾದಿ ಸರ್ವಪಾಪಗಳನ್ನೂ ಪರಿಹರಿಸಿಕೊಳ್ಳಲು ಸತ್ವಗುಣಪ್ರಧಾನವಾದ ಆಹಾರ ವ್ಯವಹಾರಗಳ ನಡೆವಳಿಕೆಗಳನ್ನು ಆಚರಣೆಗೆ ತರಬೇಕು. ರಜಸ್ತಮೋ ಗುಣಗಳಿಂದುಂಟಾಗುವ ಪಾಪಕಾರ್ಯಸ್ವರೂಪಗಳನ್ನು ವಿವರಿಸುತ್ತಾ ಬಂದರೆ ಗ್ರಂಥಬಾಹುಳ್ಯವಾಗುವುದು.

[ **ಶ್ರೀಮದ್ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಇಂದ್ರಜಿತು, ಅತಿಕಾಯ,**

ಕುಂಭಕರ್ಣ, ಕುಂಭ, ನಿಕುಂಭ, ರಾವಣ ಮತ್ತು ಇವನ ಮಂತ್ರಿಸೇನಾಪತಿಗಳ ಯುದ್ಧಪ್ರಕರಣ ಗಳಲ್ಲಿರುವ ತತ್ವಗಳಲ್ಲಿ ರಜಸ್ತಮೋಗುಣಗಳಿಂದುಂಟಾಗುವ ಪಾಪಗಳ ವಿಚಾರವು ವಿವರವಾಗಿ ಬಂದಿದೆ ಧರ್ಮಮಾರ್ಗ ಸ್ವರೂಪವಾದ ಸತ್ವಗುಣಗಳ ನಡೆವಳಿಕೆಗಳ ಸ್ವರೂಪಗಳು ವಿಭೀಷಣ ಶರಣಾಗತಿ ಪ್ರಕರಣ, ಕಬಂಧಾಸುರನ ಶಾಪವಿಮೋಚನ ಪ್ರಕರಣಗಳಲ್ಲಿ ವಿವರಿಸಿರುವುದು.]

ಮಾಡಿದ ಪಾಪಗಳನ್ನು ಅರ್ಪಣೆಮಾಡುವುದಲ್ಲದೆ 'ನಾನು, ನನ್ನದು' ಎಂಬ ಅಭಿಮಾನರೂಪವಾದ ಜ್ಞಾನವನ್ನೂ ಮಂತ್ರಾಚಮನದಮೂಲಕ ಆತ್ಮತೇಜಸ್ಸಿನಲ್ಲಿ ಅರ್ಪಿಸುತ್ತೇವಷ್ಟೆ ! 'ನನ್ನದು' 'ನಾನುಮಾಡಿದೆನು' 'ನನಗೋಸ್ಕರ' ಎಂಬ ಅಭಿಮಾನ ಮತ್ತು ಸ್ವಾರ್ಥರೂಪವಾದ ಜ್ಞಾನವು ಕೂಡ ಪಾಪಸ್ವರೂಪವಾದುದು. ಇದೇ ಅಹಂಕಾರವೆನಿಸಿಕೊಳ್ಳುತ್ತದೆ. 'ನನ್ನದು' 'ನಾನುಮಾಡಿದೆನು' ಎನ್ನುವ ಭಾರವನ್ನು ನಾವು ಹೊತ್ತುಕೊಳ್ಳುತ್ತಾ ಬರುವಷ್ಟೂ ಪಾಪಸಂಘಟನೆಯು ನಮ್ಮ ಬೆನ್ನುಹತ್ತುವುದು. ಆದುದರಿಂದ ಈ ಭಾರವನ್ನು ಪ್ರತಿದಿನವೂ ಪರಮಾತ್ಮನಿಗೆ ಅರ್ಪಿಸಿ ನಿಶ್ಚಿಂತರಾಗಿರಬೇಕು. ಈ ಅಭ್ಯಾಸದಿಂದ ದುರ್ನಡತೆಗಳು ತುಳಿಯಲ್ಪಡುವುವಲ್ಲದೆ ನಿರ್ಲಿಪ್ತತೆಯಿಂದಿರುವ ಪರಮ ಶಾಂತತೆ ಯುಂಟಾಗುವುದು. ಅಭಿಮಾನಪೂರ್ವಕವಾಗಿ ಕಾರ್ಯಗಳನ್ನು ಮಾಡಿ ಪರಮಾತ್ಮ ನಲ್ಲಿ ಅರ್ಪಣೆಮಾಡುವುದಕ್ಕಿಂತಲೂ ನಿರ್ಲಿಪ್ತರಾಗಿದ್ದುಕೊಂಡು ಕಾರ್ಯ ಮಾಡುವುದು ಇನ್ನೂ ಹೆಚ್ಚಿನ ಅಂತಸ್ತಿಗೆ ಸೇರಿದುದಾಗಿದೆ. ಈ ತತ್ವವೂ ಈ ಮಂತ್ರದಲ್ಲಿ ಅಡಕವಾಗಿರುವುದು.

[ಆತ್ಮಸಾಕ್ಷಾತ್ಕಾರಪಡೆಯುವವರೆಗೆ ನಿರಭಿಮಾನದಿಂದಲೂ ಅಸ್ವಾರ್ಥತೆಯಿಂದಲೂ ಕಾರ್ಯ ಗಳನ್ನು ಮಾಡುವ ವಿಚಾರವು ಅಂತರಾರ್ಥರಾಮಾಯಣದ ಅಯೋಧ್ಯಾಕಾಂಡದ ೭, ೮, ೯ ನೆಯ ಪ್ರಕರಣಗಳಲ್ಲಿ ವಿವರಿಸಲ್ಪಟ್ಟಿರುವುದು ]

ಮಂತ್ರಾಚಮನಮಾಡಲು ಅಂಗೈಯಲ್ಲಿರುವ ನೀರನ್ನು ಸ್ವಯಂಪ್ರಕಾಶ ನಾದ ಪರಮಾತ್ಮನಲ್ಲಿ ಅರ್ಪಿಸಲು ನಾವೇ ಪಾನಮಾಡುತ್ತೇವೆ. ಸ್ವಯಂಪ್ರಕಾ ಶನೂ ಅಮೃತಸ್ವರೂಪನೂ ಆದ ಪರಮಾತ್ಮನು ನಮ್ಮಲ್ಲಿಯೂ ಇರುವನೆಂಬುದು ಈ ಮಂತ್ರದಿಂದ ನಿರ್ದಿಷ್ಟವಾಗುತ್ತದೆ. ಇದಕ್ಕೆ "ಸ್ವಶರೀರೇ ಸ್ವಯಂಜ್ಯೋತಿ ಸ್ಸ್ವರೂಪಂ ಸರ್ವಸಾಕ್ಷಿಣಂ" ಎಂಬ ಶ್ರುತ್ಯಾಧಾರವೂ ಇರುವುದು. ಆದುದರಿಂದ ಅಂತಹ ಪರಮಾತ್ಮನನ್ನು ನಮ್ಮಲ್ಲಿಯೇ ನಾವು ಸಾಕ್ಷಾತ್ಕಾರಮಾಡಿಕೊಂಡು ಮೋಕ್ಷಪಡೆಯಬೇಕೆಂಬುದು ದೃಢೀಕರಿಸಲ್ಪಡುತ್ತದೆ.

ಪಾಪಕೃತ್ಯವನ್ನು ಮಾಡದೆ ಎಚ್ಚರಿಕೆಯಿಂದಿರಬೇಕು. ಒಂದುವೇಳೆ ಅಜ್ಞಾನದಿಂದ ಮಾಡಿದ್ದು ಯಾವುದು ಇದ್ದರೂ ಪ್ರತಿದಿನವೂ ಸಂಧ್ಯಾಕಾಲಗಳಲ್ಲಿ ಅಂತಹ ಪಾಪಕಾರ್ಯಗಳನ್ನಾಚರಿಸಿದುದಕ್ಕೆ ಪಶ್ಚಾತ್ತಾಪಪಟ್ಟು ನಾನು ತಿಳಿದು ಮಾಡಿದ ಅಥವಾ ತಿಳಿಯದೇ ಮಾಡಿದ ಸರ್ವಪಾಪಗಳನ್ನೂ ಸರ್ವಕಾರ್ಯಗಳ ಫಲಗಳನ್ನೂ ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ನಿನಗೆ ಅರ್ಪಣೆಮಾಡಿರುವೆ

ನೆಂದು ಪರಮಾತ್ಮನಲ್ಲಿ ತಪ್ಪದೆ ಅರ್ಪಣೆಮಾಡುತ್ತಾ ಬಂದರೆ ಮನಸ್ಸಿಗೆ ಎಷ್ಟೋ ಭಾರತಗ್ಗಿ ಶಾಂತತೆಯು (ಸಮಾಹಿತಚಿತ್ತ) ನೆಲೆಗೊಳ್ಳುವುದರಲ್ಲಿ ಲೇಶಮಾತ್ರವೂ ಸಂಶಯವಿರುವುದಿಲ್ಲ. ಈ ಮಂತ್ರದ ತತ್ವವು ಮನುಷ್ಯನು ಬಾಹ್ಯದಲ್ಲಿ ಆಚರಿಸಬೇಕಾದ ಯಮ, ನಿಯಮ, ಅಹಿಂಸಾ, ಮುಂತಾದ ಸಕಲ ತತ್ವಗಳನ್ನೂ ಒಳಗೊಂಡಿರುವುದು.

ಮಂತ್ರಾಚಮನವಾದ ಅನಂತರ ಶುದ್ಧಾಚಮನವನ್ನು ಮಾಡಬೇಕು.

## ೬ ದ್ವಿತೀಯ ಮಾರ್ಜನೆ

### ಋಕ್ಶಾಖಾ ಬ್ರಾಹ್ಮಣರು

ಆಪೋಹಿಷ್ಠೇತಿ ನವರ್ಚಸ್ಯ ಸೂಕ್ತಸ್ಯ । ಅಂಬರೀಷ ಸಿಂಧುದ್ವೀಪಋಷಿಃ । ಆಪೋದೇವತಾ। ಗಾಯತ್ರೀಚ್ಛಂದಃ । ಪಂಚಮೀವರ್ಧಮಾನಾ। ಸಪ್ತಮೀ ಪ್ರತಿಷ್ಠಾ । ಅಂತ್ಯೇದ್ವೇಅನುಷ್ಟುಭೌ । ಮಾರ್ಜನೇ ವಿನಿಯೋಗಃ ॥
ಆಪೋಹಿಷ್ಠಾ . . . . . . . . . . ಜನಯಥಾಚನಃ ॥

ತಾ॥ ಆಪೋ ಹಿಷ್ಠಾದಿ ಒಂಬತ್ತು ಮಂತ್ರಗಳಿಗೆ ಅಂಬರೀಷ ಸಿಂಧು ದ್ವೀಪನು ಋಷಿಯು, ಉದಕಗಳೇ ದೇವತೆಗಳು, ಗಾಯತ್ರೀಛಂದಸ್ಸು, ಐದನೇ ಮಂತ್ರಕ್ಕೆ ವರ್ಧಮಾನ, ಏಳನೇ ಮಂತ್ರಕ್ಕೆ ಪ್ರತಿಷ್ಠೆ, ಎಂಟು ಒಂಬತ್ತನೆಯವು ಗಳಿಗೆ ಅನುಷ್ಟುಪ್, ಮಿಕ್ಕನಾಲ್ಕಕ್ಕೂ ಗಾಯತ್ರೀಛಂದಸ್ಸುಗಳು, ಮಾರ್ಜನೆ ಯಲ್ಲಿ ವಿನಿಯೋಗವು

"ಆಪೋಹಿಷ್ಠಾದಿ" ಮೂರು ಮಂತ್ರಗಳಿಗೆ ಅರ್ಥವನ್ನು ಹಿಂದೆ ಕೊಟ್ಟಿರುವುದು.

ಶನ್ನೋ ದೇವೀ ರಭಿಷ್ಟಯ ಆಪೋಭವಂತು ಪೀತಯೇ । ಶಂಯೋ ರಭಿಸ್ರವಂತುನಃ ॥

ತಾ॥ ಪ್ರಕಾಶಮಾನರಾದ ಜಲಾಭಿಮಾನ ದೇವತೆಗಳೇ! ನೀವು ನಮಗೆ ಯಜ್ಞಾದಿ ಕರ್ಮವಾಡುವ ಮತ್ತು ಅಮೃತಪಾನಮಾಡುವ ಸುಖವನ್ನುಂಟು ಮಾಡಿರಿ. ಅಲ್ಲದೆ ಸತ್ಕರ್ಮಾಚರಣೆಗೆ ಆರೋಗ್ಯಭಾಗ್ಯವನ್ನು ಕೊಡಿ.

ಈಶಾನಾವಾರ್ಯಾಣಾಂ ಕ್ಷಯಂತೀಶ್ಚರ್ಷಣೀನಾಂ ।
ಆಪೋಯಾಚಾಮಿ ಭೇಷಜಂ ॥

ತಾ॥ ಧಾನ್ಯಗಳಿಗೆ ಅಧಿಪತಿಗಳೂ, ಪ್ರಾಣಿಗಳ ಜೀವನಕ್ಕೆ ಆಧಾರ ಭೂತರೂ ಆದ ಜಲಾಭಿಮಾನದೇವತೆಗಳೆ! ಔಷಧವನ್ನಾಗಿ ನಿಮ್ಮನ್ನು ಸೇವಿಸು ತ್ತೇನೆ. ಸುಖವನ್ನುಂಟುಮಾಡಿ.

ಅಪ್ಸುಮೇ ಸೋಮೋ ಅಬ್ರವೀ ದಂತರ್ವಿಶ್ವಾನಿ ಭೇಷಜಾ । ಅಗ್ನಿಂಚ ವಿಶ್ವ ಶಂಭುವಂ । ಆಪಶ್ಚ ವಿಶ್ವಭೇಷಜೀಃ । ಆಪಃ ಪೃಣೀತ ಭೇಷಜಂ । ವರೂಥಂ ತನ್ವೇಏಏಏಮುಮ । ಜ್ಯೋಕ್ಚ ಸೂರ್ಯಂದೃಶೇ ॥

ತಾ॥ ಜಲದೊಳಗೆ ಸಮಸ್ತವಾದ ಔಷಧಗಳೂ ಪ್ರಪಂಚಕ್ಕೆ ಸುಖವನ್ನುಂಟು ಮಾಡುವ ಅಗ್ನಿಯೂ ಇವೆ. ನೀವಿಬ್ಬರೂ ಸೇರಿ ದೀರ್ಘಕಾಲ ನನ್ನಲ್ಲಿರುವ ತೇಜಸ್ಸನ್ನು ನೋಡುವಂತೆ ಶರೀರಸೌಖ್ಯವನ್ನುಂಟುಮಾಡಿ

ಇದಮಾಪಃ ಪ್ರವಹತ ಯತ್ಕಿಂಚದುರಿತಂಮಯಿ ।
ಯದ್ವಾಹಮಭಿದುದ್ರೋಹಂ ಯದ್ವಾಶೇಪ ಉತಾನೃತಂ ॥

ತಾ॥ ಜಲಾಭಿಮಾನದೇವತೆಗಳೇ ! ನಾನು ಮತ್ತೊಬ್ಬರಿಗೆ ದ್ರೋಹ ಮಾಡಿದ, ಶಪಿಸಿದ, ಸುಳ್ಳುಹೇಳಿದ ಎಲ್ಲಾ ಪಾಪಗಳನ್ನು ನಿಮ್ಮ ಪ್ರವಾಹದೊಡನೆ ಕೊಚ್ಚಿಕೊಂಡು ಹೋಗುವಂತೆ ಅನುಗ್ರಹಿಸಿ ನನ್ನನ್ನು ಪಾಪರಹಿತನನ್ನಾಗಿ ಮಾಡಿರಿ.

ಆಪೋ ಅದ್ಯಾನ್ವಚಾರಿಷಂ । ರಸೇನಸಮಗಸ್ಮಹಿ । ಪಯಸ್ವಾನಗ್ನ ಆಗಹಿ ತಂ ಮಾ ಸಂಸೃಜ ವರ್ಚಸಾ ॥ ಸಸ್ರುಷೀ ಸ್ತದಪಸಃ । ದಿವಾನಕ್ತಂಚ ಸಸ್ರುಷೀ । ವರೇಣ್ಯಕ್ರತು ರಹಮಾದೇವೀ ರವಸೇಹುವೇ ॥

ತಾ॥ ಜಲಾಭಿಮಾನದೇವತೆಗಳೇ! ನಿಮ್ಮ ಪ್ರೀತಿರಸದಿಂದ ಯುಕ್ತ ನಾಗುತ್ತೇನೆ. ಎಲೈ! ಅಗ್ನಿಯೇ! ಅಮೃತದೊಡಗೂಡಿದ ನಿನ್ನನ್ನು ನಾನು ಹೊಂದುತ್ತೇನೆ. ನಿನ್ನ ತೇಜಸ್ಸನ್ನು ಅನುಗ್ರಹಿಸು. ನೀವುಗಳು ಇಂತಹ ಪ್ರಭಾವವುಳ್ಳವರಾದುದರಿಂದ ಹಗಲೂ ರಾತ್ರಿಯೂ ನಿಮ್ಮನ್ನು ಸೇವಿಸುತ್ತೇವೆ. ನನ್ನನ್ನು ಶ್ರೇಷ್ಠನನ್ನಾಗಿ ಸಂರಕ್ಷಿಸಿ.

## ಯಜುಶ್ಶಾಖಾ ಬ್ರಾಹ್ಮಣರು

ಓಂ ದಧಿಕ್ರಾವಣ್ಣೋ ಅಕಾರಿಷಂ । ಜಿಷ್ಣೋರಶ್ವಸ್ಯ ವಾಜಿನಃ । ಸುರಭಿನೋ ಮುಖಾಕರತ್ಪ್ರಣ ಆಯೂಗ್ಂಷಿ ತಾರಿಷತ್ । ಆಪೋಹಿಷ್ಠಾ................ ಜನಯಥಾಚನಃ ।

ತಾ॥ ಜಯಶೀಲನೂ, ವ್ಯಾಪಕನೂ, ಅನ್ನದಿಂದಯುಕ್ತನೂ ಆದ ಅಗ್ನಿ ದೇವನೆ! (ದಧಿ-ಹವಿಸ್ಸನ್ನು, ಕ್ರಾವ್ಣಃ-ತಿನ್ನುವವನಾದ್ದರಿಂದ ಅಗ್ನಿಯು. ದಧಿ ಯೆಂದರೆ ಇಲ್ಲಿ ಮೊಸರೆಂದರ್ಥವಲ್ಲ) ನಮಗೆ ದೀರ್ಘಾಯುಷ್ಯವನ್ನೂ ಮುಖದಲ್ಲಿ ಬ್ರಹ್ಮತೇಜಸ್ಸನ್ನೂ ಅನುಗ್ರಹಿಸಿಕೊಡೆಂದು ಪ್ರಾರ್ಥಿಸುತ್ತೇವೆ.

ಹಿರಣ್ಯವರ್ಣಾಃ ಶುಚಯಃ ಪಾವಕಾಃ । ಯಾಸುಜಾತಃ ಕಶ್ಯಪೋ ಯಾಸ್ವಿಂದ್ರಃ । ಅಗ್ನಿಯಾಗರ್ಭಂ ದಧಿರೇವಿರೂಪಾಸ್ತಾನಆಪಃ ಶಗ್ಂ ಸ್ಯೋನಾ ಭವಂತು ।

ತಾ|| ಉದಕದಲ್ಲಿಯೇ ತೇಜೋಮಯನಾಗಿಯೂ, ಪರಿಶುದ್ಧನಾಗಿಯೂ ಇರುವ ಸೂರ್ಯನು ಹುಟ್ಟಿದನು. ಇಂದ್ರನೂ ಹುಟ್ಟಿದನು. ಈ ಉದಕವೇ ಬಡಬಾಗ್ನಿ ಜಠರಾಗ್ನಿಗಳನ್ನು ಗರ್ಭದಲ್ಲಿರುವ ಪ್ರಾಣಿಯಂತೆ ತನ್ನಲ್ಲಿ ಧರಿಸಿರುತ್ತೆ. ಇಂತಹ ನಾನಾರೂಪಗಳನ್ನು ಧರಿಸಿರುವ ಜಲಾಧಿಷ್ಠಾನದೇವತೆಗಳಿರಾ! ನಮಗೆ ಆತ್ಮ ಜ್ಞಾನ ಸುಖವನ್ನುಂಟುಮಾಡಿ.

ಯಾಸಾಗ್ಂರಾಜಾ ವರುಣೋಯಾತಿ ಮಧ್ಯೆಸತ್ಯಾನೃತೇ ಅವಪಶ್ಯಂ ಜನಾನಾಂ | ಮಧುಶ್ಚ್ಯುತಃ ಶುಚಯೋಯಾಃ ಪಾವಕಾ ಸ್ತಾನಆಪಶ್ಶಗ್ಂ ಸ್ಯೋನಾ ಭವಂತು ||

ತಾ|| ಜಲಾಧಿಷ್ಠಾನದೇವತೆಗಳಿಗೆ ಧೊರೆಯಾದ ವರುಣನು ಜನಗಳ ಪುಣ್ಯಾ ಪಾಪಗಳನ್ನು ವಿವೇಚನೆಮಾಡುತ್ತ ಯಾವ ಉದಕಮಧ್ಯದಲ್ಲಿ ವಾಸವಾಗಿ ರುವನೋ, ಯಾವವು ಅಮೃತವನ್ನು ಸ್ರವಿಸುತ್ತವೋ ಯಾವವು ಪರಿಶುದ್ಧಗಳಾ ಗಿವೆಯೋ ಮತ್ತು ಪರಿಶುದ್ಧರನ್ನಾಗಿಯೂ ಮಾಡುತ್ತವೋ ಅಂತಹ ಜಲಾಧಿಷ್ಠಾನ ದೇವತಾಶಕ್ತಿಗಳು ಇಹಪರಗಳೆರಡಕ್ಕೂ ನಮಗೆ ಸುಖವನ್ನುಂಟುಮಾಡಲಿ.

ಯಾಸಾಂದೇವಾ ದಿವಿಕೃಣ್ವಂತಿ ಭಕ್ಷಂಯಾ ಅಂತರಿಕ್ಷೇ ಬಹುಧಾಭವಂತಿ | ಯಾಪೃಥಿವೀಂಪಯಸೋಂದಂತಿ ಶುಕ್ರಾಸ್ತಾನ ಆಪಶ್ಶಗ್ಂಸ್ಯೋನಾಭವಂತು||

ತಾ|| ಪರಿಶುದ್ಧವಾದ ಅಮೃತರಸವಾಗಿರುವ ಯಾವ ಗಂಗಾ ಜಲವನ್ನು ದೇವತೆಗಳು ಸ್ವರ್ಗದಲ್ಲಿ ಪಾನಮಾಡುತ್ತಾರೋ, ಯಾವ ಶುಭ್ರವಾದ ಉದಕಗಳು ಆಕಾಶದಲ್ಲಿದ್ದು ಭೂಮಿಯನ್ನು ವೃಷ್ಟಿಯಿಂದ ತೋಯಿಸುತ್ತಲಿವೆಯೋ ಅಂತಹ ಜಲಾಭಿಮಾನದೇವತೆಗಳೇ! ನಮಗೆ ಆತ್ಮಸುಖರೂಪವಾದ ಜ್ಞಾನವನ್ನುಕೊಡಿ.

ಶಿವೇನಮಾ ಚಕ್ಷುಷಾ ಪಶ್ಯತಾಪಶ್ಶಿವಯಾ ತನ್ವೋಪಸ್ಪೃಶತ್ ತ್ವಚಂಮೇ | ಸರ್ವಾಗ್ಂ ಅಗ್ನೀಗ್ಂ ರಪ್ಸುಷದೋ ಹುವೇವೋ ಮಯಿ ವರ್ಚೋ ಬಲವೋಜೋ ನಿಧತ್ತ ||

ತಾ|| ಜಲಾಭಿಮಾನದೇವತೆಯಾದ ವರುಣನೇ! ಸುಖಸ್ವರೂಪವಾದ ನೋಟದಿಂದ ನನ್ನನ್ನು ನೋಡು. ಮಂಗಳಕರವಾದ ನಿನ್ನ ಹಸ್ತದಿಂದ ನನ್ನ ಮೈಯ್ಯನ್ನು ಸ್ಪರ್ಶಮಾಡು. ನಿನ್ನಲ್ಲಿ ವಾಸವಾಗಿರತಕ್ಕ ಅಗ್ನಿಯನ್ನೂ ಬೇಡಿ ಕೊಳ್ಳುತ್ತೇನೆ. ನನಗೆ ವರ್ಚಸ್ಸನ್ನೂ, ಶಕ್ತಿಯನ್ನೂ, ಉತ್ಸಾಹವನ್ನೂ ಉಂಟುಮಾಡಿಕೊಡಿ.

## ಸಾಮಶಾಖಾ ಬ್ರಾಹ್ಮಣರು

"ದಧಿಕ್ರಾವ್ಣ್ಣೋ" ಮತ್ತು "ಆಪೋಹಿಷ್ಠಾ" ಎಂಬ ಎರಡು ಮಂತ್ರ ಗಳನ್ನು ಮಾತ್ರ ಹೇಳುತ್ತಾರೆ.

## ಕ್ಷತ್ರಿಯರು

ಶುಚಿರಗ್ನಿ ಶ್ಶುಚಿರ್ವಿಪ್ರಃ ಶುಚಿರ್ಬ್ರಹ್ಮಾ ಶುಚಿಃಕವಿಃ |
ಶುಚಿರರ್ಕ ಶ್ಶುಚಿ ಶ್ಚಂದ್ರಃ ಶುಚಿರ್ವೇದಃ ಶುಚಿರ್ವಸುಃ ||
ಆಪಶ್ಶುದ್ಧಿ ಕರಾಸ್ಸತ್ಯಃ ಯಥಾಪಾಪಂ ನವಿದ್ಯತೇ |
ಮಯಿಪ್ರತಿಷ್ಠಿತಂ ಸರ್ವ ಮೇನೋ ಮಂತ್ರಾತ್ಪ್ರಮುಚ್ಯತೇ ||

ತಾ|| ಅಗ್ನಿಯು, ಬ್ರಾಹ್ಮಣನು, ಬ್ರಹ್ಮನು, ಪರಮಾತ್ಮನು, ಸೂರ್ಯನು, ಚಂದ್ರನು, ವೇದವು, ವಸುವು, ಉದಕಗಳು ಹೇಗೆ ಪರಿಶುದ್ಧವಾದವುಗಳೋ ಹಾಗೆಯೆ ಜಲಾದಿಷ್ಠಾನ ದೇವತೆಗಳು ನನ್ನಲ್ಲಿ ಪಾಪವಿಲ್ಲದಂತೆ ಶುದ್ಧಿಯನ್ನುಂಟು ಮಾಡಲಿ ಮತ್ತು ನನ್ನಲ್ಲಿರುವ ಸಮಸ್ತಪಾಪಗಳನ್ನೂ ಬಿಡಿಸುವುದರಮೂಲಕ ಆತ್ಮಸುಖವನ್ನುಂಟುಮಾಡಲಿ.

## ವೈಶ್ಯರು

ಸರ್ವತೀರ್ಥ ಸಮುದ್ಭೂತಾಃ ಪಾವನಾಃ ಪಾಪಹಾರಿಣಃ |
ಆಪ ಶ್ಶರೀರ ಸಂಶುದ್ಧಿಂ ಕುರ್ವಂತು ಮಮ ಸರ್ವದಾ ||
ಆಪ ಶ್ಶುದ್ಧಿಕರಾಸ್ಸಂತು ಯಥಾಪಾಪಂ ನವಿದ್ಯತೇ |
ಮಯಿ ಪ್ರತಿಷ್ಠಿತಂ ಸರ್ವ ಮೇನೋಮತ್ತಃ ಪ್ರಮುಚ್ಯತಾಮ್ ||

ತಾ|| ಗಂಗಾದಿಸರ್ವತೀರ್ಥಗಳೂ ಪರಮಾತ್ಮನಿಂದ ಉಂಟಾದವುಗಳಾದ್ದರಿಂದ ಪರಿಶುದ್ಧವಾದವುಗಳು. ಪಾಪಪರಿಹಾರಕಗಳಾದ ಜಲಾಭಿಮಾನದೇವತೆಗಳು ನನಗೆ ಪರಿಶುದ್ಧತೆಯನ್ನುಂಟುಮಾಡಲಿ. ಅಲ್ಲದೆ ನನ್ನಲ್ಲಿರುವ ಸಮಸ್ತ ಪಾಪಗಳನ್ನೂ ನನ್ನಿಂದ ಬಿಡಿಸುವುದರಮೂಲಕ ಆತ್ಮಸುಖವನ್ನುಂಟುಮಾಡಲಿ.

ತತ್ವ|| ಮಾರ್ಜನಾಮಂತ್ರ ಇಲ್ಲಿಗೆ ಪೂರ್ಣವಾಯಿತು. ನೀರನ್ನು ಪ್ರೋಕ್ಷಿಸಿಕೊಳ್ಳದೆ ಮಂತ್ರಗಳ ಪಠನಮಾತ್ರದಿಂದಲೇ ಮಾರ್ಜನೆಯ ಫಲವು ಉಂಟಾಗುವುದಿಲ್ಲವೇ ? ಎಂಬ ಪ್ರಶ್ನೆಯು ಕೆಲವರಿಗೆ ಉದಯಿಸಬಹುದು. ಇದಕ್ಕೆ ಸಮಾಧಾನವೇನೆಂದರೆ, ಯಾವಕಾರ್ಯಮಾಡಬೇಕಾದರೂ ಅದಕ್ಕೆ ಸಹಕಾರಿಯಾದ ವಸ್ತುವಿನ ಸಹಾಯದೊಡನೆ ಕಾರ್ಯಮಾಡುವಿಕೆಯು ಶೀಘ್ರಫಲದಾಯಕವಾಗಿಯೂ ಶ್ರೇಷ್ಠವಾಗಿಯೂ ಇರುವುದೆಂಬುದು ನಿರ್ವಿವಾದವಿಚಾರ. ಸಂಧ್ಯಾಕರ್ಮದಲ್ಲಿ ನಮ್ಮ ಪಾಪನಿವೃತ್ತಿಗೂ ಆತ್ಮಸುಖವನ್ನು ಹೊಂದಲು ಸಹಕಾರಿಯಾಗಿ ಇರುವುದಕ್ಕೂ ಜಲಾಧಿಷ್ಠಾನದೇವತೆಗಳನ್ನು ಪ್ರತ್ಯಕ್ಷಸಿದ್ಧವಾಗಿರುವ ಶುದ್ಧಜಲದಲ್ಲಿಯೇ ಮಂತ್ರದಿಂದ ಆಕರ್ಷಿಸಿ ಅಭಿಮಂತ್ರಿತವಾದ ಜಲದಿಂದಲೇ ದೇಹಕ್ಕೆ ಪ್ರೋಕ್ಷಿಸಿಕೊಳ್ಳಬೇಕು. ಸೂಜಿಕಲ್ಲು ಕಬ್ಬಿಣವನ್ನು ಹಿಡಿಯಬಲ್ಲುದೇ ವಿನಾ ಇತರ ಲೋಹಗಳನ್ನು ಹಿಡಿಯಲಾರದು ಇದರಂತೆ ಯಾವಯಾವ ಕರ್ಮಗಳಲ್ಲಿ ಯಾವಯಾವುದು ಸಹಕಾರಿಯಾದ ಕರಣಗಳೋ (ವಸ್ತುಗಳೋ) ಅಂತಹ

ವುಗಳನ್ನೇ ಉಪಯೋಗಿಸಬೇಕು. ಇದೇ ಕರ್ಮಕಾಂಡದಲ್ಲಿರುವ ಮುಖ್ಯತತ್ವ. ಕರ್ಮಮಾಡುವವನ ಪರಿಶುದ್ಧತೆ, ಶ್ರದ್ಧಾ, ಭಕ್ತಿ, ಮಂತ್ರಾರ್ಥಜ್ಞಾನಗಳ ಬಲವನ್ನನುಸರಿಸಿ ಅಭಿಮಂತ್ರಿತವಾದ ಉದಕವನ್ನು ಪ್ರೋಕ್ಷಿಸಿಕೊಳ್ಳುವುದರಿಂದ ಮಂತ್ರಾಧಿದೇವತೆಯ ತೇಜಸ್ಸು ಶರೀರದಲ್ಲಿ ಪ್ರಫುಲ್ಲವಾಗುವುದು. ಇದರಿಂದ ಶರೀರದ ಮಾಲಿನ್ಯವೆಂದರೆ ಮಲಿನಪ್ರಕೃತಿಗೆ ಬಾಧೆಯುಂಟಾಗುವುದು. ಉಪಾಸಕನ ಶಕ್ತಿಯನ್ನನುಸರಿಸಿ ಪಾಪಗಳೂಕೂಡ ನಾಶವಾಗುವುವಲ್ಲದೆ ಆತ್ಮಸುಖಕ್ಕೂ ಸಹಾಯವಾಗುವುದು.

ನೀರಿನಲ್ಲಿ ಸ್ನಾನಮಾಡುವುದರಿಂದ ದೇಹಶುದ್ಧಿಯಾದರೂ, ಮಾರ್ಜನೆಯಿಂದುಂಟಾಗುವ ದೇವತಾ ತೇಜಸ್ಸಿನ ಪ್ರಫುಲ್ಲತೆಯು ಸ್ನಾನಮಾತ್ರದಿಂದ ಆಗಲಾರದು. ಹೀಗಿರುವುದರಿಂದಲೇ ಪ್ರೋಕ್ಷಿಸಿಕೊಳ್ಳುವುದಕ್ಕೆ ಮಂತ್ರಸ್ನಾನವೆಂದು ಹೆಸರು. ಇದರಂತೆಯೆ ಆಚಮನದಲ್ಲಿಯೂ ವಿಧಿಸಿರುವ ಮಂತ್ರಗಳೊಡನೆ ನೀರನ್ನು ಪಾನಮಾಡುವುದರಿಂದಲೂ ಆಯಾ ಅಂಗಗಳನ್ನು ಸ್ಪರ್ಶಮಾಡಿಕೊಳ್ಳುವುದರಿಂದಲೂ, ಪಾಪಪರಿಹಾರವಾಗಿ ಪರಿಶುದ್ಧತೆಯುಂಟಾಗುವುದು. ಈಗಿನ ಕಾಲದಲ್ಲಿ ಕುಶಾಗ್ರಬುದ್ಧಿಯುಳ್ಳ ಕೆಲವರು ಆಚಮನ ಮಾಡುವುದರಲ್ಲಿ ಅತ್ಯಲ್ಪ ಉದಕವು ಹೊಟ್ಟೆಗೆ ಹೋಗುವುದರಿಂದ ಕಂಠದಲ್ಲಿರುವ ಕಫವೂ ಪಿತ್ತವೂ ಸ್ವಲ್ಪಮಟ್ಟಿಗೆ ಕಡಿಮೆಯಾಗುವ ಪ್ರಯೋಜನಮಾತ್ರ ಉಂಟಾಗುವುದೆಂದು ತಿಳಿದುಕೊಂಡಿರುತ್ತಾರೆ. ಆಚಮನದಿಂದ ಇಷ್ಟಾದರೂ ಪ್ರಯೋಜನವುಂಟೆಂದು ಇವರು ತಿಳಿದುಕೊಂಡಿರುವುದಕ್ಕೆ ತುಂಬಾ ಸಂತೋಷಪಡಬೇಕಾಗಿದೆ. ಹಾಗಿದ್ದರೆ ಅಂತಹವರು ಶಾಸ್ತ್ರದಲ್ಲಿ ವಿಧಿಸಿರುವಂತ ಸಂಧ್ಯಾ ಕರ್ಮವನ್ನುಮಾಡಿ ಇದರ ಜೊತೆಗೆ ಅಧಿಕ ಜಲಪಾನದಿಂದ ಶ್ಲೇಷ್ಮ ಪಿತ್ತಗಳ ಬೇರುಗಳನ್ನೇ ನಿರ್ಮೂಲ ಮಾಡಿಕೊಳ್ಳಬಾರದೇಕೆ ? ನಾವುಮಾಡುವ ಕರ್ಮಾನುಷ್ಠಾನಗಳು ದೇಹಕ್ಕೆ ಬೇಕಾದ ಆರೋಗ್ಯದ ನಿಯಮಗಳನ್ನು ಒಳಗೊಂಡೇ ಇರುವವು ಆದರೆ ಆರೋಗ್ಯದ ಪ್ರಧಾನತೆಯನ್ನು ಮಾತ್ರವೇ ಮುಂದಿಟ್ಟುಕೊಳ್ಳುವುದು ಕರ್ಮಕಾಂಡದ ಉದ್ದೇಶವಲ್ಲ. ದೇವತೋಪಾಸನೆಯ ತತ್ವವೇ ಪ್ರಧಾನವಾಗಿದ್ದು ಅದಕ್ಕೆ ಸಹಕಾರಿಯಾದ ಆರೋಗ್ಯಭಾಗ್ಯದ ಸಾರವೂ ಹಿಂಬಾಲಿಸಿಕೊಂಡಿರುವ ತತ್ವವೂ ಕರ್ಮಕಾಂಡದಲ್ಲಿದ್ದೇ ಇರುತ್ತದೆ. ನಮ್ಮ ಬುದ್ಧಿಗೆ ನಿರ್ಮಲತೆಯುಂಟಾಗಿ ಪರಮಾತ್ಮನನ್ನು ಉಪಾಸನೆಮಾಡಲು ಅರ್ಹತೆಬೇಕು. ಬುದ್ಧಿಗೆ ಅರ್ಹತೆಯುಂಟಾಗಲು ದೇಹಶುದ್ಧಿಯೂ ಆಗಬೇಕು. ದೇಹಶುದ್ಧಿಯಾಗುವುದಕ್ಕೋಸ್ಕರ ಯೋಗಶಾಸ್ತ್ರದಲ್ಲಿ ಹೇಳಿರುವ ಜಲಧೌತಿ, ಅಗ್ನಿಧೌತಿ, ವಾಯುಧೌತಿಗಳ ಕಾರ್ಯಗಳ ತತ್ವಗಳನ್ನು ಸಂಧ್ಯಾಕರ್ಮವು ಒಳಗೊಂಡಿರುವುದು. 'ಧೌತಿ' ಯೆಂದರೆ ಶುಚಿಮಾಡುವಿಕೆ. ಸಂಧ್ಯಾವಂದನೆಯಲ್ಲಿ ಆಚಮನ ಪ್ರಾಶನಗಳಿಂದ

ಉದಕವು ದೇಹದೊಳಕ್ಕೆ ಹೋಗುವುದರಿಂದ ಜಲಧೌತಿ ಕ್ರಿಯೆಯಾಗುವುದು. ಆಸನ ಪ್ರಾಣಾಯಾಮಾಭ್ಯಾಸಗಳಲ್ಲಿ ಅಗ್ನಿ ವಾಯುಧೌತಿಗಳ ಕ್ರಿಯೆಯೂ ನಡೆದು ದೇಹದ ಅಂಗಗಳಲ್ಲಿರುವ ಮಾಲಿನ್ಯಗಳು ತೊಲಗಿ ಶುಚಿರ್ಭೂತಗಳಾಗಿ ದೇವತಾ ಶಕ್ತಿಗಳ ತೇಜಸ್ಸು ಅಧಿಕಾರಿಯಲ್ಲಿ ಪ್ರಫುಲ್ಲವಾಗುವುದು. ಆದುದರಿಂದ ಮಂತ್ರ ಸ್ನಾನರೂಪವಾದ ಮಾರ್ಜನೆ ಮತ್ತು ಆಚಮನಗಳಲ್ಲಿ ಅಪೂರ್ವವಾದ ಮಹತ್ತು ಇದ್ದೇ ಇರುವುದು.

ಪರಮಾತ್ಮನೊಬ್ಬನನ್ನು ಮಾತ್ರ ಪ್ರಾರ್ಥಿಸದೆ ಸೂರ್ಯ, ಅಗ್ನಿ, ವರುಣ, ವಾಯು ಮುಂತಾದ ಅನೇಕ ದೇವತೆಗಳನ್ನೇಕೆ ಪ್ರಾರ್ಥಿಸಬೇಕೆಂದು ಕೆಲವರಿಗೆ ಅನುಮಾನ ಬರಬಹುದು ಇದಕ್ಕೆ ಸಮಾಧಾನವೇನೆಂದರೆ:— ನಾವು 'ಶರೀರಂ ಪಾಂಚಭೌತಿಕಂ' ಎಂಬಂತೆಯೂ, 'ದೇಹಪಂಜರೇ' ಎಂಬಂತೆಯೂ ಪಂಚಭೂತ ಗಳಿಂದ ಮಾಡಲ್ಪಟ್ಟ ಈ ದೇಹ ಬಂಧನದಲ್ಲಿರುವುದು ಸಕಲರಿಗೂ ತಿಳಿದವಿಚಾರ ವಷ್ಟೆ! ಇದರಂತೆ ನಮ್ಮ ಇರುವಿಕೆಯೂ ಈ ದೇವತೆಗಳ ಅಧೀನದಲ್ಲಿರುವುದರಿಂದ ಇವರ ಸಹಾಯವೂ ಅವಶ್ಯಕವಾಗಿರುವುದು. ಹೇಗೆಂದರೆ, ರಾಜಕಾರ್ಯದಲ್ಲಿ ಒಬ್ಬ ಸಣ್ಣ ಅಧಿಕಾರಿಯು ಸೌಖ್ಯವನ್ನು ಅಪೇಕ್ಷಿಸುವನಾದರೆ ತನಗೆ ಸಮೀಪದಲ್ಲಿರುವ ತನಗಿಂತ ಹೆಚ್ಚು ಅಧಿಕಾರವುಳ್ಳವರ ವಿಶ್ವಾಸವನ್ನು ಗಳಿಸಿಕೊಳ್ಳಬೇಕು, ಮತ್ತು ರಾಜಭಕ್ತಿಯೂಬೇಕು. ಇದರಂತೆ ನಮಗಿಂತ ಹೆಚ್ಚುಪದವಿಯಲ್ಲಿರುವ ದೇವತೆಗಳ ಸಹಾಯವೂಬೇಕು ಪಾಪಕಾರ್ಯಗಳನ್ನು ಮಾಡಿಸಿ ನಮಗೆ ಪ್ರತಿಬಂಧಕವಾಗಿ ರುವುದು ರಾಕ್ಷಸಶಕ್ತಿಗಳು ಇಂತಹ ಶಕ್ತಿಗಳನ್ನು ನಿಗ್ರಹಿಸಿ ಆತ್ಮಸಾಕ್ಷಾತ್ಕಾರ ವನ್ನು ಪಡೆದುಕೊಳ್ಳುವುದಕ್ಕೂ, ಲೋಕಹಿತಕ್ಕೂ, ದೇಹಸೌಖ್ಯಕ್ಕೂ ಈ ದೇವತೆ ಗಳ ಸಹಾಯವು ಅತ್ಯವಶ್ಯಕವಾಗಿಬೇಕು ವರುಣನ ಪ್ರಾರ್ಥನೆಯಿಂದ ಲೋಕ ಹಿತಕ್ಕೆ ಸುವೃಷ್ಟಿಯುಂಟಾಗುವುದು ಪರಮಾರ್ಥದಲ್ಲಿ ನಮ್ಮ ದೇಹದಲ್ಲಿ ಅಮೃತ ಧಾರೆಯನ್ನು ಸುರಿಸುತ್ತಾ ನೂರಾರುವರ್ಷಗಳು ದೇಹವನ್ನು ಮರೆತು ಸಮಾಧಿ ಯಲ್ಲಿ ಕುಳಿತಿದ್ದರೂ, ದೇಹದ ಮೇಲೆ ಹುತ್ತಬೆಳೆದರೂ ದೇಹವು ಕೆಡದಂತೆ ಕಾಪಾಡುತ್ತಿರುವುದೇ ವರುಣ ಶಕ್ತಿಯು. ಈ ಅಮೃತಧಾರೆಯು ಯಾವಾಗ ವರ್ಷಿಸಲು ನಮ್ಮಲ್ಲಿ ಪ್ರಾರಂಭವಾಗುವುದೋ ಆಗ ವಿಶೇಷ ಆಹಾರ ಬೇಕಾಗಿರು ವುದಿಲ್ಲ. ಇಂತಹ ಮಹತ್ತು ಇರುವುದರಿಂದಲೇ ಸಂಧ್ಯಾಕರ್ಮದಲ್ಲಿ ಜಲಾಭಿ ಮಾನದೇವತೆಯ ಪ್ರಾರ್ಥನೆಯು ಬಂದಿರುವುದು.

[ಜಲಾಭಿಮಾನದೇವತೆಯ ಅನುಗ್ರಹದ ಮಹತ್ತಿನ ತತ್ವವು ರಾಮಾಯಣದ ಅಂತರಾರ್ಥದಲ್ಲಿ ವಾನರರು ಮಧುಪಾನಮಾಡಿದ, ಹನುಮಂತನು ಅಮೃತಸಂಜೀವಿನಿ ಮುಂತಾದ ಔಷಧಗಳನ್ನು ತಂದ ಸಂದರ್ಭದಲ್ಲಿ ವಿವರವಾಗಿರುವುದು.]

ಜಲಾಭಿಮಾನದೇವತಾಶಕ್ತಿಯಂತೆ ಅಗ್ನಿಸೂರ್ಯರುಗಳಿಂದ ಲೋಕಕ್ಕೂ ದೇಹಕ್ಕೂ ಉಂಟಾಗುವ ಸಹಾಯವು ಸರ್ವರಿಗೂ ತಿಳಿದೇ ಇದೆ.

**[ಪರಮಾರ್ಥದಲ್ಲಿ ಅಗ್ನಿದೇವತೆಯಿಂದುಂಟಾಗುವ ಸಹಾಯವು ರಾಮಾಯಣದ ಅಂತರಾರ್ಥದಲ್ಲಿ ಹನುಮಂತನು ಲಂಕಾದಹನಮಾಡಿದ, ವಾನರರು ಮಧುಪಾನಮಾಡಿದ ಮತ್ತು ಸೀತಾದೇವಿಯ ಅಗ್ನಿಪ್ರವೇಶ ತತ್ವಗಳಲ್ಲಿ ಬಂದಿರುವುವು]**

ಆದುದರಿಂದ ಕೆಲವು ಆಧುನಿಕ ವೈಜ್ಞಾನಿಕರು ಸೂರ್ಯ, ಅಗ್ನಿ, ಜಲ ಮುಂತಾದವುಗಳು ಪ್ರಕೃತಿಯ ವಸ್ತುವಿಶೇಷಮಾತ್ರಗಳೆಂದು ಭಾವಿಸಿರುವಂತೆ ಭಾವಿಸದೆ ಆಯಾ ವಸ್ತುಗಳಲ್ಲಿ ಪ್ರಧಾನವಾದ ದೇವತಾಶಕ್ತಿಯೊಂದು ಇರುವುದೆಂದೂ, ಈ ಶಕ್ತಿಗಳು ನಮಗೆ ಪೂಜಾರ್ಹವಾದುವುಗಳೆಂದೂ ನಂಬಿ ಅಂತಹ ದೇವತೆಗಳನ್ನು ನಮಗೂ ಲೋಕಕ್ಕೂ ಹಿತವನ್ನುಂಟುಮಾಡಲು ಪ್ರಾರ್ಥಿಸಬೇಕು. ಇದೇ ಕರ್ಮಕಾಂಡದ ಸಾರವಾಗಿದೆ.

## ೭ ಪಾಪಪುರುಷ ವಿಸರ್ಜನೆ

### ಋಗ್ಯಜುಸ್ಸಾಮಶಾಖಾ ಬ್ರಾಹ್ಮಣರು

ಋತಂಚೇತಿ ತ್ರ್ಯೃಚಸ್ಯ ಸೂಕ್ತಸ್ಯ। ಅಘಮರಷಣಋಷಿಃ। ಭಾವವೃತ್ತೋ ದೇವತಾ। ಅನುಷ್ಟುಪ್ ಛಂದಃ। ಪಾಪಪುರುಷ ವಿಸರ್ಜನೇ ವಿನಿಯೋಗಃ॥

ಋತಂಚ ಸತ್ಯಂಚಾಭೀದ್ಧಾ ತ್ತಪಸೋಧ್ಯ ಜಾಯತ।
ತತೋರಾತ್ರಿ ರಜಾಯತ ತತಸ್ಸಮುದ್ರೋ ಅರ್ಣವಃ॥
ಸಮುದ್ರಾ ದರ್ಣವಾದಧಿ ಸಂವತ್ಸರೋ ಅಜಾಯತ।
ಅಹೋರಾತ್ರಾಣಿ ವಿದಧ ದ್ವಿಶ್ವಸ್ಯ ಮಿಷತೋವಶೀ॥
ಸೂರ್ಯಾ ಚಂದ್ರಮಸೌ ಧಾತಾಯಥಾ ಪೂರ್ವಮಕಲ್ಪಯತ್।
ದಿವಂಚ ಪೃಥಿವೀಂಚಾಂತರಿಕ್ಷ ಮಥೋಸುವಃ॥

ತಾ॥ ಮಾನಸಿಕ ಸತ್ಯವೂ, ವಾಗ್ರೂಪವಾದ ಸತ್ಯವೂ ಪರಬ್ರಹ್ಮನ ಸಂಕಲ್ಪದಿಂದ ಉದಯಿಸಿದವು. ಆ ಪರಮಾತ್ಮನಿಂದಲೇ ರಾತ್ರಿಯೂ ಸಾಗರಗಳೂ ಸಮುದ್ರಗಳೂ ಸಂವತ್ಸರಗಳೂ ಅಹೋರಾತ್ರಿಗಳೂ ಉಂಟಾದವು. ಸರ್ವಕ್ಕೂ ಸ್ವಾಮಿಯಾದ ಪರಮೇಶ್ವರನೇ ಹಿಂದಿನಕಲ್ಪದಲ್ಲಿ ಇದ್ದಂತೆಯೇ ಈ ಕಲ್ಪದಲ್ಲಿಯೂ ಸೂರ್ಯ ಚಂದ್ರ ಸ್ವರ್ಗ ಭೂಲೋಕ ಅಂತರಿಕ್ಷ ಸುವರ್ಲೋಕಗಳನ್ನು ಸೃಷ್ಟಿಸಿದನು.

ದೃಪದಾದಿವ ಮುಂಚತು ದ್ರುಪದಾದಿವೇನ್ಮಮು ಚಾನಃ। ಸ್ವಿನ್ನಸ್ನಾತ್ವೀ ಮಲಾದಿವ ಪೂತಂಪವಿತ್ರೇಣೈವಾಜ್ಯಂ ಆಪಶ್ಶುಂಧಂತು ಮೈನಸಃ॥

ತಾ॥ ಕಾಲುಸಂಕೋಲೆಯಿಂದ ಬಿಡಲ್ಪಟ್ಟವನಂತೆಯೂ ಮತ್ತು ಬಿಡಲ್ಪಟ್ಟು ಆದರಯೋಚನೆಯೇ ಇಲ್ಲದವನಂತೆಯೂ, ಬೆವರಿನಿಂದ ಕೂಡಿದವನು ಸ್ನಾನ ಮಾಡಿ ಕೊಳೆಯನ್ನು ಹೋಗಲಾಡಿಸಿಕೊಳ್ಳುವಂತೆಯೂ, ಮಂತ್ರದಿಂದ ಪರಿಶುದ್ಧವಾದ ತುಪ್ಪದಂತೆಯೂ ಉದಕಸ್ವರೂಪಿಯಾದ ಈಶ್ವರನೇ! ನನ್ನ ಪಾಪಗಳನ್ನು ಹೋಗಲಾಡಿಸಿ ಪರಿಶುದ್ಧನನ್ನಾಗಿಮಾಡು.

ಯಜುರ್ವೇದಿಗಳು "ದೃಪದಾದಿವ ಮುಂಚತು" ಎಂಬ ಎರಡನೆಯ ಮಂತ್ರವನ್ನು ಮಾತ್ರ ಹೇಳುತ್ತಾರೆ.

## ಕ್ಷತ್ರಿಯರು

ಪಾಣಿಮಧ್ಯೇ ಧೃತಾಸ್ತ್ವಾಪಃ ತ್ಯಕ್ತ್ವಾಶ್ಚಾಘ್ರಾಯ ಭೂತಲೇ |
ಏತಾಹರಂತು ಮೇಪಾಪಂ ಸಪ್ತಜನ್ಮಾಂತರೈಃ ಕೃತಂ ||

ತಾ|| ಏಳು ಜನ್ಮಗಳಿಂದ ಮಾಡಲ್ಪಟ್ಟ ನನ್ನ ಪಾಪಗಳನ್ನು ಜಲಾಭಿಮಾನ ದೇವತೆಗಳು ಪರಿಹರಿಸಲಿ.

## ವೈಶ್ಯರು

ಯಧಾಗೀ ಪಾದನಿಗಳಾ ನ್ಮುಕ್ತಸ್ಸ್ನಾತ್ವಾ ಮಲಾದಿವ |
ಬರ್ಹಿಷೇವಹವಿಃ ಪೂಯಾನ್ಮಾಮಾಪಃ ಪಾವಯಂತ್ವಮೂಃ ||

ತಾ|| ಸಂಕೋಲೆಗಳಿಂದ ಬಿಡಲ್ಪಟ್ಟ ಅಪರಾಧಿಯಂತೆಯೂ, ಸ್ನಾನಮಾಡಿ ದೇಹಕಲ್ಮಷದಿಂದ ಬಿಡಲ್ಪಟ್ಟವನಂತೆಯೂ, ಪರಿಶುದ್ಧವಾದ ಆಜ್ಯಾದಿ ಹವಿಸ್ಸಿನಂತೆಯೂ ಈ ಉದಕಗಳು ನನ್ನನ್ನು ಪಾಪಗಳಿಂದ ಪರಿಶುದ್ಧನನ್ನಾಗಿ ಮಾಡಲಿ.

ಬ್ರಹ್ಮ ಕ್ಷತ್ರಿಯ ವೈಶ್ಯರು ಈ ಮಂತ್ರವನ್ನು ಪ್ರಾರಂಭ ಮಾಡುವಾಗ ಅಂಗೈಯ್ಯಲ್ಲಿ ಉದಕವನ್ನು ಇಟ್ಟುಕೊಂಡು ಮಂತ್ರದಿಂದ ಅಭಿಮಂತ್ರಿಸಿ ಪಾಪ ಕಾರ್ಯಗಳನ್ನುಂಟುಮಾಡಿಸುವ ನಮ್ಮಲ್ಲಿರುವ ಅಜ್ಞಾನಶಕ್ತಿಗಳು ನಿರ್ವೀರ್ಯವಾಗಿ ತೊಲಗಲೆಂದು ನೀರನ್ನು ಮೂಸಿನೋಡಿ ತಮ್ಮ ಎಡಭಾಗಕ್ಕೆ ನೋಡದೆ ಎಸೆಯಬೇಕು.

ತತ್ವ|| 'ಆಪೋಹಿಷ್ಠಾ' ಮುಂತಾದ ಹಿಂದಿನ ಮಂತ್ರಗಳಲ್ಲಿ ನಾವು ಮಾಡಿದ ಕಾರ್ಯಗಳ ಪಾಪವನ್ನು ಪರಿಹರಿಸಿಕೊಳ್ಳುವ ಮತ್ತು ಮುಂದಕ್ಕೆ ಪಾಪಕಾರ್ಯಗಳನ್ನು ಮಾಡದಂತೆ ಎಚ್ಚರಿಕೆಯಿಂದ ಇರಬೇಕೆಂಬ ತತ್ವವಿದೆ. ಈ ಮಂತ್ರದಿಂದ ಅಂತಹ ಪಾಪಕಾರ್ಯಗಳನ್ನು ಮಾಡಿಸುವ ರಾಕ್ಷಸ ಸ್ವಭಾವದ ಶಕ್ತಿಯನ್ನೇ (ಅಜ್ಞಾನಶಕ್ತಿ) ನಿವೃತ್ತಿಗೊಳಿಸುವ ಮಾರ್ಗದತತ್ವವಾಗಿರುವುದು. ಪಾಪಪುರುಷ ಅಥವ ಅಜ್ಞಾನ ಶಕ್ತಿಗಳೇ ನಮ್ಮಲ್ಲಿ ರಜಸ್ತಮೋಗುಣಗಳಾಗಿವೆ. ಇವುಗಳನ್ನೇ ಈಗ ನಾವು ನಿವೃತ್ತಿಮಾಡಿಕೊಳ್ಳಬೇಕಾದುದು. ಜಲವನ್ನು ಮೂಸಿನೋಡಿ ಎಸೆಯುವುದರಿಂದ ಈ ಮಂತ್ರದ ತತ್ವಾರ್ಥವು ವಾಸನೆಯಲ್ಲಡಗಿದೆ. ಅಂದರೆ ನಮ್ಮಲ್ಲಿರುವ ರಜಸ್ತಮೋಗುಣಗಳ ಕಾರ್ಯಶಕ್ತಿಗೆ 'ವಾಸನೆ'ಯೆಂದು ವೇದಾಂತದಲ್ಲ ಹೇಳಿದೆ. ಯಾವ ಪ್ರಾಣಿಗಾದರೂ ಕ್ರಿಯಾಶಕ್ತಿಯು ನಶಿಸಿತೆಂದರೆ ಆ ಪ್ರಾಣಿಯೇ ನಶಿಸಿದಂತಾಗುವುದು. ಆದುದರಿಂದ ಅಜ್ಞಾನದ ಕಾರ್ಯಶಕ್ತಿಯಾದ ವಾಸನೆಯನ್ನು ನಶಿಸುವಂತೆ ಮಾಡುವುದೇ ಪಾಪಪುರುಷ ವಿಸರ್ಜನೆಯ ತತ್ವಾರ್ಥವಾಗಿರುವುದು.

ವಾಸನೆಯಸ್ವರೂಪವೇನೆಂದರೆ:—ಎಚ್ಚರವಾಗಿರುವ ಕಾಲದಲ್ಲಿ ಯಾವುದಾದರೂ ವಿಷಯಗಳು ನಮ್ಮಮನಸ್ಸಿನಲ್ಲಿರುವವೇ ಹೊರತು ಅರ್ಧಕ್ಷಣವಾದರೂ ಮನಸ್ಸು ನಿಶ್ಚಲವಾಗಿಯೂ, ನಿರ್ವಿಷಯವಾಗಿಯೂ ಇರುವುದೇ ಇಲ್ಲ. ಯಾವ ಕಾರ್ಯವನ್ನೂ ಮಾಡದೆ ಸುಮ್ಮನೆ ಕುಳಿತಿದ್ದರೂ, ಮನಸ್ಸು ಸುಮ್ಮನಿರದೆ ವಿಷಯೋನ್ಮುಖವಾಗಿಯೇ ಅಥವಾ ವಿಷಯರೂಪವಾಗಿಯೇ ಇರುವುದು ಸಕಲರಿಗೂ ತಿಳಿದ ವಿಚಾರ. ನಮ್ಮ ಮನಸ್ಸಿಗೆ ಎಡಬಿಡದೆ ವಿಷಯಜ್ಞಾನವನ್ನುಂಟುಮಾಡುವುದಕ್ಕೆ 'ವಾಸನೆ' ಎಂದು ಹೆಸರು. ಎಚ್ಚರಕಾಲದಲ್ಲಿ ನಮ್ಮ ಮನಸ್ಸು ಯಾವಾಗಲೂ ವಿಷಯಜ್ಞಾನದಲ್ಲಿಯೇ ಮಗ್ನವಾಗಿದ್ದರೆ ಪರಮಾತ್ಮಜ್ಞಾನವನ್ನು ನಾವು ಹೊಂದುವುದು ಹೇಗೆ? ಇಲ್ಲವೇ ಇಲ್ಲ ನಮಗೆ ಮುಖ್ಯವಾಗಿ ಬೇಕಾಗಿರುವ ಪರಮಾತ್ಮಜ್ಞಾನವನ್ನು ಹೊಂದಲು ವಿಷಯ ಜ್ಞಾನವನ್ನು ತ್ಯಜಿಸಲೇಬೇಕೆಂಬ ಪ್ರತಿಪಾದನೆಯೇ ಈ ಮಂತ್ರದ ತತ್ವವಾಗಿರುವುದು.

ವಿಷಯಜ್ಞಾನದಲ್ಲಿ ಶುಭವಾಸನೆಯೆಂದೂ, ಅಶುಭವಾಸನೆಯೆಂದೂ ಎರಡುವಿಧ. ಕಾಮ ಕ್ರೋಧ ಮುಂತಾದ ದುಷ್ಟವಾಸನೆಗಳು ಅಶುಭವಾಸನೆಗಳೆನಿಸಿ ಪಾಪಪ್ರವರ್ತಕವಾಗಿರುವುವು. ಈ ವಿಧವಾದ ವಿಷಯಜ್ಞಾನವು ಶ್ರೀಕೃಷ್ಣ ಪರಮಾತ್ಮನು ಗೀತೆಯಲ್ಲಿ ಹೇಳುವ ಆಸುರೀ ಸಂಪತ್ತಿಗೆ ಸೇರಿರುವುದು. ಇಂತಹ ಅಶುಭವಾಸನೆಯನ್ನು ನಿವೃತ್ತಿಮಾಡಿಕೊಳ್ಳಲು ಪ್ರಥಮದಲ್ಲಿ ಆತ್ಮವಿಚಾರ, ಧರ್ಮಮಾರ್ಗ, ಈಶ್ವರಾರಾಧನಾ ವಿಷಯಗಳ ಜ್ಞಾನಗಳಲ್ಲಿ ಮನಸ್ಸು ಪ್ರವರ್ತಿಸುತ್ತಾ ಇದ್ದು ವಿಷಯವಾಸನೆಯೇ ಇಲ್ಲದಿರುವ ಪರಮಾತ್ಮಸ್ವರೂಪಜ್ಞಾನವನ್ನು ಅನಂತರ ಹೊಂದಲು ವಿರಕ್ತಿಯಿಂದ ಧ್ಯಾನಾಭ್ಯಾಸಮಾಡಬೇಕು.

[ವಾಸನಾವಿಚಾರವು ಶ್ರೀಮದ್ರಾಮಾಯಣದ ಅಂತರಾರ್ಥದಲ್ಲಿ ರಾಮರಾವಣರ ಯುದ್ಧ, ಅತಿಕಾಯನ ಯುದ್ಧ ಮತ್ತು ಅಕ್ಷಕುಮಾರನ ವಧೆಯ ತತ್ವಗಳಲ್ಲಿ ವಿವರವಾಗಿರುವುದು]

ಪಾಪಪುರುಷನನ್ನು ವಿಸರ್ಜನೆಮಾಡುವುದರಿಂದ ವಿಷಯಾದಿಗಳು ನಿತ್ಯವಲ್ಲವೆಂದೂ ಪರಮಾತ್ಮನೊಬ್ಬನೇ ಸತ್ಯನೆಂದೂ ಸೂಚಿಸುತ್ತದೆ. ಆದುದರಿಂದ ಈ ಮಂತ್ರದಲ್ಲಿ ನಿತ್ಯಾನಿತ್ಯವಸ್ತುವಿವೇಕದ ತತ್ವವೂ ಇದೆ.

[ವಿಷಯವು ಅನಿತ್ಯಸ್ವರೂಪವೆಂಬ ವಿಚಾರವು ರಾಮಾಯಣದ ಅಂತರಾರ್ಥದಲ್ಲಿ ಸೀತಾಪಹರಣ ಮಾರೀಚನವಧೆ, ರಾವಣನು ಸೀತಾದೇವಿಗೆ ರಾಮನ ಮಾಯಾಶಿರಸ್ಸನ್ನು ತೋರಿಸಿದ ತತ್ವಗಳಲ್ಲಿ ಬಂದಿರುವುದು ನಿತ್ಯವಸ್ತುವನ್ನು ಹೊಂದುವ ವಿಚಾರಗಳು ಅರಣ್ಯಕಾಂಡದ ೧೧ನೆಯ ಪ್ರಕರಣದಿಂದ ಆ ಕಾಂಡದ ಅಂತ್ಯದವರೆಗಿರುವ ತತ್ವಗಳಲ್ಲಿವೆ.]

ಪಾಪಪುರುಷ ವಿಸರ್ಜನೆಯಾದ ಅನಂತರ ಶುದ್ಧಾಚಮನವನ್ನು ಮಾಡಬೇಕು.

## ೮ ಅರ್ಘ್ಯಪ್ರದಾನ

### ಬ್ರಾಹ್ಮಣರು

ಹಿಂದೆ ಹೇಳಿದಂತೆ ಪ್ರಾಣಾಯಾಮಮಾಡಿ ಅನಂತರ ಅವರವರ ಸಂಕಲ್ಪ

ಮಂತ್ರವನ್ನು ಹೇಳಿ "ಪ್ರಾತಃ, ಮಾಧ್ಯಾಹ್ನಿಕ, ಸಾಯಂಸಂಧ್ಯಾ ಅರ್ಘ್ಯಪ್ರದಾನ ಮಹಂ ಕರಿಷ್ಯೇ" ಎಂಬದಾಗಿ ಆಯಾಯ ಕಾಲಗಳಲ್ಲಿ ಹೇಳಬೇಕು.

ಓಂ ಭೂರ್ಭುವಸ್ಸುವಃ, ತತ್ಸವಿತುರ್ವರೇಣಿಯಂ, ಭರ್ಗೋ ದೇವಸ್ಯ ಧೀಮಹಿ, ಧಿಯೋ ಯೋನಃ ಪ್ರಚೋದಯಾತ್ ॥ ಎಂಬ ಮಂತ್ರದಿಂದ ಮೂರಾವೃತ್ತಿ ಅರ್ಘ್ಯಪ್ರದಾನ ಮಾಡಬೇಕು.

"ಕಾಲಾತೀತ ದೋಷ ಪ್ರಾಯಶ್ಚಿತ್ತಾರ್ಥಂ ಅರ್ಘ್ಯಪ್ರದಾನಮಹಂ ಕರಿಷ್ಯೇ" ಎಂದು ಹೇಳಿ ಮತ್ತೊಂದು ಅರ್ಘ್ಯವನ್ನು ಕೊಡಬೇಕು.

ಋಗ್ವೇದಿಗಳಲ್ಲಿಯೂ, ಸಾಮಕರಲ್ಲಿಯೂ ಕೆಲವರು ಪ್ರಾಯಶ್ಚಿತ್ತಾರ್ಘ್ಯವನ್ನು ಕೊಡುವುದಕ್ಕೆ ಈ ಕೆಳಗಿನ ಮಂತ್ರವನ್ನು ಹೇಳುವ ಸಂಪ್ರದಾಯವಿದೆ.

ಯದದ್ಯಕಚ್ಚೇತ್ಯಸ್ಯ ಮಂತ್ರಸ್ಯ । ಸುಕಕ್ಷಇಂದ್ರೋ ಗಾಯತ್ರೀ । ಯದದ್ಯ ಕಚ್ಚವೃತ್ರಹನ್ನುದಗಾ ಅಭಿಸೂರ್ಯಃ । ಸರ್ವಂತದಿಂದ್ರತೇವಶೇ ॥

ತಾ॥ ಸತ್ಕರ್ಮ ಪ್ರತಿಬಂಧಕ ನಿವರ್ತಕನೂ, ಪರಮೈಶ್ವರ್ಯಸಂಪನ್ನನೂ, ಸರ್ವಕರ್ಮಪ್ರೇರಕನೂ, ಸರ್ವವ್ಯಾಪ್ಯನೂ ಆಗಿರುವ ಎಲೈ ಸೂರ್ಯಭಗವಂತನೇ! ಈ ಲೋಕದಲ್ಲಿನ ಪ್ರಾಣಿಗಳು ಆಚರಿಸುವ ಯತ್ಕಿಂಚತ್‌ಕರ್ಮವೂ, ಕರ್ಮಕಾಲಾತಿಕ್ರಮಣ ನಿಮಿತ್ತದೋಷವೂ, ತದನುಗುಣವಾದ ಶಿಕ್ಷಾಕರ್ತೃತ್ವಗಳೂ ನಿನ್ನ ಅಧೀನವಾಗಿಯೇ ಇವೆ. ಆದಕಾರಣ ನನ್ನ ಪ್ರಾರ್ಥನೆಯನ್ನು ಲಾಲಿಸಿ ಯಾವ ವಿಧವಾದ ದೋಷಕ್ಕೂ ನನ್ನನ್ನು ಭಾಗಿಯನ್ನಾಗಿ ಮಾಡದೆ ಪ್ರಸನ್ನನಾಗಿ ಉದ್ಧರಿಸು.

## ಕ್ಷತ್ರಿಯರು

ಪ್ರಾಣಾಯಾಮ ಮಂತ್ರದಿಂದ ಪ್ರಾಣಾಯಾಮ ಮಾಡಿ "ಮಮ ಉಪಾತ್ತ ಸಮಸ್ತ ದುರಿತಕ್ಷಯ ದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಪ್ರಾತಸ್ಸಂಧ್ಯಾರ್ಘ್ಯ ಪ್ರದಾನಂ ಕರಿಷ್ಯೇ' ಎಂದು ಸಂಕಲ್ಪವನ್ನು ಹೇಳಬೇಕು.

ಗಾಯತ್ರ್ಯಾಃ ವಿಶ್ವಾಮಿತ್ರಋಷಿಃ। ಸವಿತಾದೇವತಾ। ಅನುಷ್ಟುಪ್‌ಛಂದಃ। ಅರ್ಘ್ಯಪ್ರದಾನೇ ವಿನಿಯೋಗಃ।ಎಂಬ ಋಷಿ ಛಂದಸ್ಸುಗಳನ್ನು ಹೇಳಬೇಕು.

ಅರ್ಘ್ಯಪ್ರದಾನ ಮಂತ್ರ:—ಯೋದೇವಸ್ಸವಿತಾಸ್ಮಾಕಂ ಧೀಯೋಧರ್ಮಾದಿ ಗೋಚರಾಃ । ಪ್ರೇರಯೇತ್ತಸ್ಯ ಯದ್ಭರ್ಗ ಸ್ತದ್ವರೇಣ್ಯ ಮುಪಾಸ್ಮಹೇ ॥ ಈ ಮಂತ್ರವನ್ನು ಹೇಳಿ ಮೂರಾವರ್ತಿ ಅರ್ಘ್ಯವನ್ನು ಕೊಡಬೇಕು.

ಪ್ರಾಯಶ್ಚಿತ್ತಾರ್ಘ್ಯ:—ಸೂರ್ಯೋದಯಕ್ಕೆ ಮುಂಚೆ ಸಂಧ್ಯಾವಂದನೆಯನ್ನು ಮಾಡದಿದ್ದರೆ ಪುನಃ ಪ್ರಾಣಾಯಾಮಮಾಡಿ ಅನಂತರ ಮಮ ಉಪಾತ್ತ ಸಮಸ್ತ ದುರಿತಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಪ್ರಾತಸ್ಸಂಧ್ಯಾ ಕಾಲಾತೀತ

ದೋಷ ಪ್ರಾಯಶ್ಚಿತ್ತಾರ್ಥಂ ಅರ್ಘ್ಯಪ್ರದಾನಂಕರಿಷ್ಯೇ" ಎಂದು ಸಂಕಲ್ಪ ಮಾಡಿ ಮೇಲೆ ಹೇಳಿದಂತೆ ಅರ್ಘ್ಯಪ್ರದಾನ ಮಂತ್ರವನ್ನು ಹೇಳಿಕೊಂಡು ಒಂದು ಪ್ರಾಯಶ್ಚಿತ್ತಾರ್ಘ್ಯವನ್ನು ಕೊಡಬೇಕು.

ಸೂರ್ಯಾರ್ಘ್ಯ.— ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ |
ಅನುಕಂಪಯ ಮಾಂ ಭಕ್ತ್ಯಾ ಗೃಹಾಣಾರ್ಘ್ಯಂ ನಮೋಸ್ತುತೇ ||

ತಾ' ಸಹಸ್ರ ಕಿರಣನಾದ ತೇಜಸ್ಸುಗಳರಾಶಿಯಾದ ಜಗದ್ರಕ್ಷಕನಾದ ಸೂರ್ಯನೇ, ಬಾ! ನನ್ನಲ್ಲಿ ಕೃಪೆಮಾಡು. ಭಕ್ತಿಪುರಸ್ಸರವಾಗಿ ನಾನು ಕೊಡುವ ಅರ್ಘ್ಯವನ್ನು ಅಂಗೀಕರಿಸು ನಿನಗೆ ನಮುಸ್ಕಾರಮಾಡುತ್ತೇನೆ.

ಈ ಮಂತ್ರವನ್ನು ಹೇಳಿ ಸೂರ್ಯಾರ್ಘ್ಯವನ್ನು ಕೊಡುವುದು.

## ವೈಶ್ಯರು

ಪ್ರಾಣಾಯಾಮ ಮಂತ್ರದಿಂದ ಪ್ರಾಣಾಯಾಮಮಾಡಿ "ಶ್ರೀಪರಮೇಶ್ವರ ಶ್ರೀಕನ್ಯಕಾಪರಮೇಶ್ವರೀ ಪ್ರೀತ್ಯರ್ಥಂ ಅರ್ಘ್ಯಪ್ರದಾನಂ ಕರಿಷ್ಯೇ" ಎಂದು ಸಂಕಲ್ಪವನ್ನು ಹೇಳಬೇಕು

ಅರ್ಘ್ಯಪ್ರದಾನಮಂತ್ರ— ಪ್ರಾತರ್ಮಧ್ಯಾನ್ಹಸಂಧ್ಯಾಸು ತ್ರಿಮೂರ್ತ್ಯಾಂ ವೇದಮಾತರಂ | ಚತುರ್ವಿಂಶದ್ವರ್ಣರೂಪಾಂ ಗಾಯತ್ರೀಂ ಭಾಸ್ವತೀಂ ನಮಃ || ಎಂಬದಾಗಿಹೇಳಿ ಮೂರಾವೃತ್ತಿ ಅರ್ಘ್ಯವನ್ನು ಕೊಡಬೇಕು

ಪ್ರಾಯಶ್ಚಿತ್ತಾರ್ಘ್ಯ.— "ಕಾಲಾತಿಕ್ರಮಣ ದೋಷಪರಿಹಾರಾರ್ಥಂ ಪ್ರಾಯಶ್ಚಿತ್ತಾರ್ಘ್ಯಪ್ರದಾನಂ ಕರಿಷ್ಯೇ" ಎಂಬದಾಗಿಹೇಳಿ ಮಂತ್ರದಿಂದ ಒಂದಾವೃತ್ತಿ ಅರ್ಘ್ಯವನ್ನು ಕೊಡಬೇಕು.

ತತ್ವ|| ಅರ್ಘ್ಯಪ್ರದಾನವನ್ನು ಏತಕ್ಕೆ ಮಾಡಬೇಕೆಂದರೆ 'ಮಂದೇಹ' ರೆಂಬ ರಾಕ್ಷಸರು ಸೂರ್ಯನೊಡನೆ ಯಾವಾಗಲೂ ಯುದ್ಧಮಾಡುತ್ತಿರಬೇಕೆಂದು ಬ್ರಹ್ಮನಲ್ಲಿ ವರಪಡೆದು ಸೂರ್ಯನನ್ನು ಮುತ್ತಿಕೊಂಡು ಯುದ್ಧಮಾಡಲು ಬರುವುದಾಗಿಯೂ, ಆ ರಾಕ್ಷಸರ ಬಾಧೆಯನ್ನು ತಪ್ಪಿಸಲು ಅರವತ್ತುಸಾವಿರ ವಾಲಖಿಲ್ಯರೆಂಬ ಬ್ರಹ್ಮರ್ಷಿಗಳು ವೇದಮಂತ್ರಗಳಿಂದ ಸ್ತೋತ್ರಮಾಡುತ್ತಾ ಯಾವಾಗಲೂ ಸೂರ್ಯನ ಸಂಗಡ ಇರುವರೆಂದೂ, ಸಂಧ್ಯಾಕಾಲಗಳಲ್ಲಿ ಅಧಿಕಾರಿಯು ಗಾಯತ್ರೀ ಮಂತ್ರದಿಂದ ಅಭಿಮಂತ್ರಿತವಾದ ಬೊಗಸೆಯಲ್ಲಿನ ಶುದ್ಧೋದಕವನ್ನು ರಾಕ್ಷಸರ ನಿವೃತ್ತಿಗೋಸ್ಕರ ಮೇಲಕ್ಕೆ ಎಸೆಯಬೇಕೆಂದೂ, ಹೀಗೆ ಕೊಟ್ಟ ಅರ್ಘ್ಯಜಲವು ವಜ್ರಾಯುಧದಂತಾಗಿ ರಾಕ್ಷಸರನ್ನು ಅರುಣದ್ವೀಪದಲ್ಲಿ ಬಂಧಿಸಲು ಸಹಾಯವಾಗುವುದೆಂದೂ, ಇದರಿಂದ ಸೂರ್ಯಭಗವಂತನು ಸಂತುಷ್ಟನಾಗಿ ಅಧಿಕಾರಿಯಲ್ಲಿರುವ ರಾಕ್ಷಸಸ್ವರೂಪವಾದ ಅಜ್ಞಾನವನ್ನು ಹೋಗಲಾಡಿಸಿ ಮಂಗಳವನ್ನುಂಟುಮಾ

ಡಲು ಸಹಾಯನಾಗುತ್ತಾನೆಂದೂ, ವೇದದಲ್ಲಿಯೇ ಹೇಳಿದೆ. ಆದುದರಿಂದ ಶ್ರದ್ಧೆಯಿಂದಲೂ, ಭಕ್ತಿಯಿಂದಲೂ, ಮಂತ್ರದಿಂದ ಜಲವನ್ನು ಅಭಿಮಂತ್ರಿಸಿ ಸೂರ್ಯಭಗವಂತನೇ ! ಈ ಅರ್ಘ್ಯದಿಂದ ನಿನ್ನ ಶತ್ರುಗಳು ಪರಿಹಾರವಾಗುವುದರ ಮೂಲಕ ನೀನು ಸಂತುಷ್ಟನಾಗಿ ನಿನ್ನ ಅನುಗ್ರಹಕ್ಕೆ ನನ್ನನ್ನು ಪಾತ್ರನನ್ನಾಗಿ ಮಾಡಿಕೊಳ್ಳೆಂದು ಪ್ರಾರ್ಥಿಸುತ್ತಾ ಅರ್ಘ್ಯವನ್ನು ಕೊಡತಕ್ಕದ್ದು.

ಅಂತರಿಕ್ಷದಲ್ಲಿ ತೇಜೋಮಯನಾಗಿ ಪ್ರಪಂಚವನ್ನೇ ಬೆಳಗತಕ್ಕ ಸೂರ್ಯನ ಶಕ್ತಿ ಎಂತಹುದು? ಈ ಸೂರ್ಯನಿಗೆ ರಾಕ್ಷಸರು ಮುತ್ತಿಕೊಳ್ಳುವುದೆಂದರೇನು? ಪ್ರಪಂಚವನ್ನೇ ಅನುಗ್ರಹಿಸುತ್ತಿರುವ ಸೂರ್ಯನಿಗೆ ನಾವು ಕೊಡುವ ಅರ್ಘ್ಯದಿಂದ ನಿಶ್ಚಯವಾಗಿಯೂ ಪ್ರಯೋಜನವಾಗುವುದೇ ಎಂಬ ಸಂದೇಹವು ಅನೇಕರಿಗೆ ತೋರಬಹುದು. ಇದಕ್ಕೆ ಸಮಾಧಾನವನ್ನು ತಕ್ಕಮಟ್ಟಿಗೆ ಬರೆಯೋಣ.

ಸೂರ್ಯನಿಗೆ ರಾಕ್ಷಸಸ್ವರೂಪವಾದ ಉಪಾಧಿಗಳು ಇಲ್ಲವೇ ಇಲ್ಲವೆಂದು ಕಂಠೋಕ್ತವಾಗಿ ಹೇಳಲಾಗುವುದಿಲ್ಲ. ಪರಮಾತ್ಮನೊಬ್ಬನನ್ನು ಬಿಟ್ಟು ದೊಡ್ಡದಾಗಲಿ ಚಿಕ್ಕದಾಗಲಿ ಪ್ರಪಂಚದಲ್ಲಿರುವ ಸಕಲ ವಸ್ತುಗಳೂ ಯಾವುದಾದರೂ ಉಪಾಧಿಯಿಂದ ಕೂಡಿರುವುದು. ಆದುದರಿಂದ ರಾಕ್ಷಸಶಕ್ತಿಗಳಾದ ಉಪಾಧಿಗಳು ಸೂಕ್ಷ್ಮರೂಪದಲ್ಲಿರುವವು. ಗ್ರಹಣಕಾಲದಲ್ಲಿ ಒಂದು ವಿಧವಾದ ಉಪಾಧಿಯಿರುವುದು ನಮಗೆ ಪ್ರತ್ಯಕ್ಷವಾಗಿ ಗೋಚರವಾಗುವುದು. ಇತರ ಕಾಲಗಳಲ್ಲಿರುವ ಉಪಾಧಿಯಾದ ಸೂಕ್ಷ್ಮರೂಪದಲ್ಲಿರುವ ರಾಕ್ಷಸಶಕ್ತಿಗಳನ್ನು ನಮ್ಮ ಈ ಚರ್ಮಚಕ್ಷುಸ್ಸಿನಿಂದ ನೋಡಲು ಸಾಧ್ಯವಿಲ್ಲ ಜ್ಞಾನ ಚಕ್ಷುಸ್ಸನ್ನು ಹೊಂದಿರತಕ್ಕ ತತ್ವವೇತ್ತರು ಇಂತಹವುಗಳನ್ನು ತಿಳಿಯಬಲ್ಲರು. ಇದರಿಂದ ಸೂರ್ಯನಿಗೆ ಸೂಕ್ಷ್ಮರೂಪದಲ್ಲಿರುವ ರಾಕ್ಷಸಶಕ್ತಿಗಳ ಉಪಾಧಿಗಳು ಇದ್ದೇ ಇರಬೇಕೆಂದು ನಿರ್ದಿಷ್ಟವಾಗುವುದು. ರೋಗಕ್ಕೆ ಪರಿಹಾರಗಳಿರುವ ಹಾಗೆ ಪರಮಾತ್ಮನ ನಿಯತಿಯಲ್ಲಿ ಸೂರ್ಯಭಗವಂತನಿಗಿರತಕ್ಕ ಉಪಾಧಿಗಳ ಪರಿಹಾರಕ್ಕಾಗಿ ವಾಲಖಿಲ್ಯರೆಂಬ ಬ್ರಹ್ಮರ್ಷಿಗಳರೂಪವಾದ ಶಕ್ತಿಗಳೂ ಇರುವುವು.

ನಾವು ಕೊಡುವ ಅರ್ಘ್ಯದಿಂದಲೂ ಸೂರ್ಯನಿಗೆ ಪ್ರಯೋಜನ ಉಂಟಾಗುವುದು. "ಪರಸ್ಪರಂ ಭಾವಯನ್ತಃ ಶ್ರೇಯಃ ಪರಮವಾಪ್ಸ್ಯಥ" ಎಂಬ ಶ್ರೀಕೃಷ್ಣ ಪರಮಾತ್ಮನ ಗೀತಾವಾಕ್ಯದಂತೆ ಪ್ರಾಣಿಗಳಲ್ಲಿ ಪರಸ್ಪರ ಸಹಾಯವಿರುವಂತೆ ಮನುಷ್ಯರಿಗೂ ದೇವತೆಗಳಿಗೂ ಪರಸ್ಪರ ಸಹಾಯವಿರುವುದು. ನಾವು ಕೊಡುವ ಅರ್ಘ್ಯವು ಯಾವರೀತಿ ಸೇರುವುದೆಂದರೆ, ಮಂತ್ರದಿಂದ ಅಭಿಮಂತ್ರಿಸುವ ಶಕ್ತಿ ಮತ್ತು ಅಧಿಕಾರಿಯ ಮನಶ್ಶಕ್ತಿಗಳೆರಡೂ ಸೇರಿ ಅದೃಶ್ಯಪ್ರಪಂಚದಲ್ಲಿ ಒಂದು ಚಲನ ಪ್ರಾರಂಭವಾಗಿ ಪ್ರಪಂಚದಲ್ಲೆಲ್ಲಾ ವ್ಯಾಪಿಸಿರುವ ವಿದ್ಯುಚ್ಛಕ್ತಿಯ ಅಲೆಗಳ ಮೂಲಕ ಉದ್ದಿಶ್ಯಸ್ಥಳವನ್ನುಸೇರಿ ಉದ್ದೇಶಪಟ್ಟ ಕಾರ್ಯವನ್ನು ಮಾಡುವುದು.

ವಿದ್ಯುಚ್ಛಕ್ತಿಯ ತಾರತಮ್ಯಾನುಸಾರ ದೀಪದ ಪ್ರಕಾಶ ಉಂಟಾಗುವಂತೆ ಅಭಿಮಂತ್ರಿಸುವ ಶಕ್ತಿ ಮತ್ತು ಅಧಿಕಾರಿಯಲ್ಲಿನ ಪರಿಶುದ್ಧತೆ ಕರ್ಮನಿಷ್ಠೆ ಭಕ್ತಿ ಜ್ಞಾನಗಳಿಂದ ಉತ್ಪನ್ನವಾಗುವ ಮನಶ್ಶಕ್ತಿಗಳಿದ್ದಂತೆ ಅದೃಶ್ಯಪ್ರಪಂಚದಲ್ಲಿ ಚಲನಶಕ್ತಿಯುಂಟಾಗಿ ಕಾರ್ಯವಾಗುವುದು. ಕೊನೆಗೆ ತೀವ್ರತಮವಾದ ಚಲನೆಯನ್ನೂ ಸಹ ಉಂಟುಮಾಡುವಷ್ಟು ಶಕ್ತಿಯನ್ನು ಮನುಷ್ಯನು ಪಡೆಯಬಹುದು. ತಂತಿ ಇಲ್ಲದೆ ವರ್ತಮಾನಕೊಡುವ ವಿದ್ಯುಚ್ಛಕ್ತಿಯು ಮನುಷ್ಯನಲ್ಲಿದ್ದೇ ಇದೆ. ಆದರೆ ಅದನ್ನು ಪ್ರವುಲ್ಲತೆ ಮಾಡಿಕೊಳ್ಳಬೇಕಾಗಿದೆ. ಆದುದರಿಂದ ಅಧಿಕಾರಿಯು ಸೂರ್ಯನಿಗೆ ಸಹಾಯಮಾಡುವಷ್ಟು ಶಕ್ತಿ ಇಲ್ಲವೆಂದು ಭಾವಿಸಬಾರದು. ಇದು ಅನ್ಯೋನ್ಯ ಸಹಾಯಕವಾದ ಕರ್ಮವಾಗಿರುವುದರಿಂದಲೇ ಅರ್ಘ್ಯವನ್ನು ಕೊಡುವುದು 'ಉತ್ತಮವಾದ ದಾನ' ವೆಂದು ವೇದದಲ್ಲಿ ಹೇಳಿದೆ. ಆದುದರಿಂದಲೇ ಇದಕ್ಕೆ ಅರ್ಘ್ಯಪ್ರದಾನವೆಂದು ಹೆಸರುಬಂದಿದೆ. ಅದರಂತೆ ತಪಸ್ವಿಗಳೂ ತತ್ವವೇತ್ತರೂ ಅನಾದಿಕಾಲದಿಂದಲೂ ಆಚರಿಸಿಕೊಂಡು ಬರುತ್ತಿರುವರು.

ಉಪಕಾರ ಮಾಡಿದವರಿಗೆ ಪ್ರತ್ಯುಪಕಾರಮಾಡುವಂತೆ ಅಧಿಕಾರಿಯು ಈ ಕರ್ಮಮಾಡುವುದರಿಂದ ಸೂರ್ಯಭಗವಂತನು ಅಧಿಕಾರಿಗೆ ತಪಶ್ಶಕ್ತಿಯನ್ನು ಅನುಗ್ರಹಿಸುವನು ಮತ್ತು ಕಾಲಾನುಗುಣವಾಗಿ ವೃಷ್ಟಿ ಶಾಖಗಳನ್ನು ಕೊಟ್ಟು ಲೋಕಕ್ಕೂ ಸಹಾಯಕನಾಗಿರುತ್ತಾನೆ. ಅಲ್ಲದೆ ತನಗೆ ಸಹಾಯಕವಾದ ಅರ್ಘ್ಯಪ್ರದಾನದ ತತ್ವದಂತೆ ಅಧಿಕಾರಿಯು ಅನುಸರಿಸಿದಲ್ಲಿ ರಾಕ್ಷಸಸ್ವರೂಪವಾದ ಅಜ್ಞಾನವನ್ನು ನಿಗ್ರಹಿಸಿ ಪರಮಮಂಗಳಕರವಾದ ಆತ್ಮಸಾಕ್ಷಾತ್ಕಾರವನ್ನು ಹೊಂದಲು ಅಧಿಕಾರಿಗೆ ಸೂರ್ಯಭಗವಂತನು ಸಹಾಯಕನಾಗುವನು.

[ಅರ್ಘ್ಯಪ್ರದಾನದ ತತ್ವವು ಬಹು ಅಮೋಘವಾದುದು. ಇದು ತಾರಕೋಪದೇಶದ ತತ್ವವಾಗಿರುವುದು. ಶ್ರೀಮದ್ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಸೇತುಬಂಧನ, ಲಂಕೆಯ ಮುತ್ತಿಗೆ, ವಿಭೀಷಣನಹೆಂಡತಿ ಸರಮೆಯು ಸೂರ್ಯೋಪಾಸನೆಮಾಡೆಂದು ಸೀತಾದೇವಿಗೆ ಹೇಳಿದುದು ಕುಂಭಕರ್ಣನವಧೆ, ಆದಿತ್ಯಹೃದಯೋಪದೇಶ, ಶ್ರೀರಾಮಚಂದ್ರನಿಗೆ ಸೂರ್ಯನು ಪ್ರತ್ಯಕ್ಷವಾದ ಪ್ರಕರಣಗಳಲ್ಲೆಲ್ಲಾ ಈ ವಿಚಾರವು ವಿವರಿಸಿರುವುದು.]

ಸಂಧ್ಯಾಕಾಲಗಳಲ್ಲಿ ಅರ್ಘ್ಯಕೊಡುವುದೆಂದರೆ ಸೂರ್ಯಚಂದ್ರನಾಡಿಗಳ ಸಂಧಿಸ್ಥಳವಾದ ಬ್ರಹ್ಮರಂಧ್ರನಾಡಿಯಲ್ಲಿ ಧ್ಯಾನಮಾಡಲು ಪ್ರಾರಂಭಿಸುವಕಾಲದತತ್ವ.

ಅರ್ಘ್ಯವನ್ನು ಸೂರ್ಯಾಭಿಮುಖವಾಗಿ ಊರ್ಧ್ವಕ್ಕೆಬಿಡುವ ತತ್ವವೇನೆಂದರೆ, ನಮಗೆ ಹೊರಗೆ ಕಾಣುವ ಸೂರ್ಯನ ಅಂಶವಾಗಿ ನಮ್ಮಲ್ಲಿಯೂ ಸೂರ್ಯನಿರುವನು. ಸಂಧಿಸ್ಥಳವಾದ ಮೂಲಾಧಾರಚಕ್ರ ಪ್ರದೇಶದಲ್ಲಿ ಅಧೋಮುಖವಾಗಿರುವ ಶಕ್ತಿಗಳನ್ನು ಊರ್ಧ್ವಮುಖವಾಗಿಮಾಡಿ ತೆಗೆದುಕೊಂಡು ಹೋಗಲು ಓಂಕಾರೋಪಾಸನೆಯನ್ನು ಮಾಡಬೇಕೆಂಬ ತತ್ವವಾಗಿರುವುದು. ಗಾಯತ್ರೀಮಂತ್ರಸ್ವರೂಪ

ವಾದ ಬ್ರಹ್ಮಾಸ್ತ್ರವೇ ಓಂಕಾರೋಪಾಸನೆಯ ಅನುಸಂಧಾನಮಾಡಿ ಧ್ಯಾನಮಾಡುವ ತತ್ವವಾಗಿರುವುದು.

[ಈ ಓಂಕಾರೋಪಾಸನೆಯ ವಿಚಾರವು ರಾಮಾಯಣದ ಅಂತರಾರ್ಥ ಗ್ರಂಥದಲ್ಲಿ ದರ್ಭಶಯನ, ಸೇತುಬಂಧನ, ಪ್ರಕರಣಗಳಲ್ಲಿ ವಿವರವಾಗಿರುವುದು.]

ಮಂದೇಹರೆಂಬ ರಾಕ್ಷಸರೇ (ಮಂದ ; ಈಹ = ಮಂದಸ್ವಭಾವ, ದುರಾಶೆ) ತಮೋಗುಣ ರಜೋಗುಣ ಶಕ್ತಿಗಳಾಗಿರುತ್ತಾರೆ. ಈ ಶಕ್ತಿಗಳ ನಿಗ್ರಹವೇ ನಮ್ಮಲ್ಲಿರುವ ಅಜ್ಞಾನ ನಿವೃತ್ತಿಯ ತತ್ವವಾಗಿರುವುದು. ಅರ್ಘ್ಯವನ್ನುಕೊಟ್ಟ ಅಧಿಕಾರಿಗೆ ಸೂರ್ಯನು ಅನುಗ್ರಹಮಾಡುವುದೇ ಅಧಿಕಾರಿಯು ತನ್ನಲ್ಲಿರುವ ಸೂರ್ಯತೇಜಸ್ಸನ್ನು ಹೊಂದುವ ತತ್ವವಾಗಿರುವುದು.

ಸಂಧ್ಯಾಕಾಲಗಳಲ್ಲಿ ಮೂರಾವೃತ್ತಿ ಅರ್ಘ್ಯಕೊಡುವ ತತ್ವವೇನೆಂದರೆ:— ಮನುಷ್ಯನು ಮಲಿನಸತ್ವ ರಜಸ್ತಮೋಗುಣಗಳಿಂದ ಬಂಧಿಸಲ್ಪಟ್ಟು ಪ್ರಪಂಚಾಭಿಮುಖವಾಗಿ ವಿಷಯವ್ಯಾಪಾರಗಳಲ್ಲಿ ಮಗ್ನನಾಗಿರುತ್ತಾನೆ. ಈ ಮೂರುಗುಣಗಳನ್ನು ಅತಿಕ್ರಮಿಸಿದಲ್ಲದೆ ಮೋಕ್ಷವು ದೊರಕುವುದಿಲ್ಲವೆಂದರೆ ನಿರ್ಗುಣನಾದ ಪರಮಾತ್ಮನು ಲಭ್ಯವಾಗಲಾರನು. ಸತ್ವರಜಸ್ತಮೋಗುಣಗಳಿಲ್ಲದ ಸ್ಥಿತಿಯಾವುದೋ ಅದೇ ಪರಮಾತ್ಮಸ್ವರೂಪ. ಆದುದರಿಂದ ನಿರ್ಗುಣತ್ವವೂ ಅವನಿಗೆ ಸಲ್ಲುವುದು. ಸತ್ಯರೂಪನಾದ ಪರಮಾತ್ಮನೊಬ್ಬನನ್ನು ಹೊಂದಲು ಅಸತ್ಯವಾದ ಗುಣಗಳನ್ನು ಹೋಗಲಾಡಿಸಿಕೊಳ್ಳುವ ಅನುಷ್ಠಾನವೂ ಮೂರುಗುಣಗಳನ್ನು ಪರಿಹರಿಸಿಕೊಳ್ಳಲು ಸಹಾಯಮಾಡುವಂತೆ ಸೂರ್ಯಭಗವಂತನನ್ನು ಪ್ರಾರ್ಥನೆ ಮಾಡುವುದೂ ಅರ್ಘ್ಯಪ್ರದಾನದ ತತ್ವವಾಗಿರುವುದು.

ಮುಖ್ಯವಾಗಿ ಅರ್ಘ್ಯಪ್ರದಾನಾಂತವಾಗಿ ಇರುವ ಮಂತ್ರಗಳ ತತ್ವಾರ್ಥವು ದೇಹಶುದ್ಧಿ, ಚಿತ್ತಶುದ್ಧಿಗೆ ಅತ್ಯವಶ್ಯಕವಾಗಿ ಆಚರಿಸಬೇಕಾದ ಬಹಿರಂಗಸಾಧನೆಗಳಾಗಿವೆ. ಗಾಯತ್ರೀದೇವಿಯ ಉಪಾಸನೆಗೆ ಅರ್ಹತೆಯನ್ನು ಕೊಡುವ ಅಂಗ ಕರ್ಮಗಳಾಗಿಯೂ ಇವೆ.

## ೯ ಸಂಧ್ಯಾದೇವಿಯ ಪ್ರಾರ್ಥನೆ.

### ಬ್ರಾಹ್ಮಣರು ಮತ್ತು ಕ್ಷತ್ರಿಯರು

ಉತ್ತಿಷ್ಠ ದೇವಿ ಗಂತವ್ಯಂ ಪುನರಾಗಮನಾಯಚ ।
ಪ್ರಸೀದ ದೇವಿ ತುಷ್ಟ್ಯರ್ಥಂ ಪ್ರವಿಶ್ಯ ಹೃದಯಂ ಮಮ ॥

ತಾ॥ ಎಲೌ ಸಂಧ್ಯಾದೇವಿಯೆ ! ನೀನು ಎಚ್ಚರಗೊಂಡು ಪ್ರಸನ್ನತೆಯಿಂದ ನನ್ನ ಹೃದಯವೆಂದರೆ ಸಹಸ್ರಾರಕಮಲವನ್ನು ಪ್ರವೇಶಿಸಿ ಸಂತುಷ್ಟಳಾಗಿ ಪುನಃ ಅಲ್ಲಿಂದ ಬರುವವಳಾಗು.

ಶ್ರೀ ಮಧ್ವಾಚಾರ್ಯರು ಸಂಧ್ಯಾಭಾಷ್ಯದಲ್ಲಿ ಮೇಲಿನ ಶ್ಲೋಕಕ್ಕೆ ಬದಲಾಗಿ ಈ ಕೆಳಗಿನ ಶ್ಲೋಕವನ್ನು ಬರೆದಿರುತ್ತಾರೆ.

ಹೃದಯಸ್ಥಾತು ಗಾಯತ್ರೀ ಹೃದ್ಗುಹಾ ಮುಖನಿಸ್ಸೃತಾ |
ಹತ್ವಾ ಹ್ಯಾದಿತ್ಯ ಶತ್ರೂಂಶ್ಚ ವಿಶಸ್ವ ಹೃದಯಂ ಮಮ ||

ತಾ|| ಹೃದಯದಲ್ಲಿರುವ ಗಾಯತ್ರಿಯಾದ ನೀನು, ಹೃದಯ ಗುಹೆಯಿಂದ ಹೊರಟು ಸೂರ್ಯನ ಶತ್ರುಗಳನ್ನು ನಾಶಮಾಡಿ ಪುನಃ ನನ್ನ ಹೃದಯಗುಹೆಯನ್ನು ಸೇರುವವಳಾಗು.

## ವೈಶ್ಯರು

ಗಚ್ಛದೇವಿ ಯಥಾಶೀಘ್ರಂ ರಾಕ್ಷಸಾನಾಂ ವಧಾಯಚ |
ಪ್ರವೇಶಯಿತ್ವಾ ಹೃದಯಂ ಮಮ ತೇಜೋಭಿವರ್ಧಯ ||

ತಾ|| ಓ ದೇವೀ! ರಾಕ್ಷಸರನ್ನು ಸಂಹಾರಮಾಡಲು ಶೀಘ್ರವಾಗಿಹೊರಡು. ನನ್ನ ಹೃದಯದಲ್ಲಿ ಪ್ರವೇಶಿಸಿ ಆತ್ಮತೇಜಸ್ಸನ್ನು ಅಭಿವೃದ್ಧಿಮಾಡು

ತತ್ವ:— ಎರಡು ಅಂಗೈಗಳನ್ನೂ ನಾಗರಹೆಡೆಯಂತೆ ಭುಜಪ್ರದೇಶಕ್ಕೆ ತಂದುಕೊಂಡು (ಅಂಗೈ ಹಿಂಭಾಗ ಭುಜದಕಡೆಗೆ ಇರಬೇಕು) ನಾನು ಮಾಡುವ ಕರ್ಮವನ್ನು ಸಫಲಗೊಳಿಸಲು ಪ್ರಸನ್ನಳಾಗಿ ನನ್ನ ಹೃದಯದಲ್ಲಿ ನಿಂತು ಅನುಗ್ರಹಮಾಡೆಂದು ಸಂಧ್ಯಾದೇವಿಯನ್ನು ಭಕ್ತಿಯಿಂದ ಪ್ರಾರ್ಥಿಸಿ ಬಲಗೈ ಬೆರಳುಗಳನ್ನು ಎದೆಗೆ ಮುಟ್ಟಿಸಬೇಕು.

ಮಂತ್ರದಲ್ಲಿರತಕ್ಕ "ಉತ್ತಿಷ್ಠ" ಎಂಬ ಪದಕ್ಕೆ 'ಏಳು' ಅಥವಾ 'ಎಚ್ಚರಗೊಳ್ಳು' ಎಂದರ್ಥವಾಗುವುದು. ಸಂಧ್ಯಾದೇವಿಯನ್ನು ಎಬ್ಬಿಸುವುದೆಂದರೆ ಕೆಲವರಿಗೆ ಕುಚೋದ್ಯವಾಗಿ ಕಾಣಬಹುದು. ಬಹು ಮಹತ್ತಿನ ರಹಸ್ಯಾರ್ಥವಿರುವುದರಿಂದಲೇ ಮಹರ್ಷಿಗಳು "ಉತ್ತಿಷ್ಠ" ಎಂಬ ಪದವನ್ನು ಪ್ರಯೋಗಿಸಿರುವರು. ಇದರಲ್ಲಿರುವ ತತ್ವಾರ್ಥವೇನೆಂದರೆ, ಸೃಷ್ಟಿಯಾದ ಪ್ರಪಂಚವು ಕೂಡಲೆ ಲಯವಾಗದೆ ಕೆಲವು ಕಾಲ ವ್ಯಾಪಾರನಡೆಯಲು ಸೃಷ್ಟಿಯಾದುದನ್ನು ಯಾವುದೋ ಒಂದು ಶಕ್ತಿಯು ಧರಿಸಿಕೊಂಡಿರಬೇಕು. ಹೀಗೆ ಪ್ರಪಂಚವನ್ನು ಧರಿಸಿಕೊಂಡಿರುವುದೇ ಸಾಕ್ಷಾತ್ ಆದಿಶೇಷನ ಶಕ್ತಿಯು. ಪ್ರಪಂಚವು ಇರುವವರೆಗೆ ತನ್ನ ಸ್ಥಾನದಿಂದ ಚಲಿಸದಂತೆ ಆಕರ್ಷಣಾಶಕ್ತಿಯಿಂದ ಆದಿಶೇಷಶಕ್ತಿಯು ಉತ್ತರ ಮೇರುವಿನಲ್ಲಿದ್ದುಕೊಂಡು ಪ್ರಪಂಚನನ್ನು ಧರಿಸಿರುವುದು. ಬ್ರಹ್ಮಾಂಡದ ಸಕಲ ತತ್ವಗಳನ್ನೂ ಒಳಗೊಂಡಿರುವ ಈ ದೇಹದಲ್ಲಿ ಪರಾಶಕ್ತಿಯು ದೇಹಧಾರಣೆಗೆ ಮುಖ್ಯವಾಗಿರುವ ನಾಗಶಕ್ತಿಯ ಅವತಾರತಾಳಿ ನಮ್ಮ ಸೊಂಟದಲ್ಲಿ ಚಂದ್ರಸೂರ್ಯನಾಡಿಗಳು ಸಂಗಮವಾಗುವ ಬ್ರಹ್ಮರಂಧ್ರನಾಡಿಗೆ ಬಾಗಿಲಾದ ಮೂಲಾಧಾರಚಕ್ರದಲ್ಲಿ ಬ್ರಹ್ಮರಂಧ್ರನಾಡಿಯ

ದ್ವಾರವನ್ನು ತನ್ನ ಮುಖದಿಂದ ಮುಚ್ಚಿಕೊಂಡು ಸುಖನಿದ್ರೆಗೈಯ್ಯುವಂತೆ ನಿಶ್ಚಲ ಭಾವದಲ್ಲಿರುತ್ತಾಳೆ. ಇವಳೇ ಸಂಧ್ಯಾದೇವಿಯು. ಇವಳಿಗೇ ಕುಂಡಲಿನೀಶಕ್ತಿ, ಪರಾಶಕ್ತಿ, ಭೂಮಾತೆ, ನಾಗಮಾತೆ, ಅರುಂಧತೀ ಮುಂತಾದ ನಾಮಗಳಿರುವವು. ಹಗಲು ರಾತ್ರಿಗಳ ಸಂಧಿಕಾಲವನ್ನು ಹೇಗೆ ಸಂಧ್ಯಾಕಾಲವೆಂದು ಹೇಳಿದೆಯೋ ಹಾಗೆಯೇ ಹಗಲು ರಾತ್ರಿಗಳಿಗೆ ಅಧಿಕಾರಿಗಳಾದ ಸೂರ್ಯ ಚಂದ್ರನಾಡಿಗಳು ನಮ್ಮಲ್ಲಿ ಮೂಲಾಧಾರಚಕ್ರದಲ್ಲಿ ಸಂಧಿಯಾಗಿವೆ. ಇಂತಹ ಸಂಧಿಸ್ಥಳದಲ್ಲಿ ಉತ್ಪನ್ನವಾಗುವ ಶಕ್ತಿಯಾಗಿ ನಾಗಸರ್ಪಾಕಾರವಾಗಿರುವ ಈ ಪರಾಶಕ್ತಿಯೇ ಸಂಧ್ಯಾದೇವಿಯು. ಈ ತತ್ವಕ್ಕೆ "ಕುಂಡಿಲಿನೀನಾಮಪರಾಶಕ್ತಿಃ ಪ್ರತಿಷ್ಠಿತಾ ; ಮುಖೇನಾಚ್ಛಾದ್ಯ ತದ್ವಾರಂ ಪ್ರಸುಪ್ತಾ ಪರಮೇಶ್ವರೀ" ಮುಂತಾದ ಶ್ರುತ್ಯಾಧಾರಗಳಿರುವವು. ಅಲ್ಲದೆ ಈ ಮಂತ್ರದಲ್ಲಿರುವ 'ಉತ್ತಿಷ್ಠ' ಎಂಬ ಪದದ ಸಾರ್ಥಕತೆಯನ್ನು ದೃಢೀಕರಿಸಲು "ಆಧಾರಶಕ್ತಿ ನಿದ್ರಾಯಾಂ ವಿಶ್ವಂಭವತಿ ನಿದ್ರಯಾ" ಅಂದರೆ ಸಂಧ್ಯಾಶಕ್ತಿಯು ನಿಶ್ಚಲತೆಯ ಸ್ವರೂಪವಾದ ನಿದ್ರೆಯಲ್ಲಿರುವವರೆಗೆ ಪ್ರಪಂಚವು ಪ್ರಪಂಚವ್ಯಾಪಾರರೂಪವಾದ ನಿದ್ರೆಯಲ್ಲಿರುವುದು, ಎಂಬ ಯೋಗಶಿಖೋಪನಿಷದಾಧಾರವೂ ಇರುವುದು.

ಈ ಶಕ್ತಿಯು ಮೋಕ್ಷದ ಬಾಗಿಲಾದ ಬ್ರಹ್ಮರಂಧ್ರನಾಡಿಯ ಬಾಗಿಲನ್ನು ಮುಚ್ಚಿಕೊಂಡು ನಿಶ್ಚಲವಾಗಿರುವುದರಿಂದ ಪಾಪಕಾರ್ಯಗಳನ್ನುಂಟುಮಾಡಿಸುವ ರಾಕ್ಷಸಸ್ವರೂಪವಾದ ಅಜ್ಞಾನವನ್ನು ನಿವೃತ್ತಿಮಾಡಿಕೊಳ್ಳಲು ಖಂಡಿತವಾಗಿಯೂ ಸಾಧ್ಯವಿಲ್ಲ. ಈ ತತ್ವಕ್ಕೆ "ಚಂದ್ರಾರ್ಕಮಧ್ಯಮಾಶಕ್ತಿ ರ್ಯತ್ರಸ್ಥಾ ತತ್ರಬಂಧನಂ" ಎಂಬ ಶ್ರುತ್ಯಾಧಾರವೂ ಇರುವುದು. ಆದುದರಿಂದ ಎದ್ದು (ಉತ್ಥಾಪನೆಯಾಗಿ) ಬ್ರಹ್ಮರಂಧ್ರದ ಬಾಗಿಲನ್ನು ತೆಗೆದು ದಾರಿಯಾದ ಸುಷುಮ್ನಾನಾಡಿಯ ಮೂಲಕ ಶಿರಸ್ಸಿನಲ್ಲಿರುವ ಬ್ರಹ್ಮರಂಧ್ರಕ್ಕೆ ಹೋಗೆಂದು ಅತ್ಯಂತ ಭಕ್ತಿಯಿಂದ ಸಂಧ್ಯಾದೇವಿಯನ್ನು ಪ್ರಾರ್ಥಿಸಬೇಕು. ಅಲ್ಲದೆ ಈ ಪ್ರಾರ್ಥನೆಯಜೊತೆಗೆ ಅಧಿಕಾರಿಯು ಸಂಧ್ಯಾದೇವಿಯು ಉತ್ಥಾಪನೆಯಾಗುವ ಅನುಷ್ಠಾನವನ್ನೂ ಮಾಡಬೇಕು. ಉತ್ಥಾಪನೆಯಾಗುವ ಕರ್ಮವನ್ನು ಮಾಡಬೇಕೆಂಬುದನ್ನು ಸೂಚಿಸುವ ಉದ್ದೇಶದಿಂದಲೇ ಈ ಮಂತ್ರವು ಈ ಸ್ಥಳದಲ್ಲಿರುವುದು. ಭಕ್ತಿಯಿಂದ ಮಾಡುವ ಪ್ರಾರ್ಥನೆಗೆ ಸಂತುಷ್ಟಳಾಗಿ ಉತ್ಥಾಪನೆಕಾರ್ಯವಾದ ಶಕ್ತಿಚಲನಪ್ರಾಣಾಯಾಮ, ಓಂಕಾರೋಪಾಸನೆಗಳಲ್ಲಿ ದೇವಿಯು ಅನುಗ್ರಹಮಾಡಿ ಕಾರ್ಯವು ಸುಲಲಿತವಾಗುವಂತೆ ಅನುಗ್ರಹಿಸುತ್ತಾಳೆ. ಸಂಧ್ಯಾದೇವಿಯಾದ ಕುಂಡಲಿನೀ ಶಕ್ತಿಯನ್ನು ಪ್ರಾರ್ಥಿಸುವ ಮತ್ತು ಪ್ರಬೋಧೆಮಾಡುವ ಕಾರ್ಯವೂ ಎಂತಹ ಫಲವನ್ನುಂಟುಮಾಡುವುದೆಂದರೆ "ಕುಂಡಲೀ ಬೋಧಕಂ ಪುಣ್ಯಂ ಪಾಪಘ್ನಂ ಶುಭದಂ ಸುಖಂ" ಎಂಬ ಶ್ರುತ್ಯಾಧಾರದಂತೆಯೇ ಫಲವುಂಟಾಗುವುದು

ವಾಯುಪುತ್ರನಾದ ಹನುಮಂತನು "ನಮ್ರಭಾವದಿಂದ ಕೈಜೋಡಿಸಿಕೊಂಡು ಎಲೌದೇವಿಯೆ! ನಿನಗೆ ನಮಸ್ಕರಿಸುತ್ತೇನೆ" ಎಂದು ನಮಸ್ಕಾರಮಾಡಿರುತ್ತಾನೆ. ಅಲ್ಲದೆ ಆ ನಾಗಮಾತೆಯನ್ನು ದೇವತೆಗಳು ಕೂಡ ಸತ್ಕರಿಸಿರುವಾಗ ನಾವು ಭಕ್ತಿಯಿಂದ ಪ್ರಾರ್ಥಿಸಲೇಬೇಕು. ಇವಳೇ ನಿವೃತ್ತಿಮಾರ್ಗಸ್ವರೂಪಿಣಿ. ಮಂತ್ರದಲ್ಲಿನ "ಉತ್ತಿಷ್ಠ" ಎಂಬ ಪದದ ತತ್ತ್ವಾರ್ಥವನ್ನು ತಿಳಿಸಲಾಯಿತು.

[ಇದರ ವಿಚಾರವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಹನುಮಂತನು ಸುರಸಾದೇವಿಯ ಅನುಗ್ರಹಕ್ಕೆ ಪಾತ್ರನಾದ ಪ್ರಕರಣದಲ್ಲಿ ಅನೇಕ ಶ್ರುತಿಪ್ರಮಾಣಗಳೊಡನೆ ಬಂದಿರುವುದು]

ನನ್ನ ಹೃದಯವನ್ನು ಪ್ರವೇಶಿಸು (ಪ್ರವಿಶ್ಯ ಹೃದಯಂ ಮಮ) ಎಂಬುದರ ತತ್ತ್ವಾರ್ಥವೇನೆಂದರೆ:— ಮೂಲಾಧಾರ ಚಕ್ರದಲ್ಲಿರುವ ಸಂಧ್ಯಾದೇವಿಯು ಎದ್ದು ಬ್ರಹ್ಮರಂಧ್ರನಾಡಿಯಲ್ಲಿ ಪ್ರವೇಶಿಸಿ ದಾರಿಯಲ್ಲಿರುವ ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾಚಕ್ರಗಳ ರೂಪವಾದ ಬಾಗಿಲುಗಳನ್ನು ತೆರೆದು ಹೃದಯವೆಂದರೆ ಸಹಸ್ರಾರಕಮಲಸ್ಥಿತ ಪರಬ್ರಹ್ಮನಲ್ಲಿ ಲೀನವಾಗುವುದೇ ಹೃದಯವನ್ನು ಪ್ರವೇಶಿಸು ಎಂಬುದರ ತತ್ತ್ವವಾಗಿರುವುದು. ಸಹಸ್ರಾರಕಮಲಕ್ಕೆ ಬ್ರಹ್ಮರಂಧ್ರ, ಹೃದಯ, ಬ್ರಹ್ಮಪುರಿ, ಓಂಕಾರಸ್ಥಾನ, ವೈಕುಂಠ, ಕೈಲಾಸ ಗಳೆಂಬ ಹೆಸರುಗಳು ಸಲ್ಲುವುದು. ಈ ಶಕ್ತಿಯು ಮೂಲಾಧಾರಚಕ್ರದಿಂದೆದ್ದು ಮೇಲಕ್ಕೆ ಹೋದಂತೆ ಅಜ್ಞಾನಶಕ್ತಿಗಳು ಧ್ವಂಸವಾಗುತ್ತಾ ಬರುವುವು. ಸಂಧ್ಯಾ ದೇವಿಯು ಸಹಸ್ರಾರಕಮಲವನ್ನು ಸೇರುವ ಕಾಲವೇ ಅಜ್ಞಾನವೆಲ್ಲಾ ತೊಲಗಿ ಆತ್ಮಸಾಕ್ಷಾತ್ಕಾರವಾಗುವ ತತ್ತ್ವವಾಗಿರುವುದು. ಈ ಸ್ಥಿತಿಗೆ ನಿರ್ವಿಕಲ್ಪಸಮಾಧಿ, ಬ್ರಹ್ಮಾನಂದಸ್ಥಿತಿ, ಜೀವನ್ಮುಕ್ತಿಸ್ಥಿತಿ, ಅದ್ವೈತಸಿದ್ಧಿ, ಓಂಕಾರಸ್ವರೂಪ, ವಿಷ್ಣು ಸಾಯುಜ್ಯ, ರಾಜಯೋಗಗಳೆಂಬ ಹೆಸರುಗಳೂ ಉಂಟು. ಈ ಸ್ಥಿತಿಯಲ್ಲಿಯೇ ಸಂಧ್ಯಾದೇವಿಗೆ ಸಂತುಷ್ಟತೆಯಾಗುವುದರಿಂದ ಮಂತ್ರದಲ್ಲಿ "ತುಷ್ಟ್ಯರ್ಥಂ" ಎಂಬ ಪದವಿರುವ ತತ್ತ್ವವಾಗಿದೆ.

ಸಂತುಷ್ಟಳಾಗಿ ಪುನಃ ಅಲ್ಲಿಂದ ಬರುವವಳಾಗು (ಪುನರಾಗಮನಾಯಚ) ಎಂಬುದರ ತತ್ತ್ವವೇನೆಂದರೆ:— ಬ್ರಹ್ಮರಂಧ್ರಕ್ಕೆ ಪ್ರವೇಶಿಸಿ ಸಂತುಷ್ಟಳಾಗುವುದೇ ಬ್ರಹ್ಮಾನಂದಸ್ಥಿತಿ ಅಥವಾ ತನ್ನನ್ನು ತಾನು ಮರೆಯುವಂತಹ ನಿರ್ವಿಕಲ್ಪಸಮಾಧಿ ಎನಿಸಿಕೊಳ್ಳುವುದೆಂದು ಮೇಲೆ ತಿಳಿಸಿತಷ್ಟೆ! ನಿರ್ವಿಕಲ್ಪಸಮಾಧಿಯಿಂದ ಬಹಿರ್ಮುಖಿ ವಾಗುವ ತತ್ತ್ವವೇ ಪುನಃ ಬರುವವಳಾಗು ಎಂಬುದರ ತತ್ತ್ವವಾಗಿರುವುದು. ನಿರ್ವಿ ಕಲ್ಪಸಮಾಧಿಸ್ಥಿತಿಯು ಕೆಲವರಿಗೆ ಕ್ಷಣಕಾಲ ಲಭ್ಯವಾಗುವುದು ಮತ್ತೆ ಕೆಲವರಿಗೆ ದೀರ್ಘಕಾಲ ಲಭ್ಯವಾಗುವುದು. ಆದುದರಿಂದ ದೇಹಪತನದವರೆಗೆ ಬಹಿರ್ಮುಖಿ ವಾಗಿರಲೂ ಬಹುದು.

**[ಈ ವಿಚಾರವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಸೀತಾದೇವಿಯು ಅಗ್ನಿಪ್ರವೇಶ ಮಾಡಿ ಹೊರಕ್ಕೆ ಬಂದುದು ಮೊದಲು ಪಟ್ಟಾಭಿಷೇಕವಾಗುವವರೆಗಿನ ತತ್ವವಾಗಿರುವುದು]**

ಸಂಧ್ಯಾದೇವಿಯು 'ಭೂ'ತತ್ವವಾದ ಮೂಲಾಧಾರ ಚಕ್ರದಲ್ಲಿರುವ ಮತ್ತು ಸಮಾಧಿಯಿಂದ ಬಹಿರ್ಮುಖವಾಗುವ ಕಾಲದಲ್ಲಿ ಹೃದಯದಿಂದಿಳಿದು ಪುನಃ ಸ್ವಸ್ಥಾನಕ್ಕೆ ಬರುವ ತತ್ವಗಳನ್ನು ಉಪಸ್ಥಾನದಲ್ಲಿ ಬರುವ "ಉತ್ತಮೇ ಶಿಖರೇ ಜಾತೇ" ಎಂಬ ಮಂತ್ರದ ತತ್ವಾರ್ಥವು ದೃಢೀಕರಿಸುವುದು. ಅಲ್ಲದೆ ಸಂಧ್ಯಾದೇವಿಯ ವಿಚಾರವು ಪ್ರಥಮ ಪ್ರಕರಣದಲ್ಲಿಯೂ ಬಂದಿರುವುದು. ಪರಶಿವನು ಕಂಠದಲ್ಲಿ ಧರಿಸಿರುವ ಸರ್ಪವೂ, ನಾರಾಯಣನಿಗೆ ಹಾಸಿಗೆಯಾಗಿರುವ ಸರ್ಪವೂ ಈ ಸಂಧ್ಯಾದೇವಿಯಾದ ನಾಗಶಕ್ತಿಯ ತತ್ವದುದು. ಕ್ಯಾರೆಹಾವು ಗಂಡು, ನಾಗರಹಾವು ಹೆಣ್ಣು. ಭಾರತೀಯರೆಲ್ಲಾ ಪೂಜೆಮಾಡುವ ನಾಗಸರ್ಪವೂ ಸಂಧ್ಯಾದೇವಿಯೇ ಆಗಿರುತ್ತಾಳೆ. ನಾಗಮಾತೆಯಾದ ಕುಂಡಲಿನೀಶಕ್ತಿಯೇ ಸಂಧ್ಯಾದೇವಿಯೆಂಬ ತತ್ವವನ್ನು ಅನುಸರಿಸಿಯೇ ಅಂಗೈಗಳನ್ನು ಭುಜಪ್ರದೇಶಕ್ಕೆ ತಂದು ನಾಗರಹೆಡೆಯಂತೆ ಮಾಡಿಕೊಂಡು ಸಂಧ್ಯಾದೇವಿಯನ್ನು ಪ್ರಾರ್ಥನೆಮಾಡುವುದಾಗಿದೆ.

## ೧೦ ಆತ್ಮ ಪ್ರದಕ್ಷಿಣೆ.

### ಬ್ರಾಹ್ಮಣರು

ಅಸಾವಾದಿತ್ಯೋಬ್ರಹ್ಮಾ ಬ್ರಹ್ಮೈವಸತ್ಯಂ ಬ್ರಹ್ಮೈವಾಹಂ |
ಯೋಽಸಾವಾದಿತ್ಯೋ ಹಿರಣ್ಮಯಃ ಪುರಷಸ್ಸಏವಾಹಮಸ್ಮಿ ||

ತಾ|| ಕೆಲವರು "ಅಸಾವಾದಿತ್ಯೋಬ್ರಹ್ಮಾ" ಎಂಬಷ್ಟನ್ನುಮಾತ್ರ ಹೇಳುತ್ತಾರೆ. ಮತ್ತೆ ಕೆಲವರು ಈ ಮಂತ್ರವನ್ನು ಪೂರ್ಣವಾಗಿ ಹೇಳುತ್ತಾರೆ.

ನಮಗೆ ಗೋಚರವಾಗುವ ಆದಿತ್ಯನು ಪರಬ್ರಹ್ಮಸ್ವರೂಪನು. ಆದಿತ್ಯನು ತೇಜೋರೂಪಿಯಾದ ಪರಬ್ರಹ್ಮನಿಗಿಂತಲೂ ಭಿನ್ನನಲ್ಲ ಆ ಪರಬ್ರಹ್ಮಸ್ವರೂಪವೇ ನಾನಾಗಿರುವೆನು. ಎಂದರ್ಥ.

### ಕ್ಷತ್ರಿಯರು

ಸೇತುಂ ಭೋಗಿಶಯಂ ವಿಷ್ಣುಂ ದ್ವಾರಕಾಂ ಬದರೀವನಂ |
ಶ್ರೀಪರ್ವತಂ ಗಜಾರಣ್ಯಂ ಸ್ಮರತಾಂ ಭೂಪ್ರದಕ್ಷಿಣಂ ||

ತಾ|| ರಾಮಸೇತುವನ್ನೂ ಶೇಷಶಾಯಿಯಾದ ಮಹಾವಿಷ್ಣುವನ್ನೂ ದ್ವಾರಕಾಕ್ಷೇತ್ರವನ್ನೂ ಬದರಿಕಾಶ್ರಮವನ್ನೂ ಶ್ರೀಪರ್ವತವನ್ನೂ ಗಜಾರಣ್ಯಕ್ಷೇತ್ರವನ್ನೂ ಸ್ಮರಿಸಿದವರಿಗೆ ಭೂಪ್ರದಕ್ಷಿಣೆಮಾಡಿದ ಫಲ ಉಂಟಾಗುವುದು.

ಅಸಾವಾದಿತ್ಯೋಬ್ರಹ್ಮ | ತೇಜೋಽಸಿ ತೇಜೋಮಯಿಧೇಹಿ ||

ನಮಗೆ ಗೋಚರವಾಗುವ ಆದಿತ್ಯನು ಪರಬ್ರಹ್ಮಸ್ವರೂಪನು. ತೇಜ ಸ್ವರೂಪನು. ಅಂತಹ ತೇಜಸ್ಸನ್ನು ನನ್ನಲ್ಲಿ ಅನುಗ್ರಹಿಸು.

## ವೈಶ್ಯರು

"ಅಯಂ ಭಾನುರೇವ ಬ್ರಹ್ಮಾ" ನಮಗೆ ಗೋಚರವಾಗುವ ಸೂರ್ಯನು ಪರಬ್ರಹ್ಮಸ್ವರೂಪನು.

ತತ್ವ॥ ಸೂರ್ಯಭಗವಂತನು ಪ್ರಪಂಚವನ್ನು ಬೆಳಗುತ್ತ ಸರ್ವಪ್ರಾಣಿಗಳಿಗೂ ಕರ್ಮಪ್ರೇರಕನಾಗಿರುವನು. ಆದುದರಿಂದ ಇವನೇ ಸಾಕ್ಷಾತ್ ಪರಮಾತ್ಮನೆಂದೂ ಎಲ್ಲಿ ನೋಡಿದರೂ ಈ ತೇಜೋರೂಪ ಹೊರತು ಮತ್ತಾವುದೂ ಇಲ್ಲವೆಂದು ಭಾವಿಸಿ ಸೂರ್ಯಭಗವಂತನನ್ನು ಸ್ಮರಿಸುತ್ತ ಭಕ್ತಿಯಿಂದ ನೀರನ್ನು ಸುತ್ತಲೂ ಸುತ್ತುಕಟ್ಟುತ್ತಾ ತನ್ನನ್ನು ತಾನೇ ಪ್ರದಕ್ಷಿಣೆ ಮಾಡಿಕೊಳ್ಳಬೇಕು. ತನ್ನನ್ನೇ ತಾನು ಪ್ರದಕ್ಷಿಣೆ ಮಾಡಿಕೊಳ್ಳುವ ತತ್ವವೇನೆಂದರೆ- ಪಿಂಡಾಂಡವಾದ ಮನುಷ್ಯನಲ್ಲಿಯೂ ಬ್ರಹ್ಮಾಂಡದ ಸಕಲತತ್ವಗಳೂ ಇರುವುದರಿಂದ ಭೂ ಪ್ರದಕ್ಷಿಣೆಮಾಡಿದ ಫಲವೂ ಬರುವುದು. ಅಲ್ಲದೆ ತೇಜೋಮಯನಾದ ಸೂರ್ಯಭಗವಂತನು ನಮ್ಮಲ್ಲಿಯೂ ಇರುವನು. ಹೊರಗೆ ಕಾಣುವ ಸೂರ್ಯಭಗವಂತನ ಅಂಶವಾಗಿ ನಮ್ಮಲ್ಲಿರುವ ಸೂರ್ಯನನ್ನು ಅಂತರ್ಮುಖದಲ್ಲಿ ದರ್ಶನಮಾಡಿ ಅವನ ಅನುಗ್ರಹಕ್ಕೂ ಪಾತ್ರರಾಗಿ ನಮ್ಮಲ್ಲಿರುವ ಅಜ್ಞಾನದ ಪ್ರಧಾನಶಕ್ತಿಯನ್ನು ನಿಗ್ರಹಿಸಿಕೊಳ್ಳಬೇಕು.

ಅಂಧಕಾರವಿದ್ದರೆ ಸೂರ್ಯನನ್ನು ನೋಡಲಾರೆವು. ಇದರಂತೆ ನಮ್ಮಲ್ಲಿರುವ ಸೂರ್ಯನನ್ನು ನೋಡಲು ಅರ್ಘ್ಯಪ್ರದಾನದ ತತ್ವದಂತೆ ಓಂಕಾರೋಪಾಸನೆಯಿಂದ ಸಮಾಧಿಯನ್ನು ಅಭ್ಯಾಸಮಾಡಿ ಅಜ್ಞಾನಶಕ್ತಿಗಳನ್ನು ನಿಗ್ರಹಿಸುತ್ತಾ ಬಂದರೆ ಅಧಿಕಾರಿಯು ತನ್ನಲ್ಲಿರುವ ಸೂರ್ಯನ ಪೂರ್ಣತೇಜಸ್ಸಿನಲ್ಲಿರುತ್ತಾನೆ. ಆ ಕಾಲದಲ್ಲಿ ಸೂರ್ಯತೇಜೋಽಂತರ್ಗತನಾಗಿ ಸಾಕ್ಷಾತ್ ಪರಮಾತ್ಮನಿರುತ್ತಾನೆಂಬ ಭಾವನೆಯುಂಟಾಗಬೇಕೆಂಬುದೇ "ಅಸಾವಾದಿತ್ಯೋಬ್ರಹ್ಮ"ದ ತತ್ವವಾಗಿರುವುದು. ಅಲ್ಲದೆ ಅಂತಹ ಸೂರ್ಯಪರಮಾತ್ಮನನ್ನು ತನ್ಮಯತ್ವದಿಂದ ಧರಿಸಿಕೊಂಡು ಸಮಾಧಿಯನ್ನು ಅಭ್ಯಾಸಮಾಡದಿದ್ದರೆ ಸಮಾಧಿಯಲ್ಲಿ ನಿಲುಗಡೆಯಾಗದೆ ಬಹಿರ್ಮುಖವಾಗಲೇ ಬೇಕಾಗುವುದು. ಆದುದರಿಂದ ಆ ಕಾಲದಲ್ಲಿ ಸ್ವಾತ್ಮಭಾವನೆಯಿಂದ ಸಮಾಧಿಯ ಅಭ್ಯಾಸಮಾಡಬೇಕೆಂಬುದೇ "ಯೋಽಸಾವಾದಿತ್ಯೋ ಹಿರಣ್ಮಯಃ ಪುರುಷಸ್ಸ ಏವಾಹಮಸ್ಮಿ" ಎಂಬುದರ ತತ್ವಾರ್ಥವಾಗಿರುವುದು.

[ಈ ಮಂತ್ರದ ತತ್ವವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಶ್ರೀರಾಮನಿಗೆ ಸೂರ್ಯನು ಪ್ರತ್ಯಕ್ಷನಾದ ಪ್ರಕರಣದಲ್ಲಿರುವುದು.]

## ೧೧ ತರ್ಪಣಂ

### ಬ್ರಾಹ್ಮಣರು— ಬ್ರಹ್ಮತರ್ಪಣಂ

ಪ್ರಾತಸ್ಸಂಧ್ಯಾಯಾಂ :—೧. ಸಂಧ್ಯಾಂತರ್ಪಯಾಮಿ ೨. ಗಾಯತ್ರೀಂತರ್ಪಯಾಮಿ
೩. ರೌದ್ರೀಂತರ್ಪಯಾಮಿ ೪. ನಿಮೃಜೀಂತರ್ಪಯಾಮಿ

ಮಧ್ಯಾಹ್ನೇ :— ೧. ಸಂಧ್ಯಾಂತರ್ಪಯಾಮಿ ೨. ಸಾವಿತ್ರೀಂತರ್ಪಯಾಮಿ
೩. ರೌದ್ರೀಂತರ್ಪಯಾಮಿ ೪. ನಿಮೃಜೀಂತರ್ಪಯಾಮಿ

ಸಾಯಂಕಾಲೇ :— ೧. ಸಂಧ್ಯಾಂತರ್ಪಯಾಮಿ ೨. ಸರಸ್ವತೀಂತರ್ಪಯಾಮಿ
೩. ವೈಷ್ಣವೀಂತರ್ಪಯಾಮಿ ೪. ನಿಮೃಜೀಂತರ್ಪಯಾಮಿ

ಕೆಲವರು ಮೇಲಿನ ಸಂಪ್ರದಾಯದಂತೆ ಮಾಡುತ್ತಾರೆ. ಕೆಲವರು ಸಂಧ್ಯಾ ಕರ್ಮದಲ್ಲಿ ತರ್ಪಣವನ್ನೇ ಕೊಡುವುದಿಲ್ಲ. ಮತ್ತೆ ಕೆಲವರು ಕೆಳಗೆ ಬರೆದಿರುವಂತೆ ತರ್ಪಣವನ್ನು ಕೊಡುತ್ತಾರೆ.

ಶುಕ್ಲ ಪಕ್ಷದಲ್ಲಿ

೧ ಶ್ರೀಕೇಶವಂತರ್ಪಯಾಮಿ ೨ ಶ್ರೀನಾರಾಯಣಂತರ್ಪಯಾಮಿ
೩ ಶ್ರೀಮಾಧವಂತರ್ಪಯಾಮಿ ೪ ಶ್ರೀಗೋವಿಂದಂತರ್ಪಯಾಮಿ
೫ ಶ್ರೀವಿಷ್ಣುಂತರ್ಪಯಾಮಿ ೬ ಶ್ರೀಮಧುಸೂದನಂತರ್ಪಯಾಮಿ
೭ ಶ್ರೀತ್ರಿವಿಕ್ರಮಂತರ್ಪಯಾಮಿ ೮ ಶ್ರೀವಾಮನಂತರ್ಪಯಾಮಿ
೯ ಶ್ರೀ ಶ್ರೀಧರಂತರ್ಪಯಾಮಿ ೧೦ ಶ್ರೀಹೃಷೀಕೇಶಂತರ್ಪಯಾಮಿ
೧೧ ಶ್ರೀಪದ್ಮನಾಭಂತರ್ಪಯಾಮಿ ೧೨ ಶ್ರೀದಾಮೋದರಂತರ್ಪಯಾಮಿ

ಕೃಷ್ಣಪಕ್ಷದಲ್ಲಿ

೧ ಶ್ರೀಸಂಕರ್ಷಣಂತರ್ಪಯಾಮಿ ೨ ಶ್ರೀವಾಸುದೇವಂತರ್ಪಯಾಮಿ
೩ ಶ್ರೀಪ್ರದ್ಯುಮ್ನಂತರ್ಪಯಾಮಿ ೪ ಶ್ರೀಅನಿರುದ್ಧಂತರ್ಪಯಾಮಿ
೫ ಶ್ರೀಪುರುಷೋತ್ತಮಂತರ್ಪಯಾಮಿ ೬ ಶ್ರೀಅಧೋಕ್ಷಜಂತರ್ಪಯಾಮಿ
೭ ಶ್ರೀನಾರಸಿಂಹಂತರ್ಪಯಾಮಿ ೮ ಶ್ರೀಅಚ್ಯುತಂತರ್ಪಯಾಮಿ
೯ ಶ್ರೀಜನಾರ್ದನಂತರ್ಪಯಾಮಿ ೧೦ ಶ್ರೀಉಪೇಂದ್ರಂತರ್ಪಯಾಮಿ
೧೧ ಶ್ರೀಹರಿಂತರ್ಪಯಾಮಿ ೧೨ ಶ್ರೀಕೃಷ್ಣಂತರ್ಪಯಾಮಿ

ಮತ್ತೆ ಕೆಲವರು

ಕೇಶವಂತರ್ಪಯಾಮಿ, ನಾರಾಯಣಂತರ್ಪಯಾಮಿ, ಮಾಧವಂತರ್ಪಯಾಮಿ, ಗೋವಿಂದಂತರ್ಪಯಾಮಿ, ವಿಷ್ಣುಂತರ್ಪಯಾಮಿ, ಮಧುಸೂದನಂತರ್ಪಯಾಮಿ, ತ್ರಿವಿಕ್ರಮಂತರ್ಪಯಾಮಿ, ವಾಮನಂತರ್ಪಯಾಮಿ, ಶ್ರೀಧರಂತರ್ಪಯಾಮಿ,

ಹೃಷೀಕೇಶಂತರ್ಪಯಾಮಿ, ಪದ್ಮನಾಭಂತರ್ಪಯಾಮಿ, ದಾಮೋದರಂತರ್ಪಯಾಮಿ. ಎಂಬದಾಗಿ ಎರಡು ಪಕ್ಷಗಳಲ್ಲಿಯೂ ಕೊಡುತ್ತಾರೆ.

### ಕ್ಷತ್ರಿಯರು

ಮೇಲೆ ಅಂತ್ಯದಲ್ಲಿ ಹೇಳಿರುವ ಕೇಶವಾದಿ ದ್ವಾದಶ ತರ್ಪಣವನ್ನು ಕೊಡುತ್ತಾರೆ.



## ಮಾಧ್ಯಾಹ್ನಿಕ ಸಂಧ್ಯಾ

### ಋಗ್ಯಜುಸ್ಸಾಮಶಾಖಾ ಬ್ರಾಹ್ಮಣರು

### ಆತ್ಮಾರ್ಪಣೆಯ ಮಂತ್ರ

ಆಪಃ ಪುನನ್ತು ಪೃಥಿವೀಂ ಪೃಥಿವೀಪೂತಾ ಪುನಾತುಮಾಂ |
ಪುನನ್ತು ಬ್ರಹ್ಮಣಸ್ಪತಿ ರ್ಬ್ರಹ್ಮಪೂತಾ ಪುನಾತುಮಾಂ ||
ಯದುಚ್ಛಿಷ್ಟ ಮಭೋಜ್ಯಂ ಯದ್ವಾ ದುಶ್ಚರಿತಂ ಮಮ |
ಸರ್ವಂಪುನಂತು ಮಾಮಾಪೋऽಸತಾಂಚ ಪ್ರತಿಗ್ರಹಗ್ಂ ಸ್ವಾಹಾ ||

ಋಕ್ಸಾಮಶಾಖೆಯವರು ಈ ಮಂತ್ರಕ್ಕೆ ಮೊದಲು

ಆಪಃ ಪುನನ್ತ್ವಿತ್ಯಸ್ಯ ಮಂತ್ರಸ್ಯ | ಪೂತಋಷಿಃ | ಪೂತಾದೇವತಾ |
ಅನುಷ್ಟುಪ್ಛಂದಃ| ಆಭ್ಯಂತರಶುಧ್ಯರ್ಥಂ ಅಪಾಂ ಪ್ರಾಶನೇ ವಿನಿಯೋಗಃ||

ಎಂಬುದನ್ನು ಹೇಳುತ್ತಾರೆ.

ತಾ|| ಉದಕಗಳು ಭೂಮಿಯನ್ನು ಪರಿಶುದ್ಧಮಾಡಲಿ. ಭೂಮಿಯು ನನ್ನನ್ನು ಶುದ್ಧಿಮಾಡಲಿ. ವೇದಕ್ಕಧಿಪತಿಯಾದ ಪರಮಾತ್ಮನು ಆಚಾರ್ಯೋಪದಿಷ್ಟವಾದ ಮಂತ್ರ ಅಥವಾ ತತ್ವವನ್ನು ಪರಿಶುದ್ಧಿಮಾಡಲಿ. ಆ ಮಂತ್ರ ಅಥವಾ ತತ್ವವು ಅನುಷ್ಠಾನಮಾಡುವ ನನ್ನನ್ನು ಪರಿಶುದ್ಧನನ್ನಾಗಿ ಮಾಡಲಿ. ಎಂಜಲು ಮೊದಲಾದ ಮತ್ತು ತಿನ್ನಬಾರದ ಪದಾರ್ಥಗಳ ಸೇವನೆಯಿಂದ ಬಂದ ಪಾಪಗಳನ್ನೂ ದುಷ್ಪ್ರತಿಗ್ರಹರೂಪವಾದ ಮತ್ತು ಇತರ ಎಲ್ಲಾ ವಿಧವಾದ ಪಾಪಗಳನ್ನೂ ಭಸ್ಮಮಾಡಿ ನನ್ನನ್ನು ಶುದ್ಧನನ್ನಾಗಿ ಮಾಡಲು ಈ ಉದಕಪ್ರಾಶನವನ್ನು ಪರಮಾತ್ಮನಲ್ಲಿ ಅರ್ಪಿಸುತ್ತೇನೆ.

### ಕ್ಷತ್ರಿಯರು

ಆಪೋ ಭವತ್ಯಶ್ಶುದ್ಧಂ ಮಾಂ ಕುರ್ವಂತು ಸುಖಭೂಮಯಃ| ಭಗವತ್ಪಾದ ಪಂಕೇರುಟ್ ಸ್ಯಂದಿನ್ಯ ಶ್ಶುಭದಾಸ್ಪದಾ || ಪುನಂತ್ವಾಪಸ್ಸದಾ ಪೃಥ್ವೀಂ ಪೂತಾ ಪೃಥ್ವೀಪುನಾತುಮಾಂ| ಪುನಂತು ಬ್ರಹ್ಮಣಸ್ಪತಿ ರ್ವೇದವೇದ್ಯಃ

ಪುನಾತುಮಾಂ || ಪೂತಂ ಯದ್ಬ್ರಹ್ಮ ತತ್ಪೂತಂ ಮಾಂ ಕರೋತು ಶುಭಾವಹಂ | ಉಚ್ಛಿಷ್ಟಂ ಯದಭೋಜ್ಯಂಚ ದುಶ್ಚರಿತ್ರಂ ತಥಾಮಮ || ಪುನನ್ತು ಸರ್ವಂ ಮಾಮಾಪಃ ಪ್ರತಿಗೃಹ್ಣಾಮಿ ಸಾದರಂ ||

ತಾತ್ಪರ್ಯವು ಮೇಲಿನಂತೆಯೇ.

## ವೈಶ್ಯರು

ಜಲಂ ಪುನಾತು ಜಗತೀಂ ಜಗತೀತು ಪುನಾತುಮಾಂ |
ಅಭೋಜ್ಯೋಚ್ಛಿಷ್ಟ ದುರ್ವೃತ್ತಿ ದುರಿತಂ ನಾಶಯೇನ್ಮಮ ||

**ತಾ |** ಜಲವು ಭೂಮಿಯನ್ನು ಶುದ್ಧಿಮಾಡಲಿ. ಪರಿಶುದ್ಧವಾದ ಭೂಮಿಯು ನನ್ನನ್ನು ಶುದ್ಧಿಮಾಡಲಿ. ತಿನ್ನಬಾರದ ಮತ್ತು ಎಂಜಲಾದ ಪದಾರ್ಥಗಳ ಸೇವನೆ ಮೊದಲಾದವುಗಳಿಂದ ಸಂಭವಿಸಿದ ಸಮಸ್ತ ಪಾಪಗಳನ್ನೂ ನಾಶಮಾಡಲಿ.

ತತ್ವ|| ಎಲೈ ಪರಮಾತ್ಮನೆ! ಗುರುವಿನಿಂದ ಪಡೆದಿರತಕ್ಕ ಮಂತ್ರೋಪದೇಶವನ್ನು ಪರಿಶುದ್ಧವಾದದ್ದನ್ನಾಗಿಮಾಡು. ಅಂಥ ಉಪದೇಶವು ನನ್ನನ್ನು ಪರಿಶುದ್ಧನನ್ನಾಗಿ ಮಾಡಲಿ ಎಂಬದಾಗಿ ಶ್ರದ್ಧಾಭಕ್ತಿಯಿಂದ ಪರಮಾತ್ಮನನ್ನು ಪ್ರಾರ್ಥಿಸುತ್ತಾ ಆತ್ಮಾರ್ಪಣೆಗೋಸ್ಕರ ಜಲವನ್ನು ಪಾನಮಾಡಬೇಕು. ಭೋಜನಕ್ಕೆ ಅನರ್ಹವಾದ ಪದಾರ್ಥಗಳು ಮತ್ತು ಎಂಜಲುಗಳನ್ನು ತಿನ್ನುವಿಕೆ, ಅಯೋಗ್ಯರಲ್ಲಿ ದಾನತೆಗೆದುಕೊಳ್ಳುವಿಕೆ, ದುರ್ದಾನಗಳನ್ನು ತೆಗೆದುಕೊಳ್ಳುವಿಕೆ, ದುರಾಚಾರಗಳಲ್ಲಿ ಪ್ರವರ್ತಿಸುವಿಕೆ, ಮುಂತಾದ ಪಾಪಗಳನ್ನು ಪರಿಹರಿಸೆಂದು ಪರಮಾತ್ಮನನ್ನು ಪ್ರಾರ್ಥಿಸುವುದಲ್ಲದೆ ಇಂತಹ ಕೆಟ್ಟಕಾರ್ಯಗಳನ್ನು ನಾವು ಮಾಡದಂತೆ ಎಚ್ಚರಿಕೆಯಿಂದಲೂ ಇರಬೇಕು. ಒಬ್ಬರು ತಿಂದು ಮಿಕ್ಕುದನ್ನು ತಿನ್ನುವುದು ಪಾಪಕಾರ್ಯವಲ್ಲದೆ ಒಬ್ಬರ ರೋಗ ಮತ್ತೊಬ್ಬರಿಗೂ ಬರುವುದರಿಂದ ಇದನ್ನು ಮಾಡಬಾರದು. ಭೋಜನಕ್ಕೆ ಅನರ್ಹವಾದ ಪದಾರ್ಥವೆಂದರೆ ಕ್ರಿಮಿ, ಕೀಟ, ಕೂದಲು, ಕಲ್ಮಷ ಮುಂತಾದವುಗಳು ಇರುವುದು ಮಾತ್ರವಲ್ಲ. ಸತ್ವಾಹಾರವಲ್ಲದ ರಾಜಸ ತಾಮಸ ಸ್ವರೂಪವಾದ ಆಹಾರಪದಾರ್ಥಗಳು ಮತ್ತು ದೇವರಿಗೆ ನಿವೇದನಮಾಡದೆ ಇರುವ ಪದಾರ್ಥಗಳು ಅಭಕ್ಷ್ಯಕ್ಕೆ ಸೇರಿರುವುವು. ಕಾರ, ಹುಳಿ, ಉಪ್ಪು ಇವುಗಳನ್ನು ಅತಿಯಾಗಿ ಉಪಯೋಗಿಸುವುದು ಮತ್ತು ತಂಗಳ ಪದಾರ್ಥ ಮದ್ಯಪಾನ ಮಾಂಸ ಮುಂತಾದವುಗಳೆಲ್ಲಾ ರಾಜಸ ತಾಮಸಗಳನ್ನು ಒಳಗೊಂಡಿರುವುದರಿಂದ ಸೇವಿಸಬಾರದೆಂಬ ತತ್ವಪ್ರತಿಪಾದಕವಾಗಿರುವುದು. ದೇಹಕ್ಕಲ್ಲದೆ ಮನಸ್ಸಿಗೂ ಅಭಕ್ಷ್ಯಭಕ್ಷಣವಿರಬಾರದು. ಮನಸ್ಸಿಗೆ ಕೋಪ ಮತ್ತು ದುರಾಲೋಚನೆಗಳೇ ದುರ್ಭೋಜನವಾಗುವುದು.

**[ಈ ವಿಚಾರವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಕಬಂಧಾಸುರನ ವಧೆಯ ತತ್ವದಲ್ಲಿ ಬಂದಿರುವುದು]**

## ಮಾಧ್ಯಾನ್ಹಿಕಸಂಧ್ಯಾ ಅರ್ಘ್ಯಪ್ರದಾನ
## ಋಕ್ಶಾಖಾ ಬ್ರಾಹ್ಮಣರು

ಆಕೃಷ್ಣೇನೇತ್ಯಸ್ಯ ಮಂತ್ರಸ್ಯ। ಹಿರಣ್ಯಸ್ತೂಪಋಷಿಃ । ಸವಿತಾ ದೇವತಾ। ತ್ರಿಷ್ಟುಪ್ಛಂದಃ । ಮಾಧ್ಯಾನ್ಹಿಕಾರ್ಘ್ಯಪ್ರದಾನೇ ವಿನಿಯೋಗಃ ||
ಆಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂಚ ।
ಹಿರಣ್ಯಯೇನ ಸವಿತಾರಥೇನ ಆದೇವೋಯಾತಿ ಭುವನಾವಿಪಶ್ಯ೯ ||
ಓಂಭೂರ್ಭುವಸ್ಸುವಃ........... ...ಪ್ರಚೋದಯಾತ್|| ಪ್ರಥಮಾರ್ಘ್ಯಮಂತ್ರ ||

ತಾ|| ಕೃಷ್ಣವರ್ಣವಾಗಿರುವ ಅಂತರಿಕ್ಷಮಂಡಲದಲ್ಲಿ ಸುವರ್ಣಮಯವಾದ ರಥವನ್ನೇರಿ ಸಮಸ್ತಲೋಕಕ್ಕೂ ಪ್ರಕಾಶವನ್ನುಂಟುಮಾಡಿ, ದೇವತೆಗಳನ್ನೂ ಮನುಷ್ಯರನ್ನೂ ತಮ್ಮ ತಮ್ಮ ಕರ್ಮಗಳಲ್ಲಿ ನಿಯಮಿಸುತ್ತ ಸಂಚರಿಸುತ್ತಿರುವ ಎಲೈ ಕರ್ಮಸಾಕ್ಷಿಯಾದ ಸೂರ್ಯಭಗವಂತನೇ! ನಿನಗೆ ಈ ಪೂಜ್ಯವಾದ ಅರ್ಘ್ಯವನ್ನು ಅರ್ಪಿಸುತ್ತೇನೆ.

ಹಗ್ಂಸಶ್ಶುಚಿಷ ದ್ವಸುರನ್ತರಿಕ್ಷ ಸದ್ಧೋತಾವೇದಿಷ ದತಿಥಿರ್ದುರೋಣ ಸತ್ । ನೃಷದ್ವರ ಸದೃತ ಸದ್ವ್ಯೋಮ ಸದಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ || (ದ್ವಿತೀಯಾರ್ಘ್ಯ ಮಂತ್ರ)

ತಾ|| ಪರಿಶುದ್ಧವಾದ ಸ್ಥಳ, ಅಂತರಿಕ್ಷ, ಬ್ರಹ್ಮಾಂಡವೆಂಬ ಗೃಹ, ಶ್ರೇಷ್ಠವಾದ ತೀರ್ಥ, ಹೃದಯಕಮಲ, ಯಜ್ಞ, ನೀರು, ಗೋವು, ಪರ್ವತಗಳಲ್ಲಿ ವಾಸಮಾಡುವವನಾಗಿಯೂ ಸಮಸ್ತ ಜಗತ್ತಿಗೂ ವಾಸಸ್ಥಾನವಾಗಿಯೂ ಅಗ್ನಿ ರೂಪನಾಗಿಯೂ ಅಂತರಿಕ್ಷದಲ್ಲಿ ಸೂರ್ಯರೂಪದಿಂದಿರತಕ್ಕವನಾಗಿಯೂ, ಇರುವ ಪರಮಾತ್ಮನು ಉಪಾಸನಾಶಕ್ತಿಯನ್ನು ಅನುಗ್ರಹಿಸಲೆಂದು ಬೇಡಿಕೊಳ್ಳುತ್ತೇನೆ. ಹೀಗೆ ಎರಡು ಅರ್ಘ್ಯಗಳನ್ನು ಕೊಡುತ್ತಾರೆ.

## ಯಜುಶ್ಶಾಖಾ ಬ್ರಾಹ್ಮಣರು

'ಹಗ್ಂಸಶ್ಶುಚಿಷತ್' ಎಂಬ ಮಂತ್ರದಿಂದ ಒಂದು ಅರ್ಘ್ಯವನ್ನೂ ಗಾಯತ್ರೀ ಮಂತ್ರದಿಂದ ದ್ವಿತೀಯಾರ್ಘ್ಯವನ್ನೂ ಕೊಡುತ್ತಾರೆ.

## ಸಾಮಶಾಖಾ ಬ್ರಾಹ್ಮಣರು

ಗಾಯತ್ರೀ ಮಂತ್ರದಿಂದ ಒಂದು ಅರ್ಘ್ಯವನ್ನು ಮಾತ್ರ ಕೊಡುತ್ತಾರೆ. ಪ್ರಾಯಶ್ಚಿತ್ತಾರ್ಘ್ಯಕ್ಕೆ ಈ ಕೆಳಗಿನ ಮಂತ್ರವನ್ನು ಹೇಳುತ್ತಾರೆ.

ಉದ್ಘೇದಭಿ ಶ್ರುತಾಮಘಂ ವೃಷಭಂಸರ್ಯ್ಯಾಪಸಂ । ಅಸ್ತಾರಮೇಷಸೂರ್ಯ ||

## ಕ್ಷತ್ರಿಯರು

ಪ್ರಾತಸ್ಸಂಧ್ಯಾವಂದನೆಯಲ್ಲಿ ಹೇಳಿರುವ ಮಂತ್ರವನ್ನು ಹೇಳಿ ಎರಡಾವೃತ್ತಿ ಅರ್ಘ್ಯವನ್ನು ಕೊಡುತ್ತಾರೆ.

## ವೈಶ್ಯರು

ಯೋದೇವಸ್ಸವಿತಾಸ್ಮಾಕಂ ಧಿಯೋಧರ್ಮಾದಿ ಗೋಚರಾಃ |
ಪ್ರೇರಯೇತ್ತಸ್ಯ ಯದ್ಭರ್ಗ ಸ್ತದ್ವರೇಣ್ಯ ಮುಪಾಸ್ಮಹೇ ||
ಈ ಮಂತ್ರದ ಅರ್ಥವನ್ನು ಗಾಯತ್ರೀಜಪದಲ್ಲಿ ಬರೆದಿದೆ.

ತತ್ವ'| ಮಧ್ಯಾನ್ಹಕಾಲದಲ್ಲಿ ಸೂರ್ಯನು ತನ್ನ ಪೂರ್ಣತೇಜಸ್ಸಿನಿಂದ ದೇದೀಪ್ಯಮಾನನಾಗಿರುವನು. ರಾತ್ರಿ ಹನ್ನೆರಡುಘಂಟೆ ಸಮಯವು ಶುದ್ಧ ತಮಸ್ಸ್ವರೂಪವಾದುದು. ರಾತ್ರಿ ಹನ್ನೆರಡು ಘಂಟೆಯಿಂದ ತಮಸ್ಸು ಕ್ರಮೇಣ ತಗ್ಗುತ್ತಾಬಂದು ಸೂರ್ಯೋದಯಕಾಲಕ್ಕೆ ಸರಿಯಾಗಿ ಸಂಧಿಕಾಲವಾಗುವುದು. ಪ್ರಾತಃಕಾಲದಲ್ಲಿ ತಮಸ್ಸುಹೋಗಿ ಉದಯವಾದ ಸೂರ್ಯನತೇಜಸ್ಸು ಕ್ರಮೇಣ ಅಧಿಕವಾಗುತ್ತಾ ಬಂದು ಮಧ್ಯಾನ್ಹ ಹನ್ನೆರಡು ಘಂಟೆಗೆ ಸರಿಯಾಗಿ ತನ್ನ ಕೇಂದ್ರದಲ್ಲಿ ಉತ್ಕೃಷ್ಟವಾದ ತೇಜಸ್ಸಿನಿಂದ ಬೆಳಗುತ್ತಲಿರುತ್ತಾನೆ. ಅಂದರೆ ಪ್ರಾತಃಕಾಲದಿಂದ ಕಳಾಭಿವೃದ್ಧಿಯಾಗುತ್ತಾ ಮಧ್ಯಾನ್ಹಹನ್ನೆರಡು ಘಂಟೆಗೆ ಕಳಾಪರಿಪೂರ್ಣತೆಯುಂಟಾಗುವುದು. ಅಂದರೆ ಇದೇ ವಿರಾಟ್ ಸ್ವರೂಪದಸ್ಥಿತಿ. ಆದುದರಿಂದ ಕಳಾಪೂರ್ಣನಾಗಿಯೂ ಉತ್ಕೃಷ್ಟವಾದ ತೇಜಸ್ಸಿನಿಂದ ಬೆಳಗುತ್ತಿರುವವನಾಗಿಯೂ ಇರುವ ಸೂರ್ಯಪರಮಾತ್ಮನೇ ! ನಿನ್ನ ಇಂತಹ ತೇಜಸ್ಸ್ವರೂಪವನ್ನು ಉಪಾಸನೆಮಾಡಲು ನನಗೆ ಅನುಗ್ರಹಮಾಡಿ ಶಕ್ತಿಯನ್ನು ದಯಪಾಲಿಸು ಎಂಬದಾಗಿ ಶ್ರದ್ಧಾಭಕ್ತಿಯಿಂದ ಅವನ ಭಾವನೆಯೊಡನೆ ಪ್ರಾರ್ಥಿಸಬೇಕು. ಜ್ಯೋತಿಶ್ಶಾಸ್ತ್ರದಲ್ಲಿ ಸೂರ್ಯನು ತಪಃಕಾರಕನೆಂದರೆ ತಪಶ್ಶಕ್ತಿಯನ್ನುಕೊಡಲು ಯಜಮಾನನು. ಸ್ವಾರ್ಥತೆಯಿಲ್ಲದೆ ಲೋಕಹಿತವನ್ನುಂಟುಮಾಡುವುದಕ್ಕೋಸ್ಕರ ಬ್ರಾಹ್ಮಣನು ತಪಶ್ಶಕ್ತಿಯನ್ನು ಹೊಂದಬೇಕು. ಅಧಿಕಾರಿಯು ತನ್ನ ಅಂತರ್ಮುಖದಲ್ಲಿ ತನ್ನಲ್ಲಿರುವ ಸೂರ್ಯನ ಪೂರ್ಣತೇಜಸ್ಸನ್ನು ಧ್ಯಾನಾಭ್ಯಾಸಬಲದಿಂದಲೂ ಬಹಿಃ ಮಾಡಿದ ಸೂರ್ಯಪ್ರಾರ್ಥನೆಯ ಬಲದಿಂದಲೂ ಹೊಂದಬೇಕು.

---

## ಸಾಯಂ ಸಂಧ್ಯಾ

## ಮಂತ್ರಾಚಮನ

### ಋಗ್ಯಜುಶ್ಶಾಖಾ ಬ್ರಾಹ್ಮಣರು

ಅಗ್ನಿಶ್ಚ ಮಾಮನ್ಯುಶ್ಚ ಮನ್ಯುಪತಯಶ್ಚ ಮನ್ಯುಕೃತೇಭ್ಯಃ | ಪಾಪೇಭ್ಯೋ ರಕ್ಷಂತಾಂ | ಯದಹ್ನಾ ಪಾಪಮಕಾರ್ಷಂ | ಮನಸಾವಾಚಾಹಸ್ತಾಭ್ಯಾಂ | ಪದ್ಭ್ಯಾಮುದರೇಣ ಶಿಶ್ನಾ | ಅಹಸ್ತದ ವಲಂಪತು | ಯತ್ಕಿಂಚ ದುರಿತಂ

ಮಯಿ । ಇದಮಹಂ ಮಾಮಮೃತಯೋನೌ । ಸತ್ಯೇ ಜ್ಯೋತಿಷಿ ಜುಹೋಮಿಸ್ವಾಹಾ ॥

ಋಗ್ವೇದಸೂತ್ರಃ— ಅಗ್ನಿಶ್ಚೇತ್ಯಸ್ಯಮಂತ್ರಸ್ಯ । ಯಾಜ್ಞವಲ್ಕ್ಯೋಪನಿಷದ ಋಷಿಃ। ಅಗ್ನಿಮಾಮನ್ಯು ಮನ್ಯುಪತಿರ್ದೇವತಾ। ಪ್ರಕೃತಿಶ್ಛಂದಃ । ಮಂತ್ರಾಚಮನೇ ವಿನಿಯೋಗಃ ॥

## ಸಾಮ ಶಾಖೆಯವರು

ರಾತ್ರಿಶ್ಚೇತಿಯಜುಃ । ಪರಮೇಷ್ಠಿನಃ ಪ್ರಾಜಾಪತ್ಯಸ್ಯಾರ್ಷಂ । ರಾತ್ರಿ ವರುಣೋದೇವತಾ । ಸಾಯಂಸಂಧ್ಯಾಮುಪಾಮಾಚಮನೇ ವಿನಿಯೋಗಃ ॥ ರಾತ್ರಿಶ್ಚ ಮಾವರುಣಶ್ಚ ಪುನಾತುಸ್ವಾಹಾ ॥

## ಕ್ಷತ್ರಿಯರು

ಕಾಲವೇದಿ ಜ್ಯೋತಿರೂಪಿ ಕಾಮಕ್ರೋಧ ವಿನಾಶಿನಿ ಅಹಃ ಕಾಲ ಕೃತಂ ಪಾಪಂ, ಸತ್ಯೇಜ್ಯೋತಿಷಿ ಹೂಯತೇ ॥

## ವೈಶ್ಯರು

ಮನ್ಯುಸಂಭೂತ ಪಾಪೇಭ್ಯೋ ಮನ್ಯುರಗ್ನಿ ರಹಸ್ತಥಾ। ರಕ್ಷಂತಾಂ ಮಹ್ನಿ ಸಂಭೂತ ಮಹಃಪಾಪಂವ್ಯಪೋಹತು। ಮಯಾಹ್ಯಮೃತರೂಪೇಽಸ್ಮಿನ್ ಸತ್ಯೇ ಜ್ಯೋತಿಷಿ ಹೂಯತೇ ॥

ತತ್ವ॥ ಪ್ರಾತಸಂಧ್ಯಾವಂದನೆಯಲ್ಲಿ ಸೂರ್ಯನು ದೇವತೆ, ಸಾಯಂಸಂಧ್ಯಾವಂದನೆಯಲ್ಲಿ ಅಗ್ನಿಯು ದೇವತೆ; ಆದುದರಿಂದ ಪ್ರಾತಸ್ಸಂಧ್ಯಾವಂದನೆಯಲ್ಲಿ ಬರುವ ಮಂತ್ರಕ್ಕೂ ಮೇಲಿನ ಮಂತ್ರಕ್ಕೂ ಅರ್ಥದಲ್ಲಿ ವ್ಯತ್ಯಾಸವೇನೂ ಇಲ್ಲ. ಹಗಲಿನಲ್ಲಿ ಅಜ್ಞಾನವಶಾತ್ ಮಾಡಿದ ಪಾಪ ಮತ್ತು ಸರ್ವಕಾರ್ಯಗಳ ಫಲಗಳನ್ನೂ ಅಗ್ನಿನಾಮಕನಾದ ಆತ್ಮತೇಜಸ್ಸಿನಲ್ಲಿ ಅರ್ಪಣೆಮಾಡುವ ತತ್ವವಾಗಿದೆ.

## ಅರ್ಘ್ಯಪ್ರದಾನ.

ಬ್ರಹ್ಮಕ್ಷತ್ರಿಯವೈಶ್ಯರೆಲ್ಲರಿಗೂ ಪ್ರಾತಃಕಾಲದಂತೆಯೆ. ಆದರೆ ಸಾಮಶಾಖಾ ಬ್ರಾಹ್ಮಣರು ಪ್ರಾಯಶ್ಚಿತ್ತಾರ್ಘ್ಯಕ್ಕೆ ಈ ಕೆಳಗಿನ ಮಂತ್ರವನ್ನು ಹೇಳುತ್ತಾರೆ.

ನತಸ್ಯಮಾಯಯಾಚನ ರಿಪುರೀಶೀತಮರ್ತ್ಯಃ ।
ಯೋಽಗ್ನಯೇ ದದಾಶ ಹವ್ಯದಾತಯೆ ॥



# ೩ ನೆಯ ಪ್ರಕರಣ
# ಗಾಯತ್ರೀ ಉಪಾಸನಾ
## ೧ ಸ್ಥಲಶುದ್ಧಿ ಮತ್ತು ಆಸನ

### ಋಗ್ಯಜುಸ್ಸಾಮಶಾಖಾ ಬ್ರಾಹ್ಮಣರು

ಅಪಸರ್ಪಂತು ಯೇಭೂತಾಃ ಯೇಭೂತಾ ಭೂಮಿಸಂಸ್ಥಿತಾಃ |
ಯೇಭೂತಾ ವಿಘ್ನಕರ್ತಾರಃ ತೇನಶ್ಯಂತು ಶಿವಾಜ್ಞಯಾ ||
ಅಪಕ್ರಾಮಂತು ಭೂತಾದ್ಯಾಃ ಸರ್ವೇತೇ ಭೂಮಿಭಾರಕಾಃ |
ಸರ್ವೇಷಾ ಮವಿರೋಧೇನ ಬ್ರಹ್ಮಕರ್ಮ ಸಮಾರಭೇ ||

ತಾ|| ಭೂಮಿಯಲ್ಲಿದ್ದುಕೊಂಡು ವಿಘ್ನವನ್ನುಂಟುಮಾಡುವ ಭೂತಗಳು ಪರಮಾತ್ಮನ ಅನುಜ್ಞೆಯಿಂದ ನಾಶಹೊಂದಲಿ. ಭೂಭಾರವನ್ನುಂಟುಮಾಡತಕ್ಕ ಭೂತಾದಿಗಳು ಹೊರಟು ಹೋಗಲಿ. ಯಾರಿಗೂ ವಿರೋಧವಿಲ್ಲದಂತೆ ನಾನು ಬ್ರಹ್ಮಕರ್ಮವನ್ನು ಪ್ರಾರಂಭಿಸುವೆನು, ಎಂದು ವಿಘ್ನಪರಿಹಾರಕನಾದ ಪರಮಾತ್ಮನನ್ನು ಪ್ರಾರ್ಥಿಸಿ ಗಾಯತ್ರೀ ಉಪಾಸನಾ ಕರ್ಮವನ್ನು ಆರಂಭಿಸಬೇಕು.

ಆಸನ ಮಂತ್ರಸ್ಯ | ಪೃಥಿವ್ಯಾಃ ಮೇರುಪೃಷ್ಠಋಷಿಃ | ಕೂರ್ಮೋದೇವತಾ |
ಸುತಲಂ ಛಂದಃ | ಆಸನೇವಿನಿಯೋಗಃ ||
ಪೃಥ್ವಿತ್ವಯಾ ಧೃತಾಲೋಕಾಃ ದೇವಿತ್ವಂ ವಿಷ್ಣುನಾಧೃತಾ |
ತ್ವಂಚಧಾರಯ ಮಾಂದೇವಿ ಪವಿತ್ರಂ ಕುರುಚಾಸನಂ ||

'ಓಂ ಕೂರ್ಮಾಸನಾಯನಮಃ ಅನಂತಾಸನಾಯನಮಃ' ಎಂದೂ ಕೆಲವರು ಹೇಳುತ್ತಾರೆ.

ತಾ|| ಎಲೌ ಭೂಮಾತೆಯೇ ! ನೀನು ಲೋಕಗಳನ್ನು ಧರಿಸಿರುವೆ. ನಿನ್ನನ್ನು ಪರಮಾತ್ಮನು ಧರಿಸಿರುವನು. ನೀನು ಕೂಡ ನನಗೆ ಪರಿಶುದ್ಧ ಮತ್ತು ಸ್ಥಿರವಾದ ಆಸನವನ್ನು ಮಾಡಿಕೊಟ್ಟು ನನ್ನನ್ನು ಧರಿಸಿಕೊಂಡಿರಬೇಕೆಂದು ನಮಸ್ಕರಿಸಿ ಬೇಡುತ್ತೇನೆ, ಎಂದು ಭೂಮಾತೆಯನ್ನು ಪ್ರಾರ್ಥಿಸಬೇಕು.

### ಕ್ಷತ್ರಿಯರು

ಅಪಸರ್ಪಂತು ತೇಭೂತಾಃ ಯೇಭೂತಾ ಭೂಮಿಸಂಸ್ಥಿತಾಃ |
ಯೇಭೂತಾ ವಿಘ್ನಕರ್ತಾರಃ ತೇನಶ್ಯಂತು ಶಿವಾಜ್ಞಯಾ ||
ಅಪಕ್ರಾಮನು ಭೂತಾದ್ಯಾಃ ಸರ್ವೇತೇ ಭೂಮಿಭಾರಕಾಃ |

ಸರ್ವೇಷಾ ಮವಿರೋಧೇನ ಸಂಧ್ಯಾಕರ್ಮ ಸಮಾರಭೇ ||
ಪೃಥಿವ್ಯಾಃ ಮೇರುಪೃಷ್ಠಋಷಿಃ | ಕೂರ್ಮೋದೇವತಾ | ಸುತಲಂಛಂದಃ |
ಆಸನೇವಿನಿಯೋಗಃ ||
ಪೃಥ್ವೀ ತ್ವಯಾ ಧೃತಾಲೋಕಾಃ ದೇವಿ ತ್ವಂ ವಿಷ್ಣುನಾಧೃತಾ |
ತ್ವಂಚಧಾರಯ ಮಾಂದೇವಿ ಪವಿತ್ರಂ ಕುರು ಚಾಸನಂ ||
ಈ ಮಂತ್ರಗಳಿಗೆ ತಾತ್ಪರ್ಯವನ್ನು ಮೇಲೆಯೆ ಬರೆದಿರುತ್ತದೆ.

## ವೈಶ್ಯರು

ಭೂತಗ್ರಹ ಪಿಶಾಚಾದಿ ವಿಘ್ನಕರ್ತೃನಿವಾರಣಂ |
ಸಮುಚ್ಚಾರ್ಯ ಸಕೃನ್ಮಂತ್ರ ಮಾಸನಂ ಪರಿಕಲ್ಪಯೇತ್ ||

ತಾ|| ಸತ್ಕರ್ಮಾನುಷ್ಠಾನಕ್ಕೆ ವಿಘ್ನಮಾಡತಕ್ಕ ಭೂತಗ್ರಹ ಪಿಶಾಚಾದಿಗಳಿಗೆ ನಾಶನನ್ನುಂಟುಮಾಡಲೆಂದು ಪ್ರಾರ್ಥಿಸಿ, ಆಸನದಲ್ಲಿ ಕುಳಿತು ಕರ್ಮವನ್ನು ಆರಂಭಿಸುವೆನು.

ತತ್ವ|| ಭೂತಗ್ರಹ, ಪಿಶಾಚ, ಇತರಪ್ರಾಣಿ ಮೊದಲಾದವುಗಳು ನಾನು ಮಾಡುವ ಸತ್ಕರ್ಮಾನುಷ್ಠಾನಕ್ಕೆ ವಿಘ್ನಕಾರಿಯಾಗದಂತೆ ಮತ್ತು ನನ್ನಲ್ಲಿ ದ್ವೇಷ ಭಾವವಿಲ್ಲದಂತೆ, ನನ್ನಿಂದ ದೂರವಾಡೆಂದು ವಿಘ್ನಗಳನ್ನು ಪರಿಹರಿಸತಕ್ಕ ವಿಘ್ನೇಶ್ವರನನ್ನು (ಪರಮಾತ್ಮನನ್ನು) ಪ್ರಾರ್ಥಿಸಬೇಕು. ಅಲ್ಲದೆ ಯಾವ ಪ್ರಾಣಿ ಗಳಲ್ಲಿಯೂ ನಾವು ವಿರೋಧಕಟ್ಟಿಕೊಳ್ಳಬಾರದು. ಸಾಮ, ದಾನ, ಭೇದ, ದಂಡ ಗಳಲ್ಲಿ ಸಾಮೋಪಾಯವೇ ಶ್ರೇಷ್ಠವಾದುದು. ಸಾಮೋಪಾಯವು ಸತ್ವಗುಣಕ್ಕೆ ಸೇರಿದುದು. ಕ್ರೋಧವು ಅಂಕುರಿಸಿದರೆ ವಿರೋಧಕ್ಕೂ ಜಗಳಕ್ಕೂ ಕಾರಣವಾಗು ವುದು. ಆದುದರಿಂದ ಪರಮಾತ್ಮನು ಅನುಗ್ರಹಿಸಿರುವ ವಿವೇಕಬಲದಿಂದ ಪ್ರಾಣಿ ಗಳಲ್ಲಿ ಅವಿರೋಧದಿಂದಿರಲು ಶಾಂತಸ್ವಭಾವವನ್ನೂ, ಸಾಮೋಪಾಯವನ್ನೂ ಅಭ್ಯಸಿಸುತ್ತಾ ಬಂದರೆ ಇದರ ಜೊತೆಗೆ ಪರಮಾತ್ಮನ ಅನುಗ್ರಹವೂ ಸೇರಿ ಮನುಷ್ಯನು ಉತ್ತಮಸ್ಥಿತಿಯಲ್ಲಿರುತ್ತಾನೆ. ಉತ್ತಮಕಾರ್ಯಕ್ಕೆ ನಮ್ಮ ಜನ್ಮಾಂತ ರದ ಪಾಪಶೇಷದಿಂದ ಅನೇಕ ವಿಘ್ನಗಳು ಬರುವುವು. ವಿಘ್ನಗಳೊದಗಿದ ಮಾತ್ರದಿಂದ ಹೆಂಜರಿದು ಕಾರ್ಯವನ್ನು ಬಿಡದೆ ಎಂತಹ ವಿಘ್ನಗಳು ಪ್ರಾಪ್ತ ವಾದರೂ ಅವುಗಳನ್ನು ನಿಗ್ರಹಿಸಿಕೊಂಡು ಮುಂದರಿದುಹೋಗುವ ದಾರ್ಢ್ಯವೂ, ಕರ್ಮಾನುಷ್ಠಾನ ಮತ್ತು ಮೋಕ್ಷವನ್ನು ಸಾಧಿಸಲು, ಎಂತಹ ಕಷ್ಟಕಾರ್ಯಗಳಿ ದ್ದರೂ ಅವುಗಳನ್ನು ಹೇಗಾದರೂ ಸಾಧಿಸಿಯೇ ಸಾಧಿಸುತ್ತೇನೆಂಬ ಧೈರ್ಯ, ಉತ್ಸಾಹ, ಶ್ರದ್ಧೆಗಳೂ ಅತ್ಯವಶ್ಯಕವಾಗಿರಬೇಕು. ಹೀಗೆ ಪುರುಷಪ್ರಯತ್ನದಿಂದ ಸಾಧಿಸಿಕೊಂಡುಬಂದು ಪರಮಾತ್ಮನನ್ನು ಪ್ರಾರ್ಥಿಸುತ್ತಲೂ ಇರಬೇಕೆಂಬುದನ್ನು ಈ ಮಂತ್ರವು ಸೂಚಿಸುತ್ತದೆ.

ಇನ್ನು ಮುಂದೆ ಗಾಯತ್ರೀಉಪಾಸನೆ ಮಾಡಬೇಕಾಗಿರುವುದರಿಂದ ಪ್ರಥಮದಲ್ಲಿ ಶಾಸ್ತ್ರಸಮ್ಮತವಾದ ಆಸನದಲ್ಲಿ ಕುಳಿತುಕೊಳ್ಳಲು ಆಸನಸಿದ್ಧಿಯನ್ನುಂಟುಮಾಡುವಂತೆ ಭೂಮಾತೆಯನ್ನು ಪ್ರಾರ್ಥಿಸಿ ಶಾಸ್ತ್ರವಿದಿತವಾದ ಯಾವುದಾದರೂ ಆಸನದಲ್ಲಿ ಕುಳಿತುಕೊಳ್ಳಬೇಕು. ಮಂತ್ರವನ್ನು ಪಠಿಸಿ ಮನಸ್ಸು ಬಂದಂತೆ ಕುಳಿತುಕೊಳ್ಳಬಾರದು. ಪ್ರಾರ್ಥನೆಮಾಡಿ ಶಾಸ್ತ್ರೋಕ್ತವಾದ ಆಸನದಲ್ಲಿ ಕುಳಿತು ದೇವತೋಪಾಸನೆಯನ್ನು ಮಾಡಬೇಕೆಂಬ ತಾತ್ಪರ್ಯದಿಂದಲೇ 'ಆಸನೇವಿನಿಯೋಗಃ' ಎಂದು ಮಂತ್ರದಲ್ಲಿರುವುದು ಅನೇಕ ವಿಧವಾದ ಆಸನಗಳಿವೆ. ಇವುಗಳಲ್ಲಿ ಸ್ವಸ್ತಿಕ, ಪದ್ಮ, ಸಿದ್ಧಾಸನಗಳಾದ ಮೂರರಲ್ಲಿ ಯಾವುದಾದರೂ ಒಂದು ಆಸನದಲ್ಲಿ ಕುಳಿತುಕೊಳ್ಳಬೇಕು. ಸುಖಾಸನದಲ್ಲಿ ಕುಳಿತುಕೊಳ್ಳುವುದೆಂದರೆ ಮನಸ್ಸಿ ಕುಳಿತುಕೊಳ್ಳುವುದಲ್ಲ. ಸೊಂಟ ಎದೆಗಳನ್ನು ಬಗ್ಗಿಸಿ, ಸಾಧ್ಯವಾದರೆ ಹಿಂದಕ್ಕೆ ಗೋಡೆಗೆ ಒರಗಿ ಕುಳಿತುಕೊಳ್ಳುವುದು ಸುಖವಾದುದೆಂದು ತಿಳಿಯಬಾರದು ಸುಖವೆಂದರೆ ಆತ್ಮಸಾಕ್ಷಾತ್ಕಾರದ ಸುಖವನ್ನು ಹೊಂದಲು ಯಾವುದು ಸಹಕಾರಿಯೋ ಅದೇ ಸುಖಾಸನವೆಂದು ಅರ್ಥ. ಇಂತಹವುಗಳೇ ಸಿದ್ಧಾಸನ, ಪದ್ಮಾಸನ ಮುಂತಾದುವುಗಳು. ಆದುದರಿಂದ ಶಾಸ್ತ್ರೋಕ್ತವಾದ ಆಸನದಲ್ಲಿ ಕುಳಿತುಕೊಳ್ಳಬೇಕು.

ವ್ಯಾಯಾಮಕ್ಕೋಸ್ಕರ ಆಸನಾಭ್ಯಾಸಗಳನ್ನು ಮಾಡುವುದು ಇತರ ವ್ಯಾಯಾಮಗಳಿಗಿಂತಲೂ ಸರ್ವೋತ್ಕೃಷ್ಟವಾದುದು ರೋಗಾದಿಗಳನ್ನು ನಿವೃತ್ತಿಮಾಡುವುದು. ಪ್ರತಿಯೊಂದು ಆಸನವೂ ಒಂದೊಂದು ಮಹತ್ವಗುಣವುಳ್ಳದ್ದು. ಪ್ರತಿ ಒಂದು ಆಸನದಲ್ಲಿಯೂ ಕೊಂಚಕಾಲವಿದ್ದು ಅನಂತರ ಮತ್ತೊಂದಾಸನವನ್ನು ಅಭ್ಯಾಸ ಮಾಡಿದರೆ ಅದರಲ್ಲಿರುವ ಗುಣವುಂಟಾಗುವುದು. ಅಲ್ಲದೆ ಆಸನಾಭ್ಯಾಸದಲ್ಲಿ ಶ್ವಾಸೋಚ್ಛ್ವಾಸವನ್ನು ಉದ್ದೇಶಪೂರ್ವಕವಾಗಿ ಹೆಚ್ಚಾಗಿ ಬಿಡುವುದು ಮತ್ತು ಸ್ತಂಭಿಸುವುದು ಕೂಡದು. ಮೋಕ್ಷಮಾರ್ಗದ ಮುಂದಿನಕರ್ತವ್ಯವನ್ನು ಅನುಸರಿಸದೆ ಆಸನಾಭ್ಯಾಸಗಳನ್ನು ಮಾತ್ರ ಮಾಡುವುದು ಅಂಗಸಾಧನೆಯೆನಿಸುವುದೇ ವಿನಾ ಯೋಗವೆನಿಸುವುದಿಲ್ಲ. ಮನಸ್ಸು ದೇವತಾಭಾವದಲ್ಲಿ ಸಂಯೋಗವಾಗುವ ಧ್ಯಾನದ ಕಾರ್ಯವೇ ಯೋಗವೆನ್ನಲ್ಪಡುವುದು. ಅನೇಕ ಆಸನಗಳನ್ನು ಅಭ್ಯಾಸಿಸಲು ಶಕ್ತಿಯೂ ಅನುಕೂಲವೂ ಇಲ್ಲದವರು ಧ್ಯಾನಿಸಲು ಅಗತ್ಯವಾಗಿ ಶಾಸ್ತ್ರಸಮ್ಮತವಾದ ಒಂದಾಸನವನ್ನಾದರೂ ಅಭ್ಯಾಸಮಾಡಬೇಕು. ಶಾಸ್ತ್ರೋಕ್ತವಾದ ಆಸನಾಭ್ಯಾಸದಿಂದ ಮನಸ್ಸಿನ ಚಾಂಚಲ್ಯವು ತಗ್ಗಿ ಶಾಂತಸ್ವಭಾವವುಂಟಾಗಿ ಧ್ಯಾನಕ್ಕೆ ಅನುಕೂಲಿಸುವುದು.

**[ಆಸನಾಭ್ಯಾಸ ವಿಚಾರವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ವಾಲಿವಧೆಯ ವಿಚಾರದ ತತ್ತ್ವಗಳಲ್ಲಿ ಬರುವುದು.]**

## ೨ ಗಾಯತ್ರೀ ಹೃದಯ ಮತ್ತು ಪ್ರಾರ್ಥನೆ

### ಋಗ್ಯಜುಸ್ಸಾಮಶಾಖಾ ಬ್ರಾಹ್ಮಣರು

ಆಯಾತ್ವಿತ್ಯಸ್ಯ ಮಂತ್ರಸ್ಯ | ವಾಮದೇವಋಷಿಃ | ಗಾಯತ್ರೀದೇವತಾ | ಅನುಷ್ಟುಪ್ಛಂದಃ | ಗಾಯತ್ರ್ಯಾವಾಹನೇವಿನಿಯೋಗಃ || ಎಂಬದಾಗಿ ಋಗ್ವೇದಿಗಳು ಹೇಳಿ ಮುಂದಿನಮಂತ್ರವನ್ನು ಹೇಳುತ್ತಾರೆ.

೧ ಓಂಇತ್ಯೇಕಾಕ್ಷರಂಬ್ರಹ್ಮ | ಅಗ್ನಿರ್ದೇವತಾ | ಬ್ರಹ್ಮಇತ್ಯಾರ್ಷಂ |
ಗಾಯತ್ರಂಛಂದಂ| ಪರಮಾತ್ಮಂ ಸರೂಪಂ | ಸಾಯುಜ್ಯಂ ವಿನಿಯೋಗಂ|

೨ ಆಯಾತು ವರದಾದೇವಿ ಅಕ್ಷರಂ ಬ್ರಹ್ಮಸಮ್ಮಿತಂ |
ಗಾಯತ್ರೀಂ ಛಂದಸಾಂ ಮಾತೇದಂ ಬ್ರಹ್ಮಜುಷಸ್ವಮೇ |
ಯದಹ್ನಾತ್ ಕುರುತೇಪಾಪಂ ತದಹ್ನಾತ್ ಪ್ರತಿಮುಚ್ಯತೇ |
ಯದ್ರಾತ್ರ್ಯಾತ್ ಕುರುತೇಪಾಪಂ ತದ್ರಾತ್ರ್ಯಾತ್ ಪ್ರತಿಮುಚ್ಯತೇ |
ಸರ್ವವರ್ಣೇ ಮಹಾದೇವಿ ಸಂಧ್ಯಾವಿದ್ಯೇ ಸರಸ್ವತಿ ||

ತಾ|| 'ಓಂ' ಎಂಬ ಏಕಾಕ್ಷರವು ಪರಬ್ರಹ್ಮವು. ಇದಕ್ಕೆ ಅಗ್ನಿಯು ದೇವತೆಯು ಚತುರ್ಮುಖಬ್ರಹ್ಮನುಋಷಿ, ಗಾಯತ್ರೀಛಂದಸ್ಸು, ಪರಮಾತ್ಮ ಸ್ವರೂಪವು, ಮೋಕ್ಷದಲ್ಲಿ ವಿನಿಯೋಗವು || ೧ ||

ಗಾಯತ್ರೀ ದೇವಿಯು ಉಪಾಸಕರಿಗೆ ಇಷ್ಟಾರ್ಥಪ್ರದಳು, ನಾಶರಹಿತವಾದ ಮತ್ತು ವೇದಪ್ರಮಾಣದಿಂದ ಚೆನ್ನಾಗಿ ನಿಶ್ಚಿತವಾದ ಪರಮಾತ್ಮಸ್ವರೂಪಳು. ಇವಳನ್ನು ಉಪಾಸಿಸುವುದರಿಂದ ಹಗಲಿನಲ್ಲಿ ಮಾಡಿದಪಾಪವು ಹಗಲಿನಲ್ಲಿಯೂ ರಾತ್ರಿಯಲ್ಲಿ ಮಾಡಿದಪಾಪವು ರಾತ್ರಿಯಲ್ಲಿಯೂ ನಾಶವಾಗುವುದು. ಸರ್ವ ಅಕ್ಷರಗಳಸ್ವರೂಪಳೂ, ನಿವೃತ್ತಿಮಾರ್ಗಸ್ವರೂಪಿಣಿಯೂ, ಶಬ್ದಬ್ರಹ್ಮಸ್ವರೂಪಳೂ ಆಗಿರುವ ವೇದಮಾತೆಯಾದ ಗಾಯತ್ರೀ ದೇವಿಯೇ! ನನ್ನಸಮೀಪವನ್ನೈದಿ ನನ್ನ ತಪಸ್ಸನ್ನು ಸ್ವೀಕರಿಸಿ ಓಂಕಾರಸ್ವರೂಪವಾದ ಮೋಕ್ಷಪದವಿಯನ್ನು ನನಗೆ ಅನುಗ್ರಹಿಸು, ಎಂದು ಗಾಯತ್ರೀದೇವಿಯನ್ನು ಪ್ರಾರ್ಥಿಸಬೇಕು || ೨ ||

### ಕ್ಷತ್ರಿಯರು

ಆಗಚ್ಛ ವರದೇ ದೇವಿ ಜಪ್ಯೇಮೇ ಸನ್ನಿಧೌಭವ |
ಗಾಯನ್ತಂ ತ್ರಾಯಸೇ ಯಸ್ಮಾತ್ ಗಾಯತ್ರಿ ತ್ವಮತಃಸ್ಮೃತಾ ||

ತಾ|| ಅಭೀಷ್ಟದಾಯಕಳಾದ ದೇವಿಯೆ! ನನ್ನ ಸಮೀಪಕ್ಕೆ ದಯಮಾಡು ಉಪಾಸನೆಮಾಡುವವರನ್ನು ನೀನು ಅನುಗ್ರಹಮಾಡುವವಳಾದುದರಿಂದ ನೀನು ಗಾಯತ್ರೀದೇವಿಯಾಗಿರುತ್ತೀಯೆ. ಈ ಉಪಾಸನೆಯನ್ನು ಸ್ವೀಕರಿಸಿ ನನಗೆ ಅನುಗ್ರಹಮಾಡು.

## ವೈಶ್ಯರು

ಏಕಾಕ್ಷರಂ ಪರಂಬ್ರಹ್ಮ ದೇವತಾಗ್ನಿ ರ್ಮಹಾಯಶಾಃ ।
ದೇವತಾರ್ಕೋ ಮುಖಂವಹ್ನಿ ಶ್ಶಿರೋಬ್ರಹ್ಮಾ ಶಿವಶ್ಶಿಖಾ ।
ವಿಷ್ಣುರ್ಹೃಚ್ಚ ಧರಾಯೋನಿ ರ್ದಶಷಟ್ಪಂಚ ಶೀರ್ಷಕೇ ॥

ತಾ|| ಓಂ ಎಂಬ ಒಂದಕ್ಷರವು ಪರಬ್ರಹ್ಮಸ್ವರೂಪವು. ಅಂಥಾ ಏಕಾಕ್ಷರಕ್ಕೆ ಮಹಾಕೀರ್ತಿಸಂಪನ್ನನಾದ ಅಗ್ನಿಯೇ ದೇವತೆ, ದಶಭುಜಗಳು ಆರುಕುಕ್ಷಿಗಳು ಪಂಚಶಿರಸ್ಸುಗಳುಳ್ಳ ಓ ಗಾಯತ್ರೀ ದೇವಿಯೆ! ನಿನಗೆ ಸೂರ್ಯನು ದೇವತೆ, ಅಗ್ನಿಯು ಮುಖವು, ಚತುರ್ಮುಖಬ್ರಹ್ಮನು ಶಿರಸ್ಸು, ಶಿವನು ಜುಟ್ಟು, ಶ್ರೀಮಹಾವಿಷ್ಣುವು ಹೃದಯವು, ಭೂಮಿಯು ಯೋನಿ, ಎಂಬದಾಗಿ ಗಾಯತ್ರೀರೂಪವನ್ನು ಮನಸ್ಸಿನಲ್ಲಿ ಸ್ಮರಿಸಿ ಪ್ರಾರ್ಥಿಸಬೇಕು.

ತತ್ವ|| ಓಂ ಇತ್ಯೇಕಾಕ್ಷರಂಬ್ರಹ್ಮ='ಓಂ' ಎಂಬ ಏಕಾಕ್ಷರಕ್ಕೆ ಪರಮಾತ್ಮನೆಂದರ್ಥ. ಅಕ್ಷರದೃಷ್ಟಿಯಿಂದ ನೋಡಿದರೆ ಅ. ಉ. ಮ, ಎಂಬ ಮೂರು ಅಕ್ಷರಗಳೂ ಸೇರಿ 'ಓಂ'ಕಾರವಾಗಿದೆ. ಅಂದರೆ ಅಕಾರ, ಉಕಾರ, ಮಕಾರಗಳೆಂಬ ಮೂರುಪಾದ ಅಥವಾ ಮಾತ್ರೆಗಳುಳ್ಳದ್ದು. ಅಕಾರವು ಉಕಾರದಲ್ಲಿಸೇರಿ 'ಓ'ಕಾರವಾಗುವುದು. ಓಕಾರವು ಮಕಾರದೊಡನೆಸೇರಿ ಬೆಳೆಸಲ್ಪಟ್ಟರೆ 'ಓಂ'ಕಾರವಾಗುವುದು. ಇದಕ್ಕೆ ತುರೀಯವೆಂದು ಹೆಸರು. ಹೇಗೆಂದರೆ, ನಾವು ಮಾತನಾಡುವಾಗ ತುಟಿಗಳು ಮುಚ್ಚಿರುವುದಿಲ್ಲ. ಓಂಕಾರವನ್ನು ಉಚ್ಚರಿಸುವಾಗ ತುಟಿಗಳನ್ನು ಮುಚ್ಚಿರಬೇಕು. ತುಟಿಗಳನ್ನು ಮುಚ್ಚಿ ಬೆಳೆಸಿದ ಓಂಕಾರೋಚ್ಚಾರಣೆಯಲ್ಲಿ ಸ್ಥಾಯಿಯಾಗಿ ನಿಂತರೇನೆ 'ಓಂ ಇತ್ಯೇಕಾಕ್ಷರಂಬ್ರಹ್ಮ' ದ ಸ್ಥಿತಿಯುಂಟಾಗುವುದು. ಈ ಸ್ಥಿತಿಯು ಅಜ್ಞಾನತೊಲಗಿದ ಅನಂತರ ಉಂಟಾಗುವ ಆತ್ಮಸಾಕ್ಷಾತ್ಕಾರದ ಸ್ಥಿತಿಯೆಂದು ಕರೆಯಲ್ಪಡುವುದು. ಒಂದಾವೃತ್ತಿ 'ಓಂ' ಎಂಬ ಏಕಾಕ್ಷರವನ್ನು ಉಚ್ಚರಿಸಿದಮಾತ್ರದಿಂದಲೇ 'ಓಂಇತ್ಯೇಕಾಕ್ಷರಂಬ್ರಹ್ಮ' ಎಂಬ ಪದವಿಯನ್ನು ಹೊಂದಲಸಾಧ್ಯ. ಉಚ್ಚಾರಣೆಯು ಪರಬ್ರಹ್ಮ ಸ್ಥಿತಿಯಲ್ಲಿ ಸ್ಥಾಯಿಯಾಗಿ ನಿಂತಾಗಲೇ ಓಂಕಾರವೆನಿಸುವುದು. ಅಂದರೆ, ಅಕಾರವು ಉಕಾರದಲ್ಲಿಯೂ, ಉಕಾರವು ಮಕಾರದಲ್ಲಿಯೂ, ಮಕಾರವು ತುರೀಯದಲ್ಲಿಯೂ ಲಯವನ್ನು ಪಡೆಯುವಂತೆ ಜಾಗ್ರತ್ಸ್ವಪ್ನ ಸುಷುಪ್ತ್ಯವಸ್ಥೆಗಳನ್ನು ಉಂಟುಮಾಡುವ ಅಜ್ಞಾನಶಕ್ತಿಗಳನ್ನು ಸಮಾಧಿಯ ಅಭ್ಯಾಸದಿಂದ ಕ್ರಮಕ್ರಮವಾಗಿ ಉಪಸಂಹಾರಮಾಡಿಕೊಂಡು ತುರೀಯಸ್ಥನಾಗಿ ನಿಲ್ಲಬೇಕು. ಈ ಸ್ವರೂಪವೇ 'ಓಂಇತ್ಯೇಕಾಕ್ಷರಂಬ್ರಹ್ಮ' ವೆನ್ನಲ್ಪಡುವುದು. ಇದಕ್ಕೆ ನಿರ್ವಿಕಲ್ಪಸಮಾಧಿಯೆಂದೂ ಹೆಸರಿರುವುದು.

ಓಂಕಾರದ ವಿಚಾರವು ಬಹು ಗಹನವಾದುದು. 'ಓಂ' ಎಂಬುದು ಹಿಂದಿನ,

ಇಂದಿನ ಮತ್ತು ಮುಂದಿನ ಕಾಲದ್ದಾಗಿಯೂ, ಕಾಲಗಳನ್ನೆಲ್ಲಾ ಮೀರಿ ಕಾಲನಿಯಮವೇ ಇಲ್ಲದ ನಿತ್ಯವಸ್ತುವಾಗಿಯೂ ಇದೆ. ಅಲ್ಲದೆ ವೇದಗಳಿಗೆ ಆದಿಯಾಗಿರುವುದು. ಸಕಲ ದೇವತಾಶಕ್ತಿಗಳನ್ನೊಳಗೊಂಡಿರುವುದು. ಪರಮ ಪವಿತ್ರವಾದುದು. ಓಂಕಾರದ ಮೂರುಮಾತ್ರೆಗಳ ಮತ್ತು ತುರೀಯದ ವಿಚಾರಗಳನ್ನು ಸೃಷ್ಟಿ ಸ್ಥಿತಿ ಲಯಕ್ರಮಗಳಲ್ಲಿ ವಿವರಿಸುತ್ತಾ ಹೋದರೆ ಅತ್ಯಂತ ಲಂಬಿಸಬೇಕಾಗುವುದು. ಓಂಕಾರದ ಪಾದಗಳು ಶ್ರುತಿಸಮ್ಮತವಾದ ಯಾವ ಯಾವ ತತ್ತ್ವಗಳನ್ನೊಳಗೊಂಡಿವೆಯೋ ಅವುಗಳ ವಿವರಣೆಯನ್ನು ಗಾಯತ್ರೀ ಮಹಿಮಾವರ್ಣನೆಯಲ್ಲಿ ಬರೆದಿರುವುದು.

ಮುಖ್ಯವಾಗಿ ಅಧಿಕಾರಿಯು ಅಜ್ಞಾನನಿವೃತ್ತಿ ಮಾಡಿಕೊಂಡು ತನ್ನಲ್ಲಿಯೇ ಪರಮಪದವಾದ ಆತ್ಮಸಾಕ್ಷಾತ್ಕಾರವನ್ನು ಹೊಂದಿರುವ ಸ್ಥಿತಿಗೇನೆ 'ಓಂಇತ್ಯೇಕಾಕ್ಷರಂಬ್ರಹ್ಮ' ಎಂಬುವುದು ಸಲ್ಲುವುದು

[ಓಂಕಾರದ ವಿಚಾರವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಅಗಸ್ತ್ಯಾಶ್ರಮಪ್ರವೇಶ, ದರ್ಭಶಯನ, ಲಂಕೆಯನ್ನು ಸೇರುವಿಕೆ, ಆದಿತ್ಯಹೃದಯೋಪದೇಶ, ಸೀತಾಗ್ನಿಪ್ರವೇಶ ಪ್ರಕರಣಗಳಲ್ಲಿ ಬಂದಿರುವುದು.]

ಅಗ್ನಿರ್ದೇವತಾಃ = 'ಓಂಇತ್ಯೇಕಾಕ್ಷರಂಬ್ರಹ್ಮ' ಎನ್ನುವುದಕ್ಕೆ ಅಗ್ನಿಯು ದೇವತೆಯೆಂದರ್ಥ. ಇದರ ತತ್ತ್ವವೇನೆಂದರೆ:—'ದೀಪ್ಯಂತ ಇತಿ ದೇವಾಃ' ಎಂಬ ವ್ಯುತ್ಪತ್ತಿಯಂತೆ ಅಗ್ನಿಯು ಓಂಇತ್ಯೇಕಾಕ್ಷರದ ಸ್ಥಿತಿಯನ್ನು ಪ್ರಕಾಶಪಡಿಸುವವನಾದುದರಿಂದ ಇವನನ್ನೇ ದೇವತೆಯೆಂದು ಹೇಳಿದೆ. ಅಂದರೆ ಉಪಾಸಕನಲ್ಲಿರುವ ಅಜ್ಞಾನವೆಂಬ ಅಂಧಕಾರವನ್ನು ತೊಲಗಿಸಿ ಜ್ಞಾನರೂಪವಾದ ಓಂಕಾರದ ಸ್ಥಿತಿಯನ್ನುಂಟುಮಾಡಿ ಪ್ರಕಾಶಪಡಿಸುವವನು ಅಗ್ನಿಯು. ಅಲ್ಲದೆ ಅಧಿಕಾರಿಯು ಪರಮಪುರುಷಾರ್ಥವೆನಿಸುವ ಓಂಕಾರಸ್ಥಿತಿಯಲ್ಲಿರುವಾಗ ಅವನು ಆತ್ಮಸಾಕ್ಷಾತ್ಕಾರದ ಸ್ಥಿತಿಯಲ್ಲಿರುವನೆಂಬುದನ್ನು ಹೊರಗಿನವರಿಗೆ ಪ್ರದರ್ಶಿಸಿಕೊಡುವುದೂ ಅಗ್ನಿಯೇ.

ಓಂಕಾರಸ್ವರೂಪವಾದ ಸಮಾಧಿಯಲ್ಲಿರುವವನ ಸ್ಥಿತಿಯು ಹೇಗಿರುವುದೆಂದರೆ:— ಶಂಖ, ಭೇರಿನಾದಗಳ ಧ್ವನಿಯು ಕೇಳಿಸುವುದಿಲ್ಲ. ಜ್ಞಾನೇಂದ್ರಿಯಗಳ ಕಾರ್ಯಗಳು ಯಾವವೂ ಇರುವುದಿಲ್ಲ ಮನಸ್ಸಿನ ಕಾರ್ಯಗಳಾದ ಸಮಸ್ತ ಸಂಕಲ್ಪ ವಿಕಲ್ಪಗಳೂ, ಕರ್ಮಕಲಾಪಗಳೂ ನಿಶ್ಶೇಷವಾಗಿ ಹೋಗಿರುವುವು. ಇದುತಾನು ಇದುಬೇರೆ ಎಂಬ ತಿಳಿವಳಿಕೆಯೂ ಇರುವುದಿಲ್ಲ. ಎಚ್ಚರವಿಲ್ಲ. ನಿದ್ರೆಯಿಲ್ಲ. ಜೀವಿತವಿಲ್ಲ. ಮರಣವಿಲ್ಲ. ಶ್ವಾಸೋಚ್ಛ್ವಾಸವಿಲ್ಲ. ದೇಹವು ಕಾಷ್ಠದಂತೆ ನಿರ್ವ್ಯಾಪಾರವಾಗಿದ್ದರೂ ಕುಳಿತಿರುವನೇ ಹೊರತು ದೇಹವು ಮಲಗಿಕೊಳ್ಳುವುದಿಲ್ಲ. ಈ ಸ್ಥಿತಿಗೆ ಓಂಕಾರವೆನಿಸುವ ಪರಮಮಂಗಳಕರವಾದ ಯೋಗನಿದ್ರೆಯೆಂದು ಹೆಸರು.

ಹೇಗೆಂದರೆ, ಓಂಕಾರವೆಂದರೂ ಪ್ರಣವವೆಂದರೂ ಒಂದೇ. ಪ್ರಣವಸ್ವರೂಪ ವೆಂದರೆ "ಪ್ರಾಣಾರ್ತ್ಸರ್ವಾನ್ಪರಮಾತ್ಮನಿ ಪ್ರಣಾಮಯತೀತ್ಯೇತಸ್ಮಾತ್ಪ್ರಣವಃ" ಎಂಬ ಶ್ರುತಿವಾಕ್ಯದಂತೆ ಪ್ರಾಣಚೇಷ್ಟೆಗಳೆಲ್ಲ ಪರಮಾತ್ಮನಲ್ಲಿ ಏಕಾಕಾರವಾಗಿ ಲೀನವಾಗುವುದರಿಂದ ಓಂಕಾರಕ್ಕೆ ಪ್ರಣವವೆಂದು ಹೆಸರು. ಆದುದರಿಂದ ಓಂಕಾರ ವೆನಿಸುವ ಸಮಾಧಿಸ್ಥಿತಿಯಲ್ಲಿ ಅಧಿಕಾರಿಯು ಕುಳಿತಿದ್ದರೂ ಪ್ರಾಣಚೇಷ್ಟೆ ಮುಂತಾ ದವು ಯಾವವೂ ಇರುವುದಿಲ್ಲ.

ಇಂತಹ ಓಂಕಾರದ ಸ್ಥಿತಿಯಲ್ಲಿರತಕ್ಕವನ ದೇಹವು ಜೀವಿಸಿರುವುದನ್ನು ಪ್ರದರ್ಶಿಸುವುದು ಅಗ್ನಿಯಶಾಖ ಒಂದೇ. ಕಾರಣವೇನೆಂದರೆ, ಓಂಕಾರಸ್ಥಿತನ ದೇಹಕ್ಕೂ ಮೃತನದೇಹಕ್ಕೂ ಎಷ್ಟೋ ಭೇದಗಳಿವೆ. ಮೃತದೇಹದಲ್ಲಿ ಇಂದ್ರಿಯ, ಪ್ರಾಣ, ಅಗ್ನಿಶಾಖಗಳೊಂದೂ ಇರುವುದಿಲ್ಲ. ಓಂಕಾರಸ್ಥಿತಿಯಲ್ಲಿರುವವನ ದೇಹದಲ್ಲಿ ಪಂಚಪ್ರಾಣ, ಇಂದ್ರಿಯ, ಬುದ್ಧಿ ಮುಂತಾದುವುಗಳಿದ್ದರೂ ಅವುಗಳ ವ್ಯಾಪಾರಗಳೆಲ್ಲಾ ಪರಬ್ರಹ್ಮವಾದ ಓಂಕಾರದಲ್ಲಿ ಲೀನವಾಗಿರುತ್ತವೆ. ಮೃತ ದೇಹವು ಕೆಳಗೆ ಬಿದ್ದಿರುತ್ತದೆ. ಓಂಕಾರಸ್ಥಿತನ ದೇಹವು ಕೆಳಗುರುಳುವುದಿಲ್ಲ. ಮೃತದೇಹದಲ್ಲಿ ಶಾಖವೇ ಇರುವುದಿಲ್ಲ. ಓಂಕಾರಸ್ಥಿತಿಯಲ್ಲಿರುವವನಲ್ಲಿ ಜ್ಞಾನಾ ಗ್ನಿಯು ದೇದೀಪ್ಯಮಾನವಾಗಿ ಉರಿಯುತ್ತಿರುವುದರಿಂದ ಶಾಖವು ಸಂಪೂರ್ಣವಾ ಗಿರುತ್ತದೆ. ಮೃತದೇಹದಲ್ಲಿ ಶಾಖವೇ ಇಲ್ಲದಿರುವಾಗ ತೇಜಸ್ಸೆಲ್ಲಿರುವುದು? ಓಂಕಾರಸ್ಥಿತನಲ್ಲಿ ಜ್ಞಾನಾಗ್ನಿಯು ಪೂರ್ಣಜ್ವಾಲೆಯಲ್ಲಿರುವುದರಿಂದ ಬ್ರಹ್ಮತೇ ಜಸ್ಸು ಬಹುಸ್ಫುಟವಾಗಿಕಾಣುವುದು. ಇವುಗಳೇ ಮೃತದೇಹಕ್ಕೂ ಓಂಕಾರಸ್ಥಿತನ ದೇಹಕ್ಕೂ ಇರುವ ಭೇದಗಳು.

ಆದುದರಿಂದ "ಓಂಇತ್ಯೇಕಾಕ್ಷರಂಬ್ರಹ್ಮ। ಅಗ್ನಿರ್ದೇವತಾ" ಎಂಬ ಮಂತ್ರ ದಂತೆ ಓಂಕಾರ (ಪರಬ್ರಹ್ಮ)ದ ಇರುವಿಕೆಯನ್ನು ಪ್ರದರ್ಶಿಸುವುದು ಅಗ್ನಿಒಂದೇ. ಓಂಕಾರಸ್ಥಿತಿಯಲ್ಲಿರುವ ಮಹಾತ್ಮನ ಸಕಲ ವ್ಯಾಪಾರವೂ ಪರಮಾತ್ಮನಲ್ಲಿ ಲೀನ ವಾಗಿರುವುದೆಂಬ ವಿಚಾರವು ಹೊರಗಿನವರಿಗೆ ಗೊತ್ತಾಗುವುದಿಲ್ಲ. ಹೊರಗೆ ನೋಡತಕ್ಕವರಿಗೆ ದೇಹವ್ಯಾಪಾರವೆಲ್ಲಾ ದೇಹದಲ್ಲಿ ಯಾವುದೋ ಒಂದು ಸ್ಥಳ ದಲ್ಲಿ ಲಯಹೊಂದಿರುತ್ತೆಂಬುದನ್ನು ತೋರಿಸಲು ಅಗ್ನಿಯ ಶಾಖವೊಂದೇ ಸಾಕ್ಷಿಯಸ್ಥಾನದಲ್ಲಿರುವುದು. ನ್ಯಾಯಾಧಿಪತಿಯು ತಪ್ಪುಮಾಡಿದವನ ವಿಚಾರ ವನ್ನು ಸಾಕ್ಷಿಯ ಮೂಲಕ ನಿರ್ಧರಿಸಿಕೊಳ್ಳುವಂತೆ, ಓಂಕಾರಸ್ಥಿತನ ಸ್ವರೂಪವನ್ನು ಅಗ್ನಿಯಮೂಲಕ ನಿರ್ಧರಿಸಬೇಕಾಗಿರುವುದೇ ಅಗ್ನಿಯು ಓಂಕಾರ ಪ್ರಕಾಶಕನಾಗಿ ರುವ ತತ್ತ್ವವಾಗಿರುವುದು. ಓಂಕಾರಸ್ಥಿತನಲ್ಲಿ ಜ್ವಲಿಸುತ್ತಿರುವ ಜ್ಞಾನಾಗ್ನಿಗೆ ಸಂವರ್ತಾಗ್ನಿ, ಚಿಜ್ಜ್ಯೋತಿ, ಜಲಜ್ಯೋತಿ, ಬ್ರಹ್ಮಾಗ್ನಿ, ಜ್ಞಾನದೀಪ, ಸ್ವಯಂಪ್ರಭೆ,

ವಿದ್ಯುದ್ದೀಪ, ಪರತರಜ್ಯೋತಿ ಎಂಬ ಹೆಸರುಗಳೂ ಉಂಟು. ಆತ್ಮಸಾಕ್ಷಾತ್ಕಾರ ಸ್ಥಿತಿಯಲ್ಲಿ ಎಂತಹ ಜ್ಯೋತಿಯು ಬೆಳಗುತ್ತಿರುವುದೆಂದರೆ,

ಅಥ ಕಸ್ಮಾದುಚ್ಯತೇ ವೈದ್ಯುತಂ ಯಸ್ಮಾದುಚ್ಚಾರ್ಯಮಾಣ ಏವಮಹತಿ ತಮಸಿ ಸರ್ವಂ ಶರೀರಂ ವಿದ್ಯೋತಯತಿ ತಸ್ಮಾದುಚ್ಯತೇ ವೈದ್ಯುತಂ ||

ಅಜ್ಞಾನಗಳನ್ನು ನಾಶಮಾಡಿ ಪರತರಜ್ಯೋತಿರೂಪವಾಗಿ ಶರೀರದಲ್ಲಿ ಬೆಳಗುತ್ತಿರುವಂತಹ ಅಗ್ನಿಯೆಂಬದಾಗಿ ಅಥರ್ವ ಶಿಖೋಪನಿಷತ್ತಿನಲ್ಲಿ ಹೇಳಿದೆ. "ಜ್ಞಾನಾಗ್ನಿಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇಽರ್ಜುನ" ಎಂಬ ಶ್ರೀಕೃಷ್ಣಪರಮಾತ್ಮನ ವಾಕ್ಯದಂತೆಯೂ ಓಂಕಾರಸ್ಥಿತನಲ್ಲಿ ಬೆಳಗುವುದೇ ಜ್ಞಾನಾಗ್ನಿಯು. ಆದುದರಿಂದ ಓಂಕಾರವನ್ನು ಪ್ರದರ್ಶಿಸುವನೇ ಅಗ್ನಿಯು.

[ಈ ತತ್ವವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಸೀತಾಗ್ನಿಪ್ರವೇಶ ಘಟ್ಟದಲ್ಲಿಯೂ ಓಂಕಾರ, ಪ್ರಕೃತಿಲಯ ಎಂಬ ಉಪಪ್ರಕರಣಗಳಲ್ಲಿಯೂ ಬಂದಿರುವುದು.]

ಬ್ರಹ್ಮ ಇತ್ಯಾರ್ಷಂ= ಓಂಇತ್ಯೇಕಾಕ್ಷರಂಬ್ರಹ್ಮ ಎನ್ನುವುದಕ್ಕೆ ಚತುರ್ಮುಖಬ್ರಹ್ಮನು ಋಷಿಯಾಗಿರುವನು. ಪರಮಪದವಾದ ಓಂಕಾರಸ್ಥಿತಿಯನ್ನು ಪ್ರಥಮದಲ್ಲಿ ತಾನು ಉಪಾಸಿಸಿ ಸಿದ್ಧಿಹೊಂದಿ ಪ್ರಚುರಪಡಿಸಿದವನು ಚತುರ್ಮುಖಬ್ರಹ್ಮನಾದ್ದರಿಂದ ಇವನು ಮಂತ್ರಕ್ಕೆ ಋಷಿಯಾದನು. ಋಷಿಯೆಂದರೆ "ಜ್ಞಾನಸ್ಯ ಪಾರಗಮಾತ್ ಋಷಿಃ (ಇ. ಪು ಋ. ಗತೌ)" ಜ್ಞಾನದಪಾರವನ್ನು ಹೊಂದಿದವನೆಂದು ಅರ್ಥ. ಅಂದರೆ ಚತುರ್ಮುಖಬ್ರಹ್ಮನು ಲೋಕಹಿತಕ್ಕೋಸ್ಕರ ಓಂಕಾರಸ್ಥಿತಿಯನ್ನು ಹೊರಪಡಿಸಿದವನು. ಅಲ್ಲದೆ ಸೃಷ್ಟಿಯ ನಿಯತಿಯೇ ಹೀಗಿರುವುದೆಂಬ ತತ್ವಾರ್ಥವಾಗಿಯೂ ಹೇಳಬಹುದು.

[ರಾಮಾಯಣದ ಅಂತರಾರ್ಥಗ್ರಂತದಲ್ಲಿ ಸೀತಾದೇವಿಯ ಅಗ್ನಿಪ್ರವೇಶವಾದ ಅನಂತರ ಚತುರ್ಮುಖಬ್ರಹ್ಮನು ಶ್ರೀರಾಮನೊಡನೆ ಹೇಳಿದ ವಾಕ್ಯಗಳ ತತ್ವವೂ ಇದಕ್ಕೆ ಅನ್ವಯವಾಗುವುದು.]

ಗಾಯತ್ರಂಛಂದಂ= ಓಂಕಾರವು ಗಾಯತ್ರೀಛಂದಸ್ಸಾಗಿರುವುದು. ಛಂದಸ್ಸೆಂದರೆ- ಮಾತ್ರಾ, ಅಕ್ಷರ, ಗಣಸಂಖ್ಯೆಗಳನ್ನು ಕ್ಲಿಪ್ತಮಾಡಿ ಅಳತೆಯಕ್ರಮವನ್ನು ಅನುಸರಿಸಿ ಆಹ್ಲಾದಕರವಾಗುವಂತೆ ಪಾದಸ್ವರೂಪವನ್ನು ನಿರ್ಣಯಮಾಡುವುದೇ ಛಂದಸ್ಸು. ಗಾಯತ್ರೀಮಂತ್ರವು ಮೂರುಪಾದವಾಗಿರುವಂತೆ ಓಂ ಎಂಬುದು ಕೂಡ 'ಅ. ಉ. ಮ.' ಎಂಬ ಮೂರು ಮಾತ್ರಾಸ್ವರೂಪವಾಗಿದೆ. ಓಂಕಾರದ ಪಾದಗಳು ಶ್ರುತಿಸಮ್ಮತವಾದ ಯಾವ ತತ್ವಗಳನ್ನೊಳಗೊಂಡಿವಿಯೋ ಅವುಗಳ ವಿವರವನ್ನು ಕೆಳಗೆ ಬರೆದಿರುವುದು.

| ಅಕಾರ | ಉಕಾರ | ಮಕಾರ | ಓಂಕಾರ |
|---|---|---|---|
| ವಿರಾಟ್‌ಸ್ವರೂಪ | ಹಿರಣ್ಯಗರ್ಭ | ಈಶ್ವರ | ,, |
| ವಿಶ್ವ | ತೈಜಸ | ಪ್ರಾಜ್ಞ | ,, |
| ಜಾಗ್ರತ್ | ಸ್ವಪ್ನ | ಸುಷುಪ್ತಿ | ,, |
| ಚತುರ್ಮುಖಬ್ರಹ್ಮ | ವಿಷ್ಣು | ರುದ್ರ | ,, |
| ಬಿಂದು | ನಾದ | ಕಳಾ | ,, |
| ಹ್ರಸ್ವ | ದೀರ್ಘ | ಪ್ಲುತ | ,, |
| ಸೃಷ್ಟಿ | ಸ್ಥಿತಿ | ಲಯ | ,, |
| ಭೂಮಿ | ಅಂತರಿಕ್ಷ | ಸ್ವರ್ಗ | ,, |
| ಋಗ್ವೇದ | ಯಜುರ್ವೇದ | ಸಾಮವೇದ | ,, |
| ಗಾರ್ಹಪತ್ಯಾಗ್ನಿ | ದಕ್ಷಿಣಾಗ್ನಿ | ಆಹವನೀಯ | ,, |
| ಪ್ರಾತಃಕಾಲ | ಮಧ್ಯಾಹ್ನ | ಸಾಯಂಕಾಲ | ,, |
| ರಜೋಗುಣ | ಸತ್ವಗುಣ | ತಮೋಗುಣ | ,, |

ಓಂಕಾರವೂ ಗಾಯತ್ರೀಮೂಲಮಂತ್ರವೂ ಏಕಾರ್ಥವಾದವುಗಳು. ಇದರ ವಿಚಾರವನ್ನು ಮೇಲೆಗೂ ಗಾಯತ್ರೀ ಮೂಲಮಂತ್ರಕ್ಕೂ ಅನ್ವಯಮಾಡಿರುವ ಸಂದರ್ಭದಲ್ಲಿ ಬರೆದಿರುವುದು

ಪರಮಾತ್ಮಂಸರೂಪಂ = ಓಂಕಾರವು ಪರಮಾತ್ಮಸ್ವರೂಪವಾದುದು. ಓಂಕಾರಸ್ಥಿತನೇ ಪರಮಾತ್ಮ ಸ್ವರ್ಗಾದಿಲೋಕಗಳಿಗೆ ಹೋದರೂ ಮೋಕ್ಷದೊರೆಯದೆ ಹಿಂದಿರುಗಿ ಬರಬೇಕೆಂಬುದನ್ನೂ ಮನುಷ್ಯನು ಈ ಜನ್ಮದಲ್ಲಿಯೇ ಅಧಿಕಾರಿಯಾಗಿ ಓಂಕಾರಸ್ಥಿತನಾದಲ್ಲಿ ಪರಮಾತ್ಮಸ್ವರೂಪನಾಗುವನೆಂಬುದನ್ನೂ ಈ ಮಂತ್ರವು ಸಂಶಯವಿಲ್ಲದೆ ದೃಢೀಕರಿಸುತ್ತದೆ.

[ರಾಮಾಯಣದ ಅಂತರಾರ್ಥಗ್ರಂಥದಲ್ಲಿ ರಾವಣ ವಧೆಯಿಂದ ಪಟ್ಟಾಭೀಷೇಕದವರೆಗಿರುವ ತತ್ವವು ಮೇಲಿನ ವಿಚಾರವನ್ನು ದೃಢೀಕರಿಸುತ್ತದೆ ]

ಸಾಯುಜ್ಯಂ ವಿನಿಯೋಗಂ = ಓಂಕಾರವನ್ನು ವಿನಿಯೋಗಮಾಡುವುದು ಮೋಕ್ಷದಲ್ಲೇ "ಓಮಿತ್ಯೇವಂಧ್ಯಾಯಥ್ಯಾತ್ಮಾನಂಸ್ವಸ್ತಿವಃ ಪರಾಯ ತಮಸಃ ಪರಸ್ತಾತ್" ಎಂಬ ಶ್ರುತಿವಚನದಂತೆ ಓಂಕಾರೋಪಾಸನೆಯಿಂದ ಪರಮಾತ್ಮನನ್ನು ಧ್ಯಾನಮಾಡಿ ಅಜ್ಞಾನವನ್ನು ಹೋಗಲಾಡಿಸುವುದರಮೂಲಕ ಓಂಕಾರಸ್ಥಿತಿಯನ್ನು ಹೊಂದುವುದರಲ್ಲಿಯೇ ಇದು ಉಪಯೋಗಿಸಲ್ಪಡತಕ್ಕದ್ದಾಗಿದೆ. ಜೀವಬ್ರಹ್ಮರ ಸಾಕ್ಷಾತ್ಕಾರಸ್ಥಿತಿಗೆ ಸಾಯುಜ್ಯವೆಂದು ಹೆಸರು.

[ರಾಮಾಯಣದ ಅಂತರಾರ್ಥಗ್ರಂಥದಲ್ಲಿ ದರ್ಭಶಯನದಾರಭ್ಯ ಪಟ್ಟಾಭಿಷೇಕದವರೆಗಿರುವ ಕಥೆಯವರೆಗಿರುವ ತತ್ವವೆಲ್ಲಾ ಸಾಯುಜ್ಯದ ರೀತಿಯನ್ನೇ ಪ್ರತಿಪಾದಿಸುತ್ತದೆ ]

ಗಾಯತ್ರೀಹೃದಯ ಮತ್ತು ಪ್ರಾರ್ಥನಾಮಂತ್ರದ ಮುಖ್ಯಸಾರಾಂಶವೇನೆಂದರೆ:- ಪರಮ ಪುರುಷಾರ್ಥವಾದ ಓಂಕಾರಸ್ಥಿತಿಯನ್ನು ಹೊಂದುವುದೇ ಮೋಕ್ಷವು. ಈ ಪರಮಪದವು ಲೋಕಾಂತರಗಳಲ್ಲಿ ದೊರಕುವುದಿಲ್ಲವೆಂಬುದನ್ನೂ, ಮಾನವ ಜನ್ಮದಲ್ಲಿಯೇ ಅಧಿಕಾರಿಯಾಗಿ ಇದನ್ನು ಪಡೆದು ಉತ್ತೀರ್ಣನಾಗಬೇಕೆಂಬುದನ್ನೂ ಇಂತಹ ಓಂಕಾರಸ್ಥಿತಿಯನ್ನು ಅನುಗ್ರಹಿಸಲು ಗಾಯತ್ರಿಯನ್ನು ಪ್ರಾರ್ಥಿಸಬೇಕೆಂಬುದನ್ನೂ ಸೂಚಿಸುವುದು. ಓಂಕಾರಸ್ಥಿತಿಯನ್ನು ಪಡೆಯುವುದೇ ಮೋಕ್ಷವೆಂಬುದೂ, ಗಾಯತ್ರೀದೇವಿಯು ಪರಮಾತ್ಮಸ್ವರೂಪಿಣಿಯೆಂಬುದೂ ಈ ಮಂತ್ರದಿಂದ ಮಾತ್ರ ಸೂಚಿತವಾಗುವುದೆಂದು ತಿಳಿಯಬಾರದು. ಪ್ರಾಣಾಯಾಮ ಮತ್ತು ಗಾಯತ್ರೀ ಮಂತ್ರಗಳಿಂದಲೂ ಇದೇ ಅರ್ಥ ಪ್ರತಿಪಾದಿತವಾಗುವುದು.

## ೩ ಗಾಯತ್ರೀ ಆವಾಹನೆ.

### ಋಗ್ಯಜುಸ್ಸಾಮಶಾಖಾ ಬ್ರಾಹ್ಮಣರು

ಓಜೋಽಸಿ | ಸಹೋಽಸಿ | ಬಲಮಸಿ | ಭ್ರಾಜೋಽಸಿ | ದೇವಾನಾಂ ಧಾಮನಾಮಾಸಿ | ವಿಶ್ವಮಸಿ ವಿಶ್ವಾಯುಃ | ಸರ್ವಮಸಿ ಸರ್ವಾಯುಃ | ಅಭಿಭೂರೋಂ| ಗಾಯತ್ರೀಮಾವಾಹಯಾಮಿ | ಸಾವಿತ್ರೀಮಾವಾಹಯಾಮಿ | ಸರಸ್ವತೀಮಾವಾಹಯಾಮಿ | ಛಂದರ್ಷೀನಾವಾಹಯಾಮಿ | ಶ್ರಿಯಮಾವಾಹಯಾಮಿ | ಬಲಮಾವಾಹಯಾಮಿ |

ತಾ|| ವೇದಮಾತೆಯಾದ ಗಾಯತ್ರೀದೇವಿಯೆ! ನೀನು ಓಜೋಽಸಿ-ಇಂದ್ರಿಯಗಳ ಸೂಕ್ಷ್ಮಶಕ್ತಿಸ್ವರೂಪಳಾಗಿರುವೆ. ಸಹೋಽಸಿ - ಶತ್ರುನಿಗ್ರಹಶಕ್ತಿಯಾಗಿರುವೆ. ಬಲಮಸಿ- ಸಾಮರ್ಥ್ಯ (ಇಂದ್ರಿಯಗಳಸ್ಥೂಲಶಕ್ತಿ) ರೂಪಳಾಗಿರುವೆ. ಭ್ರಾಜೋಽಸಿ ಜ್ಞಾನತೇಜೋರೂಪಳಾಗಿರುವೆ. ದೇವಾನಾಂ- ಇಂದ್ರಾದಿ ದೇವತೆಗಳಿಗೆ, ಧಾಮನಾಮಾಸಿ- ನಿವಾಸಸ್ಥಾನಳಾಗಿರುವೆ. ವಿಶ್ವಮಸಿ- ಸ್ಥಾವರಜಂಗಮಾದಿ ಸರ್ವಜಗದ್ರೂಪಳಾಗಿರುವೆ. ವಿಶ್ವಾಯುಃ - ಪ್ರಪಂಚಕ್ಕೆ ಸಂಪೂರ್ಣವಾದ ಆಯುಷ್ಯದ (ಸ್ಥಿತಿ ಅಥವಾ ಸತ್ತಾ) ಸ್ವರೂಪಳಾಗಿದ್ದೀಯೆ. ಸರ್ವಮಸಿ ಸರ್ವಾಯುಃ- ಸಕಲವೂ ನೀನೆ, ಸಕಲಸ್ಥಿತಿರೂಪಳೂ ನೀನೇ (ಸೃಷ್ಟಿ ಸ್ಥಿತಿ ಲಯಸ್ವರೂಪಳೂ ಶಾಶ್ವತವಾದ ಪರಮಾತ್ಮಸ್ವರೂಪಳೂ ನೀನೇ). ಅಭಿಭೂಃ=ಸಮಸ್ತಪಾಪಗಳನ್ನು ನಾಶಮಾಡುವ ಪ್ರಣವಸ್ವರೂಪಳಾಗಿರುವೆ.

ಗಾಯತ್ರೀಮಾವಾಹಯಾಮಿ—ಗಾಯತ್ರೀದೇವಿಯನ್ನು ಆವಾಹನೆಮಾಡಿಕೊಳ್ಳುತ್ತೇನೆ. ಸಾವಿತ್ರೀಮಾವಾಹಯಾಮಿ—ಸಾವಿತ್ರೀದೇವಿಯನ್ನು ಆವಾಹನೆ ಮಾಡಿಕೊಳ್ಳುತ್ತೇನೆ. ಸರಸ್ವತೀಮಾವಾಹಯಾಮಿ— ಸರಸ್ವತೀದೇವಿಯನ್ನು ಆವಾಹನೆಮಾಡಿಕೊಳ್ಳುತ್ತೇನೆ. ಛಂದರ್ಷೀನಾವಾಹಯಾಮಿ— ಛಂದಶ್ಶಕ್ತಿ

ಋಷಿಶಕ್ತಿಯನ್ನು ಆವಾಹನೆಮಾಡಿಕೊಳ್ಳುತ್ತೇನೆ. ಶ್ರಿಯಮಾವಾಹಯಾಮಿ—ಗಾಯತ್ರೀದೇವಿಯೂ ಲಕ್ಷ್ಮೀದೇವಿಯೂ ಅಭಿನ್ನರಾದ್ದರಿಂದ ಲಕ್ಷ್ಮೀದೇವಿಯನ್ನು ಆವಾಹನೆಮಾಡಿಕೊಳ್ಳುತ್ತೇನೆ. ಬಲಮಾವಾಹಯಾಮಿ—ಗಾಯತ್ರೀದೇವಿಯ ಪರಿವಾರಶಕ್ತಿ (ಅಂಗಶಕ್ತಿ)ಯನ್ನು ಆವಾಹನೆಮಾಡಿಕೊಳ್ಳುತ್ತೇನೆ.

ಎಲೌ ಜಗನ್ಮಾತೆಯಾದ ಗಾಯತ್ರೀದೇವಿಯೆ! ನಿನ್ನ ಸಕಲಶಕ್ತಿಗಳನ್ನೂ ನಿನ್ನ ಅನುಗ್ರಹದಿಂದ ನಾನು ಆವಾಹನೆ ಮಾಡಿಕೊಳ್ಳುತ್ತೇನೆ. ಅಂದರೆ, ನಾನು ಅವುಗಳ ತಾದಾತ್ಮ್ಯವನ್ನು ಪಡೆದವನಾಗುತ್ತೇನೆ. ದಯವಿಟ್ಟು ಅನುಗ್ರಹಮಾಡೆಂದು ಭಕ್ತಿಪುರಸ್ಸರವಾಗಿ ಗಾಯತ್ರೀದೇವಿಯನ್ನು ಪ್ರಾರ್ಥಿಸುತ್ತಾ ಪ್ರತಿಯೊಂದು ಆವಾಹನೆ ಮಂತ್ರವನ್ನು ಉಚ್ಚರಿಸುವಾಗ ಕೈಬೊಗಸೆಯನ್ನು ಎದೆಯ ಕಡೆಗೆ ತಂದು ನಮ್ಮಲ್ಲಿ ಆವಾಹನೆಮಾಡಿಕೊಂಡು ತಾದಾತ್ಮ್ಯದ ಭಾವವನ್ನು ಅಭ್ಯಾಸಮಾಡುತ್ತಾ ಬರಬೇಕು

ತತ್ವ|| ಈ ಮಂತ್ರದಲ್ಲಿ ಗಾಯತ್ರೀಮಹಿಮೆಯನ್ನು ಹೇಳಿರುವುದಲ್ಲದೆ ಆ ದೇವಿಯನ್ನು ಆವಾಹನೆಮಾಡಿಕೊಳ್ಳಬೇಕೆಂದು ಹೇಳಿರುವುದು. ಪರಾಶಕ್ತಿಯೂ ವೇದಮಾತೆಯೂ ಆಗಿರುವ ಗಾಯತ್ರೀದೇವಿಯನ್ನು ಆವಾಹನೆ ಮಾಡಿಕೊಳ್ಳುವುದೆಂದರೇನು? ಎಂಬ ಪ್ರಶ್ನೆಯನ್ನು ವಿಚಾರಮಾಡೋಣ. ಮಲಿನವಾದ ಉಪಾಧಿಗಳನ್ನು ಪರಿಹರಿಸಿಕೊಂಡು ಪರಿಶುದ್ಧವಾದ ತಪಶ್ಶಕ್ತಿಯನ್ನು ಹೊಂದುವ ಕರ್ಮಸಂಸ್ಕಾರಕ್ಕೋಸ್ಕರಲೇ ಬ್ರಾಹ್ಮಣರಿಗೆ ಈ ಮಂತ್ರವು ವಿಧಿಸಲ್ಪಟ್ಟಿದೆ. ವಿಧಿಸಿರುವಂತೆ ಪ್ರತಿನಿತ್ಯವೂ ಪವಿತ್ರತೆ, ಶ್ರದ್ಧಾಭಕ್ತಿಗಳಿಂದ ಅನುಷ್ಠಿಸುತ್ತಾ ಬಂದರೆ ಸೂಕ್ಷ್ಮಶರೀರದಲ್ಲಿರುವ ಚಲನೆಯು ಅಧಿಕವಾಗಿ ಮಂತ್ರಾಧಿದೇವತಾಶಕ್ತಿಯೂ, ತೇಜಸ್ಸೂ (ಕಳೆ) ಅನುಷ್ಠಿಸುವವನಲ್ಲಿ ಪ್ರಫುಲ್ಲವಾಗಿ ಪ್ರತಿಷ್ಠಿತವಾಗುವುದು. ಈ ಸಂಸ್ಕಾರದಿಂದ ಮಲಿನಪ್ರಕೃತಿ ಸಮುದಾಯದಿಂದಾಗುವ ಅಪರಿಶುದ್ಧವಾದ ಕಣಗಳೆಲ್ಲಾ ನಿವೃತ್ತಿಯಾಗುವುವು.

ವಿಗ್ರಹದಲ್ಲಿ ದೇವತಾಕಳೆಯನ್ನು ಆವಾಹನೆಮಾಡಿದರೆ ವಿಗ್ರಹವುಬೇರೆ, ದೇವತಾಕಳೆಯುಬೇರೆ, ಎಂಬ ಅಭಿಪ್ರಾಯವುಂಟಾಗುವುದಿಲ್ಲ. ಇದರಂತೆ ಆವಾಹನೆಮಾಡಿಕೊಳ್ಳುವಾಗ ದೇವತಾಕಳೆಯುಬೇರೆ, ತಾನುಬೇರೆ ಎಂಬ ಭೇದವನ್ನಿಡುವುದಾದರೆ ಆವಾಹನೆಯೆಂದೆನ್ನಿಸಿಕೊಳ್ಳುವುದೇ ಇಲ್ಲ. ನಾನುಬೇರೆ, ಕಳೆಬೇರೆ ಎನ್ನುವ ಭೇದಭಾವನೆಯಾದರೆ ವಿಗ್ರಹಸಮೀಪದಲ್ಲಿ ದೇವತಾಕಳೆಯನ್ನಿರಿಸಿದಂತಾಗುವುದೇ ವಿನಾ ವಿಗ್ರಹದಲ್ಲಿ ಆವಾಹನೆಮಾಡಿದಂತಾಗಲಿಲ್ಲ. 'ಆಹ್ವಾನ'ಕ್ಕೂ 'ಆವಾಹನೆ'ಗೂ ಅತ್ಯಂತ ಭೇದವಿರುವುದು. ಹಿಂದಿನಮಂತ್ರದಲ್ಲಿ ಗಾಯತ್ರೀದೇವಿಯನ್ನು ಆಹ್ವಾನಮಾಡಿತು. ಈ ಮಂತ್ರದಲ್ಲಿ ಆವಾಹನೆ ಕಾರ್ಯವೇನಡೆಯ

ಬೇಕು. ವಿಗ್ರಹದಲ್ಲಿ ಕಲ್ಲಿನ ಅಥವ ಲೋಹಸ್ವರೂಪಕ್ಕೆಪ್ರಾಶಸ್ತ್ಯವಿಲ್ಲ ಅದರಲ್ಲಿರುವ ಕಳೆಗೆ ಪ್ರಾಶಸ್ತ್ಯ. ಇದರಂತೆ ಅಧಿಕಾರಿಯ ಶರೀರದಲ್ಲಿ ಅಭೇದದಿಂದಿರುವ ದೇವತಾತೇಜಸ್ಸಿಗೆ ಪ್ರಾಶಸ್ತ್ಯ. ಕಾಮಕ್ರೋಧಾದಿ ದುರ್ಗುಣಗಳನ್ನು ನಾಶಮಾಡಿ ಶಮಾದಿ ಸದ್ಗುಣಗಳನ್ನು ಮನಸ್ಸಿನಲ್ಲಿ ಸ್ಥಿರಗೊಳಿಸಿದರ ಮನುಷ್ಯನಲ್ಲಿ ಶಾಂತಸ್ವಭಾವವೂ ಅದಕ್ಕೆ ಸರಿಯಾದ ತೇಜಸ್ಸೂ ವ್ಯಕ್ತವಾಗಿ ತೋರುವಂತೆ ದೇವತಾಶಕ್ತಿಯನ್ನು ಅಭೇದದಿಂದ ಮನಸ್ಸಿನಲ್ಲಿ ಧರಿಸುತ್ತಾಬಂದರೆ ಅದಕ್ಕೆಸರಿಯಾದ ಕಳಾಪ್ರಭಾವವು ಅವನಲ್ಲಿ ತೋರುವುದು. ಇದೇ ತಪೋಮಹಿಮೆಯೆನಿಸುವುದು. ಅಲ್ಲದೆ ಯಾವುದಾದರೂ ಒಂದು ಪದಾರ್ಥವನ್ನು ಶುದ್ಧಿಮಾಡಲು ಜಲವನ್ನು ಅಭಿಮಂತ್ರಿಸಿ ಪ್ರೋಕ್ಷಣೆಮಾಡುವುದುಂಟು. ಆ ಕಾಲದಲ್ಲಿ ಮಂತ್ರಾಧಿದೇವತೆಯ ತೇಜಸ್ಸು ಜಲದಲ್ಲಿ ಅಭೇದದಿಂದ ಇದ್ದೇ ಇರುವಂತೆ ಆವಾಹನೆ ಮಾಡಿದ ಗಾಯತ್ರೀದೇವಿಯ ಕಳೆಯು ಅಧಿಕಾರಿಯಲ್ಲಿ ಅಭೇದದಿಂದ ಇದ್ದೇ ಇರುವುದು.

ಗಾಯತ್ರೀ ಆಹ್ವಾನ ಮತ್ತು ಆವಾಹನೆಯ ತತ್ವವನ್ನು ಗುರುಕುಲವಾಸದಲ್ಲಿರತಕ್ಕ ಶಿಷ್ಯನಿಗೆ ಅನ್ವಯಿಸಬಹುದು. ಗುರುಕುಲವಾಸದಲ್ಲಿರತಕ್ಕ ಶಿಷ್ಯನು ತನ್ನ ಗುರುವಿನಲ್ಲಿರತಕ್ಕ ಗುಣವನ್ನೂ ಕ್ರಿಯೆಯನ್ನೂ, ವಿದ್ಯೆಯನ್ನೂ ಹೊಂದಿ ಅದರಂತೆ ನಡೆಯಲು ಆ ಶಿಷ್ಯನಿಗೆ ಮನಸ್ಸುಂಟಾಗುವುದು. ಗುರುವಿನ ಹತ್ತಿರ ವಿರುವ ಶಿಷ್ಯರೆಲ್ಲರೂ ಅದೇರೀತಿಯಾಗುತ್ತಾರೆಂದು ಹೇಳಲಾಗದು. ಉತ್ತಮನಾದ ಶಿಷ್ಯನು ಆ ಗುರುವಿನ ಗುಣ, ಕ್ರಿಯೆ, ವಿದ್ಯೆಗಳಲ್ಲಿ ಸಮಾನನಾಗುತ್ತಾನೆ. ಇದರಂತೆ ಗಾಯತ್ರೀದೇವಿಯನ್ನೇ ಸದ್ಗುರುವಾಗಿಭಾವಿಸಿ ಆ ದೇವಿಯಲ್ಲಿರುವ ಸ್ವಭಾವವನ್ನೇ ನಾವು ಹೊಂದಬೇಕು. ಗಾಯತ್ರೀದೇವಿಯು ಪ್ರತ್ಯಕ್ಷವಾಗಿಲ್ಲದಿದ್ದರೂ ಆಕೆಯ ಮಹಿಮಾವರ್ಣನೆಯಿಂದಲೇ ಆ ದೇವಿಯು ಎಂತಹವಳೆಂಬುದು ಗೊತ್ತಾಗುವುದು. ಇಂತಹ ಗಾಯತ್ರೀದೇವಿಗೆ ನಮ್ಮ ಮನಸ್ಸಿನಲ್ಲಿ ಸ್ಥಳಕೊಟ್ಟು ಆ ದೇವಿಯನ್ನೇ ಪ್ರಿಯವಾದ ಸದ್ಗುರುವಾಗಿ ತಿಳಿದು ಅವಳಲ್ಲಿರುವ ಗುಣಗಳನ್ನೇ ಹೊಂದುತ್ತೇನೆಂದು ಭಾವನೆಮಾಡಿಕೊಳ್ಳಬೇಕು. ಮನಸ್ಸಿಗೆ ಆಕರ್ಷಣಾಶಕ್ತಿ ಇರುವುದರಿಂದ ಗಾಯತ್ರೀದೇವಿಯಲ್ಲಿರತಕ್ಕ ಗುಣಗಳನ್ನೇ ಹೊಂದಬೇಕೆಂದು ಭಾವಿಸಿದರೆ ಈ ಭಾವನೆಯಿಂದ ಪ್ರಥಮದಲ್ಲಿ ಭಾವನಾನ್ವಿತನೆನಿಸಿ, ಅನಂತರ ಗಾಯತ್ರೀದೇವಿಯ ಮಹಿಮಾನ್ವಿತನಾಗುವನು. "ಯೋಭಾವಃ ಸಭವತಿ" ಎಂಬ ವಾಕ್ಯದಂತೆ ಭಾವೋದ್ದೀಪನದಿಂದುಂಟಾಗುವ ಶಕ್ತಿಯೇ ತಪಶ್ಶಕ್ತಿಯೆನಿಸುವುದು. ನಾವು ರೋಗಿಗಳು, ದರಿದ್ರರು, ದುಃಖಿಗಳು, ಪಾಪಿಗಳೆಂಬುದಾಗಿ ಆರೋಪಿಸಿಕೊಂಡು ದುಃಖಾದಿಗಳಿಗೆ ಭಾಗಿಗಳಾಗುವುದಲ್ಲದೆ ಮನಸ್ಸಿನ ಪ್ರಭಾವವನ್ನೇ ನಾಶಮಾಡಿಕೊಳ್ಳುತೇವೆ. ಇಂತಹವುಗಳಿಗೆ ಅವಕಾಶಕೊಡದೆ ಸರ್ವಶ್ರೇಷ್ಠವೂ ಸಿದ್ಧಿಪ್ರದವೂ ಆದ ಗಾಯತ್ರೀದೇವತಾಶಕ್ತಿಗಳನ್ನು ಭಕ್ತಿಯಿಂದ ಆವಾಹನೆಮಾಡಿ

ಕೊಳ್ಳಬೇಕು.

'ಗಾಯತ್ರೀಮಾವಾಹಯಾಮಿ' ಎಂದು ಮಾತ್ರ ಹೇಳದೆ ಸಾವಿತ್ರೀ, ಸರಸ್ವತೀ, ಲಕ್ಷ್ಮೀ ಮುಂತಾಗಿ ಎಲ್ಲರನ್ನೂ ಆವಾಹನೆ ಮಾಡಿಕೊಳ್ಳುವ ಕಾರಣ ವೇನೆಂದರೆ:— ಪರಮಾತ್ಮನು ಬ್ರಹ್ಮಾಂಡದಲ್ಲೆಲ್ಲಾ ಪರಿಪೂರ್ಣನಾಗಿರುತ್ತಾನೆ. ಈತನ ಅಪಾರವಾದ ಶಕ್ತಿಯೇ ಚಿಚ್ಛಕ್ತಿಯೆಂದು ಕರೆಯಲ್ಪಡುವುದು. ಎಲ್ಲಾ ಕಡೆಯಲ್ಲಿಯೂ ಬೆಳಗುತ್ತಲಿರುವುದರಿಂದ ಮಹಾದೇವೀಯೆಂದೂ, ಗಾನಮಾಡು ತ್ತಿರುವವರನ್ನು ಕಾಪಾಡುವವಳಾದ್ದರಿಂದ ಗಾಯತ್ರೀಯೆಂದೂ, ಸೂರ್ಯಶಕ್ತಿಯಾ ದುದರಿಂದ ಸಾವಿತ್ರೀಎಂದೂ, ಆತ್ಮಸಾಕ್ಷಾತ್ಕಾರದ ಕಾರ್ಯಮಾಡಿಸುವವಳಾದ್ದ ರಿಂದ ಸಂಧ್ಯಾಎಂದೂ, ಶಬ್ದಬ್ರಹ್ಮಸ್ವರೂಪಿಣಿಯಾದ್ದರಿಂದ ಸರಸ್ವತೀ ಎಂದೂ, ಆನಂದಸ್ವರೂಪಳಾದ್ದರಿಂದ ಲಕ್ಷ್ಮೀ ಎನಿಸಿಯೂ, ಕಾರ್ಯಭೇದಗಳಿಂದ ನಾಮ ಭೇದಗಳಾಗಿವೆಯೇಹೊರತು ಶಕ್ತಿಯೊಂದೇ ಎಂಬದಾಗಿ ತಿಳಿಯುವುದು. ವೇದ ಒಂದೇ ಆದರೂ ಋಗ್ಯಜುಸ್ಸಾಮಗಳೆಂದು ಹೇಗೆ ಕಾರ್ಯದಿಂದ ಭೇದವಾಗಿ ಕಾಣು ವುದೋ ಹಾಗೆಯೆ ಪರಾಶಕ್ತಿಯಾದ ಗಾಯತ್ರೀದೇವಿಯು ಒಬ್ಬಳೇ ಆದರೂ ಕಾರ್ಯ ಮತ್ತು ಕಾಲ ಭೇದಗಳಿಗನುಸಾರವಾಗಿ ಗಾಯತ್ರೀ, ಸಾವಿತ್ರೀ, ಸರಸ್ವತೀ, ಲಕ್ಷ್ಮೀ ಎಂಬ ನಾಮಭೇದಗಳಿಂದಿರುವಳು.

ಆದುದರಿಂದ ಬ್ರಾಹ್ಮಣನು ಪರಾಶಕ್ತಿಯಾದ ಗಾಯತ್ರೀದೇವಿಯನ್ನು ಪ್ರಾರ್ಥಿಸಿ ತಪಶ್ಶಕ್ತಿಯನ್ನು ಪಡೆಯಲು ದೇವತಾಕಳೆಯನ್ನು ತನ್ನಲ್ಲಿ ಆವಾಹನೆಮಾಡಿಕೊಳ್ಳಬೇಕು. ತಪಶ್ಶಕ್ತಿಯೆಂದರೆ ಮಂತ್ರಾಧಿದೇವತಾಶಕ್ತಿ ಮತ್ತು ಅದರ ಕಳೆಯೆಂದರೆ ದಿವ್ಯತೇಜಸ್ಸನ್ನು ಹೊಂದುವಿಕೆ. ಅಧಿಕಾರಿಯು ಪವಿತ್ರತೆ, ಶ್ರದ್ಧಾ, ಭಕ್ತಿ, ನಿಯಮಗಳಿಂದ ಆವಾಹನೆಮಾಡಿಕೊಳ್ಳುತ್ತಾ ಬಂದರೆ ದೇವತಾಕಳೆಯಿಂದ ಪರಿಪೂರ್ಣನಾಗುವನಲ್ಲದೆ ನಿಗ್ರಹಾನುಗ್ರಹಶಕ್ತಿಯನ್ನೂ ಹೊಂದುವನು. ದಿವ್ಯತೇಜಸ್ಸಿನಿಂದಲೂ ಪೂರ್ಣನಾಗುವನು. ಮನುಷ್ಯನಲ್ಲಿ ತೇಜಸ್ಸು ನಾನಾವಿಧವಾಗಿ ಕಾಣುತ್ತಿರುವುದು. ಕೆಲವರಲ್ಲಿ ದುರ್ಗುಣವನ್ನು ಸೂಚಿ ಸುವ ಹೇಯವಾದ ತೇಜಸ್ಸು ಕಾಣುವುದು. ಕೆಲವರಲ್ಲಿ ಉತ್ತಮ ತೇಜಸ್ಸು ಕಾಣುವುದು. ಶಾಸ್ತ್ರವಿಧಿಯಂತೆ ದೇವತಾಶಕ್ತಿಯನ್ನು ಆವಾಹನೆಮಾಡಿಕೊಳ್ಳು ವುದರಿಂದ ಉತ್ತಮವೂ, ಪರಿಶುದ್ಧವೂ, ಸಾತ್ವಿಕವೂ ಆದ ದಿವ್ಯತೇಜಸ್ಸುಂಟಾಗು ವುದಲ್ಲದೆ ದೇವತಾಶಕ್ತಿಯೂ ಆವಿರ್ಭೂತವಾಗುವುದು. ಇದೇ ಗಾಯತ್ರೀ ಆವಾ ಹನೆಯ ತತ್ವವಾಗಿರುವುದು. ಅಧಿಕಾರಿಯ ಜ್ಞಾನಾಭಿವೃದ್ಧಿ, ಪವಿತ್ರತೆ, ಶ್ರದ್ಧಾ, ಭಕ್ತಿ, ಸರ್ವಭೂತದಯಾ ಮತ್ತು ನಿಯಮಾನುಷ್ಠಾನಗಳ ಶಕ್ತಿಯು ಗಾಯತ್ರೀ ದೇವತಾನುಗ್ರಹದಿಂದುಂಟಾಗಿ ಆ ದೇವಿಯು ಉಪಾಸಕನಿಗೆ ಪ್ರತ್ಯಕ್ಷಳಾಗಿ ಇವನ

ಹೃದಯಾರವಿಂದದಲ್ಲಿ ನೆಲೆಸುವಳು. ಇಂತಹ ತೇಜಸ್ಸನ್ನು ಹೊಂದಿದವರೇ ಬ್ರಾಹ್ಮಣಿಕೆಯ ಉತ್ತಮ ಸೋಪಾನವನ್ನು ಹೊಂದಿದವರಾಗಿರುತ್ತಾರೆ. ಮಹಾತ್ಮರ ತೇಜಸ್ಸು ಎಷ್ಟು ದೂರ ವ್ಯಾಪಿಸಿರುವುದೋ ಆ ಪ್ರದೇಶವೆಲ್ಲಾ ತೇಜೋಮಹಿಮೆಯಿಂದ ತುಂಬಿರುವುದು. "ಬ್ರಹ್ಮತೇಜೋಬಲಂಬಲಂ" ಎಂಬ ವಾಕ್ಯದಂತೆಯೂ " ತೇಜಸ್ಕಾಮೋ ಯಶಸ್ಕಾಮೋ ಬ್ರಹ್ಮವರ್ಚಸ್ಕಾಮೋ " ಎಂಬ ಶ್ರುತ್ಯಾಧಾರದಂತೆಯೂ ಬ್ರಹ್ಮತೇಜೋಬಲವನ್ನು ಹೊಂದಬೇಕಾದ ತತ್ವವೇ ಗಾಯತ್ರೀ ಆವಾಹನೆಯ ತತ್ವವಾಗಿರುವುದು.

ಬ್ರಾಹ್ಮಣನು ತಾನು ಕರ್ಮಮಾಡುವುದಕ್ಕೂ, ಇತರರಿಂದ ಕರ್ಮಗಳನ್ನು ಮಾಡಿಸುವುದಕ್ಕೂ, ಗಾಯತ್ರೀದೇವಿಯಿಂದ ಅನುಗೃಹೀತವಾದ ಈ ಶಕ್ತಿಯು ತಳಪಾಯದಂತೆ ಅತ್ಯವಶ್ಯಕವಾಗಿರಬೇಕು. ಗಾಯತ್ರೀದೇವಿಯು ಪರಿಶುದ್ಧವಾದ ಸತ್ವಶಕ್ತಿಯಾಗಿ ಪರಾಶಕ್ತಿಯಾಗಿರುವುದರಿಂದಲೇ ವೇದಮಾತೆಯೆನಿಸಿರುವಳು. ಕಾಲನಿರ್ಣಯಮಾಡಲು ಅಸಾಧ್ಯವೆಂದರೆ ಅನಾದಿ ಕಾಲದಿಂದಲೂ ಋಗ್ಯಜುಸ್ಸಾಮಶಾಖಿಗಳಾದ ಸಕಲರೂ ಋಷಿಪಾರಂಪರ್ಯವಾಗಿ ಅನುಷ್ಠಾನಮಾಡಿ ಅನುಭವಕ್ಕೆ ತಂದುಕೊಂಡು ನಮ್ಮ ಮತ್ತು ನಮ್ಮ ಮುಂದಿನವರ ಉದ್ಧಾರಕ್ಕಾಗಿ ಈ ತಪಶ್ಶಕ್ತಿಯ ಮಂತ್ರವನ್ನು ವಿಧಿಸಿರುವರು. ವೇದಮಾತೆಯಾದ ಗಾಯತ್ರೀದೇವಿಯ ಅನುಗ್ರಹಶಕ್ತಿಯು ಮಂತ್ರಸಿದ್ಧಿಗೆ ಅತ್ಯವಶ್ಯಕವಾಗಿ ಬೇಕು. ಯೋಗ್ಯರಾದ ಬ್ರಾಹ್ಮಣರು ಆಯುರಾರೋಗ್ಯೈಶ್ವರ್ಯಗಳ ಅಭಿವೃದ್ಧಿಗಾಗಲೀ, ಪುತ್ರಪ್ರಾಪ್ತಿಗಾಗಲೀ, ತತ್ವವಿಚಾರಕ್ಕಾಗಲೀ ಆಶೀರ್ವದಿಸಿದರೆ ಅವು ತಪ್ಪದೆ ಸಿದ್ಧಿಸುವುದರ ಮಹಿಮೆಯು ಗಾಯತ್ರೀ ಅನುಗ್ರಹರೂಪವಾದ ತಪಸ್ಸಿನ ಫಲವಲ್ಲದೆ ಬೇರೆಯಲ್ಲ. ನಮ್ಮ ಭರತಖಂಡದಲ್ಲಿ ಯೋಗ್ಯರಾದ ಬ್ರಾಹ್ಮಣರ ಆಶೀರ್ವಚನವನ್ನು ಸಮಸ್ತಕಾರ್ಯಗಳಲ್ಲಿಯೂ ಅಪೇಕ್ಷಿಸುವುದಕ್ಕೆ ಇದೇ ಕಾರಣ ಶ್ರೋತ್ರಿಯಬ್ರಾಹ್ಮಣರು ವೇದಮಂತ್ರದಿಂದ ಆಶೀರ್ವದಿಸಿದರೆ ಅದರಂತೆಯೇ ಫಲಿಸುವುದು. ಈಗಿನ ಕಾಲದಲ್ಲಿ ಈ ಮಹತ್ವದ ಅಧಿಕಾರಿಗಳು ವಿರಳರಾಗಿದ್ದರೂ ನಿಶ್ಶೇಷವಾಗಿ ನಶಿಸಿರುವುದಿಲ್ಲ. ಈಗಲೂ ಇಂತಹ ಮಹನೀಯರು ಇದ್ದೇ ಇರುವರು.

ಗಾಯತ್ರೀ ಎಂಬುದು ಛಂದಸ್ಸಿನ ಹೆಸರೇ ಹೊರತು ದೇವತಾಶಕ್ತಿಯಲ್ಲವೆಂದು ಕೆಲವರು ಹೇಳಬಹುದು. ಇದಕ್ಕೆ ಸಮಾಧಾನವೇನೆಂದರೆ, ಗಾಯತ್ರೀ ಎಂಬ ಹೆಸರು ಛಂದಸ್ಸಿಗೆ ಮಾತ್ರವಾಗಿದ್ದರೆ ಗಾಯತ್ರೀಮಾವಾಹಯಾಮಿ ಎಂಬದಾಗಿ ಹೇಳುವ ವೇದವಾಕ್ಯದ ಅರ್ಥವು ಛಂದಸ್ಸನ್ನು ಆವಾಹನೆ ಮಾಡಿಕೊಳ್ಳಬೇಕೆಂದಾಗುವುದು. ಮಾತ್ರೆ ಮತ್ತು ಅಕ್ಷರಸಂಖ್ಯೆಯನ್ನು ಕ್ಲಿಪ್ತಮಾಡಿ ಅಳತೆಯಿಂದ ಗೊತ್ತುಮಾಡಿ ಪಾದಸ್ವರೂಪವನ್ನು ನಿರ್ಣಯಮಾಡುವುದಕ್ಕೆ

ಛಂದಸ್ಸೆಂದು ಹೆಸರು. ಹೀಗಿರಲು ಛಂದಸ್ಸನ್ನು ಆವಾಹನೆಮಾಡಿಕೊಳ್ಳುವುದು ಹೇಗೆ? ಅಲ್ಲದೆ "ಓಜೋಽಸಿ, ಸಹೋಽಸಿ, ದೇವಾನಾಂಧಾಮನಾಮಾಸಿ" ಮುಂತಾದ ಗಾಯತ್ರೀದೇವಿಯ ಅನೇಕ ಮಹಿಮೆಗಳನ್ನು ಹೇಳಿರುವುದು ಛಂದಸ್ಸಿಗೆ ಹೇಗೆ ಅನ್ವಯವಾಗುವುದು? ಮಾಡಿದ ಪಾಪಗಳನ್ನೆಲ್ಲ ಛಂದಸ್ಸು ಹೇಗೆ ಪರಿಹರಿಸ ಬಲ್ಲದು? ಅಲ್ಲದೆ "ಗಾಯತ್ರ್ಯಾಗಾಯತ್ರೀಛಂದೋ" ಅಂದರೆ ಗಾಯತ್ರೀ ಮಂತ್ರಕ್ಕೆ ಗಾಯತ್ರೀ ಛಂದಸ್ಸೆಂಬದಾಗಿ ವೇದವೇ ತಿಳಿಸುವಾಗ ಗಾಯತ್ರೀ ಎಂಬುದು ಛಂದಸ್ಸೆಂತಲೇ ಹೇಳುವುದು ಹೇಗೆ ಸಮ್ಮತವಾಗುವುದು? ಆದುದ ರಿಂದ ವೇದಮಾತೆಯಾದ ಗಾಯತ್ರೀಪರದೇವತಾ ಎಂಬುದು ಇದ್ದೇ ಇರುತ್ತೆಂ ಬುದು ಸ್ಪಷ್ಟಪಡುವುದು.

ಗಾಯತ್ರಿಯನ್ನು ಗಾಯತ್ರೀಪ್ರತಿಪಾದ್ಯನಾರಾಯಣನೆಂದು ಕೆಲವರು ಅಭಿ ಪ್ರಾಯಪಡಬಹುದು. ಸರ್ವವೂ ನಾರಾಯಣ ಸ್ವರೂಪವೆಂಬುದಾಗಿ ಹೇಳುವು ದೇನೋ ಸರಿ. ಆದರೆ ಯಾವ ಸ್ಥಿತಿಯಲ್ಲಿ ಹೇಗೆ ಹೇಳಬೇಕೋ ಆ ಸ್ಥಿತಿಯಲ್ಲಿ ಹಾಗೆಯೇ ಹೇಳಬೇಕಲ್ಲದೆ ಎಲ್ಲಾ ಸ್ಥಿತಿಯಲ್ಲಿಯೂ ಹೇಳುವುದು ಸರಿಯಲ್ಲ. ಅದ್ವೈತಸ್ಥಿತಿಯಲ್ಲಿ ಸರ್ವವೂ ಒಂದೇ ಎಂಬದಾಗಿ ಹೇಳಬಹುದಲ್ಲದೆ ದ್ವೈತಸ್ಥಿತಿ ಯಲ್ಲಿ ಒಂದೇ ಎಂಬದಾಗಿ ಹೇಗೆ ಹೇಳುವುದು? ನಾವು ಕರ್ಮಮಾಡುವುದು ದ್ವೈತಸ್ಥಿತಿಯಾಗಿದೆ. ತಾಯಿಗೆ ನಮಸ್ಕಾರ ಮಾಡುವಾಗ ತಾಯಿಯನ್ನು ತಂದೆ ಯೆಂದು ಹೇಗೆ ಭಾವಿಸಿಕೊಳ್ಳುವುದು? 'ಆಯಾತು ವರದಾ ದೇವಿ' ಎಂಬ ಮಂತ್ರ ದಿಂದ ವೇದಮಾತೆಯಾದ ಗಾಯತ್ರೀದೇವಿಯನ್ನೇ ಪ್ರಾರ್ಥಿಸುತ್ತಿರುವುದು ಕೊಂಚವೂ ಸಂದೇಹವಿಲ್ಲದೆ ಪ್ರತ್ಯಕ್ಷವಾಗಿದೆ. ಮಾಡುವುದು ಸಂಧ್ಯಾಕರ್ಮ. ಪ್ರಾರ್ಥಿಸುವುದು ಗಾಯತ್ರೀದೇವಿಯನ್ನು. ಜಪಮಾಡುವುದು ಗಾಯತ್ರೀಮಂತ್ರ ವನ್ನು. ಹೀಗಿರುವಾಗ ತಾಯಿಗೆ ವಂದನೆಮಾಡುವಾಗ ತಂದೆಯೆಂದು ಹೇಗೆ ಭಾವಿಸಬೇಕೆಂಬುವುದು ತಿಳಿಯಲಸಾಧ್ಯ. ಸರ್ವವೂ 'ನಾರಾಯಣ' ಎಂಬದಾಗಿ ಒಬ್ಬರು ಹೇಳಿದರೆ ಮತ್ತೊಬ್ಬರು ಸರ್ವವೂ 'ಲಕ್ಷ್ಮೀ' ಎಂದು ಹೇಳುವವರೂ ಇರುತ್ತಾರೆ. ಶ್ರುತಿ, ಸ್ಮೃತಿ, ಪುರಾಣ, ಇತಿಹಾಸಗಳಲ್ಲೆಲ್ಲಾ ಪಿತನಿಗಿಂತ ಮಾತೆಗೇ ಹೆಚ್ಚುಪ್ರಾಶಸ್ತ್ಯವಿರುವುದಲ್ಲದೆ ಲೋಕದ ಆಚರಣೆಯಲ್ಲಿಯೂ ಶ್ರೇಷ್ಠತೆ ಯನ್ನು ಕೊಟ್ಟಿದೆ. "ಮಾತಾಪೂರ್ವರೂಪಂ ಪಿತೋತ್ತರರೂಪಂ; ಮಾತೃ ದೇವೋಭವ ಪಿತೃದೇವೋಭವ; ಮಾತೃಭ್ಯೋನಮಃ ಪಿತೃಭ್ಯೋನಮಃ" ಎಂಬ ಶ್ರುತಿವಾಕ್ಯಗಳಂತೆ ತಾಯಿಗೆ ಪ್ರಥಮ ಪ್ರಾಶಸ್ತ್ಯವಿದೆ. ಆದುದರಿಂದ ತಾಯಿಯ ಅನುಗ್ರಹಕ್ಕೂ ಅಗತ್ಯವಾಗಿ ಪಾತ್ರರಾಗಬೇಕು. ತಾಯಿಯು ಮಕ್ಕಳನ್ನು ತಂದೆ ಯಿಂದ ಪ್ರತ್ಯೇಕಿಸುವುದಿಲ್ಲ. ಆದುದರಿಂದ ಲೋಕಜನನಿಯಾದ ಗಾಯತ್ರೀ

ಪರದೇವತೆಯನ್ನು ಪ್ರಾರ್ಥಿಸಿ ಆಕೆಯ ಅನುಗ್ರಹಕ್ಕೂ ಪಾತ್ರರಾಗಬೇಕೆಂಬುದೇ ಈ ಮಂತ್ರದ ತತ್ವಾರ್ಥ. ಈ ಮೇಲಿನ ವಿಚಾರವನ್ನು ಕೆಲವರ ಸಂಶಯನಿವಾರಣಾರ್ಥವಾಗಿ ಬರೆದಿದೆ.

ಈ ಮಂತ್ರದಲ್ಲಿ ಅಮೋಘವಾದ ಇನ್ನೊಂದು ತತ್ವಾರ್ಥವೂ ಇರುವುದು. ಈ ತತ್ವಾರ್ಥವು ಅಂತರ್ಮುಖದ ಅನುಭವಕ್ಕೆ ಸೇರಿದುದು ಮತ್ತು ಬಿಂದು, ನಾದ, ಕಳಾ, ಸ್ವರೂಪವಾದುದು. ಧ್ಯಾನದ ಪ್ರಾರಂಭದಿಂದ ಆತ್ಮಸಾಕ್ಷಾತ್ಕಾರದವರೆಗಿನ ಅನುಭವರೂಪವಾಗಿರುವುದು. ಗಾಯತ್ರೀ, ಸಾವಿತ್ರೀ, ಸರಸ್ವತೀ, ಶಕ್ತಿಗಳಲ್ಲಿ ಸಾವಿತ್ರಿಯು ಸಕಲ ಲೋಕವನ್ನೂ ಬೆಳಗುತಲಿರುವ ಸೂರ್ಯಶಕ್ತಿಸ್ವರೂಪಳು. ಪ್ರಪಂಚವನ್ನು ಬೆಳಗುವ, ಪ್ರಾಣಿಗಳ ಕರ್ಮಪ್ರೇರಕವಾಗಿರುವ ಶಕ್ತಿಯು ಸಾವಿತ್ರಿಯು. ಇಂತಹ ಶಕ್ತಿಯನ್ನು ಆವಾಹನೆಮಾಡಿಕೊಳ್ಳುವುದರಿಂದ ತಪಶ್ಶಕ್ತಿಯನ್ನುಅಧಿಕಾರಿಗೆ ಅನುಗ್ರಹಿಸುತ್ತಾಳೆ. ಇದು ಬಾಹ್ಯಕ್ಕೆಸೇರಿದುದು. ಅಧಿಕಾರಿಯು ಭ್ರೂಮಧ್ಯದಲ್ಲಿ ದೃಷ್ಟಿಯಿಟ್ಟು ಧ್ಯಾನಮಾಡುವಾಗ ಕೆಂಪು ಮತ್ತು ನೀಲಮಿಶ್ರವಾದ ತೇಜಃಕಿರಣಗಳ ನೇರುವಿಕೆಯಿಂದ ಪ್ರಾತಃಕಾಲದ ಸೂರ್ಯಬಿಂಬದಂತೆ ದುಂಡಾದ ತೇಜೋರೂಪವು ಗೋಚರವಾಗುವುದು. ಇದಕ್ಕೆ 'ಬಿಂದು' ಎಂದು ಹೆಸರು. ಈ ತೇಜೋಬಿಂದುವೇ ಸವಿತೃಶಕ್ತಿಯಾಗಿ ಸಾವಿತ್ರೀ ಎಂದೆನಿಸಿಕೊಳ್ಳುವುದು. ಇಂತಹ ಬಿಂದುವನ್ನು ಆವಾಹನೆಯೆಂದರೆ ಅದೇನಾನೆಂದು ತಾದಾತ್ಮ್ಯದಿಂದ ಧರಿಸಿಕೊಳ್ಳದಿದ್ದರೆ ಧ್ಯಾನದಲ್ಲಿ ಸ್ಥಿರತ್ವವುಂಟಾಗುವುದಿಲ್ಲ ಮತ್ತು ಧ್ಯಾನಾಭ್ಯಾಸವು ವೃದ್ಧಿಹೊಂದುವುದಿಲ್ಲ. ಬಿಂದುವಿನ ತಾದಾತ್ಮ್ಯದಿಂದ ಅಭ್ಯಾಸಮಾಡುವುದೇ ಧ್ಯಾನವೆನಿಸಿಕೊಳ್ಳುವುದು. ಶ್ರೀವಿದ್ಯಾರಣ್ಯರುಕೂಡ 'ಯೋಹಂಸೋಸೌಯೋಸೌಸೋಹಂ, ಇತಿವಯಂಧ್ಯಾಯೇಮ' ಅಂದರೆ ಧ್ಯಾತೃವಿಗೂ ಧ್ಯೇಯವಸ್ತುವಿಗೂ ಅಭೇದವಿದ್ದರೇನೇ ಧ್ಯಾನವೆನಿಸುವುದೆಂದು ಹೇಳಿರುತ್ತಾರೆ. ಆದುದರಿಂದ ಅಂತರ್ಮುಖದಲ್ಲಿ ತೇಜೋಬಿಂದುವನ್ನು ತಾದಾತ್ಮ್ಯದಿಂದ ಧರಿಸಿ ಧ್ಯಾನಿಸುವುದೇ 'ಸಾವಿತ್ರೀಮಾವಾಹಯಾಮಿ' ಎಂಬುದರ ತತ್ವಾರ್ಥವಾಗಿರುವುದು.

**[ಈ ವಿಚಾರವು ರಾಮಾಯಣದ ಅಂತರಾರ್ಥದಲ್ಲಿ ಶ್ರೀರಾಮನು ಲಂಕೆಯನ್ನು ಸೇರಿದಾರಭ್ಯ ಇಂದ್ರನ ರಥಾರೋಹಣದ ವರೆಗಿನ ಕಥಾತತ್ವಗಳಲ್ಲಿರುವುದು]**

ತೇಜೋಬಿಂದುವನ್ನು ಧರಿಸಿ ಧ್ಯಾನಮಾಡುವ ಅಭ್ಯಾಸವು ಬಲಿತರೆ ಅಂತರ್ಮುಖದಲ್ಲಿ ಓಂಕಾರನಾದೋತ್ಪತ್ತಿಯಾಗುವುದು. ಈ ಓಂಕಾರನಾದವನ್ನು ಆವಾಹನೆಯೆಂದರೆ ತಾದಾತ್ಮ್ಯದಿಂದ ಧರಿಸಿ ಧ್ಯಾನಮಾಡುವುದೇ 'ಸರಸ್ವತೀಮಾವಾಹಯಾಮಿ' ಎಂಬುದರ ತತ್ವಾರ್ಥವಾಗಿರುವುದು. ಸರಸ್ವತಿಯೇ ನಾದಬ್ರಹ್ಮಸ್ವರೂಪಳು. ವಾಕ್ಕು, ವಿದ್ಯೆಗಳಿಗೆ ಅಧಿದೇವತೆಯಾದುದರಿಂದ ಉಪಾಸಕನಿಗೆ ಅನುಗ್ರ

ಹಿಸುವಳು. ತೇಜೋಬಿಂದುವಿನ ಸ್ಥಿತಿಯಲ್ಲಿ ಬಿಂದುವೇ ತಾನೆಂದು ಹೇಗೆ ಧ್ಯಾನಿಸಬೇಕೋ ಹಾಗೆಯೇ ಓಂಕಾರನಾದವೇ ತಾನೆಂದು ಧ್ಯಾನಿಸದಿದ್ದರೆ ಧ್ಯಾನದಲ್ಲಿ ನಿಲುಗಡೆಯಾಗದೆ ಖಂಡಿತವಾಗಿ ಬಹಿರ್ಮುಖವಾಗಲೇ ಬೇಕಾಗುವುದು. ಇದು ಶಾಸ್ತ್ರಾಧಾರವಲ್ಲದೆ ಅನುಭವದಿಂದಲೂ ನಿರ್ಣಯಿಸಲ್ಪಟ್ಟ ವಿಷಯವಾಗಿರುವುದು. ಆದುದರಿಂದ ನಾದದಲ್ಲಿ ತನ್ಮಯನಾಗಿ ಅದನ್ನು ಅನುಸಂಧಾನಮಾಡುವುದೇ 'ಸರಸ್ವತೀಮಾವಾಹಯಾಮಿ' ಎನ್ನುವುದರ ತತ್ವವು.

[ಈ ವಿಚಾರವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಇಂದ್ರನ ರಥಾರೋಹಣದಿಂದ ರಾವಣ ವಧೆಯವರೆಗಿನ ಕಥೆಯ ತತ್ವಗಳಲ್ಲಿರುವುದು]

ಬಿಂದು, ನಾದ, ಕಳೆಗಳಲ್ಲಿ ಕಳಾಸ್ವರೂಪವೇ ಗಾಯತ್ರೀ. ಕಳಾ ಎಂದರೆ ಶಕ್ತಿ. ಶಕ್ತಿಯನ್ನು ಕಣ್ಣಿನಿಂದ ನೋಡುವುದಕ್ಕೂ ಕಿವಿಯಿಂದ ಕೇಳುವುದಕ್ಕೂ ಸಾಧ್ಯವಿಲ್ಲ. ಅಲ್ಲದೆ ಶುದ್ಧಶಕ್ತಿಯು ಪರಮಾತ್ಮನಿಂದ ಹೇಗೆ ಉದಯಿಸುವುದೋ ಮತ್ತು ಪರಮಾತ್ಮನಲ್ಲಿ ಅಭೇದವಾಗುವಂತೆ ಹೇಗೆ ಸೇರುವುದೋ ಅದನ್ನು ತಿಳಿಯಲಸಾಧ್ಯ. ಆದುದರಿಂದ ಶುದ್ಧಶಕ್ತಿಯಾದ ಗಾಯತ್ರಿಯನ್ನು ಆವಾಹನೆ ಮಾಡಿಕೊಳ್ಳುವುದು ಹೇಗೆಂದರೆ:— ನಾದಾನುಸಂಧಾನದಿಂದ ಧ್ಯಾನಿಸುವಾಗ ನಾದವು ಬಹು ಸೂಕ್ಷ್ಮವಾಗುತ್ತಾ ಬರುವುದು. ಈ ಕಾಲದಲ್ಲಿ ನೋಡುವ ಮತ್ತು ಕೇಳುವವುಗಳ್ಯಾವವೂ ಶುದ್ಧಶಕ್ತಿಸ್ವರೂಪವಾದ ಗಾಯತ್ರಿಯಲ್ಲವೆಂದೂ, ಇಂದ್ರಿಯಾತೀತವಾಗಿರುವ ಪರಾಶಕ್ತಿಯಾದ ಗಾಯತ್ರೀದೇವಿಯೇ ನಾನೆಂದೂ ಧ್ಯಾನದಲ್ಲಿ ಚೆನ್ನಾಗಿ ಮುಳುಗುವುದೇ 'ಗಾಯತ್ರೀಮಾವಾಹಯಾಮಿ' ಎಂಬುದರ ತತ್ವಾರ್ಥವು. ಅಂದರೆ ಸಮುದ್ರದ ಆಳವು ಗೊತ್ತಿಲ್ಲದಿದ್ದರೂ ಕೆಳಗಿನವರೆಗೂ ಮುಳುಗಿಕೊಂಡೇ ಹೋಗುವಂತೆ ಓಂಕಾರನಾದವು ಸೂಕ್ಷ್ಮವಾಗುವಕಾಲದಲ್ಲಿ ಧ್ಯಾನದಿಂದ ಹಿಂತಿರುಗದೆ ಸಮಾಧಿಯಲ್ಲಿ ಪರಬ್ರಹ್ಮಸ್ವರೂಪವಾದ ಗಾಯತ್ರೀದೇವಿಯೇ ನಾನೆಂದು ಮುಳುಗುವುದೇ 'ಗಾಯತ್ರೀಮಾವಾಹಯಾಮಿ' ಎನ್ನುವುದರ ತತ್ವಾರ್ಥವು. ಹೀಗೆ ಮುಳುಗುವುದರಿಂದ ನಾನು, ನೀನು, ಎಂಬ ತಿಳಿವಳಿಕೆ ಇಲ್ಲದ ಮತ್ತು ದೇಹದ ಯಾವ ವ್ಯಾಪಾರವೂ ಇಲ್ಲದ ವಿಷ್ಣುಸಾಯುಜ್ಯ ಪದವಿಯು ದೊರೆಯುವುದು. ಇದೇ ಗಾಯತ್ರೀಪದವಿ, ಲಕ್ಷ್ಮೀಪದವಿ, ಅದ್ವೈತಸ್ಥಿತಿ, ನಿರ್ವಿಕಲ್ಪಸಮಾಧಿ. ಇದೇ ಸಂಪತ್ತಿನ ನಿಜಸ್ವರೂಪವಾದ ಬ್ರಹ್ಮಾನಂದದ ಸ್ಥಿತಿಯಾದುದರಿಂದ ಶ್ರಿಯಮಾವಾಹಯಾಮಿ ಎಂಬ ತತ್ವವೂ ಆಗಿರುವುದು.

[ಈ ತತ್ವವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ರಾವಣನ ನಿಗ್ರಹ ಮತ್ತು ಸೀತಾಗ್ನಿಪ್ರವೇಶದ ಕಥೆಯ ತತ್ವಗಳಲ್ಲಿರುವುದು.]

ಗಾಯತ್ರ್ಯಾ ಗಾಯತ್ರೀ ಛಂದೋ । ವಿಶ್ವಾಮಿತ್ರಋಷಿಃ । ಸವಿತಾದೇವತಾ। ಅಗ್ನಿರ್ಮುಖಂ । ಬ್ರಹ್ಮಾಶಿರಃ । ವಿಷ್ಣುಹೃದಯಂ । ರುದ್ರಶ್ಶಿಖಾ । ಪೃಥಿವೀ

ಯೋನಿಃ। ಪ್ರಾಣಾಪಾನ ವ್ಯಾನೋದಾನ ಸಮಾನಾ ಸಪ್ರಾಣಾ ಶ್ವೇತ ವರ್ಣಾ ಸಾಂಖ್ಯಾಯನಸ ಗೋತ್ರಾ। ಗಾಯತ್ರೀ ಚತುರ್ವಿಗ್ಂಶತ್ಯಕ್ಷರಾ ತ್ರಿಪದಾ ಷಟ್ಕುಕ್ಷಿಃ। ಪಂಚಶೀರ್ಷೋಽಪನಯನೇ ವಿನಿಯೋಗಃ ॥

ತಾ॥ ಗಾಯತ್ರ್ಯಾ ಗಾಯತ್ರೀ ಛಂದೋ — ಪದಗಳಲ್ಲಿನ ಮಾತ್ರೆ ಮತ್ತು ಅಕ್ಷರಗಳ ಎಣಿಕೆಯಮೇಲೆ ಛಂದಸ್ಸೆಂಬುದು ನಿರ್ಣಯವಾಗಿ ಗಾಯತ್ರೀ ಮುಂತಾದ ಹೆಸರುಗಳುಳ್ಳ ಅನೇಕ ಛಂಗಸ್ಸುಗಳಿವೆ. ಗಾಯತ್ರೀಪರದೇವತಾ ಮಂತ್ರವಾದ "ತತ್ಸವಿತುರ್ವರೇಣಿಯಂ, ಭರ್ಗೋದೇವಸ್ಯ ಧೀಮಹಿ, ಧಿಯೋ ಯೋನಃ ಪ್ರಚೋದಯಾತ್" ಎಂಬ ಈ ಮಂತ್ರಕ್ಕೆ ಛಂದಸ್ಸುಗಳಲ್ಲಿ ಗಾಯತ್ರೀ ಛಂದಸ್ಸು.

ವಿಶ್ವಾಮಿತ್ರಋಷಿಃ — ವಿಶ್ವಾಮಿತ್ರಋಷಿಗಳು ಗಾಯತ್ರೀದೇವಿಯನ್ನು ಉಪಾಸಿಸಿ ಆ ದೇವಿಯ ಅನುಗ್ರಹಕ್ಕೆ ಪಾತ್ರರಾಗಿ ಲೋಕಹಿತಕ್ಕಾಗಿ ಆ ದೇವಿಯ ಮಹಾಮಹಿಮೆಯನ್ನು ಪ್ರಚಾರಕ್ಕೆ ತಂದವರಾದುದರಿಂದ ಈ ಮಂತ್ರಕ್ಕೆ ಇವರೇ ಋಷಿಗಳಾದರು. ನಾವು ಈಗ ಗಾಯತ್ರೀ ಉಪಾಸನೆಮಾಡುವುದು ಕೂಡ ಮಹಾತ್ಮರಾದ ವಿಶ್ವಾಮಿತ್ರಋಷಿಗಳ ಅನುಗ್ರಹವೇ ಆಗಿದೆ.

ಸವಿತಾದೇವತಾ— ಗಾಯತ್ರೀ ದೇವಿಯ ಇರುವಿಕೆಯನ್ನು ಪ್ರಕಾಶಪಡಿಸುವವನು ಸೂರ್ಯನು. ಅಂದರೆ ಗಾಯತ್ರೀದೇವಿಯೇ ಪ್ರಧಾನದೇವತೆಯು. ಸೂರ್ಯನೇ ಅಧಿದೇವತೆಯು. ಅಂದರೆ ಸೂರ್ಯಾಂತರ್ಗತವಾಗಿ ಪರಾಶಕ್ತಿಯಾದ ಗಾಯತ್ರೀ ದೇವಿಯು ಇರುವಳು. ಗಾಯತ್ರೀಸ್ವರೂಪವನ್ನು ನಮಗೆ ಪ್ರದರ್ಶಿಸಿ ಕೊಡುವವನು ಅಥವಾ ಪ್ರಚಾರಕ್ಕೆ ತರುವವನು ಸೂರ್ಯನು. ಆದುದರಿಂದ ಸೂರ್ಯನು ಗಾಯತ್ರಿಗೆ ದೇವತೆಯಾಗಿರುತ್ತಾನೆ.

ಗಾಯತ್ರೀದೇವಿಗೆ ಶಿರಸ್ಸಿನಲ್ಲಿ ಚತುರ್ಮುಖಬ್ರಹ್ಮ, ಮುಖದಲ್ಲಿ ಅಗ್ನಿ, ಹೃದಯದಲ್ಲಿ ವಿಷ್ಣು, ಶಿಖೆಯಲ್ಲಿ ರುದ್ರ, ಪೃಥ್ವಿಯೇ ಆವಾಸಸ್ಥಳ (ಕೂಡಿಕೊಳ್ಳುವ ಸ್ಥಳ), ಪ್ರಾಣಾಪಾನ ವ್ಯಾನೋದಾನ ಸಮಾನವೆಂಬ ಪಂಚಪ್ರಾಣವಾಯುಗಳು ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯುಗಳೆಂಬ ಪಂಚ ಉಪ ವಾಯುಗಳು; ಶ್ವೇತವರ್ಣ. ಇಂತಹ ಸ್ವರೂಪಳು.

ಸಾಂಖ್ಯಾಯನಸಗೋತ್ರಾ — 'ಸಾಂಖ್ಯಾ' ಎಂದರೆ ಜ್ಞಾನಬೋಧಕ 'ಅಯನ' ಎಂದರೆ ಮಾರ್ಗ. 'ಗೋತ್ರ' ಎಂದರೆ ಉದ್ಭವಿಸು ಅಥವಾ ಅವತರಿಸು. ಮುಖ್ಯತಾತ್ಪರ್ಯವೇನೆಂದರೆ— ಗಾಯತ್ರೀದೇವಿಯು ಜ್ಞಾನಮಾರ್ಗದಲ್ಲಿ ಅವತರಿಸುವುವಳಾಗಿರುವವಳೆಂಬ ತತ್ವಾರ್ಥವು. ಗಾಯತ್ರೀದೇವಿಯ ಮಂತ್ರವು ಇಪ್ಪತ್ತು ನಾಲಕ್ಕು ಅಕ್ಷರವುಳ್ಳದ್ದು. ಮೂರು ಪಾದಗಳುಳ್ಳದ್ದು. ನಾಲಕ್ಕು

ದಿಕ್ಕುಗಳು, ಮೇಲೆ ಮತ್ತು ಕೆಳಗೆ ಈ ಆರೂ ಗಾಯತ್ರಿಗೆ ಉದರಸ್ಥಾನಗಳೆಂದರೆ ಬ್ರಹ್ಮಾಂಡಸ್ವರೂಪಳು. ಪಿಂಡಾಂಡದಲ್ಲಿಯ ಷಟ್ಚಕ್ರಗಳನ್ನು ಷಟ್ಕುಕ್ಷಿಗಳೆಂದು ಹೇಳಬಹುದು.

ಪಂಚಶೀರ್ಷಃ—"ಆದಿತ್ಯ ಮಂಬಿಕಾಂ ವಿಷ್ಣುಂ ಗಣನಾಥಂ ಮಹೇಶ್ವರಂ" ಎಂಬ ಪಂಚಾಯತನ ಶಕ್ತಿಗಳೇ ಪಂಚಶಿರಸ್ಸುಗಳಾಗಿರುತ್ತವೆ. ಅಂದರೆ ಪಂಚ ಬ್ರಹ್ಮಸ್ವರೂಪಳು. ಉಪನಯನೇ ವಿನಿಯೋಗಃ— ಉಪನಯನದಲ್ಲಿ ವೇದಾಧಿಕಾರವುಂಟಾಗುವುದಕ್ಕೆ ಗಾಯತ್ರೀ ಮಂತ್ರವನ್ನು ಉಪದೇಶಿಸುವರು.

ಈ ಮಂತ್ರವು ಗಾಯತ್ರೀದೇವಿಯ ಮಂತ್ರವಿಭಾಗ ಮತ್ತು ಅದನ್ನು ಪ್ರಚುರಕ್ಕೆ ತಂದ ಋಷಿ ಮುಂತಾದ ವಿಷಯಗಳನ್ನು ಸೂಚಿಸುತ್ತದೆ. ಗಾಯತ್ರೀ ಮಂತ್ರದ ಋಷಿ, ದೇವತೆ, ಮುಂತಾದವರಿಗೆ ನಮಸ್ಕರಿಸಿ ಅವರ ಅನುಗ್ರಹಕ್ಕೂ ಪಾತ್ರರಾಗಬೇಕು.

## ೪ ಪ್ರಾಣಾಯಾಮ

### ಋಗ್ಯಜುಸ್ಸಾಮಶಾಖಾ ಬ್ರಾಹ್ಮಣರು

ಪ್ರಣವಸ್ಯ ಪರಬ್ರಹ್ಮಋಷಿಃ । ಪರಮಾತ್ಮಾ ದೇವತಾ । ದೈವೀಗಾಯತ್ರೀ ಛಂದಃ । ಪ್ರಾಣಾಯಾಮೇ ವಿನಿಯೋಗಃ । ಓಂಭೂಃ ಓಂಭುವಃ ಓಗ್ಂಸುವಃ ಓಂಮಹಃ ಓಂಜನಃ ಓಂತಪಃ ಓಗ್ಂಸತ್ಯಂ । ಓಂತತ್ಸವಿತುರ್ವರೇಣಿಯಂ ಭರ್ಗೋದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯಾತ್ । ಓಮಾಪೋ ಜ್ಯೋತೀರಸೋಮೃತಂ ಬ್ರಹ್ಮ ಭೂರ್ಭುವಸ್ಸುವರೋಂ ॥

### ಕ್ಷತ್ರಿಯರು

ಭೂಮ್ಯಾದಿ ಊರ್ಧ್ವಲೋಕಸ್ತು ಉಪರಿಸ್ಥೋ ದಿವಾಕರಃ ।
ದಶಪ್ರಣವ ಸಂಯುಕ್ತಃ ಪ್ರಾಣಾಯಾಮಃ ಪ್ರಕೀರ್ತಿತಃ ॥

### ವೈಶ್ಯರು

ಭೂಮ್ಯಾದೇ ರೂರ್ಧ್ವಲೋಕಸ್ಯ ಉಪರಿಸ್ಥೋ ದಿವಾಕರಃ ।
ದಶಪ್ರಣವಸಂಯುಕ್ತಂ ತ್ರಿರಾವೃತ್ಯಾ ಪುನಃಪುನಃ ॥
ಅಂಗುಳ್ಯಗ್ರೈ ರ್ನಾಸಿಕಾಗ್ರಂ ಧಾರಣಂ ಪಾಪನಾಶನಂ ।
ಪ್ರಾಣಾಯಾಮ ಮಿದಂ ಪ್ರೋಕ್ತ ಮೃಷಿಭಿಃ ಪರಿಕಲ್ಪಿತಂ ॥

ಈ ಮಂತ್ರಗಳಲ್ಲಿ ಪ್ರಾಣಾಯಾಮದ ಅನುಷ್ಠಾನ ಮತ್ತು ಪ್ರಣವದ ವಿಚಾರಗಳೆಲ್ಲಾ ಬರಬೇಕಾಗಿರುವುದರಿಂದ ಇದರವಿವರವು ತತ್ವಾರ್ಥದಲ್ಲಿಬರೆದಿರುವುದು.

ತತ್ವ॥ ಪ್ರಾಣಾಯಾಮ ಮಂತ್ರದ ತತ್ವವು ಬಹು ಗಹನವಾದುದು. ಈ ತತ್ವ

ವನ್ನರಿಯಲು ಶಾಸ್ತ್ರವಿಚಾರಜ್ಞಾನ ಬೇಕು. ಮೂಗುಹಿಡಿದು ಮಂತ್ರ ಪುನಶ್ಚರಣೆ ಮಾಡುವ ಮಂದಾಧಿಕಾರಿಯ ಸೋಪಾನದಿಂದ ಬಹು ಉತ್ತಮವಾದ ಸೋಪಾನದ ಅಧಿಕಾರಿಯ ಆಚರಣೆಯ ತತ್ವಗಳನ್ನೆಲ್ಲಾ ಇದು ಒಳಗೊಂಡಿರುವುದು. ವೀಣಾ ತತ್ತ್ವಾರ್ಥ ಭಾಗದಲ್ಲಿ ಚಿತ್ರಪಠದಲ್ಲಿ "ಭೂಃ, ಭುವಃ" ಮುಂತಾದ ಸಪ್ತವ್ಯಾಹೃತಿ ಗಳನ್ನು ತೋರಿಸಿರುವುದಷ್ಟೆ! ನಮ್ಮಲ್ಲಿಯೇ 'ಭೂಃ, ಭುವಃ' ಮುಂತಾದ ಲೋಕ ಗಳ ತತ್ವಗಳನ್ನೂ ದಾಟಿ ಶಿರಸ್ಸಿನಲ್ಲಿ "ಸತ್ಯಂ" ತತ್ವವಾದ ಪರಬ್ರಹ್ಮಸ್ಥಿತಿಯನ್ನು ಹೊಂದಬೇಕೆಂಬ ಭಾವನೆಯಿಂದಲೂ ಅಮೃತ ಮತ್ತು ಜ್ಯೋತಿರೂಪವಾಗಿರುವ ಆ ಪರಬ್ರಹ್ಮವೇ ಸರ್ವವೂ ಎಂಬ ಭಾವನೆಯಿಂದಲೂ ಮೂಗನ್ನು ಹಿಡಿದು ಮಂತ್ರವನ್ನು ಪುನಶ್ಚರಿಸಬೇಕು. ಪ್ರಾಣಾಯಾಮದ ಅನುಷ್ಠಾನಕಾಲದಲ್ಲಿಯೂ ಈ ಭಾವವನ್ನು ಮನಸ್ಸಿನಲ್ಲಿ ಧರಿಸಿರಬೇಕು. ಪ್ರತಿಕರ್ಮದಲ್ಲಿಯೂ ಪ್ರಾಣಾಯಾಮ ಬರುವುದು. ಎಲ್ಲಾ ಸಂದರ್ಭದಲ್ಲಿಯೂ ಅನುಷ್ಠಾನದ ಕಾರ್ಯವನ್ನೇ ಮಾಡಲು ಸಾಧ್ಯವಾಗುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಮೇಲೆ ತಿಳಿಸಿದ ಭಾವನೆಯೊಡನೆ ಮಂತ್ರಪುನಶ್ಚರಣೆ ಮಾಡಿದಲ್ಲಿ ಅದು ಸಾರ್ಥಕವಾಗಿ ತಕ್ಕ ಫಲವು ದೊರಕುವುದು. ಉಪಾಸನಾಭಾಗದಲ್ಲಿ ಎಲ್ಲಿ ಪ್ರಾಣಾಯಾಮದ ಕರ್ತವ್ಯಬರುವುದೋ ಅಲ್ಲಿ ಅನು ಷ್ಠಾನ ಮಾಡಲೇಬೇಕು. ಪ್ರಾಣಾಯಾಮದ ಸಹಾಯವಿಲ್ಲದೆ ಉಪಾಸನೆಯು ಸಿದ್ಧಿಸಲಾರದು. ಅನುಷ್ಠಿಸುವ ಕರ್ತವ್ಯವನ್ನೇ ಸೂಚಿಸುವುದಾದುದರಿಂದ "ಪ್ರಾಣಾಯಾಮೇವಿನಿಯೋಗಃ" ಎಂದು ಮಂತ್ರದಲ್ಲಿರುವುದು. ಆದುದರಿಂದ ಗುರುಮುಖೇನ ಉಪದೇಶಪಡೆದು ಪ್ರಾಣಾಯಾಮವನ್ನು ಅತ್ಯವಶ್ಯಕವಾಗಿ ಆಚರಿಸಬೇಕು.

ಪ್ರಾಣಾಯಾಮವೆಂದರೆ- "ಶ್ವಾಸಪ್ರಶ್ವಾಸಯೋರ್ಗತಿ ವಿಚ್ಛೇದಃ, ಪ್ರಾಣಾ ಯಾಮಃ" ಅಂದರೆ ಶ್ವಾಸೋಚ್ಛ್ವಾಸಗಳ ಗಮನವನ್ನು ಅಡಗಿಸುವಿಕೆಯೆಂದು ಪತಂಜಲಿಗಳು ಹೇಳಿರುವರು. ಬಹು ಚಂಚಲವಾದ ಮನಸ್ಸನ್ನು ಸ್ವಾಧೀನಕ್ಕೆ ತರುವುದಕ್ಕೂ, ಇಂದ್ರಿಯಗಳಲ್ಲಿರುವ ದೋಷಪರಿಹಾರವಾಗಿ ನಿರ್ಮಲತ್ವವುಂಟಾ ಗುವುದಕ್ಕೂ, ದೇಹಾರೋಗ್ಯ ಮತ್ತು ಮೇಧಾಶಕ್ತಿಯನ್ನು ಪಡೆಯುವುದಕ್ಕೂ, ಇಂದ್ರಿಯಗಳು ಚಂಚಲವಿಲ್ಲದೆ ಸ್ವಾಧೀನದಲ್ಲಿರುವುದಕ್ಕೂ ಪ್ರಾಣಾಯಾಮವನ್ನು ಮಾಡಬೇಕು. ಪ್ರಾಣಾಯಾಮವನ್ನು ಅನುಷ್ಠಿಸುವ ಪ್ರಧಾನವಾದ ಉದ್ದೇಶ ವೇನೆಂದರೆ— ಗಾಯತ್ರೀದೇವಿಯನ್ನು ಉಪಾಸಿಸಲು ಮನಸ್ಸಿಗೆ ಅರ್ಹತೆಯನ್ನು ಪಡೆಯುವುದಕ್ಕೋಸ್ಕರಲೆ. ಪ್ರಾಣಾಯಾಮವನ್ನು ಮಾಡುವುದರಿಂದ ಆರೋಗ್ಯ ಭಾಗ್ಯವೂ ಹಿಂಬಾಲಿಸಿಯೇ ಇರುವುದು. ಆರೋಗ್ಯಭಾಗ್ಯಕ್ಕೆ ಅನುಸಾರವಲ್ಲದ ಕರ್ಮಮಾರ್ಗ ಯಾವುದೂ ಇಲ್ಲ. ನಮ್ಮ ಜಾಗ್ರತ್‌ಕಾಲದಲ್ಲಿ ಮನಸ್ಸಿಗೆ ಯಾವು ದಾದರೂ ಒಂದು ವಿಷಯರೂಪವಾದ ಪಿಶಾಚಿಯು ಇದ್ದೇ ಇರುವುದು. ಪರ

ಮಾತ್ಮನನ್ನು ಧ್ಯಾನಿಸಬೇಕೆಂಬ ಕುತೂಹಲದಿಂದ ಕುಳಿತರೂ ನಾವು ಇಷ್ಟಪಟ್ಟ ದೇವತಾಭಾವವನ್ನು ಧರಿಸಲಾರದೆ ಮನಸ್ಸಿಗೆ ಚಂಚಲತ್ವವುಂಟಾಗುವುದು. ಇದಕ್ಕೆ ಕಾರಣವೇನೆಂದರೆ- ನಮ್ಮ ಜಾಗ್ರತ್‌ಕಾಲದಲ್ಲಿ ಉಸಿರಿನ ಹರಿದಾಟವೂ ಮನಸ್ಸಿನ ಹರಿದಾಟವೂ ಒಂದಕ್ಕೊಂದು ಹೆಣೆದುಕೊಂಡು ಪ್ರಪಂಚಕಾರ್ಯರೂಪದಲ್ಲಿರುವುದು. ಉಸಿರು ಒಂದೆಡೆ ನಿಂತರೆ ಮನಸ್ಸು ಅಲ್ಲಿಯೇ ನಿಲ್ಲುವುದು. ಮನಸ್ಸು ಒಂದು ಕಡೆ ನಿಲ್ಲಬೇಕಾದರೆ ಉಸಿರಿನ ಕ್ಷಿಪ್ರಗತಿಯು ತಗ್ಗಿ ನಿಲುಗಡೆಯ ಸ್ವಭಾವಕ್ಕೆ ಬರಬೇಕು. ಉಸಿರು ನಿಲುಗಡೆಯ ಸ್ವಭಾವಕ್ಕೆ ಬಂದಾಗ ಮನಸ್ಸಿಗೆ ಧ್ಯಾನಮಾಡುವ ದೇವತಾ ಭಾವವನ್ನು ಧರಿಸಲು ಅರ್ಹತೆಯುಂಟಾಗುವುದು. ಮನಸ್ಸು ದೇವತಾಭಾವವನ್ನು ಧರಿಸಿನಿಂತಾಗ ಮನಸ್ಸಿಗೆ ಸಹಾಯವಾಗಿ ಮನಸ್ಸಿನೊಡನೆ ಉಸಿರೂ ನಿಂತಿರುವುದು. ಉಸಿರು ಯಾವಾಗ ಮನಸ್ಸಿನೊಡನೆ ನಿಲ್ಲುವುದೋ ಆಗ ಎದೆಯಲ್ಲಿರುವ ಪ್ರಾಣ ಶಕ್ತಿಯೂ, ಇಂದ್ರಿಯಶಕ್ತಿಗಳೂ ಉಸಿರಿನೊಡನೆ ಮನಸ್ಸಿಗೆ ಸಹಾಯಕವಾಗಿ ಜೊತೆಯಲ್ಲಿರುವುವು. ಆದುದರಿಂದ ಉಸಿರು ಮನಸ್ಸಿನೊಡನೆ ಸಹಕರಿಸಿ ಧ್ಯಾನ ದಲ್ಲಿ ನಿಲ್ಲುವ ಅರ್ಹತೆಯನ್ನು ಪಡೆಯುವುದೇ ಪತಂಜಲಿಗಳ ವಾಕ್ಯವಾದ "ಶ್ವಾಸ ಪ್ರಶ್ವಾಸ ಯೋರ್ಗತಿ ವಿಚ್ಛೇದಃ" ಎಂಬುದರ ಅರ್ಥವಾಗಿ ಪ್ರಾಣಾಯಾಮವೆನಿಸಿ ಕೊಳ್ಳುವುದು. ಅಂದರೆ ಶ್ವಾಸೋಚ್ಛ್ವಾಸದ ಗಮನವನ್ನು ಅಡಗಿಸುವವರೆಗೆ ಪ್ರಾಣಾಯಾಮ ಮಾಡಬೇಕೆಂದು ಸೂಚಿತವಾಗುವುದು.

ಪ್ರಾಣಾಯಾಮ ಕ್ರಮದಲ್ಲಿ ರೇಚಕ (ಉಸಿರು ಬಿಡುವುದು) ಪೂರಕ (ಉಸಿರನ್ನು ಮೇಲಕ್ಕೆ ಅಂದರೆ ಒಳಕ್ಕೆ ಎಳೆದುಕೊಳ್ಳುವುದು) ಕುಂಭಕ (ಉಸಿರನ್ನು ನಿಲ್ಲಿಸುವುದು) ಗಳೆಂಬ ಮೂರು ಕಾರ್ಯಗಳು ನಡೆಯಬೇಕು. ಅಧಿಕಾರಿಯು ಪದ್ಮ, ಸಿದ್ಧ, ಸ್ವಸ್ತಿಕಾಸನಗಳಲ್ಲಿ ಯಾವುದಾದರೂ ಒಂದು ಆಸನದಲ್ಲಿ ಸ್ಥಿರವಾಗಿಯೂ ಋಜುವಾಗಿಯೂ ಕುಳಿತು ರೇಚಕ, ಪೂರಕ, ಕುಂಭಕಗಳನ್ನು ಮಾಡಿ ಪ್ರಾಣಾ ಯಾಮವನ್ನು ಮಾಡಬೇಕು. ಮನಸ್ಸು ಪ್ರಾಣಶಕ್ತಿಯೊಡನೆ ಸೇರಿ ಧ್ಯಾನ ಮಾಡಲು ಅರ್ಹತೆಯುಂಟಾಗುವವರೆಗೆ ಎಂದರೆ ಶ್ವಾಸೋಚ್ಛ್ವಾಸದ ಗಮನವನ್ನು ಅಡಗಿಸುವವರೆಗೆ ಮಾಡಬೇಕಾಗಿರುವ ಪ್ರಾಣಾಯಾಮದ ಅನುಷ್ಠಾನಗಳ ಕ್ರಮ ಗಳನ್ನು ವಿವರಿಸುತ್ತಾ ಹೋದರೆ ಈ ವಿಚಾರಗಳೇ ಒಂದು ಗ್ರಂಥರೂಪವಾಗಿ ಬರೆಯಬೇಕಾಗುವುದು.

[ಪ್ರಾಣಾಯಾಮದ ವಿವರವು ರಾಮಾಯಣದ ಅಂತರಾರ್ಥದಲ್ಲಿ ಕಿಷ್ಕಿಂಧ ಮತ್ತು ಸುಂದರಕಾಂಡಗಳ ತತ್ವಗಳಲ್ಲಿ ಬಂದಿರುವುದು]

ಶ್ವಾಸೋಚ್ಛ್ವಾಸದ ಗಮನವನ್ನಡಗಿಸುವ ಪ್ರಾಣಾಯಾಮದ ಅನುಷ್ಠಾನದ ತತ್ವಗಳನ್ನು ಮಾತ್ರ ಪ್ರಾಣಾಯಾಮ ಮಂತ್ರವು ಒಳಗೊಂಡಿರುವುದೆಂದು ತಿಳಿಯ ಬಾರದು. ಬಹು ಮಹತ್ವವುಳ್ಳದ್ದಾಗಿಯೂ ರತ್ನಪ್ರಾಯವಾಗಿಯೂ ಇರುವ ಅನೇಕ

ತತ್ವಗಳನ್ನೊಳಗೊಂಡಿರುವುದು.

ಪ್ರಾಣಾಯಾಮ ಮಂತ್ರಕ್ಕೆ 'ಪ್ರಣವ' ವೆಂದುಹೆಸರು. ಕಾರಣವೇನೆಂದರೆ— ಓಂಕಾರಕ್ಕೂ ಈ ಮಂತ್ರಕ್ಕೂ ಭೇದವೇನೂ ಇರುವುದಿಲ್ಲ. "ಪ್ರಣವಸ್ಯ ಪರಬ್ರಹ್ಮ ಋಷಿಃ"— ಪ್ರಣವಸ್ವರೂಪವಾದ ಈ ಮಂತ್ರವನ್ನು ಪ್ರಚಾರಕ್ಕೆ ತಂದವರು ಯಾರೆಂದರೆ ಪರಬ್ರಹ್ಮನೇ. ಪ್ರಣವವೆಂದರೂ ಪರಬ್ರಹ್ಮ. ಪರಬ್ರಹ್ಮವೆಂದರೂ ಪ್ರಣವ. ಅವನನ್ನು ಅವನೇ ಪ್ರಚಾರಕ್ಕೆ ತಂದುಕೊಂಡನೇ ಹೊರತು ಮತ್ತಾರೂ ಕಾರಣರಾಗಲಾರರು. 'ಪರಮಾತ್ಮಾದೇವತಾ' – ಅವನ ಇರುವಿಕೆಯನ್ನು ಅವನೇ ಪ್ರಕಾಶಪಡಿಸಬಲ್ಲನೇ ಹೊರತು ಮತ್ತಾರಿಂದಲೂ ಸಾಧ್ಯವಿಲ್ಲವಾದ್ದರಿಂದ ಅವನೇ ಪ್ರಾಣಾಯಾಮ ಮಂತ್ರಕ್ಕೆ ಅಧಿದೇವತೆಯು. 'ದೈವೀಗಾಯತ್ರೀಛಂದಃ – ಪ್ರಣವಸ್ವರೂಪವಾದ ಈ ಪ್ರಾಣಾಯಾಮ ಮಂತ್ರವು ಗಾಯತ್ರೀಛಂದಸ್ಸಾಗಿರುವುದು. ಅಂದರೆ ಗಾಯತ್ರೀದೇವಿಯ ಮಂತ್ರವು ಹೇಗೆ ಮೂರು ಪಾದಗಳಾಗಿವೆಯೋ ಹಾಗೆಯೇ ಈ ಮಂತ್ರವೂ ಮೂರುಪಾದಗಳುಳ್ಳದ್ದು. 'ಪ್ರಾಣಾಯಾಮೇ ವಿನಿಯೋಗಃ – ಈ ಮಂತ್ರಕ್ಕೆ ಎಲ್ಲಿ ವಿನಿಯೋಗವೆಂದರೆ ಪ್ರಾಣಾಯಾಮದ ಅನುಷ್ಠಾನದಲ್ಲಿ. ಅಂದರೆ ಪ್ರಾಣಾಯಾಮಕಾರ್ಯಮಾಡಿದರೆ 'ಪ್ರಾಣಾಯಾಮ' ವೆನಿಸಿಕೊಳ್ಳುವುದು. ಮಂತ್ರ ಪಠನಮಾತ್ರದಿಂದ ಪೂರ್ಣಪ್ರಯೋಜನವಾದ ಪ್ರಾಣಾಯಾಮವೆನಿಸಿಕೊಳ್ಳುವುದಿಲ್ಲ.

ಮಂತ್ರದ ಪ್ರಥಮಪಾದವಾದ, 'ಓಂಭೂಃ ಓಂಭುವಃ ಓಗ್ಂಸುವಃ ಓಂಮಹಃ ಓಂಜನಃ ಓಂತಪಃ ಓಗ್ಂಸತ್ಯಂ' ಎಂಬುದರ ತತ್ವಾರ್ಥವನ್ನು ವಿವರಿಸೋಣ. ಪ್ರಾಣಾಯಾಮ ಶಬ್ದಕ್ಕೆ ಪತಂಜಲಿಗಳು ಹೇಳಿರುವ ಉಸಿರಿನ ಕ್ಷಿಪ್ರಗತಿಯನ್ನು ನಿಲ್ಲಿಸುವ ಅರ್ಥಕ್ಕಿಂತಲೂ ಮಹತ್ತಾದ ತತ್ವಾರ್ಥವು ಈ ಮಂತ್ರದಲ್ಲಿರುವುದು. 'ಪ್ರಾಣ' ಶಬ್ದಕ್ಕೆ ಪ್ರಾಣವಾಯುವಲ್ಲದೆ ಇಂದ್ರಿಯಶಕ್ತಿ ಮತ್ತು ಮನಸ್ಸಿಗೂಕೂಡ ಪ್ರಾಣವೆಂದು ಶ್ರುತಿಯು ತಿಳಿಸುವುದು. ಪ್ರಾಣಶಬ್ದಾರ್ಥದಿಂದ ಹೇಳುವ ಪ್ರಾಣ, ಇಂದ್ರಿಯ, ಮತ್ತು ಮನಸ್ಸುಗಳನ್ನು ಏಕಾಗ್ರತೆಯಾಗುವಂತೆ ನಿರೋಧಮಾಡುವುದಕ್ಕೆ 'ಪ್ರಾಣಾಯಾಮ' ವೆಂದು ಅರ್ಥ. ಪ್ರಾಣೇಂದ್ರಿಯಗಳಿಗೆ ಮನಸ್ಸು ಯಜಮಾನನಾದುದರಿಂದ ಮನಸ್ಸು ನಿಂತ ಸ್ಥಳದಲ್ಲಿ ಪ್ರಾಣೇಂದ್ರಿಯಗಳ ಶಕ್ತಿಯೂ ಮನಸ್ಸಿನೊಡನೆ ನಿಲ್ಲುವುದು. ಆದುದರಿಂದ ಪ್ರಾಣನಿರೋಧವೆಂದರೆ ಮನೋನಿರೋಧವೇ ಆಗಿರುವುದು. ನಿದ್ರಾಕಾಲದಲ್ಲಿ ಮಾತ್ರ ಮನಸ್ಸಿನ ವೃತ್ತಿಯು ತಮಸ್ಸಿನಿಂದ ಹಿಡಿಯಲ್ಪಟ್ಟಿರುವುದರಿಂದ ಪ್ರಾಣವಾಯುವಿನೊಡನೆ ಕಲೆತಿರುವುದಿಲ್ಲ. ಜಾಗ್ರದವಸ್ಥೆ ಮತ್ತು ಸಮಾಧಿಸ್ಥಿತಿಯಲ್ಲಿ ಒಂದನ್ನು ಬಿಟ್ಟು ಮತ್ತೊಂದು ಇರುವುದೇ ಇಲ್ಲ. ಪ್ರಾಣನಿರೋಧಕ್ಕೆ ಸಾರ್ಥಕತೆಯೂ ಪರಿಮಿತಿಯೂ ಬೇಕು.

ಪರಮಾತ್ಮನಲ್ಲಿ ಲೀನವಾಗುವಿಕೆಯೇ ಸಾರ್ಥಕತೆಯಾಗಿಯೂ, ಪರಿಮಿತಿಯನ್ನು ಮೀರಿದ್ದಾಗಿಯೂ ಇರುವುದು. ಅಂದರೆ ಮೇಲೆ ತಿಳಿಸಿದಂತೆ ಶ್ವಾಸನಿರೋಧಸ್ಥಿತಿಗ ಬಂದಾಗ ಮನಸ್ಸಿಗೆ ಧ್ಯಾನಿಸುವ ವಸ್ತುವನ್ನು ಧರಿಸಲು ಯೋಗ್ಯತೆಯುಂಟಾಗುವುದಷ್ಟೆ! ಅಲ್ಲಿಗೇ ಕೊನೆಮುಟ್ಟಿದಂತಾಗಲಿಲ್ಲ. ಧ್ಯಾನ ಮಾಡುತ್ತ ಮಾಡುತ್ತ ಪರಮಾತ್ಮನಲ್ಲಿ ಮನಸ್ಸು ಲೀನವಾಗುವ ಪುರುಷಾರ್ಥಕ್ಕೋಸ್ಕರವೇ ಧ್ಯಾನಮಾಡುವುದು. ಆದುದರಿಂದ ಪ್ರಾಣವು ಪರಮಾತ್ಮನಲ್ಲಿ ಲೀನವಾಗುವವರೆಗೂ ಪ್ರಾಣನಿರೋಧವೆನಿಸಿ ಪ್ರಾಣಾಯಾಮವೆನಿಸಿಕೊಳ್ಳುವುದು.

ಪ್ರಾಣಾಯಾಮ ಧ್ಯಾನಗಳ ಕಾರ್ಯಗಳು ನಡೆದು ಪರಮಾತ್ಮನಲ್ಲಿ ಪ್ರಾಣವು ಲೀನವಾಗುವಿಕೆಯು ನಮ್ಮ ದೇಹದಲ್ಲಿಯೇ ನಡೆಯುವುದರಿಂದ ಈ ಪ್ರಾಣಾಯಾಮಮಂತ್ರವನ್ನು ವಿವರಿಸಲು ಮನುಷ್ಯದೇಹದ ಚಿತ್ರ ಒಂದನ್ನು ಗ್ರಂಥಾಂತ್ಯದಲ್ಲಿ ಕೊಟ್ಟಿದೆ. (ಶರೀರದಲ್ಲಿ ವ್ಯಾಹೃತಿ ಸ್ಥಾನಗಳ ಚಿತ್ರವನ್ನು ನೋಡಿ) ಚಿತ್ರದಲ್ಲಿ 'ಭೂಃ ಭುವಃ ಸುವಃ ಮಹಃ ಜನಃ ತಪಃ ಸತ್ಯಂ,' ಎಂಬಿವುಗಳನ್ನು ಗುರುತುಮಾಡಿದೆ. 'ಭೂಃ' ಮುಂತಾದ ಏಳೂ ವ್ಯಾಹೃತಿಗಳೆಂದು ಕರೆಯಲ್ಪಡುವವು. ವ್ಯಾಹೃತಿಯೆಂದರೆ ಉಚ್ಚಾರಣೆಯೆಂದರ್ಥ. ಅಂದರೆ ಓಂಕಾರದ ಅ, ಉ, ಮ. ಎಂಬ ಮೂರುಮಾತ್ರೆಗಳೇ ಸಪ್ತಮಾತೃಕಾಶಕ್ತಿಗಳಾಗಿ ಈ ಸಪ್ತಮಾತೃಕಾಶಕ್ತಿಯಿಂದ ಸಪ್ತವ್ಯಾಹೃತಿ ಮತ್ತು ಸಪ್ತಸ್ವರಗಳೆಂದಾಗಿರುವವು.

[ಇದರ ವಿಚಾರವನ್ನು ವೀಣೆಯ ಅನ್ವಯದಲ್ಲಿ ಮೂರನೆಯ ಪ್ರಕರಣದಲ್ಲಿ ವಿವರಿಸಿರುವುದು.]

ಈ ಏಳು ಮಾತೃಕಾಶಕ್ತಿಗಳೇ ಸಪ್ತವ್ಯಾಹೃತಿಗಳೆನಿಸಿಕೊಂಡು ಲೋಕಗಳ ತತ್ವವಾಗಿಯೂ, ಭೂತಗಳ ತನ್ಮಾತ್ರಾರೂಪವಾಗಿಯೂ, ಮೂಲಾಧಾರಾದಿ ಚಕ್ರಗಳರೂಪವಾಗಿಯೂ, ಸ. ರಿ. ಗ. ಮ. ಪ. ದ. ನಿ. ಗಳಾದ ಸಪ್ತಸ್ವರಗಳ ಸ್ವರೂಪವಾಗಿಯೂ ಇವೆ. ಹೇಗೆಂದರೆ 'ಭೂಃ' ಎಂಬುದು ಭೂಲೋಕ, ಭೂತತ್ವ. ಮೂಲಾಧಾರಚಕ್ರ, ಸಪ್ತಸ್ವರಗಳಲ್ಲಿ 'ನಿ.' 'ಭುವಃ' ಎಂಬುದು ಭುವರ್ಲೋಕ, ಜಲತತ್ವ, ಸ್ವಾಧಿಷ್ಠಾನಚಕ್ರ, ಸಪ್ತಸ್ವರಗಳಲ್ಲಿ 'ಧ.' 'ಸುವಃ' ಎಂಬುದು ಸುವರ್ಲೋಕ, ಅಗ್ನಿತತ್ವ, ಮಣಿಪೂರಚಕ್ರ, ಸಪ್ತಸ್ವರಗಳಲ್ಲಿ 'ಪ.' 'ಮಹಃ' ಎಂಬುದು ಮಹರ್ಲೋಕ, ವಾಯುತತ್ವ, ಅನಾಹತಚಕ್ರ, ಸಪ್ತಸ್ವರಗಳಲ್ಲಿ 'ಮ.' 'ಜನಃ'ಎಂಬುದು ಜನೋಲೋಕ, ಆಕಾಶತತ್ವ, ವಿಶುದ್ಧಚಕ್ರ, ಸಪ್ತಸ್ವರಗಳಲ್ಲಿ 'ಗ.' 'ತಪಃ' ಎಂಬುದು ತಪೋಲೋಕ, ಅಂತಃಕರಣದತತ್ವ, ಆಜ್ಞಾಚಕ್ರ, ಸಪ್ತಸ್ವರಗಳಲ್ಲಿ 'ರಿ.' 'ಸತ್ಯಂ' ಎಂಬುದು ಸತ್ಯಲೋಕ, ಪರಬ್ರಹ್ಮತತ್ವ, ಸಹಸ್ರಾರಕಮಲ, ಸಪ್ತಸ್ವರಗಳಲ್ಲಿ 'ಸ.'

ಸೃಷ್ಟಿಕ್ರಮದ ತತ್ವಗಳು 'ಸತ್ಯಂ' ಎಂಬುದರಿಂದ ಪ್ರಾರಂಭವಾಗಿ 'ಭೂಃ'

ಎಂಬುದರವರೆಗೆ ಇಳಿದು ಬಂದಿವೆ. ಮೋಕ್ಷಕ್ರಮದಲ್ಲಿ 'ಭೂಃ' ತತ್ತ್ವದಿಂದ ಪ್ರಾರಂಭವಾಗಿ 'ಸತ್ಯಂ' ಎಂಬ ತತ್ತ್ವಕ್ಕೆ ಹತ್ತಬೇಕು. ಅಂದರೆ ಧ್ಯಾನಮಾಡುವಾಗ ಮನಸ್ಸಿನಪ್ರವಾಹವು 'ಭೂ'ತತ್ತ್ವದಿಂದ ಭುವಃ ಮುಂತಾದ ತತ್ತ್ವಗಳೊಂದೊಂದನ್ನೂ ದಾಟಿ 'ಸತ್ಯಂ' ತತ್ತ್ವವಾದ ಪರಬ್ರಹ್ಮನಲ್ಲಿ ಲೀನವಾಗಬೇಕು. ಸತ್ಯಂ ಎಂಬುದು ಪರಬ್ರಹ್ಮತತ್ತ್ವವೆಂಬುದಕ್ಕೆ ವಸಿಷ್ಠ ಮಹರ್ಷಿಗಳು ಕಲ್ಪದಲ್ಲಿ

> "ಸತ್ಯಮಿತಿ ಬ್ರಹ್ಮೈವಾತ್ಮನಃ ಚಿದ್ರೂಪಾತ್ಮಭಾವಾದಿತಿ ಯದ್ವಾಭೂರಾದಿ ಸಪ್ತಲೋಕಾಃ" ಎಂದು ಹೇಳಿರುವರು.

ಭೂರಾದಿ ಲೋಕಗಳು ಬ್ರಹ್ಮಾಂಡದಲ್ಲಿರುವಂತೆ ಪಿಂಡಾಂಡವಾದ ನಮ್ಮಲ್ಲಿಯೂ ಇರುವತತ್ತ್ವಕ್ಕೆ "ಬ್ರಂಹ್ಮಾಂಡಂಚೈನ ಪಿಂಡಾಂಡಂ, ಲೋಕಾಭೂರಾದಯಃ ಕ್ರಮಾತ್" ಎಂಬ ಯೋಗಕುಂಡಲ್ಯುಪನಿಷತ್ತಿನ ಆಧಾರವೂ ಇರುವುದು. ಚಿತ್ರಪಠದಲ್ಲಿ 'ಸತ್ಯಂ' ಎಂದು ತೋರಿಸಿರುವ ಬ್ರಹ್ಮರಂಧ್ರಸ್ಥಳವೇ ಪರಬ್ರಹ್ಮಸಾಕ್ಷಾತ್ಕಾರದ ಸ್ಥಾನವೆನ್ನುವುದಕ್ಕೆ "ತುರ್ಯಾತೀತಂ ಪರಂಬ್ರಹ್ಮ ಬ್ರಹ್ಮರಂಧ್ರೇತು ಲಕ್ಷಯೇತ್" ಎಂಬ ತ್ರಿಶಿಖಿ ಬ್ರಾಹ್ಮಣೋಪನಿಷತ್ತಿನ ಆಧಾರವೂ ಇರುವುದು ಸಪ್ತವ್ಯಾಹೃತಿಗಳೇ ಮೂಲಾಧಾರಾದಿ ಚಕ್ರಗಳಾಗಿವೆಯಷ್ಟೆ! ಮೂಲಾಧಾರಾದಿ ಷಟ್ಚಕ್ರಗಳನ್ನು ಮನಸ್ಸಿನ ವೃತ್ತಿಯು ದಾಟಿ ಏಳನೆಯದಾದ 'ಸತ್ಯಂ' ತತ್ತ್ವವಾಗಿಯೂ ಪರಬ್ರಹ್ಮಸ್ಥಾನವಾಗಿಯೂ ಇರುವ ಸಹಸ್ರಾರಕಮಲದಲ್ಲಿ ಏಕಾಕಾರವಾಗಿ ಲೀನವಾಗಬೇಕಾದ ತತ್ತ್ವಕ್ಕೆ "ಸಹಸ್ರಾರೇ ಜಲಜ್ಯೋತಿಃ ಅನ್ತರ್ಲಕ್ಷ್ಯಂ" ಎಂಬ ಮಂಡಲಬ್ರಾಹ್ಮಣೋಪನಿಷತ್ತಿನ ಆಧಾರವೂ, ಯೋಗಶಿಖೋಪನಿಷತ್ತಿನ "ಷಟ್ಚಕ್ರಾಣಿ ಪರಿಜ್ಞಾತ್ವಾಪ್ರವಿಶೇತ್ಸುಖಮಂಡಲಂ" ಎಂಬ ಆಧಾರವೂ ಇರುವುದು. ಪರಬ್ರಹ್ಮನಲ್ಲಿ ಮನಸ್ಸು ಲೀನವಾಗಬೇಕಾದರೆ ಪಂಚಭೂತಗಳಲ್ಲಿನ ಭೂಮಿ, ಜಲ, ತೇಜಸ್ಸು, ವಾಯು, ಆಕಾಶ, ಶಕ್ತಿ ತತ್ತ್ವಗಳನ್ನು ನಮ್ಮಲ್ಲಿಯೇ ನಾವು ದಾಟಿ ಅನಂತರ ಪರಬ್ರಹ್ಮನಲ್ಲಿ ಲೀನವಾಗಬೇಕು. ಪರಬ್ರಹ್ಮನಲ್ಲಿ ಮನವಾಗಿ ಇರುವ ಸ್ಥಿತಿಯು. "ತೈಲಧಾರೆಯಂತೆ ಮನಸ್ಸು ಕೊಡು ಹರಿಯಲ್ಲಿ" ಎಂಬ ದಾಸರವರ ಕೀರ್ತನೆಯೂ ಇರುವುದಷ್ಟೆ! ಹರಿಯಲ್ಲಿ ತೈಲಧಾರೆಯಂತೆ ಮನಸ್ಸಾಗಬೇಕಾದರೆ ಹರಿಯು ನಮ್ಮಲ್ಲಿಯೇ ಇರುವುದಾಗಿಯೂ ಲೋಕಾಂತರಗಳಿಗೆ ಹೋಗಬೇಕಾದ ಅವಶ್ಯಕವಿಲ್ಲವೆಂಬದಾಗಿಯೂ ನಮ್ಮಲ್ಲಿಯೇ ತೈಲಧಾರೆಯಂತೆ ಮನಸ್ಸುಂಟಾದರೆ ಮೋಕ್ಷವುಂಟಾಗುವುದಾಗಿಯೂ ಈ ಕೀರ್ತನೆಯೂ ಕೂಡ ವ್ಯಕ್ತಪಡಿಸುತ್ತದೆ.

ಆದುದರಿಂದ ಮನಸ್ಸು, ಇಂದ್ರಿಯ, ಪಂಚಪ್ರಾಣಗಳು ಪರಬ್ರಹ್ಮನಲ್ಲಿ ಏಕಾಕಾರವಾಗಿ ಲೀನವಾಗುವುದೇ ಪ್ರಾಣಾಯಾಮದ ಅತ್ಯುತ್ತಮವಾದ

ಅರ್ಥವಾಗಿಯೂ ಮಂತ್ರದ ಪ್ರಥಮಪಾದದ ತತ್ವಾರ್ಥವಾಗಿಯೂ ಇರುವುದು. ಪರಮಾತ್ಮನಲ್ಲಿ ಪ್ರಾಣವು ಏಕಾಕಾರವಾಗಿ ಲೀನವಾಗುವುದಕ್ಕೆ 'ಪ್ರಣವವೆಂದು' ಹೆಸರು. ಪ್ರಣವವೆಂದರೂ ಓಂಕಾರವೆಂದರೂ ಒಂದೇ. ಪ್ರಾಣವು ಪರಮಾತ್ಮನಲ್ಲಿ ಏಕಾಕಾರವಾಗಿ ಲೀನವಾಗಬೇಕೆಂದು ಮೇಲೆ ಬರೆದಿರುವ ತತ್ವಕ್ಕನುಸಾರವಾಗಿ ಶ್ರುತಿಯಲ್ಲಿ "ಪ್ರಾಣಾ ತ್ಸರ್ವಾನ್ಪರಮಾತ್ಮನಿ ಪ್ರಣಾಮಯತೀ ತ್ಯೇತಸ್ಮಾತ್ಪ್ರಣವಃ" ಅಂದರೆ ಸಕಲ ಪ್ರಾಣಗಳನ್ನೂ ಪರಮಾತ್ಮನಲ್ಲಿ ಅರ್ಪಿಸುವುದರಿಂದ ಪ್ರಣವವೆಂದು ಹೆಸರು, ಎಂಬದಾಗಿ ಹೇಳಿದೆ. ಶ್ರೀಶಂಕರಾಚಾರ್ಯರು ಕೂಡ "ಪ್ರಾಣಃಪ್ರತೀಚೀನ ಪಥೇನ ಮಂದಂ ವಿಲೀಯತೆ ವಿಷ್ಣು ಪದಾಂತರಾಳೇ" ಎಂಬುದಾಗಿ ಹೇಳಿರುತ್ತಾರೆ. ಆದುದರಿಂದ ಪ್ರಾಣಾಯಾಮಮಾಡಿ ಪ್ರಾಣನಿರೋಧಮಾಡುವುದಕ್ಕೆ ಪ್ರಣವಸ್ವರೂಪವಾಗುವುದೇ ಸಾರ್ಥಕತೆಯಾಗಿರುವುದು. ಪ್ರಣವಸ್ವರೂಪವಾಗಲು ಪ್ರಾಣಾಯಾಮ ಮತ್ತು ಧ್ಯಾನಾಭ್ಯಾಸಗಳೆರಡೂ ಅತ್ಯವಶ್ಯಕವಾಗಿ ಬೇಕು. ಓಂ ಇತ್ಯೇಕಾಕ್ಷರಂಬ್ರಹ್ಮ ಎಂಬ ಮಂತ್ರದ ತತ್ವವೂ ಈ ತತ್ವವೂ ಒಂದೇ. ಮುಖ್ಯವಾಗಿ ಪರಬ್ರಹ್ಮಸಾಕ್ಷಾತ್ಕಾರವಾಗುವ ತತ್ವವನ್ನೇ ಪ್ರಾಣಾಯಾಮಮಂತ್ರದ ಪ್ರಥಮಪಾದವು ಪ್ರತಿಪಾದಿಸುವುದು. ಮಂತ್ರದ ದ್ವಿತೀಯಪಾದದ ತತ್ವವನ್ನರಿಯಲು ಮುಂದುವರಿಯೋಣ.

ತತ್ಸವಿತುರ್ವರೇಣಿಯಂ ಭರ್ಗೋದೇವಸ್ಯ ಧೀಮಹಿ ಧೀಯೋಯೋನಃ ಪ್ರಚೋದಯಾತ್ || ಎಂಬುದು ಮಂತ್ರದ ಎರಡನೆಯ ಪಾದವು. ಪ್ರಥಮಪಾದದಲ್ಲಿ ಮನಸ್ಸು, ಇಂದ್ರಿಯ, ಮೊದಲಾದ ಪ್ರಾಣಗಳೆಲ್ಲಾ ಪರಮಾತ್ಮನಲ್ಲಿ ಏಕಾಕಾರವಾಗಿ ಲೀನವಾಗುವ ತತ್ವಾರ್ಥವೆಂದು ತಿಳಿಸಿತಷ್ಟೆ! ಈ ಸ್ವರೂಪವು ಎಂತಹುದೆಂದರೆ – ಆತ್ಮಸಾಕ್ಷಾತ್ಕಾರವಾಗಿ ನಾನು, ನೀನು, ಎಂಬ ಯಾವತಿಳಿವಳಿಕೆಯೂ ಇಲ್ಲದ, ಪ್ರಾಣೇಂದ್ರಿಯ, ಬುದ್ಧಿ, ಮನಸ್ಸುಗಳ ವ್ಯಾಪಾರವೂ ಇಲ್ಲದ ಪರಮಾತ್ಮಸ್ಥಿತಿಯಲ್ಲಿಯೇ ಅಧಿಕಾರಿಯು ಇರುವುದಾಗಿದೆ. ಇಂತಹ ಮಹಾನುಭಾವನನ್ನು ನೋಡತಕ್ಕವನು ಯೋಚಿಸುವುದೇನೆಂದರೆ– "ಯಾವ ವ್ಯಾಪಾರವೂ ಇಲ್ಲದೆಯೂ, 'ನಾನು' ಎಂಬ ತಿಳಿವಳಿಕೆಯೂ ಇಲ್ಲದೆಯೂ, ಮೃತಪಟ್ಟದೇಹದಂತೆ ಕೆಳಕ್ಕೆ ಉರುಳದೆಯೂ, ತನ್ನನ್ನು ತಾನು ಮರೆತು ಕುಳಿತಿರುತ್ತಾನೆ. ಈಗ ಯಾವ ಸ್ಥಿತಿಯಲ್ಲಿದ್ದಾನೆ? 'ನಾನು, ತಾನು' ಎಂಬ ಈ ವ್ಯವಹಾರಜ್ಞಾನ ಎಲ್ಲಿಂದ ಬಂತು? ಇದು ಎಲ್ಲಿ ಲಯವಾಗಿದೆ? ಇದು ಯಾರ ಮಹಿಮೆ? ನಾನು ಕೂಡ ಈ ಸ್ಥಿತಿಯನ್ನು ಪಡೆಯಬಹುದೇ? ಎಂಬುದಾಗಿ ಯೋಚಿಸುತ್ತಾನಷ್ಟೆ? ಹೀಗೆ ಯೋಚನೆಮಾಡುವ ಮನುಷ್ಯನಿಗೆ 'ತಾನು ಯಾರು? ತಾನು ಎಲ್ಲಿಂದ ಬಂದೆ? ತಾನು ಎಲ್ಲಿಗೆ ಹೋಗಿ ಸೇರುತ್ತೇನೆ' ಎಂಬ ವಿಚಾರಗಳ ತತ್ವವನ್ನು ಈ ಮಂತ್ರದ ೨ನೆಯ ಪಾದವು ತಿಳಿಸುವುದು. ಅಂದರೆ ಪರಬ್ರಹ್ಮಸ್ವರೂಪದಿಂದಲೇ ಸಕಲವೂ

ಉದಯಿಸಿ ಅಂತ್ಯದಲ್ಲಿ ಪರಬ್ರಹ್ಮಸ್ವರೂಪವೇ ಆಗುವುದೆಂಬ ಪರಮಾತ್ಮನ ಮಹಿಮೆಯ ತತ್ವವನ್ನು ಈ ಮಂತ್ರವು ತಿಳಿಸುವುದು.

**ತತ್** — ತತ್ ಎಂಬುದು ವೇದದಲ್ಲಿ ಪರಮಾತ್ಮಬೋಧಕವಾದ ಶಬ್ದವಾಗಿದೆ. "ಓಂತತ್ಸತ್" ಎಂದರೆ ಅದು ಸದ್ರೂಪವೆಂದರ್ಥ. ಪರಮಾತ್ಮನು ಸದ್ರೂಪನು. ಆದುದರಿಂದ ಪ್ರಪಂಚದ ಸೃಷ್ಟಿ ಸ್ಥಿತಿಗಳಿಲ್ಲದ ಕಾಲದಲ್ಲಿ ತಚ್ಛಬ್ದವಾಚ್ಯನಾದ ಪರಬ್ರಹ್ಮ ಒಂದೇ ಇರುವುದೆಂಬುದನ್ನು ಪ್ರತಿಪಾದಿಸುವ ಉದ್ದೇಶದಿಂದಲೇ ಈ ಮಂತ್ರದ ಪ್ರಥಮದಲ್ಲಿ "ತತ್"ಎಂಬ ಪದವಿದೆ.

**ಸವಿತುಃ** — ಜಗತ್ ಸ್ರಷ್ಟೃವಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಸರ್ವಪ್ರೇರಕನಾಗಿಯೂ ಇರುವವನೆಂದರ್ಥ. ಅಂದರೆ 'ಸವಿತುಃ'ಎಂಬುದರ ಹಿಂದಿನದಾದ 'ತತ್' ಎಂಬ ಪದದಲ್ಲಿ ಸ್ವಯಂಪ್ರಕಾಶಕನಾದ ಪರಮಾತ್ಮ ಒಂದೇ ಇದ್ದ ತತ್ವವಷ್ಟೆ! 'ತತ್' ಎಂಬುದರ ಮುಂದಿನ ಪದವಾದ 'ಸವಿತುಃ' ಎನ್ನುವುದರಲ್ಲಿ ತಚ್ಛಬ್ದವಾಚ್ಯನಾದ ಪರಬ್ರಹ್ಮನಿಂದ ಜಗತ್ತನ್ನು ಸೃಷ್ಟಿಸುವವನಾಗಿಯೂ, ಸರ್ವಕ್ಕೂ ಪ್ರೇರಕನಾಗಿಯೂ, ಶುದ್ಧ ಸತ್ವಗುಣಶಕ್ತಿಗೆ ಪತಿಸ್ವರೂಪನಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಪರಬ್ರಹ್ಮನ ಪ್ರತಿಫಲಿತಚೈತನ್ಯಸ್ವರೂಪನಾಗಿಯೂ ಇರುವ ಈಶ್ವರನು ಸೃಷ್ಟಿಸಲ್ಪಟ್ಟನು. ಹೇಗೆಂದರೆ-ಪರಮಾತ್ಮಸ್ವರೂಪವೇ ಆಗಿದ್ದ ಪರಮಾತ್ಮಶಕ್ತಿಯು ಹೊರಹೊಮ್ಮಿ ಮೂಲಪ್ರಕೃತಿ ಅಥವಾ ಅವ್ಯಕ್ತಶಕ್ತಿಯೆನಿಸಿಕೊಂಡಿತು ಈ ಶಕ್ತಿಯಲ್ಲಿ ಪರಮಾತ್ಮನು ಪ್ರತಿಫಲಿತನಾದನು (ಪ್ರತಿಫಲಿತವೆಂದರೆ ಬೆಳಕಿನಲ್ಲಿ ರಸಕನ್ನಡಿಯನ್ನು ಹಿಡಿದರೆ ಮತ್ತೊಂದು ಬೆಳಕಾಗುವಂತೆ.) ಈ ಪ್ರತಿಫಲಿತ ಚೈತನ್ಯಸ್ವರೂಪನೇ ಈಶ್ವರನು. ಈ ಈಶ್ವರನೇ ಬ್ರಹ್ಮಾಂಡ ಪಿಂಡಾಂಡ ರೂಪವಾದ ಸಕಲಪ್ರಪಂಚವನ್ನು ಸೃಷ್ಟಿಸಿ ಅಂತರ್ಯಾಮಿಯಾಗಿರುವನು.

ರಸಕನ್ನಡಿಯಿಂದ ಪ್ರತಿಫಲಿಸತಕ್ಕ ಬೆಳಕುಂಟಾದರೂ ಕನ್ನಡಿಯಲ್ಲಿ ಸಾಧಾರಣ ಬೆಳಕೂ ಇದ್ದೇ ಇರುವುದು. ಇದರಂತೆ ಸ್ವಯಂಪ್ರಕಾಶನಾದ ತಚ್ಛಬ್ದವಾಚ್ಯನಾದ ಪರಬ್ರಹ್ಮನು ಪ್ರತಿಫಲಿತ ಚೈತನ್ಯನಾಗಿ ಈಶ್ವರನಾಗಿದ್ದರೂ ಸ್ವಯಂಪ್ರಕಾಶನಾದ ಪರಬ್ರಹ್ಮನು ಇದ್ದೇ ಇರುವನು ಅಂದರೆ 'ಸವಿತುಃ' ಎಂಬ ಪದವು 'ತತ್' ಪದದ ಮುಂದೆ ಬಂದರೂ 'ತತ್' ಪದದ ತತ್ವವು ಯಾವಾಗಲೂ ಇರುವುದು. ಅಂದರೆ ಸೃಷ್ಟಿಯಾಗುವುದಕ್ಕಿಂತ ಮುಂಚೆ ಪರಬ್ರಹ್ಮವಸ್ತುವು ಹೇಗಿತ್ತೋ ಸೃಷ್ಟಿ ಸ್ಥಿತಿಗಳಲ್ಲಿಯೂ ಹಾಗೆಯೇ ತನ್ನ ಪೂರ್ವಸ್ಥಿತಿಯಲ್ಲಿಯೇ ಇರುವುದೆಂಬ ತತ್ವವಾಗಿರುವುದು.

**ವರೇಣ್ಯಂ** — ವರೇಣಿಯಂ ಎಂದರೆ ಶ್ರೇಷ್ಠವಾದ, ಸರ್ವಪ್ರಾಣಿಗಳಿಂದಲೂ ಅಪೇಕ್ಷಣೀಯವಾದ, ಸೇವಿಸಲು ಯೋಗ್ಯವಾದದ್ದೆಂದು ಅರ್ಥ. ಹಿಂದೆ

'ಸವಿತುಃ' ಎಂಬ ಪದದಲ್ಲಿ ಸಕಲವೂ ಸೃಷ್ಟಿಯಾದುದನ್ನು ತಿಳಿಸಿತು. ಸೃಷ್ಟಿಯಾದ ಅನಂತರ ವ್ಯಾಪಾರ ಪ್ರಾರಂಭವಾಗುವುದಕ್ಕೆ ಮುಂಚೆ ಕೆಲವು ಸಲಕರಣೆಗಳಾಗ ಬೇಕು. ಹೇಗೆಂದರೆ:—ಮಕ್ಕಳು ಜನಿಸಿದ ಕೂಡಲೆ ವಿಷಯ ವ್ಯಾಪಾರಮಾಡ ಲಾರವು. ಕೆಲವು ಸಲಕರಣೆಗಳಾದ ಅನಂತರವೇ ವ್ಯಾಪಾರಪ್ರಾರಂಭವಾಗು ವುದು. ಆದುದರಿಂದ ಸೃಷ್ಟಿಯಾದರೂ ವಿಷಯ ವ್ಯಾಪಾರ ಪ್ರಾರಂಭವಾಗುವು ದಕ್ಕೆ ಮುಂಚೆ ಕೆಲವು ಸಲಕರಣೆಗಳಾಗಬೇಕಾಗಿವೆ. ಸೃಷ್ಟಿಯಾದ ಮೇಲೆ ಪ್ರಪಂ ಚದಲ್ಲಿ ವಿಷಯ ವ್ಯಾಪಾರಮಾಡುವವರು ಪ್ರಾಣಿಗಳು. ಪ್ರಾಣಿಗಳು ವಿಷಯ ವ್ಯಾಪಾರಮಾಡಲು ಇಂದ್ರಿಯ ಪ್ರಾಣಶಕ್ತಿಗಳ ಕಾರ್ಯನಡೆಯಬೇಕು. ಇಂದ್ರಿಯ ಗಳು ಜೀವಚೈತನ್ಯನ ಸಹಾಯವಿಲ್ಲದೆ ಯಾವ ಕಾರ್ಯವನ್ನೂ ಮಾಡಲಾರವು. ಪರಬ್ರಹ್ಮನ ಪ್ರತಿಫಲಿತಚೈತನ್ಯನೆನಿಸುವ ಜೀವಚೈತನ್ಯನನ್ನು ಇಂದ್ರಿಯ ಪ್ರಾಣ ಗಳು ಅಪೇಕ್ಷಿಸುವುದರಿಂದಲೂ, ಇಂದ್ರಿಯ, ಪ್ರಾಣಗಳಿಗಿಂತ ಜೀವಚೈತನ್ಯನು ಶ್ರೇಷ್ಠನಾದುದರಿಂದಲೂ, ಇಂದ್ರಿಯ ಪ್ರಾಣಗಳಿಂದ ಸೇವಿಸಿಕೊಳ್ಳಲು ಯೋಗ್ಯ ನಾದುದರಿಂದಲೂ ಜೀವಚೈತನ್ಯನು 'ವರೇಣಿಯಂ' ಎಂದು ಕರೆಯಲ್ಪಡುವನು. ಅಂದರೆ ದೇಹ ಸೃಷ್ಟಿಯಾಗಿ ವ್ಯಾಪಾರಕ್ಕೆ ಪ್ರಾಣಗಳನ್ನೂ ಇಂದ್ರಿಯಗಳನ್ನೂ ಪ್ರೇರಿಸುತ್ತಾ ಇಂದ್ರಿಯ ಪ್ರಾಣಗಳಿಗಿಂತ ಉತ್ತಮನಾದುದರಿಂದ ಜೀವಚೈತನ್ಯ ನಿಗೆ 'ವರೇಣಿಯಂ' ಎಂದು ಹೆಸರು.

**ಭರ್ಗಃ** — ಭರ್ಗಃ ಎಂದರೆ ಪಾಪನಿವರ್ತಕವಾಗುವ ಅಥವಾ ಅವಿದ್ಯಾ ತತ್ಕಾರ್ಯನಾಶಕವಾಗುವ ತೇಜೋರೂಪಿಯಾದವನೆಂದರ್ಥ. ಅವಿದ್ಯಾ ತತ್ಕಾರ್ಯ ನಾಶಗಳೆಂಬುದರಲ್ಲಿ ಅವಿದ್ಯೆ ಇದ್ದರಲ್ಲವೇ ತತ್ಕಾರ್ಯ ನಾಶವಾಗುವ ಪ್ರಯತ್ನ. ಅಂದರೆ ಪಾಪವೆಂಬುದು ಇದ್ದರಲ್ಲವೇ ಅದರ ನಾಶ. ಆದುದರಿಂದ 'ಭರ್ಗಃ' ಎಂಬ ಪದದಲ್ಲಿ 'ಭರ್' ಎಂಬುದೇ ಅಜ್ಞಾನಸ್ವರೂಪವಾಗಿಯೂ 'ಗಃ' ಎಂಬುದು ಅಜ್ಞಾನನಾಶಕದ ತತ್ವವಾಗಿಯೂ ಇವೆ. ಅಂದರೆ ಒಂದೇ ತೇಜಶ್ಶಕ್ತಿಯು ಅಜ್ಞಾನಕಾರ್ಯ ಮತ್ತು ಕಾರ್ಯನಾಶಕಗಳೆರಡರ ಪ್ರಕಾಶಕವಾಗಿಯೂ ಇದೆ. ಹೀಗಿ ರುವುದೇ ಪ್ರತಿಫಲಿತವಾದ ಜೀವಚೈತನ್ಯ 'ವರೇಣಿಯಂ' ಎಂಬ ಪದದಲ್ಲಿ ಜೀವಚೈತನ್ಯನು ಪಂಚಕೋಶ ಮತ್ತು ಇಂದ್ರಿಯಗಳನ್ನು ಕಾರ್ಯಕ್ಕೆ ಪ್ರೇರಿಸುತ್ತಾ ಬರುವ ವಿಚಾರವನ್ನು ತಿಳಿಸಿತು. ಇಂದ್ರಿಯಗಳೆಲ್ಲಾ ಕಾರ್ಯೋನ್ಮುಖವಾಗಲು ಯಾವಾಗ ಸಿದ್ಧವಾಯಿತೋ ಆಗ ವಿಷಯವ್ಯಾಪಾರವೂ ಪ್ರಾರಂಭವಾಗುವುದು ಸ್ವತಸ್ಸಿದ್ಧವಾಗಿದೆ. ಬಾಹ್ಯವ್ಯಾಪಾರವೇ ಅವಿದ್ಯಾಸ್ವರೂಪ. ನಿವೃತ್ತಿ ಮಾರ್ಗದ ಕಡೆಗೆ ಪ್ರಯತ್ನವೇ ಇಲ್ಲದೆ ವಿಷಯವ್ಯಾಪಾರದಲ್ಲಿ ಜೀವಚೈತನ್ಯನು ಪ್ರಕಾಶಪಡಿಸಿ ಕೊಂಡಿರುವುದೇ 'ಭರ್' ಎಂಬುದರ ತತ್ವವಾಗಿರುವುದು. ಮನುಷ್ಯ ಎನಿಸಿಕೊಳ್ಳ ಬೇಕಾದರೆ ಗರ್ಭದಲ್ಲಿದ್ದು ಅಂಗಾಂಗಳೆಲ್ಲಾ ಸೃಷ್ಟಿಯಾಗಿ, ಜನನವಾಗಿ, ಬಾಲ್ಯ

ಕಳೆದು ಯೌವನಾವಸ್ಥೆಗೆ ಬರಬೇಕು. ಇದರಂತೆ ಜೀವನೆಂದು ಕರೆಯಲ್ಪಡಬೇಕಾದರೆ ಪರಬ್ರಹ್ಮನು ಅಂತಃಕರಣದ ಪ್ರತಿಫಲಿತ ಚೈತನ್ಯನಾಗಿ ಸೃಷ್ಟಿಯನ್ನು ಪೂರ್ಣಮಾಡಿಕೊಂಡು ಬಾಹ್ಯವ್ಯಾಪಾರಕ್ಕೋಸ್ಕರ ಪ್ರಾಣೇಂದ್ರಿಯಗಳನ್ನು ಕಾರ್ಯೋನ್ಮುಖವಾಗಿ ಪ್ರೇರಿಸುತ್ತಾ ಕೊನೆಗೆ 'ಭರ್'ದ ತತ್ವವಾದ ಅಜ್ಞಾನ ಕಾರ್ಯವಾದ ಬಾಹ್ಯವ್ಯಾಪಾರದ ಪ್ರಕಾಶಕನಾಗಿ ನಿಲ್ಲಬೇಕು. ಲೋಕದಲ್ಲಿ ಜೀವನೆಂದು ವಾಡಿಕೆಯಾಗಿ ಕರೆಯಲ್ಪಡುವವನ ಸ್ವರೂಪವೇ ಇದು. ಈ ತತ್ವಕ್ಕೆ ಶ್ರುತಿಯಲ್ಲಿ "ಅವಿದ್ಯೋಪಾಧಿಕೋಜೀವಃ" ಅಂದರೆ ಅಜ್ಞಾನಕಾರ್ಯವಾದ ಬಾಹ್ಯವ್ಯಾಪಾರವನ್ನು ಪ್ರಕಾಶಪಡಿಸುವ ಚೈತನ್ಯಕ್ಕೆ ಜೀವನೆಂದು ಹೇಳಿದೆ. ಪ್ರಪಂಚವ್ಯಾಪಾರದಲ್ಲಿಯೇ ಮಗ್ನರಾಗಿರುವ ದೇವತೆಗಳು ಮನುಷ್ಯರು ಮೊದಲಾಗಿ ಎಲ್ಲಾ ಜೀವಜಂತುಗಳೂ ಈ ಮಂತ್ರದಲ್ಲಿನ 'ಭರ್'ದ ತತ್ವದಲ್ಲಿಯೇ ಮುಳುಗಿರುತ್ತಾರೆ. ನಿವೃತ್ತಿಮಾರ್ಗದ ದಾರಿಯಲ್ಲಿ ಪ್ರವೇಶಮಾಡದೆ 'ಭರ್'ದ ಮುಂದಿನ 'ಗಃ' ಎಂಬಕ್ಷರದ ತತ್ವವನ್ನು ಸೇರಲು ಸಾಧ್ಯವೇ ಇಲ್ಲ.

['ತತ್' ಎಂಬ ಪದದಿಂದ 'ಭರ್ಗಃ' ಎಂಬ ಪದದಲ್ಲಿನ 'ಗಃ' ಎಂಬಕ್ಷರದವರೆಗೆ ಬರೆದಿರುವ ತತ್ವಗಳೆಲ್ಲಾ ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಬಾಲಕಾಂಡಮೊದಲು ಸೀತಾಪಹರಣ ಪರ್ಯಂತ ವಿರುವಕಥೆಯ ತತ್ವಗಳಲ್ಲಿ ವಿವರವಾಗಿ ಬಂದಿವೆ.]

'ಗಃ' ಎಂಬಕ್ಷರದ ತತ್ವಕ್ಕೆ ಪ್ರಾರಂಭವಾಗಲು ದೇಹ ಮತ್ತು ವಿಷಯಾದಿಗಳು ಅನಿತ್ಯವೆಂಬ ಮತ್ತು ಪರಮಾತ್ಮನೊಬ್ಬನೇ ನಿತ್ಯನೆಂಬ ವಿವೇಕವು ಪ್ರಥಮದಲ್ಲಿ ಮನುಷ್ಯನಲ್ಲಿ ಉದಯಿಸಿ, ಈಶ್ವರಾರಾಧನ ಪೂರ್ವಕವಾದ ಕರ್ಮಗಳನ್ನು ಮಾಡುತ್ತಾ ಸದಾಚಾರದಲ್ಲಿ ನಿರತನಾಗಿರಬೇಕು ಪ್ರಪಂಚವ್ಯಾಪಾರದಲ್ಲಿ ನಿರಭಿಮಾನದಿಂದಿರಬೇಕು. ಭವಬಂಧನದಿಂದ ದಾಟಲು (ಬಿಡಿಸಿಕೊಳ್ಳಲು) ಗುರುಮುಖೇನ ಆತ್ಮವಿಚಾರಮಾಡಿ ನಿಯಮವಂತನಾಗಿದ್ದು ಬ್ರಹ್ಮಚಿಂತನೆಯಲ್ಲಿಯೇ ನಿರಂತರವೂ ಮಗ್ನನಾಗಿದ್ದರೆ 'ಗಃ' ಎಂಬಕ್ಷರದ ತತ್ವವನ್ನು ದಾಟುವನು. ಅಂದರೆ ಜೀವಚೈತನ್ಯನು ಅಜ್ಞಾನನಾಶಕವಾದ ಈ ಕಾರ್ಯಗಳ ಪ್ರೇರಕನಾಗಿ ಪ್ರಕಾಶಿಸುತ್ತಿರುವವನಾದುದರಿಂದ 'ಗಃ' ಎನ್ನುವ ಅಕ್ಷರಬೋಧ್ಯವಾದಸ್ಥಿತಿಗೆ ಬಂದು ನಿಂತಂತಾಯಿತು. ಅಂದರೆ ಅಜ್ಞಾನನಾಶಕರವಾದ ತೇಜೋರೂಪನವನು ವಿಷಯವ್ಯಾಪಾರಗಳು ಸಾಧಾರಣವಾಗಿ ನಿವೃತ್ತಿಮಾರ್ಗದಕಡೆಗೆ ಮನಸ್ಸನ್ನು ಬಿಡುವುದಿಲ್ಲ. ವಿಷಯಗಳು ಅನಿತ್ಯವೆಂಬ ತಿಳಿವಳಿಕೆಯು ಬೇರೂರಿ ಆತ್ಮವಿಚಾರಮಾಡಿ ತೀವ್ರತಮವಾದ ಬ್ರಹ್ಮಚಿಂತನೆಯು ಹುಟ್ಟುವುದು ಕಷ್ಟ. ಆದುದರಿಂದ 'ಗಃ' ಎಂಬಕ್ಷರದ ತತ್ವಕ್ಕೆ ಬರುವುದು ಕಷ್ಟ.

**ದೇವಸ್ಯ** — 'ದೇವಸ್ಯ' ಎಂದರೆ - ದೇವತೆಗಳೊಡನೆ ಕ್ರೀಡಾದಿ ಗುಣಗಳಿಂದೊಡಗೂಡಿ ಪ್ರಕಾಶಮಾನನು, ಧರ್ಮಾಧರ್ಮಸ್ವರೂಪವನ್ನು ತಿಳಿದವನು,

ಸಂತೋಷಪ್ರದನೆಂಬ ಅರ್ಥಗಳಾಗುವುವು 'ಭರ್ಗಃ' ಎನ್ನುವ ತತ್ವದಲ್ಲಿ ತೀವ್ರತಮವಾದ ಬ್ರಹ್ಮಚಿಂತನೆಯಲ್ಲಿ ಮಗ್ನನಾಗುವ ಸೋಪಾನಕ್ಕೆ ಅಧಿಕಾರಿಯು ಬರಬೇಕೆಂಬ ತತ್ವವನ್ನು ತಿಳಿಸಿತಷ್ಟೆ! ಪರಮಾತ್ಮಚಿಂತನೆಯಲ್ಲಿ ಮಗ್ನನಾದರೂ ಧ್ಯಾನ ಮಾಡದೆಯೇ ಆತ್ಮಸಾಕ್ಷಾತ್ಕಾರವಾಗುವುದಿಲ್ಲ. ಧ್ಯಾನಕ್ಕೆ ಅರ್ಹತೆಯನ್ನು ಸಂಪಾದಿಸಲು ಆಸನ, ಪ್ರಾಣಾಯಾಮಗಳಿಂದ ಶ್ವಾಸೋಚ್ಛ್ವಾಸದ ಕ್ಷಿಪ್ರಗತಿಯನ್ನು ಕುಗ್ಗಿಸಿ ನಿಲುಗಡೆಗೆ ತರಬೇಕು. ಪ್ರಾಣಾಯಾಮಮಾಡಲು ಪಂಚಪ್ರಾಣ ಮತ್ತು ಇಂದ್ರಿಯಗಳ ಸಹಾಯಬೇಕು. ದೇವತೆಗಳಸ್ವರೂಪವಾದ ಪ್ರಾಣೇಂದ್ರಿಯಗಳೊಡನೆ ಪ್ರಾಣಾಯಾಮಕಾರ್ಯನಡೆಯುವಾಗ ಜೀವಚೈತನ್ಯನು ಅದನ್ನು ಪ್ರಕಾಶಿಸುತ್ತಿರುವನಾದ್ದರಿಂದ ದೇವತೆಗಳೊಡನೆ ಕ್ರೀಡಾದಿಗುಣಗಳಿಂದೊಡಗೂಡಿ ಪ್ರಕಾಶಮಾನನೆಂದು ಕರೆಯಲ್ಪಡುವನು. ಪ್ರಾಣಾಯಾಮದಿಂದ ಶುದ್ಧಸತ್ವಗುಣದ ವಿಕಾಸವಾಗುವುದರಿಂದ ಅಧಿಕಾರಿಯು ಪ್ರಸನ್ನತೆಯ ಸ್ವಭಾವದವನೂ ತೇಜಸ್ವಿಯೂ ಆಗುವನು. ಜೀವಚೈತನ್ಯನು ಇಂತಹ ಸ್ಥಿತಿಯನ್ನು ಪ್ರಕಾಶಪಡಿಸುತ್ತಾ ಇರುತ್ತಾನಾದ್ದರಿಂದ 'ದೇವಸ್ಯ' ಎಂದು ಕರೆಯಲ್ಪಡುವನು.

[ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಶ್ರೀರಾಮಚಂದ್ರನು ಸುಗ್ರೀವನೊಡಗೂಡಿ ಹನುಮಂತನಿಂದ ಸೀತಾವೃತ್ತಾಂತವನ್ನು ತಿಳಿಯುವವರೆಗಿನ ತತ್ವವೇ 'ದೇವಸ್ಯ' ಎಂಬುದರ ತತ್ವಾರ್ಥವಾಗಿದೆ.]

**ಧೀಮಹಿ**— ಧೀಮಹಿ ಎಂದರೆ ಧ್ಯಾನಮಾಡುತ್ತೇವೆಂದರ್ಥವು. ಅಂತರ್ಮುಖದಲ್ಲಿ ನಾವು ಧ್ಯಾನಿಸುವ ತೇಜಸ್ಸೇ ನಮ್ಮಲ್ಲಿರುವ ಸೂರ್ಯತೇಜಸ್ಸಾದ್ದರಿಂದ ಸೂರ್ಯನನ್ನು ಧ್ಯಾನಮಾಡಿದಂತಾಗುವುದು. ಅಂದರೆ ಸೂರ್ಯರೂಪವಾದ ತೇಜೋಬಿಂದುವನ್ನೇ ನಾವು ಧ್ಯಾನಿಸುವುದು. ಇಂತಹ ತೇಜೋಬಿಂದುವನ್ನು ಧರಿಸಿ ಜೀವಚೈತನ್ಯನು ಧ್ಯಾನದ ತಾದಾತ್ಮ್ಯದಿಂದ ಬುದ್ಧಿವೃತ್ತಿಯೊಡನೆ ಇರುವನೆಂದು ಭಾವವು. ಹೇಗೆಂದರೆ ವಿಷಯ ಪ್ರಕಾಶಕನಾಗಿ ಬಾಹ್ಯದಲ್ಲಿ ಪ್ರಸರಣೆಯಿಲ್ಲದೆ ಅಂತರ್ಮುಖದ ತೇಜಸ್ಸಿನಲ್ಲಿ ಜೀವಚೈತನ್ಯನು ನಿಲುಗಡೆಗೆ ಬರುವನು. ಆದುದರಿಂದ ಜೀವಚೈತನ್ಯನಿಗೆ 'ಧೀಮಹಿ' ಎಂಬುದು ಸಲ್ಲುವುದು.

**ಧಿಯೋಯೋನಃ**— ಇದರಲ್ಲಿ ಧಿಯಃ ಯಃ ನಃ ಎಂಬ ಮೂರು ಪದಗಳಿವೆ. ಈ ಮೂರು ಪದಗಳಿಗೂ ಧಿಯಃ – ಬುದ್ಧಿಯನ್ನು ಯಃ – ಯಾರು, ನಃ – ನಮ್ಮ ಎಂಬದಾಗಿ ಅರ್ಥವು. ನಮ್ಮ ಬುದ್ಧಿಕಾರ್ಯಗಳಿಗೆ ಪ್ರಕಾಶಕನು ಜೀವಚೈತನ್ಯನಲ್ಲದೆ ಪರಬ್ರಹ್ಮನಲ್ಲ ಪರಬ್ರಹ್ಮನು ಸಾಕ್ಷಿಯಾಗಿಯೂ ನಿರ್ಲಿಪ್ತನಾಗಿಯೂ ಇರುವವನೇ ಹೊರತು ಕರ್ತೃತ್ವ ಭೋಕ್ತೃತ್ವ ಪ್ರೇರಕತ್ವಗಳೊಂದೂ ಅವನಿಗಿಲ್ಲ. ಧೀಮಹಿ' ಎನ್ನುವ ಪದವು ತೇಜೋಬಿಂದುಧಾರಣೆಯಿಂದ ಸಮಾಧಿಯ ಅಭ್ಯಾಸ ಮಾಡುವ ತತ್ವವೆಂದು ತಿಳಿಸಿತಷ್ಟೆ ಸೂರ್ಯತೇಜಸ್ಸು ಪ್ರಾತಃಕಾಲದಿಂದ

ಮಧ್ಯಾಹ್ನಕ್ಕೆ ಪೂರ್ಣತೆಗೆ ಬರುವಂತೆ ಸಮಾಧಿಯಲ್ಲಿ ತೇಜಸ್ಸು ಅಧಿಕವಾಗಿ ಪೂರ್ಣಸ್ಥಿತಿಗೆ ಬರುವುದಾಗಿದೆ. ಇದರಲ್ಲಿ ಜೀವಚೈತನ್ಯನು ನಿಲುಗಡೆಹೊಂದುವ ತತ್ವವೇ 'ಧಿಯಃ ಯಃ' ಎಂಬ ಪದಗಳ ತತ್ವವಾಗಿರುವುದು. ಜೀವನ ತೇಜಸ್ಸೂ ಸೂರ್ಯನತೇಜಸ್ಸೂ ಪರಮಾತ್ಮನ ಪ್ರತಿಬಿಂಬವಾಗಿರುವುದರಿಂದ ಒಂದೇಆಗುವುದು. ಹೀಗೆ ಸೂರ್ಯತೇಜಸ್ಸೂ ಜೀವನತೇಜಸ್ಸೂ ಒಂದೇ ಎಂಬ ಪ್ರತಿಪಾದನೆಯ ತತ್ವವು 'ಧಿಯಃ ಯಃ' ಎಂಬ ಪದಗಳಲ್ಲಿದೆ. ಅಂದರೆ ಸಮಾಧಿಯನ್ನು ಅಭ್ಯಾಸ ಮಾಡುತ್ತಿರುವ ಅಧಿಕಾರಿಯ ಜೀವಚೈತನ್ಯನು ತನ್ನಲ್ಲಿರುವ ಸೂರ್ಯರೂಪಿನಲ್ಲಿ ಬಂದು ನಿಂತು ಅವನೇ ಇವನಾಗುವ ತತ್ವವೇ 'ಧಿಯಃ ಯಃ' ಎಂಬುದರ ತತ್ವವು. 'ನಃ' ಎಂದರೆ ನಮ್ಮ ಎಂದರ್ಥವು. 'ನನ್ನ' ಅಥವಾ 'ನಮ್ಮ' ಎನ್ನುವುದರ ನಿಶ್ಚಯವಾದ ಸ್ಥಿತಿಯಾವುದೆಂದರೆ - ನನ್ನ ದೇಹವೆಂದು ಹೇಳುವುದರಿಂದ ದೇಹ ಜ್ಞಾನವೂ ಅಲ್ಲದ ಶುದ್ಧವಾದ ನಾನೆಂಬ ಜ್ಞಾನವು. ಈ ಶುದ್ಧವಾಗಿ 'ನಾನು' ಎಂಬ ಜ್ಞಾನಮಾತ್ರ ಶೇಷವಾಗಿ ನಿಂತುಕೊಳ್ಳುವ ಸ್ಥಿತಿಯಾಗಲು 'ತಿಳಿಯು ವವನು, ತಿಳಿಯುವುದು, ತಿಳಿಯುವ ಪದಾರ್ಥ, ಇವುಗಳಲ್ಲಿ ತಿಳಿಯುವ ಪದಾರ್ಥ, ತಿಳಿಯವುದು, ಎಂಬ ಈ ಎರಡೂ ಇಲ್ಲದ ತಿಳಿಯುವವನು ಮಾತ್ರ ಇರುವ ಸ್ಥಿತಿಯೇ 'ನಃ' ಎಂಬುದರ ತತ್ವ. ಇಂತಹ ಶುದ್ಧವಾದ ನಾನೆಂಬ ಸ್ಥಿತಿಯನ್ನು ಅಧಿಕಾರಿಯು ಪಡೆಯಬೇಕಾದರೆ ಸಮಾಧಿಯಲ್ಲಿ ಕಾಣುವ ತೇಜಸ್ಸೂ ತಗ್ಗಿ ಬಹು ಸೂಕ್ಷ್ಮವಾದ ಉನ್ಮನೀ ಸೋಪಾನಕ್ಕೆ ಬರಬೇಕು. ಸಮಾಧಿಯಲ್ಲಿ ಈ ಶುದ್ಧ ವಾದ ನಾನೆಂಬ ಜ್ಞಾನಮಾತ್ರ ಉಳಿಯುವಸ್ಥಿತಿಯಲ್ಲಿ ಜೀವಚೈತನ್ಯನು ತಾದಾತ್ಮ್ಯದಿಂದ ಇರುವನಾದುದರಿಂದ ಇವನಿಗೇ 'ನಃ' ಎಂಬುದು ಸಲ್ಲುವುದು.

[ **'ಧಿಯೋಯೋನಃ' ವಿಚಾರವು ರಾಮಾಯಣದ ಅಂತರಾರ್ಥದಲ್ಲಿ ಇಂದ್ರನರಥಾರೋಹಣಾ ರಥ್ಯ ಸೀತಾದೇವಿಯು ಶ್ರೀರಾಮನ ಬಳಿಗೆ ಬಂದ ಕಥಾತತ್ವವಾಗಿದೆ.**]

**ಪ್ರಚೋದಯಾತ್**—ಎಂದರೆ ಚೆನ್ನಾಗಿ ಪ್ರೇರಿಸಲಿ ಎಂದರ್ಥ. ಇದು 'ಚುದ' ಧಾತುವಿನಿಂದುಂಟಾಗಿದೆ. 'ಚುದ' ವೆಂದರೆ ಪ್ರೇರಣೆ. ಯಾವುದಕ್ಕೆ ಪ್ರೇರಣೆಯೆಂದರೆ - 'ಧೀಯೋಯೋನಃ' ಎಂಬ ಪದದಲ್ಲಿ ಉಳಿದಿರುವ ಶುದ್ಧವಾದ ನಾನೆಂಬ ಜ್ಞಾನವು ಕೂಡ ಪರಬ್ರಹ್ಮನಲ್ಲಿ ಲಯವಾಗುವುದರ ಮೂಲಕ ಪ್ರತಿ ಫಲಿತಚೈತನ್ಯನಾದ ಜೀವನು ಪರಬ್ರಹ್ಮನಾಗುವುದಕ್ಕೆ ಪ್ರೇರಣೆಯು. ಪ್ರೇರ ಣೆಯು ಸಾಧಾರಣವಾದುದಲ್ಲ. ಪ್ರಕೃಷ್ಟವಾದ ಪ್ರೇರಣೆ. ಇಂತಹ ಪ್ರಕರ್ಷ ದಿಂದ ಪ್ರಾರಂಭವಾದ ಪ್ರೇರಣೆಯು ಕ್ರಮೇಣ ಪ್ರಚೋದಯಾತ್ ಪದದ 'ತ್' ಎಂಬ ಅರ್ಧಾಕ್ಷರವನ್ನು ಸೇರುವುದು. ಇದರಂತೆ 'ಪ್ರಚೋದಯಾತ್' ಎಂಬ ಪದದ ತತ್ವದವರೆಗೆ ಉಳಿದಿರುವ ಶುದ್ಧವಾದ ನಾನೆಂಬ ಜ್ಞಾನ ಮತ್ತು ಜೀವ ಚೈತನ್ಯನು ಪರಬ್ರಹ್ಮವಾಗಲು ಪ್ರಕೃಷ್ಟವಾದ ಪ್ರೇರಣೆಯಿಂದ ಪ್ರಾರಂಭವಾಗಿ

'ತ್' ಎಂಬ ಅರ್ಧಾಕ್ಷರದ ತತ್ವವಾಗಿ 'ತತ್' ಪ್ರತಿಪಾದ್ಯವಾದ ಪರಬ್ರಹ್ಮವೇ ಆಗುವುದು. ಇದೇ 'ಪ್ರಚೋದಯಾತ್' ಎಂಬುದರ ತತ್ವವಾಗಿರುವುದು. ಅಧಿಕಾರಿಯು ಸವಿಕಲ್ಪಸಮಾಧಿಯ ಅಂತ್ಯದವರೆಗೆ ಬರುವ ವಿಧಾನಗಳೇ 'ಧಿಯೋ ಯೋನಃ' ಎಂಬ ಪದದ ತತ್ವವಾಗಿದೆ. ಪ್ರಚೋದಯಾತ್ ಪದವು ಆತ್ಮಸಾಕ್ಷಾತ್ಕಾರಸ್ವರೂಪವಾದ ನಿರ್ವಿಕಲ್ಪಸಮಾಧಿಯೆನಿಸುವ ಜೀವನ್ಮುಕ್ತಿ, ವಿದೇಹಮುಕ್ತಿಗಳೆರಡರ ತತ್ವಗಳನ್ನೂ ಒಳಗೊಂಡಿರುವುದು.

ಇದುವರೆಗೂ ವಿವರಿಸಿದ ಪ್ರಾಣಾಯಾಮ ಮಂತ್ರದ ಎರಡನೆಯ ಪಾದವು ಗಾಯತ್ರೀ ಮೂಲಮಂತ್ರವಾಗಿರುವುದು. ಇದರ ಮುಖ್ಯ ತತ್ವಾರ್ಥವು ಸೃಷ್ಟಿಗೆ ಪೂರ್ವದಲ್ಲಿ ತತ್‌ಪ್ರತಿಪಾದ್ಯವಾದ ಪರಬ್ರಹ್ಮ ಒಂದೇ ಇತ್ತು. 'ತತ್' ಪದದಲ್ಲಿನ 'ತ್' ಅರ್ಧಾಕ್ಷರದ ತತ್ವವಾದ ಪರಾಶಕ್ತಿಯು ಹೊರಹೊಮ್ಮಿ ಕೂಡಲೆ ತ್ರಿಗುಣಾತ್ಮಕವಾದ ಮೂಲಪ್ರಕೃತಿಯೆನಿಸಿತು. ಪರಬ್ರಹ್ಮವೂ ಮೂಲಪ್ರಕೃತಿಯಲ್ಲಿ ಪ್ರತಿಫಲಿಸಿ ಈಶ್ವರಚೈತನ್ಯನೆನಿಸಿತು. ಈ ಸೋಪಾನದಿಂದಲೇ ಪ್ರಕೃತಿ ಪುರುಷರೆಂಬ ವಿಭಾಗ. ಪರಬ್ರಹ್ಮನ ಪ್ರತಿಫಲನದೊಡಗೂಡಿದ ಮೂಲಪ್ರಕೃತಿಯು ಸತ್ವರಜಸ್ತಮೋಗುಣಗಳ ವಿಭಾಗವಾಗಿ ಸಕಲ ಬ್ರಹ್ಮಾಂಡ ಪಿಂಡಾಂಡಗಳನ್ನೂ ಸೃಷ್ಟಿಸಿತು. ಪ್ರತಿಪ್ರಾಣಿಯ ಅಂತಃಕರಣದಲ್ಲಿಯೂ ಪ್ರತಿಫಲಿಸಿದ ಪರಬ್ರಹ್ಮವು ಜೀವಚೈತನ್ಯನೆನಿಸಿತು. ಸೃಷ್ಟಿಯಾದ ಅನಂತರ ಜೀವಚೈತನ್ಯನು ಪ್ರಾಣೇಂದ್ರಿಯಗಳೊಡನೆ ಕಲೆತು ಬಾಹ್ಯವ್ಯಾಪಾರಮಾಡಲು ಪ್ರಾರಂಭವಾಯಿತು. ಬಾಹ್ಯವ್ಯಾಪಾರ ಮಾಡುವ ಎಲ್ಲಾ ಪ್ರಾಣಿಗಳಿಗೂ ಮೋಕ್ಷಕ್ರಮವನ್ನನುಸರಿಸಿ ತಮ್ಮ ಮೂಲಸ್ಥಾನವನ್ನು ಸೇರಲು ಅರ್ಹತೆ ಇಲ್ಲ. ಮನುಷ್ಯನಿಗೆ ಮಾತ್ರ ಈ ಅಧಿಕಾರವಿದೆ. ಮನುಷ್ಯರಲ್ಲಿಯೂ ಸರಿಯಾದ ಅಧಿಕಾರಿಯಾಗಿ 'ಭರ್ಗಃ' ಎಂಬುದರ ತತ್ವದಿಂದ ದಾಟಿ ಜೀವಂತನಾಗಿರುವಾಗಲೇ ತಚ್ಛಬ್ದಪ್ರತಿಪಾದ್ಯವಾದ ಪರಬ್ರಹ್ಮಸಾಕ್ಷಾತ್ಕಾರವನ್ನು ಮಾಡಿಕೊಳ್ಳುವುದೇ ಈ ಮಂತ್ರದ ಮುಖ್ಯತತ್ವವಾಗಿರುವುದು. ಅಲ್ಲದೆ ಅಧಿಕಾರಿಯು ಸಾಕ್ಷಾತ್ಕರಿಸಿಕೊಂಡ ಆ 'ತತ್' (ಪರಬ್ರಹ್ಮ) ಎಂಬುದೇ ಸಕಲ ಜಗದ್ರೂಪವಾಗಿದ್ದು ಜಗದ್ರೂಪದಿಂದ ಹಿಂತಿರುಗಿ 'ತತ್' ಪದಕ್ಕೆ ಬಂದು ನಿಲ್ಲುವ ಸ್ಥಿತಿಯನ್ನೂ ವ್ಯಕ್ತಪಡಿಸುವುದು.

'ತತ್'ಎಂಬ ಪದದಲ್ಲಿ 'ತ್'ಎಂಬುದು ಶಕ್ತಿಪ್ರತಿಪಾದಕವಾಗಿರುವುದು.'ತ್' ಎಂಬುದು ಅರ್ಧಾಕ್ಷರವಾದರೂ 'ತ್' ಎಂಬುದನ್ನು ಬಿಟ್ಟರೆ 'ತತ್' ಎಂಬ ಪದವಾಗದೆ ಯಾವ ಅರ್ಥವೂ ಆಗುವುದಿಲ್ಲ. 'ತತ್' ಎಂದರೆ ಅದು ಎಂದರ್ಥವಾಗಿ ಪರಬ್ರಹ್ಮಬೋಧಕವಾದ ಪದವಾಗಿರುವುದರಿಂದ 'ತ್' ಎಂಬ ಅರ್ಧಾಕ್ಷರವನ್ನು ಬಿಟ್ಟು 'ತ' ಎಂಬಕ್ಷರದಿಂದಲೇ ಪರಮಾತ್ಮನೆಂದು ಹೇಳಲಾಗುವುದಿಲ್ಲ. ಆದುದ

ರಿಂದ ತ + ತ್=ತತ್ ಎಂಬೆರಡಕ್ಷರಗಳು ಅಭೇದದಿಂದ ಸೇರಿ ಹೇಗೆ ಒಂದು ಪದ ವೆನಿಸುವುದೋ ಹಾಗೆಯೇ ಶಕ್ತಿಯುತನಾಗಿ ಅಭೇದದಿಂದ ಇರುವುದರಿಂದಲೇ ಪರಬ್ರಹ್ಮನೆಂದು ಕರೆಯಲ್ಪಡುವನು. 'ತ' ಎಂಬ ಅಕ್ಷರಕ್ಕೆ 'ತ್' ಎಂಬ ಅಕ್ಷರವು ವಿಶೇಷಣವಾಗಲಾರದು. ಇದರಂತೆ ಬ್ರಹ್ಮನಿಗೆ ಶಕ್ತಿಯು ವಿಶೇಷಣವಲ್ಲ. 'ತತ್' ಎಂಬುದರಲ್ಲಿ ಬ್ರಹ್ಮವೂ ಶಕ್ತಿಯೇ ಶಕ್ತಿಯೂ ಬ್ರಹ್ಮವೇ ಆಗಿ ಅಭೇದರೂಪ ದಿಂದಿರುವುದರಿಂದ ಶೇಷಭೂತವಾದದ್ದೆಂದೂ ಹೇಳಲಾಗುವುದಿಲ್ಲ. ಆದುದರಿಂದ ತಚ್ಛಬ್ದಾರ್ಥವೇ ಪರಬ್ರಹ್ಮವು. ತಚ್ಛಬ್ದಾರ್ಥವೇ ಶಕ್ತಿಯು. 'ತತ್' ಎಂಬ ಪದದಲ್ಲಿನ 'ತ್' ಎಂಬ ಅರ್ಧಾಕ್ಷರವು ಜಗತ್ತಿನ ರೂಪವಾದ ಬೀಜ. ಬೀಜ ದಲ್ಲಿ ವೃಕ್ಷದ ಸಾರವೆಲ್ಲಾ ಅಡಗಿರುವಂತೆ ಅರ್ಧಾಕ್ಷರವಾದ 'ತ್' ಎಂಬುದರಲ್ಲಿ ಪ್ರಪಂಚವೆಲ್ಲಾ ಬೀಜರೂಪವಾಗಿರುವುದು. ಬೀಜವು ಮೊಳಕೆಯಾಗಿ ಹೇಗೆ ವೃಕ್ಷವಾಗುವುದೋ ಹಾಗೆ 'ತ್' ಎಂಬ ಅರ್ಧಾಕ್ಷರದ ತತ್ವವಾದ ಪರಬ್ರಹ್ಮ ಶಕ್ತಿಯು ಜಗದ್ರೂಪವಾಗಿ ಆಗುವುದು. ವೃಕ್ಷದ ಸಾರವನ್ನೆಲ್ಲಾ ಅಡಗಿಸಿಕೊಂಡು ಪುನಃ ಬೀಜರೂಪಕ್ಕೆ ಬರುವಂತೆ ಪರಾಶಕ್ತಿಯು ಜಗದ್ರೂಪವನ್ನೆಲ್ಲಾ ಉಪ ಸಂಹರಿಸಿಕೊಂಡು ಬೀಜರೂಪಕ್ಕೆ ಬರುವುದು. ಅಂದರೆ ಆವಿಯು ನೀರಾಗಿ ಅನಂತರ ಮಂಜಿನಗಡ್ಡೆಯಾಗುವಂತೆ ಸೃಷ್ಟಿಯಾಗುವುದು. ಮಂಜಿನಗೆಡ್ಡೆಯು ನೀರಾಗಿ ಅನಂತರ ಆವಿಯಾಗಿ ಅವ್ಯಕ್ತವಾಗುವಂತೆ ಜಗದ್ರೂಪವೆಲ್ಲಾ ಪರಬ್ರಹ್ಮ ವಾಗುವುದು. ಮೇಣದಬತ್ತಿಯು ಉರಿದರೂ ನಷ್ಟವಾಗದೆ ಬೇರೊಂದುರೂಪದಲ್ಲಿ ಇರುವುದೆಂದೂ, ಎಲ್ಲಾ ಪದಾರ್ಥಗಳೂ ಅಳಿದು ಅಥವಾ ಕರಗಿ ಬೇರೆ ಪರಿಣಾಮ ಹೊಂದುವುದೆಂದೂ, ಆಧುನಿಕ ಭೌತಿಕಶಾಸ್ತ್ರಜ್ಞರು ಹೇಳುವಂತೆ ಪ್ರಪಂಚವೆಲ್ಲಾ ಪರಬ್ರಹ್ಮವೇ ಆಗಿ ಕೊನೆಗೆ ಬೀಜರೂಪದಲ್ಲಿ ಪರಬ್ರಹ್ಮವಲ್ಲದ ಎರಡನೆಯ ವಸ್ತುವೇ ಇಲ್ಲದಂತಾಗುವುದು. ತಚ್ಛಬ್ದಾರ್ಥವೇ ಸರ್ವವೂ ಎನ್ನುವುದಕ್ಕೆ "ಓಂತದ್ಬ್ರಹ್ಮ ಓಂತದ್ವಾಯುಃ, ಓಂತದಾತ್ಮಾ, ಓಂತತ್ಸತ್ಯಂ, ಓಂತತ್ಸರ್ವಂ," ಎಂಬ ಶ್ರುತ್ಯಾಧಾರಗಳಿರುವುದಲ್ಲದೆ "ಸರ್ವಂಖಲ್ವಿದಂಬ್ರಹ್ಮ" ಎಂಬದಾಗಿ ಶ್ರುತಿಯು ಸಾರುತ್ತಿರುವುದು ಸರ್ವರಿಗೂ ತಿಳಿದವಿಷಯವೇ. ಇದಕ್ಕನುಸಾರ ವಾಗಿಯೇ ಮಂತ್ರದ ಪ್ರಥಮದಲ್ಲಿ 'ತತ್' ಶಬ್ದವೂ ಮಂತ್ರಾಂತ್ಯವಾದ "ಪ್ರಚೋದಯಾತ್" ಎಂಬಪದದ ಕೊನೆಯಲ್ಲಿ 'ತ್' ಎಂಬ ಅರ್ಧಾಕ್ಷರವೂ ಇರುವುದು.

"**ಏಕಮೇವಾದ್ವಿತೀಯಂಬ್ರಹ್ಮ**" ಎಂಬ ತತ್ವವು **ಗಾಯತ್ರೀಮಂತ್ರ ದಲ್ಲಿ** ಅಡಗಿರುವುದೆಂಬುದನ್ನು **ಮಂತ್ರಾರ್ಥದಿಂದಲ್ಲದೆ ಮಂತ್ರದ ಸ್ಥೂಲ ರೂಪದಲ್ಲಿಯೂ ಪ್ರತ್ಯಕ್ಷವಾಗಿರುವುದೆಂಬುದನ್ನು** ಪ್ರತಿಪಾದನೆಮಾಡಿ ಕೆಳಗೆ ಬರೆದಿರುವುದು.

ತತ್ ಸ ವಿ ತುಃ ವ ರೇ ಣಿ ಯಂ ಭ ರ್ಗಃ ದೇ ವ ಸ್ಯ
೧ ೨ ೩ ೪ ೫ ೬ ೭ ೮ ೯ ೧೦ ೧೧ ೧೨ ೧೩

ಧೀ ಮ ಹಿ ಧಿ ಯೋ ಯೋ ನಃ ಪ್ರ ಚೋ ದ ಯಾತ್.
೧೪ ೧೫ ೧೬ ೧೭ ೧೮ ೧೯ ೨೦ ೨೧ ೨೨ ೨೩ ೨೪

ಮಂತ್ರದ 'ತತ್' ಪದದಲ್ಲಿನ 'ತ್' ಅರ್ಧಾಕ್ಷರದ ತತ್ವವಾದ ಪರಾಶಕ್ತಿಯು ಸೃಷ್ಟಿ ಸ್ಥಿತಿ ಲಯರೂಪವಾಗಿ ಲಂಬಿಸಿರುವುದೇ 'ಸವಿತುಃ' ಪದ ಪ್ರಾರಂಭದಾರಭ್ಯ ಮಂತ್ರಾಂತ್ಯದವರೆಗೆ ಇರುವ ಬೀಜಾಕ್ಷರಗಳ ರೂಪವಾಗಿ ಮಂತ್ರಾಂತ್ಯದಲ್ಲಿ ಅರ್ಧಾಕ್ಷರವಾದ 'ತ್' ಇರುವುದಾಗಿದೆ. ಅಂದರೆ 'ತತ್' ಎಂಬ ಪದದ ತತ್ವವೇ ಮಂತ್ರದ ಅನೇಕ ಪದಗಳತತ್ವಗಳಾಗಿವೆ. ಅಂದರೆ ಒಂದನೇ ಸಂಖ್ಯೆಯೇ ೨೪ ಸಂಖ್ಯೆಯವರೆಗೂ ಲಂಬಿಸಿ ನಿಂತಿದೆ. ಈ ತತ್ವವೇ ಪರಬ್ರಹ್ಮವು ಪ್ರಪಂಚರೂಪ ವಾದ ವಿರಾಟ್‌ಸ್ಥಿತಿಯಲ್ಲಿರುವುದಾಗಿದೆ. ಮಂತ್ರಾಂತ್ಯದಲ್ಲಿರುವ ಅರ್ಧಾಕ್ಷರವಾದ 'ತ್' ಎಂಬುದು ಲಂಬಿಸಿರುವ ಪದಗಳ ತತ್ವಗಳನ್ನೆಲ್ಲಾ ವೃಕ್ಷವು ಬೀಜರೂಪಕ್ಕೆ ಬರುವಂತೆ ನುಂಗಿಕೊಂಡು 'ತ' ಅಕ್ಷರದ ಜೊತೆಯಲ್ಲಿ ನಿಲ್ಲುವುದೇ ಪರಬ್ರಹ್ಮ ಒಂದೇ ಇದ್ದಸ್ಥಿತಿಯಾಗಿರುವುದು. ಅಂದರೆ ಒಂದನೆಯ ಸಂಖ್ಯೆಯು ೨೪ ಸಂಖ್ಯೆಯ ಸ್ಥಿತಿಯಾಗಿ ವಿಸ್ತರಿಸಿ ಅನಂತರ ಲಂಬಿಸಿರುವುದನ್ನು ಪುನಃ ಉಪಸಂಹರಿಸಿಕೊಂಡು ಒಂದು ಸಂಖ್ಯೆಯೇ ಉಳಿಯುವ ಸ್ಥಿತಿಯಾಗಿರುವುದು.

ಗಾಯತ್ರೀಮಂತ್ರದಲ್ಲಿ ಈ ವಿಧವಾದ ಪ್ರತಿಪಾದನೆಯಿಂದಲೂ ಸರ್ವವೂ ಪರಬ್ರಹ್ಮರೂಪವೆಂದು ಹೊರಸೂಸುವುದಲ್ಲದೆ ಮತ್ತೊಂದು ವಿಧವಾಗಿಯೂ ವ್ಯಕ್ತ ಪಡುವುದು. ಹೇಗೆಂದರೆ, ಗಾಯತ್ರೀಮಂತ ದಲ್ಲಿನ 'ತತ್' ಪದವನ್ನು ಬಿಟ್ಟು ಸವಿತುಃ' ಪದದಿಂದ ಪ್ರಾರಂಭಿಸಿ ತತ್ವವನ್ನು ತಿಳಿಸೋಣ. ಸವಿತುಃ ಪದವು ಸ' ಅಕ್ಷರದಿಂದ ಪ್ರಾರಂಭವಾಗುವುದು. ಮಂತ್ರಾಂತ್ಯದ ಪ್ರಚೋದಯಾತ್ ಎಂಬ ಪದದಲ್ಲಿ ಅರ್ಧಾಕ್ಷರವಾದ 'ತ್' ಇರುವುದು. ಅಂತ್ಯದಲ್ಲಿರುವ ಈ 'ತ್' ಅರ್ಧಾಕ್ಷರವು ಸವಿತುಃ ಪದದ ಪ್ರಥಮಾಕ್ಷರವಾದ 'ಸ' ಎಂಬ ಅಕ್ಷರದಿಂದ ಮುಂದಿರುವ ಎಲ್ಲಾ ಅಕ್ಷರಗಳ ತತ್ವಗಳನ್ನೂ ನುಂಗಿಕೊಂಡು 'ಸ' ಎಂಬ ಅಕ್ಷರ ನೊಡನೆ ಬಂದುನಿಂತರೆ 'ಸತ್' ಎಂತಾಗುವುದು. ಸತ್ ಎಂದರೆ ಸದ್ರೂಪ. ಈ ಸತ್ ಪದವನ್ನು ಮಂತ್ರದ ಪ್ರಥಮ ಪದವಾದ ತತ್ ಪದದೊಡನೆ ಸೇರಿಸಿದರೆ ತತ್ಸತ್' ಎಂದಾಗಿ ಅದು ಸದ್ರೂಪವೆಂದರ್ಥವಾಗುವುದು. ಮಂಗಳಕರವಾದ ಓಂ'ಕಾರವನ್ನೂ 'ತತ್ಸತ್' ಜೊತೆಗೆ ಸೇರಿಸಿದರೆ 'ಓಂತತ್ಸತ್' ಎಂದಾಗುವುದು. ಅಲ್ಲದೆ ಸವಿತುಃ ಪದದಲ್ಲಿನ 'ವಿ' ಅಕ್ಷರದಿಂದ ಪ್ರಾರಂಭಮಾಡಿ ಮಂತ್ರಾಂತ್ಯದ ಲ್ಲಿರುವ ಅರ್ಧಾಕ್ಷರವಾದ 'ತ್' ಅರ್ಧಾಕ್ಷರವು ಸರ್ವವನ್ನೂ ನುಂಗಿ 'ವಿ' ಅಕ್ಷರ

ದೊಡನೆ ನಿಂತರೆ 'ವಿತ್' ಎಂತಾಗುವುದು. 'ವಿತ್' 'ಚಿತ್' ಇವೆರಡೂ ಒಂದೇ. ಎಂದರೆ ಜ್ಞಾನವೆಂದರ್ಥ. ಆದುದರಿಂದ ವೇದಜನನಿಯಾದ ಗಾಯತ್ರೀದೇವಿಯ ಮಂತ್ರದಲ್ಲಿ 'ತತ್, ಸತ್, ಚಿತ್' ಎಂಬಿವುಗಳನ್ನು ಪ್ರತಿಪಾದಿಸುವ ಮತ್ತು "ಓಂ ತತ್ಸತು"ಎಂಬುದು **ಗಾಯತ್ರೀದೇವಿಯ ಮಂತ್ರವಾಗಿರುವುದೆಂಬುವ** ಎಂತಹ **ಪ್ರತ್ಯಕ್ಷತತ್ವವಿರುವುದೋ** ಅದನ್ನು ವಾಚಕರೇ ತಮ್ಮಮನಸ್ಸಿಗೆ ತಂದುಕೊಳ್ಳಲಿ.

ಆದುದರಿಂದ ತಚ್ಛಬ್ದಾರ್ಥವೇ ಪರಬ್ರಹ್ಮ. ತಚ್ಛಬ್ದಾರ್ಥವೇ ಪರಾಶಕ್ತಿ ಎಂಬುದಾಗಿ ಹೇಗೆ ಪ್ರತಿಪಾದಿತವಾಗಿರುವುದೋ ಹಾಗೆಯೇ ಸದ್ರೂಪತ್ವವೂ ಪರಾ ಶಕ್ತಿತ್ವೇನ ಅನ್ವಯವಾಗುವುದು. ಪ್ರಪಂಚವು ಅಸದ್ರೂಪವೆಂದು ಹೇಳಲು ಕಾರಣ ವೇನೆಂದರೆ, ವೃಕ್ಷದ ಸ್ಥಿತಿಯಲ್ಲಿದ್ದಾಗ ಅಸದ್ರೂಪವೆನಿಸುವುದು. ಬೀಜದ ಸ್ಥಿತಿಯ ಲ್ಲಿದ್ದಾಗ ಸದ್ರೂಪವೆನಿಸುವುದು. ಇದರಂತೆ ಸ್ಥೂಲವಾದ ಪ್ರಪಂಚವು ಅವ್ಯಕ್ತವಾಗಿ ಪರಬ್ರಹ್ಮಸ್ಥಿತಿಯನ್ನೈದಿದಾಗ ಸದ್ರೂಪವೆಂತಲೂ, ಸ್ಥೂಲವಾಗಿದ್ದಾಗ ಅಸದ್ರೂಪ ವೆಂತಲೂ ಹೇಳಲ್ಪಡುವುದು. ಅಂದರೆ ಪರಿಣಾಮಭೇದವೇ ಹೊರತು ವಸ್ತು ಭೇದವಿಲ್ಲ ಆಕಾಶದಿಂದ ವಾಯು, ಅಗ್ನಿ, ಜಲ, ಭೂಮಿಗಳು ಕ್ರಮವಾಗಿ ಉಂಟಾದವು. ಪುನಃ ಭೂಮಿ, ಜಲ, ಅಗ್ನಿ, ವಾಯುಗಳು ಆಕಾಶ ಪರಿಣಾಮಕ್ಕೆ ಬಂದು ಪರಬ್ರಹ್ಮವೇ ಆಗುವವು. ಅಜ್ಞಾನ ಸ್ವರೂಪವೂ ಕೂಡ ಅಂತ್ಯದಲ್ಲಿ ಜ್ಞಾನದ ಪರಿಣಾಮವನ್ನೇ ಹೊಂದುವುದು. ಚಿನ್ನವು ಕರಗಿ ಆವಿಯಾಗಿ ಹೋದರೂ ಇನ್ನೊಂದು ಸೂಕ್ಷ್ಮರೂಪದಲ್ಲಿದ್ದೇ ಇರುವುದು. ಆದುದರಿಂದ 'ಸತ್' ಎಂಬುದರಲ್ಲಿ 'ತ್' ಎಂಬ ಅರ್ಧಾಕ್ಷರದ ತತ್ವವಾದ ಪರಾಶಕ್ತಿಯಿದ್ದರೂ 'ಸ' ಎಂಬ ಅಕ್ಷರವೇ 'ಸತ್' ಎಂಬ ಪದದ ಅರ್ಥವನ್ನು ಕೊಡಲಾರದಾದ್ದರಿಂದ ಸಕಲವೂ ಸದ್ರೂಪವಾಗಿಯೇ ಇರುವುದು.

ಮುಖ್ಯವಾಗಿ ಮನುಷ್ಯನು ತಾನೆಲ್ಲಿಂದ ಬಂದನೋ ಮತ್ತು ತಾನು ಯಾವ ಸ್ವರೂಪನಾಗಿದ್ದನೋ ಆ ಸ್ವರೂಪವನ್ನೇ ಹೊಂದುವನೆಂದರೆ :— ಪರಬ್ರಹ್ಮ ಸ್ವರೂಪನೇ ಆಗುವನೆಂಬ ತತ್ವವು. ಇದರ ಪ್ರತಿಪಾದನೆಯೇ ಗಾಯತ್ರೀದೇವಿಯ ಮಂತ್ರವಾಗಿರುವ ಈ ಪಾದದ ಅರ್ಥವಾಗಿರುವುದು. ಪ್ರಥಮ ಪಾದದ ತತ್ವದಲ್ಲಿ ಪ್ರಾಣಗಳೆಲ್ಲಾ ಏಕಾಕಾರವಾಗಿ ಬ್ರಹ್ಮರಂಧ್ರದಲ್ಲಿ ಲೀನವಾಗಿ ಪರಬ್ರಹ್ಮ ಸ್ವರೂಪವೇ ಆಗಿತ್ತೆಂದು ತಿಳಿಸಿತಷ್ಟೆ! ಅಧಿಕಾರಿಯು ಸಾಕ್ಷಾತ್ಕಾರಮಾಡಿಕೊಂಡು ಪರಬ್ರಹ್ಮ ಸ್ವರೂಪದವನಾಗಿರುವನಷ್ಟೆ! ಸಾಕ್ಷಾತ್ಕರಿಸಿಕೊಂಡಿರುವ ಮಹಾತ್ಮ ನನ್ನು ನೋಡಿದವನು ತಾನು ಈ ಸ್ಥಿತಿಯನ್ನು ಪಡೆಯಲು ತಾನೆಲ್ಲಿಂದ ಬಂದೆನು? ತನ್ನ ಸ್ವರೂಪವೇನು? ಎಂಬ ತತ್ವಗಳನ್ನು ತಿಳಿದುಕೊಳ್ಳುವ ಸೌಕರ್ಯಕ್ಕೂ, 'ಸಕಲವೂ ಪರಬ್ರಹ್ಮವೇ ಮತ್ತು ಉಪಾಸನೆಮಾಡುವ ಗಾಯತ್ರೀದೇವಿಯೂ ಪರಬ್ರಹ್ಮಸ್ವರೂಪವೇ' ಎಂದು ಪ್ರತಿಪಾದನೆಮಾಡುವುದಕ್ಕೂ, ಪರಬ್ರಹ್ಮನ

ಮಹಿಮೆಯನ್ನು ಸೂಚಿಸುವುದಕ್ಕೂ ಪ್ರಾಣಾಯಾಮ ಮಂತ್ರದ ಎರಡನೆಯ ಪಾದವಾಗಿ ಗಾಯತ್ರೀಮಂತ್ರವು ಇರುವುದು.

"ಓಂ ಆಪೋಜ್ಯೋತಿ ರಸೋಽಮೃತಂಬ್ರಹ್ಮಭೂರ್ಭುವಸ್ಸುವರೋಂ" ಎಂಬುದು ಪ್ರಾಣಾಯಾಮ ಮಂತ್ರದ ಮೂರನೇಪಾದವು. ಈ ಮಂತ್ರದ ಪ್ರಥಮ ಪಾದದಲ್ಲಿ ಅಧಿಕಾರಿಯು ಪ್ರಾಣಾಯಾಮದಿಂದ 'ಭೂ' ತತ್ತ್ವವಾದ ಬ್ರಹ್ಮರಂಧ್ರದ ಬಾಗಿಲನ್ನು ತೆಗೆಸಿ ಅನಂತರ ಧ್ಯಾನಾಭ್ಯಾಸದಿಂದ 'ಭೂಃ, ಭುವಃ' ಮುಂತಾದುವುಗಳನ್ನು ದಾಟಿ 'ಸತ್ಯಂ' ತತ್ವವಾದ ಪರಬ್ರಹ್ಮನಲ್ಲಿ ಏಕಾಕಾರವಾಗಿ ಮನಸ್ಸು ಲೀನವಾಗಿ ಪರಬ್ರಹ್ಮಸಾಕ್ಷಾತ್ಕಾರದ ತತ್ವದ್ದಾಗಿದೆಯೆಂದು ತಿಳಿಸಿತು. ಅಧಿಕಾರಿಯು ಸಾಕ್ಷಾತ್ಕರಿಸಿಕೊಂಡಿರುವ ಆ ಪರಬ್ರಹ್ಮವೇ ಸರ್ವವೂ ಎಂಬುದನ್ನು ಎರಡನೆಯ ಪಾದದಲ್ಲಿ ತಿಳಿಸಿತು. ಮೂರನೆಯ ಪಾದವು ಸಾಕ್ಷಾತ್ಕಾರಸೋಪಾನದ ಮಹಿಮೆಯನ್ನು ಪ್ರತಿಪಾದಿಸುವುದು. ಮಂತ್ರದ ಮೂರನೆಯ ಪಾದದಲ್ಲಿರುವ 'ಆಪಃ'ಎಂದರೆ "ಅಪ್ಯಂತ ಇತಿ ಆಪಃ" ಎಲ್ಲರಿಂದಲೂ ಯಾವುದು ಹೊಂದಲ್ಪಡುವುದೋ ಅದಕ್ಕೆ ಆಪವೆಂದು ಹೆಸರು. ತೃಷ್ಣೆಯುಂಟಾದಾಗ ಜಲಪಾನಮಾಡಿ ಸುಖವನ್ನು ಹೊಂದುವಂತೆ ಮೋಕ್ಷೇಚ್ಛೆಯೆಂಬ ತೃಷ್ಣೆಯುಂಟಾಗಿ ಬ್ರಹ್ಮಾನಂದವೆಂಬ ರಸ ಪಾನಮಾಡಿರುವ ಸ್ಥಿತಿಯಾದುದರಿಂದ ಪರಮಾತ್ಮನಿಗೆ 'ಆಪಃ' ಎಂದು ಹೆಸರು. ಪರಮಾತ್ಮನನ್ನು 'ಆಪಃ' ಎಂದು ಕರೆಯುವುದಕ್ಕೆ "ಆಪೋವಾಇದಗ್‌ಂಸರ್ವಂ, ವಿಶ್ವಾಭೂತಾನ್ಯಾಪಃ" ಎಂಬ ಶ್ರುತ್ಯಾಧಾರವೂ ಇರುವುದು. ಅಲ್ಲದೆ "ರಸೋಽಹಮಪ್ಸುಕೌಂತೇಯ" ಎಂಬದಾಗಿ ಶ್ರೀಕೃಷ್ಣ ಪರಮಾತ್ಮನು ಗೀತೆಯಲ್ಲಿ ಹೇಳಿರುವಂತೆ ನಿರ್ವಿಕಲ್ಪಸಮಾಧಿಸ್ಥಿತನಾದ ಅಧಿಕಾರಿಯು ಬ್ರಹ್ಮಾನಂದವೆಂಬ ರಸಾಸ್ವಾದನೆಯ ತನ್ಮಯನಾಗಿರುವುದರಿಂವ ಆಪಸ್ವರೂಪನಾದ ಶ್ರೀಕೃಷ್ಣಪರಮಾತ್ಮನೇ ಆಗಿರುತ್ತಾನೆ.

**ಜ್ಯೋತಿರಸ**:— ಸ್ವಯಂಪ್ರಕಾಶನಾದ ಪರಮಾತ್ಮನಿಗೆ 'ಜ್ಯೋತಿ' ಎಂಬ ಹೆಸರೇ ವಿನಾ ಮತ್ಯಾವ ಪ್ರಕಾಶಕ್ಕೂ ಜ್ಯೋತಿಯೆಂಬ ಹೆಸರು ಸಲ್ಲದು. ಸೌದೆ ಎಣ್ಣೆ ಮುಂತಾದವುಗಳಿಂದುಂಟಾಗುವ ಪ್ರಕಾಶವು ಜ್ಯೋತಿಯೆನಿಸಲಾರದು. ಇನ್ನೊಂದು ವಸ್ತುವಿನ ಸಹಾಯವಿಲ್ಲದೆ ಸ್ವಯಂಪ್ರಕಾಶವಾಗಿರುವುದಕ್ಕೆ ಜ್ಯೋತಿಯೆಂದು ಹೆಸರು. ಅಧಿಕಾರಿಯ ಬುದ್ಧಿವೃತ್ತಿಯು ಏಕಾಕಾರವಾಗಿ ಪ್ರವಹಿಸಿಕೊಂಡು ಇಂತಹ ಜ್ಯೋತಿಸ್ವರೂಪವೆಂಬ ಸಮುದ್ರದಲ್ಲಿ ಮುಳುಗಿರುತ್ತಾದ್ದರಿಂದ ಈ ಸ್ಥಿತಿಗೆ 'ಜ್ಯೋತಿರಸಃ' ಎಂದು ಹೆಸರು. "ರಸೋವೈಸಃ" ಪರಮಾತ್ಮನು ರಸಸ್ವರೂಪನೇ ಎಂಬ ಶ್ರುತಿವಾಕ್ಯವಿರುವುದರಿಂದ ಅಧಿಕಾರಿಯು ಸಹಸ್ರಾರಕಮಲಸ್ಥಿತನಾಗಿ ಸ್ವಪ್ರಕಾಶವಾದ ಬ್ರಹ್ಮಾನಂದದ ಸ್ಥಿತಿಯಲ್ಲಿರುತ್ತಾನೆಂಬ ತತ್ವವಾಗಿದೆ. ಸಹಸ್ರಾರಕಮಲವು ಜ್ಯೋತಿಸ್ವರೂಪವಾಗಿರುವುದಕ್ಕೆ ಮಂಡಲ ಬ್ರಾಹ್ಮಣೋಪನಿಷತ್ತಿನಲ್ಲಿ-

"ಅನ್ತರ್ಲಕ್ಷ್ಯಂ ಜಲಜ್ಯೋತಿ ಸ್ವರೂಪಂ ಭವತಿ ಮಹರ್ಷಿವೇದ್ಯ ಮನ್ತ
ರ್ಬಾಹ್ಯೇಂದ್ರಿಯೈ ರದೃಶ್ಯಂ ಸಹಸ್ರಾರೇ ಜಲಜ್ಯೋತಿರನ್ತರ್ಲಕ್ಷ್ಯಂ"

ತಾ || "ಅನ್ತರ್ಲಕ್ಷ್ಯವು ಅಮೃತಸ್ವರೂಪವಾಗಿಯೂ ಸ್ವಯಂಪ್ರಕಾಶ ಸ್ವರೂಪವಾಗಿಯೂ ಇರುವುದು. ಇದನ್ನು ಮಹರ್ಷಿಗಳು ಸ್ವಾನುಭವದಿಂದ ತಿಳಿದಿರುವರು. ಈ ಅನ್ತರ್ಲಕ್ಷ್ಯದ ಸ್ಥಿತಿಯು ಬಾಹ್ಯೇಂದ್ರಿಯ ಅಂತರಿಂದ್ರಿಯ ಗಳಿಂದ ತಿಳಿಯಲಸಾಧ್ಯ. ಸಹಸ್ರಾರಕಮಲವೇ ಜಲಜ್ಯೋತಿಸ್ವರೂಪವಾದ ಅನ್ತರ್ಲಕ್ಷ್ಯವೆನಿಸುವುದು" ಎಂದು ಹೇಳಿದೆ.

**ಅಮೃತಂ**—ಅಮೃತವೆಂದರೆ "ನಮೃತಾಭವಂತ್ಯನೇನೇತ್ಯಮೃತಂ" ಇದ ರಿಂದ ಮೃತರಾಗುವುದಿಲ್ಲವಾದುದರಿಂದ ಅಮೃತವೆಂದು ಹೆಸರು. ಆತ್ಮ ಸಾಕ್ಷಾತ್ಕಾರಕ್ಕೆ ಅಮೃತವೆಂದು ಹೆಸರು. ಕಾರಣವೇನೆಂದರೆ - ಪರಬ್ರಹ್ಮ ಸಾಕ್ಷಾತ್ಕಾರವೆಂಬ ಅಮೃತವನ್ನು ಪಾನಮಾಡುವವರು ಜನನಮರಣಪ್ರವಾಹ ರೂಪವಾದ ಸಂಸಾರದಿಂದ ಮುಕ್ತರಾಗುತ್ತಾರಾದ್ದರಿಂದ, ಮೋಕ್ಷವನ್ನು ಅಮೃತ ಶಬ್ದದಿಂದ ಹೇಳಿದೆ. ಇದಕ್ಕೆ ಮತ್ತೊಂದುಕಾರಣವೇನೆಂದರೆ - ಪುಷ್ಪಗಳ ಮಧ್ಯದ ಕರ್ಣಿಕಾಪ್ರದೇಶದಲ್ಲಿ ಅಮೃತವಿರುವುದೇ ವಿನಾ ದಳಗಳಲ್ಲಿ ಅಮೃತ ವಿರುವುದಿಲ್ಲ. ದುಂಬಿಗಳು ಪುಷ್ಪದ ಕರ್ಣಿಕೆಯಲ್ಲಿರುವ ಅಮೃತವನ್ನು ಪಾನ ಮಾಡುತ್ತವೆ. ಇದರಂತೆ ನಮ್ಮ ಬ್ರಹ್ಮರಂಧ್ರವಾದ ಸಹಸ್ರಾರಕಮಲವೂ ಅಮೃತ ಪೀಠವೆನಿಸಿ ಅಮೃತಕ್ಕೆ ಮೂಲಸ್ಥಾನವಾಗಿರುವುದರಿಂದ ಬುದ್ಧಿ ಮನಸ್ಸಿನ ವೃತ್ತಿಗಳು ಇಲ್ಲಿ ಲಯವಾಗಿ ಜೀವನು ಅಮೃತಮಯನಾಗುವುದೆಂದರೆ ಪುನರ್ಜನ್ಮ ಗಳುಂಟಾಗದ ಮೋಕ್ಷವುಂಟಾಗುವುದು. ಇದೇ ತಾತ್ಪರ್ಯಕ್ಕೆ : —

"ತೇಜಃಪೀಠ ಮಮೃತಪೀಠಂ ರತ್ನಪೀಠಂ ಜಾನಿಯಾ ದ್ಯೋಜಾನೀತೇ
ಸೋಮೃತತ್ವಂಚ ಗಚ್ಛತಿ."

ತಾ|| ತೇಜಸ್ಸು, ಅಮೃತ, ರತ್ನಪೀಠಗಳಾಗಿರುವುದನ್ನು ಯಾರು ಹೊಂದು ವರೋ ಅವರು ಮೋಕ್ಷವನ್ನು ಹೊಂದುತ್ತಾರೆಂದು ಶ್ರುತಿಯಲ್ಲಿ ಹೇಳಿದೆ. ಆದ್ದ ರಿಂದ ಅಧಿಕಾರಿಯು ಇಂತಹ ಅಮೃತಸ್ವರೂಪನಾಗಿರುವನೆಂದು ಪ್ರತಿಪಾದಿಸುವ ತತ್ವಪ್ರತಿಪಾದನೆಗೋಸ್ಕರವೇ ಅಮೃತಶಬ್ದವು ಈ ಮಂತ್ರದಲ್ಲಿರುವುದು.

**ಬ್ರಹ್ಮ** : — "ಸರ್ವೇಭ್ಯೋಬೃಹತ್ತ್ವಾತ್ ಬ್ರಹ್ಮ" ಅಂದರೆ ಅಧಿಕಾರಿಯು ಸಾಕ್ಷಾತ್ಕರಿಸಿಕೊಂಡಿರುವ ಪರಮಾತ್ಮನು ಬಹು ದೊಡ್ಡವಸ್ತುವೆಂಬ ತತ್ವ ವಾಗಿರುವುದು. ದೊಡ್ಡದೆಂದರೆ ಎಲ್ಲಕ್ಕಿಂತಲೂ ಹೆಚ್ಚಿನ ವಸ್ತುವೇ ಬ್ರಹ್ಮವಸ್ತು ವೆಂದರ್ಥ. ಗಾತ್ರದಲ್ಲಿ ಅರ್ಥಮಾಡಿದರೆ ಖಂಡವಾಗಿಲ್ಲದೆ ಅಖಂಡವೆಂದರೆ ಸರ್ವ ವ್ಯಾಪಕವಾದ ವಸ್ತುವೆಂದರ್ಥ. ಇಂತಹ ಬಹು ಹೆಚ್ಚಿನದಾದ ಸರ್ವವ್ಯಾಪಕ

ಪಾದ ಸ್ಥಿತಿಯಲ್ಲಿ ಅಧಿಕಾರಿಯು ಇರುತ್ತಾನೆಂಬುದೇ ಬ್ರಹ್ಮಶಬ್ದದ ತತ್ತ್ವವಾಗಿರುವುದು.

**ಭೂರ್ಭುವಸ್ಸುವಃ** — ಇದರಲ್ಲಿ ಭೂಃ, ಭುವಃ, ಸುವಃ, ಎಂಬ ಮೂರು ಪದಗಳಿರುವವು. ಭೂ, ಜಲ, ತೇಜಸ್ತತ್ವಗಳೆಂದರ್ಥ. ತೇಜಸ್ಸಿನಿಂದಲೇ ಧ್ಯಾನಾಭ್ಯಾಸ ಪ್ರಾರಂಭವಾಗುವುದು. ಅಂದರೆ ಧ್ಯಾನಮಾಡುವವನು ತೇಜಸ್ಸನ್ನು ಧರಿಸಿಯೇ ಪ್ರಥಮದಲ್ಲಿ ಧ್ಯಾನಿಸಬೇಕಾಗಿದೆ. ಆದ್ದರಿಂದ 'ಭೂಃ, ಭುವಃ,' ಗಳೆರಡನ್ನೂ ದಾಟಿ ತೇಜಸ್ತತ್ವದಿಂದಲೇ ಧ್ಯಾನಮಾಡಿ ಮೋಕ್ಷಪಡೆಯಬೇಕೆಂಬ ತತ್ವವಾಗಿರುವುದು. ಅಲ್ಲದೆ ಸಪ್ತವ್ಯಾಹೃತಿಗಳ ಸಂಜ್ಞಾರೂಪವೇ "ಭೂರ್ಭುವಸ್ಸುವಃ" ಎನ್ನುವುದು. ಆದ್ದರಿಂದ ನಮ್ಮಲ್ಲಿರುವ ಲೋಕಗಳ ತತ್ವಗಳನ್ನು ದಾಟಿಯೇ ಆತ್ಮಸಾಕ್ಷಾತ್ಕಾರವಾಗಬೇಕೆಂಬ ತತ್ವವೂ ಆಗಿದೆ.

ಓಂ — ಪರಬ್ರಹ್ಮನಾಮಪ್ರತಿಪಾದಕವಾಗಿ ಸರ್ವಮಂಗಳಸ್ವರೂಪ, ಸಕಲ ಬೀಜಾಕ್ಷರಸ್ವರೂಪ, ಸಕಲಸ್ವರೂಪಗಳಾಗಿರುವುದರಿಂದ ಮಂತ್ರದ ಆದ್ಯಂತಗಳಲ್ಲಿಯೂ ಓಂಕಾರವಿರುವುದು.

ಪ್ರಾಣಾಯಾಮಮಂತ್ರದ ತತ್ವಾರ್ಥವು ಇಲ್ಲಿಗೆ ಮುಗಿದುದು. ಇದು ಬಹು ಗಹನವಾದ ತತ್ವಾರ್ಥಗಳನ್ನೊಳಗೊಂಡಿದೆ. ಗಾಯತ್ರೀದೇವಿಯ ಮೂಲಮಂತ್ರದ ತತ್ವವನ್ನೂ ಒಳಗೊಂಡಿದೆ. ಕ್ಷತ್ರಿಯ ವೈಶ್ಯರ ಶ್ಲೋಕರೂಪವಾದ ಮಂತ್ರಗಳೂ ಇದೇ ತತ್ವಾರ್ಥವನ್ನೊಳಗೊಂಡಿವೆ. ಮುಖ್ಯವಾಗಿ ಅನುಷ್ಠಾನಮಾಡಿ ಉದ್ದಿಷ್ಟವಾದ ಪ್ರಣವದ ಫಲವನ್ನು ಹೊಂದಬೇಕೆಂಬ ತಾತ್ಪರ್ಯದ್ದಾಗಿದೆಯೇ ಹೊರತು ಮೂಗುಹಿಡಿದು ಮಂತ್ರಪಠನೆಮಾಡುವ ಉದ್ದೇಶಮಾತ್ರಕ್ಕೋಸ್ಕರವೇ ಈ ಮಂತ್ರವು ವಿಧಾಯಕವಾಗಿಲ್ಲ. ಬಾಲ್ಯದಲ್ಲಿ ಮೂಗು ಹಿಡಿದು ಮಂತ್ರವನ್ನು ಪಠಿಸೆಂದು ಹೇಳಿಕೊಟ್ಟದ್ದನ್ನೇ ಕೊನೆಯವರೆಗೆ ಮಾಡಬೇಕೆಂಬ ಅಭಿಪ್ರಾಯವಲ್ಲ. ಈ ಮಂತ್ರವು ಬ್ರಹ್ಮಚಾರಿಗಳಿಗೂ ಗೃಹಸ್ಥರಿಗೂ ವಿರಕ್ತರಿಗೂ ಇದ್ದೇ ಇರುವುದು. ನಡೆದುಹೋಗುವಿಕೆ ಮತ್ತು ಓಡಿಹೋಗುವಿಕೆ ಎಂದೆರಡು ವಿಧಗಳಿರುವಂತೆ ಸಂಸಾರತಾಪತ್ರಯಕ್ಕೆ ಅತಿಯಾಗಿ ಸಿಲುಕದೇ ಇರತಕ್ಕವರು ಪ್ರಾಣಾಯಾಮವನ್ನು ಹೆಚ್ಚಾಗಿ ಮಾಡಿ ಜಾಗ್ರತೆಯಾಗಿ ಬ್ರಹ್ಮರಂಧ್ರದ ಬಾಗಿಲನ್ನು ತೆಗೆಸಿದರೆ ಪ್ರಾಣಾಯಾಮದ ಅನುಷ್ಠಾನವು ಕೊನೆಮುಟ್ಟಿದಂತಾಗುವುದು. ಹೀಗೆ ಮಾಡಲು ಸೌಕರ್ಯವಿಲ್ಲದ ಗೃಹಸ್ಥರು ಸಂಧ್ಯಾವಂದನೆಯಲ್ಲಿ ಪ್ರಾಣಾಯಾಮ ಬರುವ ಪ್ರತಿ ಸಂದರ್ಭದಲ್ಲಿಯೂ ಹತ್ತು ಅಥವಾ ಹದಿನಾರು ಪ್ರಾಣಾಯಾಮಗಳನ್ನಾದರೂ ಅನುಷ್ಠಿಸಬೇಕು. ಕುಂಭಕವನ್ನು ಮಾಡದೆ ಇದ್ದರೂ ಕೊನೆಗೆ ರೇಚಕ ಪೂರಕ ಪ್ರಾಣಾಯಾಮವನ್ನಾದರೂ ಮಾಡುತ್ತಾ ಬರುವುದು ಒಳ್ಳೆಯದು. ಪ್ರತಿ ಸಂಧ್ಯಾಕಾಲದಲ್ಲಿಯೂ ಮೂರು ನಾಲ್ಕಾವೃತ್ತಿ ಪ್ರಾಣಾಯಾಮ ಮಂತ್ರ ಬರುವುದರಿಂದ

ಮುವತ್ತು ನಲವತ್ತು ಪ್ರಾಣಾಯಾಮ ಮಾಡಿದಂತಾಗುವುದು. ಇದರಿಂದ ಶರೀರಕ್ಕೆ ಬಹು ಮಹತ್ತಾದ ಗುಣವಿರುವುದಲ್ಲದೆ ಮನಸ್ಸಿನ ನಿರ್ಮಲತೆಗೂ, ತಪಶ್ಶಕ್ತಿಗೂ, ಮೇಧಾಶಕ್ತಿಗೂ ಗಾಯತ್ರೀದೇವಿಯ ಉಪಾಸನೆಗೂ, ಅತ್ಯಂತ ಸಹಕಾರಿಯಾಗಿರುವುದು. ಈಗಿನ ಕಾಲದಲ್ಲಿ ಇದು ಬಹು ಖಿಲವಾಗುತ್ತಿದೆ. ಕಾರಣ ವೇನೆಂದರೆ-ವಿಷಯಲಂಪಟತ್ವವೂ ಆಹಾರನಿಯಮವಿಲ್ಲದೆ ರಾಜಸ ತಾಮಸಾಹಾರಗ ಳನ್ನು ಸೇವಿಸುವುದೇಕಾರಣ. ಪ್ರಾಣಾಯಾಮಮಾಡುವವರು ಸಾತ್ವಿಕಾಹಾರವನ್ನೇ ಸೇವಿಸಬೇಕು. ರಾಜಸ ತಾಮಸಾಹಾರಗಳನ್ನು ಸೇವಿಸಿದರೆ ದೇಹದಲ್ಲಿ ರೋಗಾದಿಗಳು ಉಂಟಾಗುತ್ತವೆ. ಇಂತಹ ರಾಕ್ಷಸಸ್ವರೂಪವಾದ ಆಹಾರಗಳನ್ನು ತ್ಯಜಿಸಿ ಕಾಲವರಿತು ಸಾತ್ವಿಕಾಹಾರವನ್ನು ಸೇವಿಸುತ್ತಾ ದೇಹಾರೋಗ್ಯವನ್ನು ಹೊಂದಿ ಪ್ರಾಣಾಯಾಮ ಧ್ಯಾನಗಳನ್ನು ಮಾಡುವುದರಿಂದ ಇವು ಇಹಪರ ಗಳೆರಡಕ್ಕೂ ಸೌಖ್ಯವನ್ನುಂಟುಮಾಡುವುದು. ಸಂಧ್ಯಾವಂದನೆಯಲ್ಲಿ ದೇಹವನ್ನು ಶುದ್ಧಿಮಾಡುವ, ಜಲಧೌತಿ, ಅಗ್ನಿಧೌತಿ, ವಾಯುಧೌತಿಗಳೆಂಬ ಯೋಗದ ಮಹತ್ತುಗಳು ಇರುವುವೆಂದು ಹಿಂದೆ ತಿಳಿಸಿತಷ್ಟೆ! ಆಚಮನ ಪ್ರಾಶನಗಳಿಂದ ಪಾನಮಾಡಲ್ಪಟ್ಟ ಜಲವೂ, ಆಸನಾಭ್ಯಾಸ ಮತ್ತು ಪ್ರಾಣಾಯಾಮಗಳೂಸೇರಿ ಈ ಧೌತಿಕ್ರಿಯೆಗಳಾಗಿ ಪರಿಣಮಿಸಿ ದೇಹದೊಳಗೆ ಕಟ್ಟಿರತಕ್ಕ ಪಾಚಿಸ್ವರೂಪವಾದ ಕಲ್ಮಷವನ್ನು ಹೋಗಲಾಡಿಸಿ ಅಪರಂಜಿಯ ಚಿನ್ನದಂತೆ ಅಂಗಗಳನ್ನು ಪ್ರಕಾಶ ಮತ್ತು ನೈರ್ಮಲ್ಯವುಳ್ಳವುಗಳನ್ನಾಗಿ ಮಾಡುವುದು. ಮನಸ್ಸಿಗೆ ನಿರ್ಮಲಶಕ್ತಿ ಯನ್ನುಂಟುಮಾಡಿ ಧ್ಯಾನಕ್ಕೂ ಸಹಾಯವಾಗವುದಲ್ಲದೆ ತಪಶ್ಶಕ್ತಿಯನ್ನು ಹೊಂದು ವುದಕ್ಕೂ ಪ್ರಪಂಚವ್ಯಾಪಾರಕ್ಕೂ ಪ್ರಚಂಡ ಶಕ್ತಿಯನ್ನುಂಟುಮಾಡುವುದು. ಇಂತಹ ಉಪಯೋಗಗಳಿಲ್ಲದಿದ್ದರೆ ಲೋಕಹಿತಕ್ಕೋಸ್ಕರ ಬಹುಕಷ್ಟಪಟ್ಟಿರುವ ಮಹರ್ಷಿಗಳು ಸಂಧ್ಯಾಕರ್ಮದಲ್ಲಿ ಪ್ರಾಣಾಯಾಮವನ್ನು ವಿಧಿಸುತ್ತಿರಲಿಲ್ಲ. ಈಗಲೂ ಜನರು ಎಚ್ಚರಗೊಂಡು ಕರ್ತವ್ಯವನ್ನುಮಾಡಿ ತಾವೂ ಸುಖವನ್ನು ಪಡೆದು ತಮ್ಮ ಮುಂದಿನವರಿಗೂ ದಾರಿತೋರಿಸಿಕೊಟ್ಟರೆ ನಿಶ್ಚಯವಾಗಿಯೂ ಮಹರ್ಷಿಗಳ ಹೆಸರನ್ನು ಹೇಳುವುದಕ್ಕೆ ಯೋಗ್ಯತೆಯುಂಟಾಗುವುದು

## ೫ ಸಂಕಲ್ಪ ಮಂತ್ರ

### ಬ್ರಹ್ಮ ಕ್ಷತ್ರಿಯ ವೈಶ್ಯರೆಲ್ಲರಿಗೂ

ಮಮ ಉಪಾತ್ತ ಸಮಸ್ತ ದುರಿತಕ್ಷಯದ್ವಾರಾ ಶ್ರೀಪರಮೇಶ್ವರಪ್ರೀತ್ಯರ್ಥಂ
ಯಥಾಶಕ್ತಿ ಗಾಯತ್ರೀ ಮಂತ್ರ ಜಪಂಕರಿಷ್ಯೇ ||
ಎಂಬದಾಗಿ ಅವರವರ ಸಂಪ್ರದಾಯದಂತೆ ಹೇಳುತ್ತಾರೆ

ತತ್ವ|| ಸಂಕಲ್ಪವು ಪ್ರತಿಕರ್ಮದ ಪ್ರಾರಂಭದಲ್ಲೂ ಪ್ರಧಾನಕರ್ಮದ ಅಂಗವಾಗಿ ಬರುವ ಇತರ ಕರ್ಮಾರಂಭಗಳಲ್ಲಿಯೂ ಬರುತ್ತವೆ. ಸಂಕಲ್ಪ

ವೆಂದರೆ "ಕಲ್ಪಯತಿವಾಂಛಿತಮಿತಿ ಕಲ್ಪಃ" ಎಂಬ ವ್ಯುತ್ಪತ್ತಿಯಂತೆ ಚೆನ್ನಾಗಿ ಬಯಸುವುದು ಅಥವಾ ಕೋರುವದೆಂದರ್ಥ. ಶಾಸ್ತ್ರದಲ್ಲಿ ವಿಧಿಸಿರುವ ಯಾವಕರ್ಮ ವನ್ನಾಗಲೀ ನಮ್ಮ ಮನಃಪೂರ್ವಕವಾದ ಬಯಕೆಯಿಂದಲೇ ಮಾಡುತ್ತೇವೆಂಬ ದೃಢತರವಾದಪ್ರತಿಜ್ಞೆಗೆ ಸಂಕಲ್ಪವೆಂದು ಹೆಸರು. ಕರ್ಮವನ್ನು ಯಾವ ಉದ್ಧೇಶ ದಿಂದ ಮಾಡುತ್ತೇವೆಯೋ ಆ ಉದ್ದೇಶವೂಕೂಡ ಸಂಕಲ್ಪದಲ್ಲಿ ಬರುವುದು.'ಮಮ ಉಪಾತ್ತ ಸಮಸ್ತ ದುರಿತಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಪ್ರಾತಃ, ಮಧ್ಯಾಹ್ನ, ಸಾಯಂ, ಸಂಧ್ಯಾಮುಪಾಸ್ಯೇ ಎಂಬದಾಗಿ ಹೇಳುವುದರಲ್ಲಿ ನನ್ನಿಂದ ಮಾಡಲ್ಪಟ್ಟ ಸಕಲವಾದ ಪಾಪಗಳನ್ನೂ ನಾಶಗೊಳಿಸುವುದರ ಮೂಲಕ ಶ್ರೀಪರಮೇಶ್ವರನ ಪ್ರೀತಿಗೋಸ್ಕರ ಈ ಸಂಧ್ಯಾಕರ್ಮವನ್ನು ಮಾಡುತ್ತೇನೆಂದು ದೃಢವಾದ ಬಯಕೆಯಿಂದಲೇ ಮಾಡಬೇಕು. ಕರ್ಮಮಾಡುವ ಉದ್ದೇಶ ವೇನೆಂದರೆ, ನಮ್ಮಪಾಪಗಳೂ ಕ್ಷಯಿಸಬೇಕು ಮತ್ತು ಶ್ರೀಪರಮಾತ್ಮನಿಗೂ ಪ್ರೀತಿ ಯಾಗಬೇಕು. ಜನ್ಮಜನ್ಮಾಂತರಗಳಿಂದಲೂ ಎಂತಹ ಪಾಪಗಳನ್ನು ಮಾಡಿರು ವೆವೋ ನಮಗೆ ಗೊತ್ತಿಲ್ಲ. ಆತ್ಮಶ್ರೇಯಸ್ಸಿಗೆ ವಿಘ್ನಕಾರಿಗಳಾದ ಪಾಪಗಳನ್ನು ಕರ್ಮದಿಂದ ಪರಿಹರಿಸಿಕೊಳ್ಳಬೇಕು. ಆದುದರಿಂದ ಆತ್ಮಶ್ರೇಯಸ್ಸಿನ ಉದ್ದೇಶ ದಿಂದ ಕರ್ಮಮಾಡಬೇಕೆಂಬುದೇ ಸಂಕಲ್ಪದ ತತ್ವವಾಗಿರುವುದು. ಗಿಣಿಯು ನುಡಿದಂತೆ ಸಂಕಲ್ಪಮಂತ್ರವನ್ನು ಉಚ್ಚರಿಸಿದಮಾತ್ರದಿಂದ ಆ ಮಂತ್ರದ ಸಾರವು ದೊರೆಯದೆ ಭತ್ತದಲ್ಲಿನ ಅಕ್ಕಿಯನ್ನು ಕಳೆದುಕೊಂಡು ಹೊಟ್ಟನ್ನು ಹೊಂದಿ ದಂತಾಗುವುದು. ಆದುದರಿಂದ ಕರ್ಮಮಾಡುವುದರ ಉದ್ದೇಶವು ಮನಸ್ಸಿನಲ್ಲಿ ದೃಢತರವಾಗಿ ಬೇರೂರಬೇಕು. 'ಶ್ರೀಪರಮೇಶ್ವರ, ಶ್ರೀಮನ್ನಾರಾಯಣ, ಶ್ರೀಗಾಯತ್ರೀ, ಶ್ರೀಕನ್ಯಕಾಪರಮೇಶ್ವರೀ ಪ್ರೀತ್ಯರ್ಥಂ' ಎಂಬುದಾಗಿಯೂ ಹೇಳು ತ್ತಾರಷ್ಟೆ! ಭೋಗಪದಾರ್ಥದ ಸಂಪಾದನೆಯ ಉದ್ದೇಶವನ್ನಿಟ್ಟುಕೊಳ್ಳದೆ, ದೇವ ತಾಶಕ್ತಿಗಳು ಸಂತುಷ್ಟರಾಗಿ ಪ್ರಸನ್ನರಾಗುವ ಉದ್ದೇಶವನ್ನೇ ಇಟ್ಟುಕೊಳ್ಳ ಬೇಕೆಂಬ ತತ್ವಪ್ರತಿಪಾದನೆಗೋಸ್ಕರವೇ "ಪರಮೇಶ್ವರ ಪ್ರೀತ್ಯರ್ಥಂ" ಎಂಬದಾಗಿ ಸಂಕಲ್ಪದಲ್ಲಿರುವುದು. ನಮ್ಮದುರಿತಗಳು ನಾಶವಾಗಿ ಪರಮಾತ್ಮ ಪ್ರೀತಿಯಾಗುವು ದೆಂದರೆ, ಅಜ್ಞಾನಗಳು ನಶಿಸಿ ಆತ್ಮಲಾಭವುಂಟಾಗಲೆಂಬ ತತ್ವವಾಗಿರುವುದು.

ನಮ್ಮ ವ್ಯಾಪಾರಗಳೆಲ್ಲಾ ನಾವು ಮಾಡುವ ಸಂಕಲ್ಪದಿಂದಲೇ ಅಭಿವೃದ್ಧಿ ಯಾಗುತ್ತಿವೆ. ಸಂಕಲ್ಪಮಾತ್ರದಿಂದಲೇ ಜಗದ್ವ್ಯಾಪಾರದ ವಿಲಾಸವು ನಡೆಯು ತ್ತಿರುವುದೆಂಬುದು ಸಕಲರಿಗೂ ತಿಳಿದವಿಚಾರವೇ ಆಗಿದೆ. ಶ್ರುತಿಯಲ್ಲಿಕೂಡ "ಸಂಕಲ್ಪಮಾತ್ರ ಕಲನೇಹಿಜಗದ್ವಿಲಾಸಃ" ಎಂದು ಹೇಳಿದೆ. ಪ್ರಪಂಚ ವಿಷಯಗ ಳಲ್ಲಿನ ಸಂಕಲ್ಪಗಳು ಶಾಶ್ವತ ಸುಖವನ್ನುಂಟುಮಾಡದೆ ಬಂಧಕಗಳಾಗಿಯೂ

ದುಃಖಪರಿಣಾಮಗಳುಳ್ಳವಾಗಿಯೂ ಇರುತ್ತವೆ. ಆದುದರಿಂದ ಶಾಶ್ವತಸುಖವಲ್ಲದ ಪ್ರಪಂಚದ ಬಂಧನವನ್ನು ಪರಿಹರಿಸಿಕೊಳ್ಳುವ ಉದ್ದೇಶವೇ ಸಂಕಲ್ಪಮಂತ್ರದಲ್ಲಿರುವ "ಮಮ ಉಪಾತ್ತ ಸಮಸ್ತ ದುರಿತಕ್ಷಯದ್ವಾರಾ" ಎಂಬುದರ ತತ್ತ್ವವಾಗಿರುವುದು. ಅಶಾಶ್ವತವಾದ ಪ್ರಪಂಚಸುಖದ ಸಂಕಲ್ಪವು ಕ್ಷಯವಾದರೆ ಶಾಶ್ವತವಾದ ಆತ್ಮಸುಖಲಾಭವು ಸ್ವತಸ್ಸಿದ್ಧವಾಗಿರುವುದು. ಈ ಶಾಶ್ವತಸುಖ ಸಂಪಾದನೆ ಮತ್ತು ಅದರ ಕಾರ್ಯಕ್ರಮಗಳೇ ಪರಮಾತ್ಮನಿಗೆ ಪ್ರಿಯವಾದುದು. ಆದುದರಿಂದಲೇ 'ಪರಮೇಶ್ವರ ಪ್ರೀತ್ಯರ್ಥಂ' ಎಂಬುದಾಗಿ ಸಂಕಲ್ಪಮಂತ್ರದಲ್ಲಿರುವುದು. 'ಧರ್ಮಾರ್ಥ ಕಾಮಮೋಕ್ಷಚತುರ್ವಿಧ ಪುರುಷಾರ್ಥ ಸಿಧ್ಯರ್ಥಂ' ಎಂಬದಾಗಿ ಇತರಕರ್ಮಗಳಲ್ಲಿ ಸಂಕಲ್ಪಮಾಡುವುದರಲ್ಲಿಯೂ ಮೋಕ್ಷದ ಗುರಿಯೇ ಪ್ರಧಾನವಾಗಿರುವುದು. ಮೋಕ್ಷದಗುರಿಗೆ ಸಹಾಯಕವಾಗಿರುವ ಧರ್ಮಮಾರ್ಗಾವಲಂಬನೆಯೂ, ಮೋಕ್ಷ ಮತ್ತು ಧರ್ಮಗಳನ್ನನುಸರಿಸಿದ ಪ್ರಪಂಚಾನುಭವಕ್ಕೆ ಬೇಕಾದ ಅರ್ಥವೂ, ಮೋಕ್ಷ ಧರ್ಮ ಅರ್ಥಗಳಿಗನುಸಾರವಾದ ಭೋಗವೂ ಪ್ರತಿಯೊಬ್ಬರಲ್ಲಿಯೂ ಇರಬೇಕೆಂಬ ತತ್ತ್ವವಾಗಿದೆ. ಆದುದರಿಂದ ಮೋಕ್ಷದ ಗುರಿಯೇ ಪ್ರಧಾನವಾಗಿರಬೇಕೆಂಬ ತತ್ತ್ವವೇ ಸರ್ವಕರ್ಮಗಳ ಸಂಕಲ್ಪದ ತತ್ತ್ವವಾಗಿರುವುದು.

ಪ್ರಪಂಚ ವ್ಯವಹಾರದ ಸಂಕಲ್ಪಗಳನೇಕವಿದ್ದರೂ ನಮಗೆ ಶಾಶ್ವತಸುಖವನ್ನುಂಟುಮಾಡುವ ಮತ್ತು ದೇವತೆಗಳಿಗೂ ಸಹಾಯವಾಗುವ ನಿತ್ಯಕರ್ಮಗಳನ್ನು ಮಾಡಿಯೇ ಮಾಡುತ್ತೇನೆಂಬ ಸಂಕಲ್ಪವನ್ನು ದೃಢವಾಗಿ ಧರಿಸಬೇಕು. ಮೇಘಪರಂಪರೆಗಳು ಸೂರ್ಯನನ್ನು ಮುಚ್ಚಿದರೂ ಸೂರ್ಯನು ಅಚಲನಾಗಿರುವಂತೆ ಪ್ರಪಂಚವಿಷಯ ಸಂಕಲ್ಪಗಳನೇಕಗಳು ನಮ್ಮಲ್ಲಿ ತಲೆದೋರುತ್ತಿದ್ದರೂ ಸತ್ಕರ್ಮಾನುಷ್ಠಾನಮಾಡುವ ಮತ್ತು ಶಾಶ್ವತಸುಖವನ್ನು ಹೊಂದುವ ಸಂಕಲ್ಪವು ಅಂತರ್ಯದಲ್ಲಿ ಬಹು ಚೆನ್ನಾಗಿ ಸ್ಫುರಣದಲ್ಲಿರಬೇಕು. ಸಂಕಲ್ಪವೇ ಕಾರ್ಯರೂಪವಾಗಿ ಪರಿಣಮಿಸುವುದರಿಂದ ಪುರುಷಾರ್ಥಕವಾಗುವ ಸಂಕಲ್ಪಗಳನ್ನು ಎಷ್ಟೆಷ್ಟರಮಟ್ಟಿಗೆ ದೃಢಮಾಡಿಕೊಳ್ಳುತ್ತೇವೆಯೋ ಅಷ್ಟೂ ಕಾರ್ಯರೂಪವಾಗಿ ಪರಿಣಮಿಸಿ ಫಲವನ್ನು ಕೊಡುವುದು.

ಸಂಕಲ್ಪವೆನ್ನುವುದೇ ಮನಶ್ಶಕ್ತಿಯಾಗಿರುತ್ತದೆ. ಸಂಕಲ್ಪಶಕ್ತಿಯನ್ನು ಅಭಿವೃದ್ಧಿಮಾಡುವುದೆಂದರೆ ಮನಶ್ಶಕ್ತಿಯನ್ನು ಅಭಿವೃದ್ಧಿಮಾಡುವುದೆಂಬ ತತ್ತ್ವ. ಇಂತಹ ಮನಶ್ಶಕ್ತಿಯನ್ನು ಹೆಚ್ಚಿಸುತ್ತಾ ಕರ್ಮಾನುಷ್ಠಾನ ಮಾಡುವುದೇ ತಪಶ್ಶಕ್ತಿಯೆನಿಸುವುದು. ಸಂಕಲ್ಪಶಕ್ತಿಯೇ ಪುರುಷಪ್ರಯತ್ನವೆನಿಸುವುದು. ಹೇಗೆಂದರೆ, ಪಶುಗಳನ್ನು ತೃಣಸಮೃದ್ಧಿಯಾದ ಸ್ಥಳದಲ್ಲಿ ಬಿಟ್ಟರೆ ಹೊಟ್ಟೆತುಂಬುವ

ವರೆಗೆ ತಿನ್ನುವದೊಂದು ಗೊತ್ತಿಲ್ಲದೆ ಮುಂದಿನ ದಿನಕ್ಕೆ ಶೇಖರಿಸಿಕೊಳ್ಳಬೇಕೆಂಬ ವಿವೇಚನಾಸ್ವರೂಪವಾದ ಸಂಕಲ್ಪವಿಲ್ಲ ತಾನು ತಿನ್ನುವ ತೃಣದಲ್ಲಿ ಮಲ ಮೂತ್ರಗಳನ್ನು ಮಾಡಬಾರದೆಂಬ ತಿಳಿವಳಿಕೆಯೂ ಪಶುಗಳಲ್ಲಿಲ್ಲ. ಕಾರ್ಯಾಕಾರ್ಯ ವಿವೇಚನಾಶಕ್ತಿಯನ್ನೂ ಆತ್ಮಜ್ಞಾನಹೊಂದುವ ಶಕ್ತಿಯನ್ನೂ ಮನುಷ್ಯನು ಮಾತ್ರ ಹೊಂದಿರುವನು. ಉದಯಿಸುವ ವಿಷಯಸಂಕಲ್ಪಗಳನ್ನು ಕೆಳಕ್ಕೆ ತುಳಿದು ಪರಮಾತ್ಮನ ಕಡೆಗೆ ಹೋಗುವ ಸಂಕಲ್ಪಗಳನ್ನು ಅಭಿವೃದ್ಧಿಪಡಿಸಿಕೊಂಡು ಕೃತಾರ್ಥನಾಗಲು ಮನುಷ್ಯನಿಗೆ ಅರ್ಹತೆಇರುವುದೇ ಪುರುಷಪ್ರಯತ್ನವೆನಿಸುವುದು. ಎಷ್ಟೇ ಕಷ್ಟ ಮತ್ತು ವಿಘ್ನಗಳು ಬಂದರೂ ಕಾರ್ಯವನ್ನು ಸಾಧಿಸಿಯೇ ಸಾಧಿಸುತ್ತೇನೆಂಬ ದೃಢಪ್ರತಿಜ್ಞೆಯು ಚೆನ್ನಾಗಿ ಬೇರೂರಿ ಕಾರ್ಯಗಳನ್ನು ಸಾಧಿಸುವುದೇ ಸಂಕಲ್ಪದ ಜೀವಕಳೆಯಾಗಿರುವುದು. ಇಂತಹ ಸಂಕಲ್ಪವನ್ನು ಹೊಂದಿ ಕಾರ್ಯ ಸಾಧನೆ ಮಾಡಿರುವವರೆಲ್ಲ ಮಹಾತ್ಮರು ಮತ್ತು ಪೂಜ್ಯರೆನಿಸಿಕೊಂಡಿರುವರು. ಆದುದರಿಂದ ಸಂಕಲ್ಪಶಕ್ತಿಯನ್ನು ಅಭಿವೃದ್ಧಿಮಾಡಿಕೊಂಡು ಕರ್ಮಾಚರಣೆ ಮಾಡುತ್ತಾ ಬಂದರೆ ಅತ್ಯುತ್ತಮವಾದ ಫಲವುಂಟಾಗುವುದು.

[ಸಂಕಲ್ಪದ ವಿಚಾರವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಅನಸೂಯಾದೇವಿಯು ಸೀತಾದೇವಿಗೆ ಆಭರಣಗಳನ್ನು ಕೊಟ್ಟ ಪ್ರಕರಣದಲ್ಲಿ ಬಂದಿರುವುದು.]

ಕರ್ಮಾಚರಣೆಯಲ್ಲೆಲ್ಲಾ ಸಂಕಲ್ಪಮಾಡಬೇಕಾದರೆ ಪ್ರಥಮದಲ್ಲಿ ಪ್ರಾಣಾಯಾಮ ಮಂತ್ರವನ್ನು ಹೇಳಿ ಅನಂತರ ಸಂಕಲ್ಪಮಂತ್ರವನ್ನು ಹೇಳುತ್ತಾರೆ. ಇದರ ಕಾರಣವೇನೆಂದರೆ- ಪ್ರಾಣಾಯಾಮಮಂತ್ರದ ತತ್ವವಾದ ಪ್ರಣವಸ್ವರೂಪವಾಗುವ ಸಂಕಲ್ಪವನ್ನೇ ಮಾಡಬೇಕೆಂಬ ತತ್ವವಾಗಿರುವುದು. ಅಲ್ಲದೆ ಸಂಕಲ್ಪವು ಮನಸ್ಸಿಗೆ ಸಂಬಂಧಪಟ್ಟಿದ್ದದರೂ ಅದಕ್ಕೆ ದೇಹದ ಸಹಾಯವೂ ಅವಶ್ಯಕವಾಗಿ ಬೇಕು ದೇಹವು ಯಾವ ಗುಣವನ್ನು ಅವಲಂಬಿಸುವುದೋ ಮನಸ್ಸೂ ಅದನ್ನೇ ಅವಲಂಬಿಸುವುದು. ದೇಹವನ್ನು ಸ್ನಾನಪಾನಾದಿಗಳಿಂದ ಎಷ್ಟೇ ಶುಚಿಯಾಗಿಟ್ಟುಕೊಂಡಿದ್ದರೂ, ದೇಹದಲ್ಲಿ ಒಂದು ವಿಧವಾದ ಒರಟುತನ ಇದ್ದೇ ಇರುವುದು. ಚರ್ಮವನ್ನು ಹದಮಾಡಿದಂತೆ ದೇಹವನ್ನು ಪ್ರಾಣಾಯಾಮದಿಂದ ಹದ ಮಾಡಬೇಕು. ಇದರಿಂದ ದೇಹ ಮನಸ್ಸುಗಳೆರಡಕ್ಕೂ ಕಾಂತಿ ಮತ್ತು ಸೂಕ್ಷ್ಮ ಗ್ರಹಣಶಕ್ತಿಗಳುಂಟಾಗಿ ಮನಶ್ಶಕ್ತಿಯನ್ನು ಬಹು ಹೆಚ್ಚಿನದನ್ನಾಗಿ ಮಾಡಿಕೊಳ್ಳಬಹುದು. ಅಪವಿತ್ರತೆಯಿಂದ ಕಾರ್ಯಮಾಡುವುದಕ್ಕಿಂತಲೂ ಪವಿತ್ರತೆಯಿಂದಲೇ ಕಾರ್ಯಮಾಡುವುದು ಉತ್ತಮ ಫಲದಾಯಕವಾಗಿರುವುದು. ಸಂಧ್ಯಾಕರ್ಮದಲ್ಲಿ ಗಾಯತ್ರೀಜಪ ಮಾಡುವವರೆಗೆ ಮೂರು ನಾಲ್ಕಾವರ್ತಿ ಬರುವ ಪ್ರಾಣಾಯಾಮ ಮತ್ತು ಸಂಕಲ್ಪಗಳಿಂದ ಮನಶ್ಶಕ್ತಿಯನ್ನು ಉದ್ಬೋಧೆ ಮಾಡಿದಂತಾಗಿ ಗಾಯತ್ರೀ

ದೇವಿಯನ್ನು ಧ್ಯಾನಿಸಲು ಮನಸ್ಸಿಗೆ ನಿರ್ಮಲತ್ವವೂ ಸೂಕ್ಷ್ಮಗ್ರಹಣಶಕ್ತಿಯೂ ಉಂಟಾಗುವುದು

# ೬ ನ್ಯಾಸ.

## ಬ್ರಾಹ್ಮಣರು

### ಕರನ್ಯಾಸ

ತತ್ಸವಿತುಃ-ಅಂಗುಷ್ಠಾಭ್ಯಾಂನಮಃ। ವರೇಣಿಯಂ-ತರ್ಜನೀಭ್ಯಾಂನಮಃ। ಭರ್ಗೋದೇವಸ್ಯ-ಮಧ್ಯಮಾಭ್ಯಾಂನಮಃ। ಧೀಮಹಿ-ಅನಾಮಿಕಾಭ್ಯಾಂ ನಮಃ। ಧಿಯೋಯೋನಃ - ಕನಿಷ್ಠಿಕಾಭ್ಯಾಂನಮಃ। ಪ್ರಚೋದಯಾತ್-ಕರತಲಕರಪೃಷ್ಠಾಭ್ಯಾಂನಮಃ।

### ಅಂಗನ್ಯಾಸ

ತತ್ಸವಿತುಃ - ಹೃದಯಾಯನಮಃ । ವರೇಣಿಯಂ- ಶಿರಸೇಸ್ವಾಹಾ। ಭರ್ಗೋದೇವಸ್ಯ - ಶಿಖಾಯೈವೌಷಟ್ । ಧೀಮಹಿ - ಕವಚಾಯಹುಂ। ಧಿಯೋಯೋನಃ - ನೇತ್ರತ್ರಯಾಯವೌಷಟ್ । ಪ್ರಚೋದಯಾತ್-ಅಸ್ತ್ರಾಯಫಟ್॥

## ಕ್ಷತ್ರಿಯರು

### ಕರನ್ಯಾಸ

ಯೋದೇವಸ್ಸವಿತಾಸ್ಮಾಕಂ- ಅಂಗುಷ್ಠಾಭ್ಯಾಂನಮಃ । ಧಿಯೋಧರ್ಮಾದಿ ಗೋಚರಾಃ - ತರ್ಜನೀಭ್ಯಾಂನಮಃ । ಪ್ರೇರಯೇತ್ತಸ್ಯ-ಮಧ್ಯಮಾಭ್ಯಾಂ ನಮಃ। ಯದ್ಭರ್ಗಃ-ಅನಾಮಿಕಾಭ್ಯಾಂನಮಃ। ತದ್ವರೇಣ್ಯಂ - ಕನಿಷ್ಠಿಕಾ ಭ್ಯಾಂನಮಃ। ಉಪಾಸ್ಮಹೇ- ಕರತಲಕರಪೃಷ್ಠಾಭ್ಯಾಂನಮಃ॥

### ಅಂಗನ್ಯಾಸ

ಯೋದೇವಸ್ಸವಿತಾಸ್ಮಾಕಂ- ಹೃದಯಾಯನಮಃ । ಧೀಯೋಧರ್ಮಾದಿ ಗೋಚರಾಃ - ಶಿರಸೇನಮಃ । ಪ್ರೇರಯೇತ್ತಸ್ಯ - ಶಿಖಾಯೈನಮಃ। ಯದ್ಭರ್ಗಃ - ಕವಚಾಯನಮಃ। ತದ್ವರೇಣ್ಯಂ- ನೇತ್ರತ್ರಯಾಯನಮಃ। ಉಪಾಸ್ಮಹೇ- ಅಸ್ತ್ರಾಯನಮಃ।

## ವೈಶ್ಯರು

### ಕರನ್ಯಾಸ

ಪ್ರಾತರ್ಮಧ್ಯಾಹ್ನಸಂಧ್ಯಾಸು- ಅಂಗುಷ್ಠಾಭ್ಯಾಂನಮಃ । ತ್ರೈಮೂರ್ತ್ಯಾಂ ವೇದಮಾತರಂ - ತರ್ಜನೀಭ್ಯಾಂನಮಃ । ಚತುರ್ವಿಂಶದ್ವರ್ಣರೂಪಾಂ-ಮಧ್ಯಮಾಭ್ಯಾಂನಮಃ । ಗಾಯತ್ರೀಂ - ಅನಾಮಿಕಾಭ್ಯಾಂನಮಃ। ಭಾಸ್ವತೀಂ- ಕನಿಷ್ಠಿಕಾಭ್ಯಾಂನಮಃ। ನಮಃ - ಕರತಲಕರಪೃಷ್ಠಾಭ್ಯಾಂ ನಮಃ॥

ಅಂಗನ್ಯಾಸ

ಪ್ರಾತರ್ಮಧ್ಯಾನ್ಹ ಸಂಧ್ಯಾಸು- ಹೃದಯಾಯನಮಃ। ತ್ರೈಮೂರ್ತ್ಯಾಂವೇದ ಮಾತರಂ- ಶಿರಸೇನಮಃ। ಚತುರ್ವಿಂಶದ್ವರ್ಣ ರೂಪಾಂ- ಶಿಖಾಯೈನಮಃ। ಗಾಯತ್ರೀಂ-ಕವಚಾಯನಮಃ। ಭಾಸ್ವತೀಂ- ನೇತ್ರತ್ರಯಾಯನಮಃ। ನಮಃ- ಅಸ್ತ್ರಾಯನಮಃ।

**ತತ್ವ||** ದೇಹದ ಅಂಗಗಳು ನಿಶ್ಚಲವಾಗಿರುವುದಕ್ಕೂ, ರಕ್ತ ಮಾಂಸ ಮೇದೋಮಯವಾದ ಈ ದೇಹಭಾವವನ್ನು ತ್ಯಜಿಸಿ ಮಂತ್ರಮಯವಾದ ದೇಹವಿರುತ್ತೆಂದು ಭಾವಿಸಿಕೊಳ್ಳುವುದಕ್ಕೂ ನ್ಯಾಸವಿರುವ ತತ್ವವಾಗಿರುವುದು. ನ್ಯಾಸವೆಂದರೆ - ಬಚ್ಚಿಡುವುದೆಂದರ್ಥ ಮತ್ತು ತ್ಯಾಗವೆಂದು ಅರ್ಥ. ನಾವು ಮಾಡುವ ಧ್ಯಾನವು ಪೂರ್ಣವಾಗುವವರೆಗೆ 'ನಾನು' ಎಂಬುದಕ್ಕಿಂತ ಎರಡನೆಯದಾದ ಈ ದೇಹವನ್ನು ಎಲ್ಲಿಯೋ ಬಚ್ಚಿಟ್ಟಿರುವಂತೆ ಭಾವಿಸಿ, 'ನಾನು' ಎಂಬುದು ಮಂತ್ರಮೂರ್ತಿವತ್ತಾಗಿ ಪ್ರಕಾಶಿಸುತ್ತಿರಬೇಕೆಂಬುದೇ ನ್ಯಾಸದ ತತ್ವವಾಗಿರುವುದು. ಹಸ್ತದಲ್ಲಿ ಸಕಲದೇವತಾಶಕ್ತಿಗಳೂ ಇರುವುವು. ಹಸ್ತಸಾಮುದ್ರಿಕಾಲಕ್ಷಣಗಳನ್ನು ನೋಡಿ ಮನುಷ್ಯನ ಇಹಪರಗಳಸಂಬಂಧವಾದ ಸಕಲ ವಿಚಾರವನ್ನೂ ತಿಳಿಸುವ ಶಾಸ್ತ್ರವೂ ಇದೆ. ಮನುಷ್ಯನ ಸಕಲ ವಿಚಾರವನ್ನೂ ಹೇಗೆ ಹಸ್ತವು ತಿಳಿಸುವುದೋ ಹಾಗೆಯೇ ಹಸ್ತದಲ್ಲಿಯೇ ಬ್ರಹ್ಮಾಂಡದ ಸಕಲ ತತ್ವಗಳೂ ಇರುವುವು ಐದು ಬೆರಳುಗಳು ಪಂಚಭೂತ, ಪಂಚೇಂದ್ರಿಯ ಮುಂತಾದವುಗಳಿಗೆ ಅನ್ವಯವಾಗುವುವು. ಅಂಗುಷ್ಠದ ಬೆರಳು ಸಾಕ್ಷಾತ್ ಪರಬ್ರಹ್ಮ ಈಶ್ವರರ ತತ್ವಕ್ಕೆ ಅನ್ವಯಿಸುತ್ತದೆ. ಗಾಯತ್ರೀಮಂತ್ರವೇ ಹಸ್ತಕ್ಕೆ ಅನ್ವಯವಾಗುವಾಗ ಬ್ರಹ್ಮಾಂಡಕ್ಕೆ ಅನ್ವಯವಾಗುವುದು ಹೆಚ್ಚಿನದೇನೂ ಅಲ್ಲ ಹಸ್ತವು ಹೀಗೆ ಪವಿತ್ರವಾಗಿರುವುದರಿಂದಲೇ ದೇವರಿಗೆ 'ವರದಾಭಯ'ಗಳೆಂಬ ಎರಡುಹಸ್ತಗಳು ಅಧಿಕವಾಗಿರುವುವು. 'ಗಾಯತ್ರೀ, ಸಾವಿತ್ರೀ ಮಾವಾಹಯಾಮಿ' ಎಂಬ ಮಂತ್ರದ ತತ್ವದಂತೆ ಯಾವ ಸದ್ಬ್ರಾಹ್ಮಣನು ಗಾಯತ್ರೀದೇವಿಯ ಶಕ್ತಿಯನ್ನು ಆವಾಹನೆಮಾಡಿ ಮತ್ತು ಉಪಾಸಿಸಿ ಆ ದೇವಿಯ ಅನುಗ್ರಹದಿಂದ ತಪಶ್ಶಕ್ತಿಯನ್ನು ಸಂಪಾದಿಸಿರುವನೋ ಅಂತಹಮಹಾತ್ಮನು ಹಸ್ತಸ್ಪರ್ಶಮಾಡಿ ಆಶೀರ್ವದಿಸಿದರೆ ನಿಶ್ಚಯವಾಗಿಯೂ ಪವಿತ್ರರಾಗಬಹುದು. ಇಂತಹ ಮಹತ್ತು ಹಸ್ತದಲ್ಲಿರುವುದರಿಂದಲೇ ಋಷಿಗಳು ಕೂಡ ಅನೇಕರಿಗೆ ತಮ್ಮ ಹಸ್ತದಿಂದ ಸ್ಪರ್ಶಿಸಿ ಅನುಗ್ರಹಿಸಿರುತ್ತಾರೆ.

## ೭ ದಿಗ್ಬಂಧಃ

**ಬ್ರಾಹ್ಮಣರು**— ಭೂರ್ಭುವಸ್ಸುವರೋಮಿತಿ ದಿಗ್ಬಂಧಃ। ಧ್ಯಾನಂ ||
**ಕ್ಷತ್ರಿಯರು**— ಲೋಕತ್ರಯೇಣ ದಿಗ್ಬಂಧಃ। ಧ್ಯಾನಂ ||
**ವೈಶ್ಯರು**- ಭೂಮ್ಯಾದಿತಿ ದಿಗ್ಬಂಧಃ। ಧ್ಯಾನಂ ||

ತತ್ವ|| ನಾನು ದೇಹವಲ್ಲವೆಂಬುದಾಗಿ ಭಾವಿಸಬೇಕೆಂದು ನ್ಯಾಸಮಂತ್ರದಲ್ಲಿ ತಿಳಿಸಿತಷ್ಟೆ! ಹೊರಗಿನ ವಿಷಯಗಳಿಗೆ ಗಮನಕೊಡದೆ ಜಪಮಾಡುವ ದೇವತಾ ಭಾವನೆಯಲ್ಲಿರುವಿಕೆಯೇ ದಿಗ್ಬಂಧಃ ಮತ್ತು ಧ್ಯಾನದ ತತ್ವವಾಗಿರುವುದು. ಮುಖ್ಯವಾಗಿ ಯಾವ ವಿಷಯಗಳಿಗೂ ಮನಗೊಡದೆ ದೇವತಾಭಾವದಲ್ಲಿ ಜಪ ಮಾಡಬೇಕೆಂಬ ತತ್ವವಾಗಿರುವುದು. "ದಿಗ್ಬಂಧಃ" ಎಂದರೆ ದಿಕ್ಕುಗಳ ಬಂಧನ ವೆಂದರ್ಥ. ದಿಕ್ಕುಗಳನ್ನು ಬಂಧಿಸುವುದೆಂದರೆ- ಹತ್ತು ಇಂದ್ರಿಯಗಳೇ ಹತ್ತು ದಿಕ್ಕುಗಳಾಗಿರುತ್ತವೆಂದರೆ ನಮ್ಮ ಪಿಂಡಾಂಡವೆಂಬ ದೇಹಕ್ಕೆ ಬಾಗಿಲುಗಳಸ್ವರೂಪ ದಲ್ಲಿರುವುವು. ನಮ್ಮ ಬುದ್ಧಿಯೂ ಈ ಇಂದ್ರಿಯಗಳ ಮೂಲಕ ವಿಷಯಾದಿಗಳಲ್ಲಿ ಪ್ರವರ್ತಿಸುತ್ತಿರುವುದು. ವಿಷಯಜ್ಞಾನದಲ್ಲಿ ಹೋಗದಂತೆ ಅಂದರೆ ಇಂದ್ರಿಯಗಳೇ ಇಲ್ಲವೆಂದು ಭಾವಿಸಿಕೊಳ್ಳುವುದೇ ದಿಕ್ಕುಗಳನ್ನು ಬಂಧಿಸುವುದು ತೇಜೋಮಯ ಹೊರತು ಸ್ಥೂಲದೇಹಾದಿಗಳಾವುವೂ ಇಲ್ಲವೆಂಬ ಭಾವದಿಂದಿರಬೇಕೆಂಬತತ್ವವನ್ನು ಅನುಸರಿಸಿಯೇ "ಭೂರ್ಭುವಸ್ಸುವರೋಮಿತಿ ದಿಗ್ಬಂಧಃ" ಎಂಬ ಮಂತ್ರವಿದೆ ರಾವಣನ ಹತ್ತುತಲೆಯ ತತ್ವದಲ್ಲಿರುವ ಇಂದ್ರಿಯಗಳಲ್ಲಿರುವ ಬಾಹ್ಯಾಕರ್ಷಣಾ ಶಕ್ತಿಯು ಸಾಧಾರಣವಾದುದಲ್ಲ. ನಮ್ಮ ಬುದ್ಧಿಯನ್ನು ವಿಷಯಜ್ಞಾನಕ್ಕೆ ಎಳದೇ ಎಳೆಯುವವು. ಇಂದ್ರಿಯಗಳ ಕಡೆಗೆ ನಮ್ಮ ಬುದ್ಧಿಯನ್ನು ಬಿಡದೆ ಧ್ಯಾನಿಸುವ ದೇವತಾಭಾವವನ್ನು ಪರಾಭಕ್ತಿಯಿಂದ ಧರಿಸಬೇಕಾದ ತತ್ವವೇ ದಿಕ್ಕುಗಳನ್ನು ಬಂಧಿಸುವ ತತ್ವವಾಗಿರುವುದು. ಸಂಧ್ಯಾಕರ್ಮವನ್ನೇ ಭಕ್ತಿಯಿಂದ ಪ್ರಾರಂಭಿಸಬೇಕೆಂಬುದನ್ನು "ಅಪವಿತ್ರಃಪವಿತ್ರೋವಾ" ಎಂಬ ಮಂತ್ರದ ತತ್ವದಲ್ಲಿ ಬರೆದಿದೆಯಷ್ಟೆ! ಧ್ಯಾನಾರಂಭದಲ್ಲಿ ಭಕ್ತಿಯು ತೀವ್ರತಮವಾಗಿರ ಬೇಕೆಂದರೆ ಪರಮ ಪ್ರೀತಿ ಮತ್ತು ನಮ್ರತೆಗಳೊಡಗೂಡಿದ ಭಾವದಿಂದಿರಬೇಕು. ಹೀಗಿರದಿದ್ದರೆ ದೇವತಾಭಾವವನ್ನು ಧರಿಸಲಾರದೆ ಇಂದ್ರಿಯಗಳ ಆಕರ್ಷಣೆಯಿಂದ ಬಹಿರ್ವ್ಯಾಪಾರವು ಪ್ರಾರಂಭವಾಗುವುದು. ಆದುದರಿಂದ ಧ್ಯಾನಕಾಲದಲ್ಲಿ ಭಕ್ತಿಯು ಅತ್ಯುತ್ಕಟವಾದ ಸ್ಥಿತಿಯಲ್ಲಿದ್ದರೇನೇ ಧ್ಯಾನಾರ್ಹತೆಯುಂಟಾಗುವುದು. ಆದುದರಿಂದ ಭಕ್ತಿಯ ಸ್ವರೂಪ ವೆಂತಹುದೆಂದರೆ- "ಭಜನ ಮಂತಃಕರಣಸ್ಯ ಭಗವದಾಕಾರತಾರೂಪಂ ಭಕ್ತಿಃ" ನಮ್ಮ ಬುದ್ಧಿಯು ಭಗವದಾಕಾರವಾಗಲು ಹೋಗುವುದಕ್ಕೆ ಭಕ್ತಿಯೆಂದು ಹೆಸರು. ಅತ್ಯುತ್ತಮವಾದ ಭಕ್ತಿಯ ಸ್ವರೂಪ ವೇನೆಂದರೆ- "ದ್ರವೀಭಾವಪೂರ್ವಿಕಾ ಮನಸೋ ಭಗವದಾಕಾರತಾರೂಪಾ ಸವಿಕಲ್ಪಕವೃತ್ತಿರ್ಭಕ್ತಿಃ" ಧ್ಯಾನಿಸುವ ದೇವತಾಭಾವದಲ್ಲಿ ಸೇರುವ ಪ್ರೇಮ ಪ್ರವಾಹವು ಧ್ಯಾನಿಸುವ ಭಾವದಲ್ಲಿ ಕರಗಿಹೋಗುವುದೆಂದರೆ ತನಗೂ ಧ್ಯೇಯ ಸ್ವರೂಪಕ್ಕೂ ಅಭೇದವುಂಟಾಗುವ ರೀತಿಯಲ್ಲಿರುವುದಕ್ಕೆ ಭಕ್ತಿಯೆಂದು ಮಧುಸೂದನ ಸರಸ್ವತಿಗಳು ಹೇಳಿರುವರು. ನಾರಾಯಣತೀರ್ಥರವರು "ಪ್ರೇಮ

ಭಕ್ತಿಯೋಗಸ್ತು ಈಶ್ವರ ಚರಣಾರವಿಂದ ವಿಷಯಕ್ಯೈಕಾಂತಿಕ ಅತ್ಯಂತಿಕಪ್ರೇಮ ಪ್ರವಾಹೋ ಅನವಚ್ಛಿನ್ನಃ" ಅಂತರಂಗದಲ್ಲಿ ಧ್ಯಾನಿಸುವ ದೇವತಾಭಾವದಲ್ಲಿ ಅವಿಚ್ಛಿನ್ನವಾದ ತೈಲಧಾರೆಯ ಪ್ರವಾಹದಂತೆ ಪ್ರೇಮಪ್ರವಾಹವಾಗಿರುವಿಕೆಯೇ ಪರಾಭಕ್ತಿಯೆನಿಸಿಕೊಳ್ಳುವುದು. ನಾರದಭಕ್ತಿಸೂತ್ರದಲ್ಲಿ "ಭಕ್ತಿ ರೀಶ್ವರೇ ಪರಾನುರಕ್ತಿಃ" ಎಂದೂ ಹೇಳಿದೆ ಅಧಿಕಾರಿಯು ಇಂತಹ ಭಕ್ತಿಯನ್ನು ಹೊಂದಿದ್ದರೇನೆ ಧ್ಯಾನದಲ್ಲಿ ಉತ್ತೀರ್ಣನಾಗುವುದು ಆದುದರಿಂದ ಪರಾಭಕ್ತಿಯ ಸ್ವರೂಪವಾದ ಹಗ್ಗದಿಂದ ಇಂದ್ರಿಯಾಕರ್ಷಣಗಳೆಂಬ ತುಂಟಕುದುರೆಗಳನ್ನು ಬಂಧಿಸುವ ತತ್ವವೇ 'ದಿಗ್ಬಂಧಃ' ಎನ್ನುವುದರ ತತ್ವವಾಗಿರುವುದು.

[ಪರಾಭಕ್ತಿಯ ವಿಚಾರವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಶ್ರೀರಾಮನು ಸಮುದ್ರ ತೀರದಲ್ಲಿ ಸೀತಾದೇವಿಗೋಸ್ಕರ ಪ್ರಲಾಪಪಟ್ಟ ಕಥಾತತ್ವದಲ್ಲಿ ಬಂದಿರುವುದು.]

ದಿಗ್ಬಂಧವಾದ ಅನಂತರ 'ಧ್ಯಾನಂ' ಎಂದಿರುವುದರ ತತ್ವವೇನೆಂದರೆ— ಧ್ಯಾನದಲ್ಲಿ ದೇಹ ನಾನಲ್ಲವೆಂಬಜ್ಞಾನ ಉಂಟಾಗುವಂತೆ ಮಾಡಿಕೊಳ್ಳಬೇಕೆಂದು ತಿಳಿಸಿತು 'ದಿಗ್ಬಂಧಃ' ಎನ್ನುವುದರಲ್ಲಿ ಮನಸ್ಸು ಇಂದ್ರಿಯಗಳಮೂಲಕ ವಿಷಯ ಜ್ಞಾನಕ್ಕೆ ಹೋಗದಂತೆ ಧ್ಯಾನಿಸುವ ಗಾಯತ್ರೀದೇವತಾಭಾವವನ್ನು ಅತ್ಯಂತ ಭಕ್ತಿಯಿಂದ ಧರಿಸತಕ್ಕ ಪ್ರತ್ಯಾಹಾರ ಸ್ವರೂಪವನ್ನು ತಿಳಿಸಿತು ಈಗ 'ಧ್ಯಾನಂ' ಎನ್ನುವ ತತ್ವದಲ್ಲಿ 'ಗಾಯತ್ರೀದೇವತಾಭಾವನೆ' ಯಲ್ಲದೆ ಮತ್ತಾವುದನ್ನೂ ಬುದ್ಧಿಗೆ ಬರಗೊಡದೆ ಆ ದೇವತಾಭಾವವನ್ನೇ ಧರಿಸುವುದು ಧ್ಯಾನದ ಪ್ರಥಮಾವಸ್ಥೆಯಾಗಿರುವುದು ಧ್ಯಾನದಲ್ಲಿ ಅಭಿವೃದ್ಧಿಯಾಗಬೇಕಾದರೆ ತನ್ನನ್ನು ತಾನಲ್ಲವೆಂದೂ, ಧ್ಯಾನಿಸುತ್ತಿರುವ ವಸ್ತುವೇ ತಾನೆಂದೂ ಅಭ್ಯಾಸಿಸಬೇಕು. ಹೀಗೆ ಧ್ಯಾನಮಾಡುತ್ತಾ ಬಂದರೆ ಧ್ಯಾನಿಸುತ್ತಿರುವ ದೇವತಾಭಾವದ ಆಕಾರವಾಗಿ ಪರಿಣಮಿಸಿ ಧ್ಯಾನಿಸುತ್ತಿದೇನೆಂಬುದನ್ನೂ ಸಹ ಮರೆಯೋಣವೇ ಧ್ಯಾನದ ಅಂತ್ಯಸ್ಥಿತಿಯಾಗಿರುವುದು ಅಂದರೆ ಧ್ಯಾನದಲ್ಲಿ ತನ್ನನ್ನುತಾನು ಮರೆಯುವ ಸ್ಥಿತಿಯೇ ಧ್ಯಾನಾಭ್ಯಾಸಕ್ಕೆ ಅಂತ್ಯವಾಗಿರುವುದು. ಯಾವ ದೇವತಾಮೂರ್ತಿ ಭಾವನೆಯನ್ನು ಧರಿಸಿ ಧ್ಯಾನಿಸಬೇಕೋ ಅಂತಹ ಗಾಯತ್ರೀದೇವಿಯನ್ನು ವರ್ಣಿಸುವುದೇ ಮುಂದಿನಮಂತ್ರವಾಗಿರುವುದು.

## ೮ ಗಾಯತ್ರೀ ಧ್ಯಾನಮಂತ್ರ.

### ಬ್ರಾಹ್ಮಣರು

ಮುಕ್ತಾವಿದ್ರುಮ ಹೇಮನೀಲ ಧವಳಚ್ಛಾಯೈ ರ್ಮುಖೈ ಸ್ತ್ರೀಕ್ಷಣೈಃ ।
ಯುಕ್ತಾಮಿಂದು ಕಲಾನಿಬದ್ಧ ಮಕುಟಾಂ ತತ್ವಾರ್ಥ ವರ್ಣಾತ್ಮಿಕಾಂ ॥
ಗಾಯತ್ರೀಂ ವರದಾಭಯಾಂಕುಶಕಶಾಂ ಶೂಲಂ ಕಪಾಲಂ ಗದಾಂ ।
ಶಂಖಂ ಚಕ್ರ ಮಥಾರವಿಂದಯುಗಳಂ ಹಸ್ತೈರ್ವಹಂತೀಂ ಭಜೇ ॥

ತಾ|| ಮುತ್ತು, ಹವಳ, ನೀಲಮಣಿ, ಸ್ಫಟಿಕಗಳ ಕಾಂತಿಯಂತೆ ಮುಖವುಳ್ಳ, ಮೂರುಕಣ್ಣುಗಳುಳ್ಳ, ಚಂದ್ರಕಳೆಗಳಿಂದಕೂಡಿದ ರತ್ನಖಚಿತವಾದ ಕಿರೀಟಗಳುಳ್ಳ, ಪರಮ ತತ್ವಾರ್ಥವನ್ನು ಪ್ರತಿಪಾದಿಸುವ ತೇಜೋರೂಪಳಾದ ಮತ್ತು ಓಂಕಾರಮುಂತಾದ ವರ್ಣ (ಅಕ್ಷರ) ರೂಪಳಾಗಿರುವ, ಅಂಕುಶ, ಶೂಲ, ಕಶಾ, ಗದಾ, ಕಪಾಲ, ಶಂಖ, ಚಕ್ರ ಮತ್ತು ಕಮಲದಮೊಗ್ಗುಗಳನ್ನು ಹಸ್ತಗಳಲ್ಲಿ ಧರಿಸಿರುವ ಉಪಾಸಕರಿಗೆ ವರವನ್ನೂ, ಅಭಯುವನ್ನೂ ಕೊಟ್ಟು ಕಾಪಾಡುವ ವರದಾಭಯಹಸ್ತಗಳುಳ್ಳ ಗಾಯತ್ರೀದೇವಿಯ ದಿವ್ಯಸುಂದರಮೂರ್ತಿಸ್ವರೂಪವನ್ನು ನಾನು ಧ್ಯಾನಮಾಡುತ್ತೇನೆ

ವೈಷ್ಣವರಲ್ಲಿ ಅನೇಕರು ಮೇಲಿನ ಧ್ಯಾನಮಂತ್ರವನ್ನೇ ಹೇಳುತ್ತಿರುವುದು ಕಂಡುಬರುವುದು. ಕೆಲವರು ಮಾತ್ರ ಈ ಕೆಳಗಿನ ಶ್ಲೋಕವನ್ನು ಹೇಳುತ್ತಾರೆ.

ಧ್ಯೇಯಸ್ಸದಾ ಸವಿತೃಮಂಡಲ ಮಧ್ಯವರ್ತೀ | ನಾರಾಯಣ ಸ್ಸರಸಿಜಾಸನ ಸನ್ನಿವಿಷ್ಟಃ || ಕೇಯೂರವಾ ಮಕರಕುಂಡಲವಾ ಕಿರೀಟೀ | ಹಾರೀ ಹಿರಣ್ಮಯವಪುಃ ಧೃತ ಶಂಖ ಚಕ್ರಃ|| ಪ್ರೋದ್ಯದಾದಿತ್ಯವರ್ಣಾಭಃ ಸೂರ್ಯ ಮಂಡಲ ಮಧ್ಯಗಃ | ಶಂಖ ಚಕ್ರ ಧರೊಂಕಸ್ಥ ದೋರ್ಧ್ವಯೋ ಧ್ಯೇಯ ಏವಚ ||

ತಾ|| ಸೂರ್ಯಮಂಡಲ ಮಧ್ಯದಲ್ಲಿರುವ ತಾವರೆಯ ಆಸನದಲ್ಲಿ ಚೆನ್ನಾಗಿ ಕುಳಿತಿರುವ, ತೋಳುಬಳೆಗಳು ಮಕರಕುಂಡಲಗಳು ಕಿರೀಟ ಹಾರಗಳೊಡನೆಕೂಡಿರುವ, ಸುವರ್ಣಮಯವಾದ ಶರೀರವುಳ್ಳ, ಶಂಖಚಕ್ರಗಳನ್ನು ಧರಿಸಿದವನಾಗಿರುವ ಶ್ರೀಮನ್ನಾರಾಯಣನೇ ಯಾವಾಗಲೂ ಧ್ಯಾನಿಸಲ್ಪಡತಕ್ಕವನು. ಉದಯಿಸುವ ಸೂರ್ಯಮಂಡಲದ ವರ್ಣದಂತೆ ವರ್ಣವುಳ್ಳ, ಸೂರ್ಯಮಂಡಲಮಧ್ಯವನ್ನು ಹೊಂದಿರುವ ಶಂಖ ಚಕ್ರಗಳನ್ನು ಧರಿಸಿರುವ, ತೊಡೆಯಮೇಲಿರುವ ಹಸ್ತದ್ವಯವುಳ್ಳ ನಾರಾಯಣನೇ ಧ್ಯಾನಕ್ಕೆ ವಿಷಯವಾದ ಮೂರ್ತಿಯು.

## ಕ್ಷತ್ರಿಯರು.

ಮುಕ್ತಾವಿದ್ರುಮ ಹೇಮನೀಲ ಧವಳಚ್ಛಾಯೈರ್ಮುಖೈ ಸ್ತ್ರೀಕ್ಷಣೈಃ|ಯುಕ್ತಾಮಿಂದುನಿಬದ್ಧ ರತ್ನಮುಕುಟಾಂ ತತ್ವಾರ್ಥ ವರ್ಣಾತ್ಮಿಕಾಂ || ಗಾಯತ್ರೀಂ ವರದಾಭಯಾಂ ಕುಶಕಶಾಂ ಶುಭ್ರಂ ಕಪಾಲಂ ಗುಣಂ | ಶಂಖಂ ಚಕ್ರಮಥಾರವಿಂದ ಯುಗಳಂ ಹಸ್ತೈ ರ್ವಹನ್ತೀಂ ಭಜೇ ||

ತಾ|| ಈ ಮಂತ್ರಕ್ಕೆ ಮೇಲೆಯೇ ತಾತ್ಪರ್ಯ ಬರೆದಿದೆ.

## ವೈಶ್ಯರು

ಪಂಚಶೀರ್ಷ್ಣಾಂ ದಶಭುಜಾಂ ಷಟ್ಕುಕ್ಷೀಂ ವೇದಮಾತರಂ | ತ್ರಿಮೂರ್ತಿ ಜನನೀ ಮಂಬಾಂ ಗಾಯತ್ರೀಂ ತ್ರಿಪದಾಂ ಭಜೇ ||

ಐದು ಶಿರಸ್ಸುಗಳುಳ್ಳವಳಾಗಿಯೂ ಹತ್ತು ಭುಜಗಳುಳ್ಳವಳಾಗಿಯೂ, ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಊರ್ಧ್ವ ಅಧರವೆಂಬ ಆರು ದಿಗ್ರೂಪವಾದ ಕುಕ್ಷಿಗಳುಳ್ಳವಳಾಗಿಯೂ, ಅಕಾರ ಉಕಾರ ಮಕಾರಸ್ವರೂಪಗಳಾದ ಮೂರು ಪಾದಗಳುಳ್ಳ ಓಂಕಾರಸ್ವರೂಪವಳಾಗಿಯೂ, ವೇದಗಳಿಗೂ ತ್ರಿಮೂರ್ತಿಗಳಿಗೂ ಜನನಿಯಾದ ಗಾಯತ್ರೀದೇವಿಯನ್ನು ಧ್ಯಾನಮಾಡುತ್ತೇನೆ.

## ೯ ಗಾಯತ್ರೀ ಜಪ.

### ಬ್ರಾಹ್ಮಣರು.

ಓಂ ಭೂರ್ಭುವಸ್ಸುವಃ ತತ್ಸವಿತುರ್ವರೇಣಿಯಂ ಭರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್. ||

### ಸಾಯಣಾಚಾರ್ಯರ ಭಾಷ್ಯ

ಯಃ — ಯಾವ ಪರಮಾತ್ಮನು, ನಃ - ನಮ್ಮ, ಧಿಯಃ - ಬುದ್ಧಿವೃತ್ತಿಳನ್ನು, ಪ್ರಚೋದಯಾತ್-ಪ್ರೇರಿಸುತ್ತಲಿರುವನೋ, ತತ್ - ಅಂಥಾ, ದೇವಸ್ಯ-ಪ್ರಕಾಶಮಾನವಾದ, ಸವಿತುಃ - ಸರ್ವಾಂತರ್ಯಾಮಿಯಾಗಿಯೂ ಸರ್ವಪ್ರೇರಕನಾಗಿಯೂ ಜಗತ್‌ಸ್ರಷ್ಟೃವಾಗಿಯೂ ಇರುವ ಪರಮೇಶ್ವರನ ಆತ್ಮಭೂತವಾದಂಥಾ, ವರೇಣಿಯಂ - ಶ್ರೇಷ್ಠವಾದ ಸರ್ವಪ್ರಾಣಿಗಳಿಂದಲೂ ಉಪಾಸ್ಯವಾದ, ಭರ್ಗಃ - ಅವಿದ್ಯಾತತ್ಕಾರ್ಯನಾಶಕವಾದ ಸ್ವಯಂಪ್ರಕಾಶವಾದ ಪರಮಾತ್ಮ ಸಂಬಂಧಿಯಾದ ತೇಜಸ್ಸನ್ನು, ಧೀಮಹಿ - ಧ್ಯಾನಮಾಡುತ್ತೇನೆ.

### ಸೂರ್ಯಪರವಾದ ಭಾಷ್ಯ.

ಯಃ — ಯಾವ ಸೂರ್ಯರೂಪನಾದ ಈಶ್ವರನು, ನಃ - ನಮ್ಮ, ಧಿಯಃ-ಬುದ್ಧಿವೃತ್ತಿಗಳನ್ನು, ಪ್ರಚೋದಯಾತ್ - ಪ್ರೇರಿಸುತ್ತಾನೋ, ತತ್ - ಅಂಥಾ, ದೇವಸ್ಯ - ಪ್ರಕಾಶಮಾನನಾದ, ಸವಿತುಃ - ಸಕಲಪ್ರಾಣಿಗಳಿಗೂ ಸುಖಹೇತುವಾದ ವೃಷ್ಟಿಯನ್ನುಂಟುಮಾಡುವ, ವರೇಣಿಯಂ - ಶ್ರೇಷ್ಠನಾದ, ಭರ್ಗಃ-ತೇಜೋರೂಪನಾದ ಸೂರ್ಯನನ್ನು, ಧೀಮಹಿ - ಧ್ಯಾನಮಾಡುತ್ತೇನೆ.

### ಸೂತಸಂಹಿತೆಯಲ್ಲಿರತಕ್ಕ ಭಾಷ್ಯ.

ಯಃ — ಅಂತರ್ಯಾಮಿರೂಪದಿಂದಿರತಕ್ಕ ಯಾವ, ದೇವಸ್ಯ-ಸ್ವಯಂಪ್ರಕಾಶನಾಗಿಯೂ ಚಿದ್ರೂಪನಾಗಿಯೂ ಸರ್ವಪ್ರಾಣಿಗಳ ಹೃದಯಕಮಲದಲ್ಲಿ ಇರುವವನಾಗಿಯೂ ಅಂತಃಕರಣಸಾಕ್ಷಿಯಾಗಿಯೂ ಇರುವ ಆತ್ಮನು, ನಃ - ನಮ್ಮ, ಧಿಯಃ - ಬುದ್ಧಿಗಳನ್ನು, ಪ್ರಚೋದಯಾತ್ - ಧರ್ಮಜ್ಞಾನಾದಿಗಳಲ್ಲಿ ಪ್ರೇರಿಸುತ್ತಲಿರುನೋ, ತತ್ - ಅಂಥ, ದೇವಸ್ಯ - ಸ್ವಯಂಪ್ರಕಾಶಕನಾದ, ಸವಿತುಃ -

ಸ್ವರೂಪಪ್ರೇರಕನಾದ ಯಾವ ಆತ್ಮನ, ವರೇಣಿಯಂ - ಸರ್ವಪ್ರಾಣಿಗಳಿಂದ ಸೇವಿಸಲು ಯೋಗ್ಯವಾದ, ಭರ್ಗಃ - ಸಂಸಾರಬಂಧನಿವರ್ತಕವಾದ ಸತ್ಯಜ್ಞಾನಾದಿ ಲಕ್ಷಣವಾದ ತನ್ನ ಮಾಯಾಶಕ್ತಿಯಿಂದ ಶಿವ, ವಿಷ್ಣ್ವಾದಿ ರೂಪಗಳನ್ನು ಹೊಂದಿರುವ ಸೂರ್ಯಮಂಡಲಮಧ್ಯದಲ್ಲಿದ್ದು ಸೂರ್ಯದೇವತೆಗೂ ಪ್ರೇರಕನಾಗಿರತಕ್ಕ ಮತ್ತು ವಾಕ್ಕಿಗೂ ಮನಸ್ಸಿಗೂ ಅಗೋಚರನಾಗಿರುವ ಪರಬ್ರಹ್ಮವಸ್ತುವನ್ನು, ಧೀಮಹಿ ಅಂಥಾಬ್ರಹ್ಮವೇ ನಾನೆಂಬುದಾಗಿ ಧ್ಯಾನಮಾಡುತ್ತೇನೆ

## ಶ್ರೀಮಧ್ವಾಚಾರ್ಯರ ಭಾಷ್ಯ.

ಓಮಶೇಷ ಗುಣಾಧಾರ ಇತಿ ನಾರಾಯಣೋಽಭ್ಯಸೌ । ಪೂರ್ಣೋ-ಭೂತಿ ರ್ವರೋಽನಂತಃ ಸುಯೋ ಯದ್ವ್ಯಾಹೃತೀರಿತಃ ॥ ಗುಣೈಸ್ತತಃ ಪ್ರಸವಿತಾ ವರಣೀಯೋ ಗುಣೋನ್ನತೇಃ । ಭಾರತೀ ಜ್ಞಾನರೂಪತ್ವಾತ್ ಭರ್ಗೋ ಧ್ಯೇಯೋಽಖಿಲೈರ್ಜನೈಃ ॥ ಪ್ರೇರಕೋ ದೇವ ಬುದ್ಧೀನಾಂ ಸ ಗಾಯತ್ರ್ಯರ್ಥ ಈರಿತಃ। ಸಏವಾಖಿಲ ವೇದಾರ್ಥಂ ಸರ್ವಶಾಸ್ತ್ರಾರ್ಥ ಏವಚ। ಸಪೂರ್ಣತ್ವಾ ತ್ಪುಮಾನ್ನಾಮ ಪೌರುಷೇ ಸೂಕ್ತ ಈರಿತಃ ॥

ಯಃ — ಯಾವ ಸೂರ್ಯನಿಯಾಮಕನಾಗಿರುವ ಶ್ರೀಮನ್ನಾರಾಯಣನು, ನಃ-ನಮ್ಮ, ಧಿಯಃ-ಬುದ್ಧಿವೃತ್ತಿಗಳನ್ನು ಇಲ್ಲವೆ ಜ್ಞಾನಕರ್ಮೇಂದ್ರಿಯಗಳನ್ನು, ಪ್ರಚೋದಯಾತ್ - ಪ್ರೇರಿಸುತ್ತಿದಾನೆಯೋ, ತಸ್ಯ-ಆ, ದೇವಸ್ಯ - ಕ್ರೀಡಾದಿ ಗುಣಗಳಿಂದೊಡಗೂಡಿ ಪ್ರಕಾಶಮಾನನಾದ, ಸವಿತುಃ - ಸರ್ವಜಗತ್ತಿಗೂ ಜನಕನಾಗಿರುವ, ತತ್ - ಕಲ್ಯಾಣಗುಣಗಳಿಂದ ನಿಬಿಡವಾಗಿರುವುದರಿಂದಲೇ, ವರೇಣಿಯಂ - ಸರ್ವಶ್ರೇಷ್ಠವಾದ ಶ್ರೀಮನ್ನಾರಾಯಣನ ರೂಪತೇಜೋವಿಶೇಷವನ್ನು, ಧೀಮಹಿ - ಧ್ಯಾನಮಾಡುತ್ತೇನೆ.

## ಕ್ಷತ್ರಿಯರು

ಯೋ ದೇವ ಸ್ಸವಿತಾಸ್ಮಾಕಂ ಧಿಯೋ ಧರ್ಮಾದಿ ಗೋಚರಾಃ । ಪ್ರೇರಯೇ ತ್ತಸ್ಯ ಯದ್ಭರ್ಗಃ ತದ್ವರೇಣ್ಯ ಮುಪಾಸ್ಮಹೇ ॥

ತಾ॥ ಯಾವ ದೇವನು ನಮ್ಮ ಧರ್ಮಾದಿಗಳಲ್ಲಿ ಕಾಣುತ್ತಲಿರುವ ಇಂದ್ರಿಯ ವೃತ್ತಿಗಳನ್ನು ಪ್ರೇರಿಸುತ್ತಲಿರುವನೋ ಅಂತಹ ದೇವತೆಯ ಅತ್ಯುತ್ಕೃಷ್ಟವಾದ ತೇಜಸ್ಸು ಯಾವುದಿರುವುದೋ ಅಂಥಾ ತೇಜೋವಿಶೇಷವನ್ನು ಉಪಾಸನೆ ಮಾಡುತ್ತೇನೆ.

## ವೈಶ್ಯರು

ಯೋದೇವ ಸ್ಸವಿತಾಸ್ಮಾಕಂ ಧಿಯೋ ಧರ್ಮಾದಿಗೋಚರಾಃ ।
ಪ್ರೇರಯೇತ್ತಸ್ಯಯದ್ಭರ್ಗಃ ತದ್ವರೇಣ್ಯ ಮುಪಾಸ್ಮಹೇ ॥

ಪ್ರಾತರ್ಮಧ್ಯಾನ್ಹ ಸಂಧ್ಯಾಸು ತ್ರಿಮೂರ್ತ್ಯಾಂ ವೇದಮಾತರಂ |
ಚತುರ್ವಿಂಶದ್ವರ್ಣರೂಪಾಂ ಗಾಯತ್ರೀಂ ಭಾಸ್ವತೀಂ ನಮಃ ||

ತಾ|| ಯಾವ ದೇವನು ನಮ್ಮ ಧರ್ಮಾದಿಗಳಲ್ಲಿ ಕಾಣುತ್ತಲಿರುವ ಇಂದ್ರಿಯ ವೃತ್ತಿಗಳನ್ನು ಪ್ರೇರಿಸುತ್ತಲಿರುವನೋ ಅಂತಹ ದೇವತೆಯ ಅತ್ಯುತ್ಕೃಷ್ಟವಾದ ತೇಜಸ್ಸುಯಾವುದಿರುವುದೋ ಅಂತಹ ತೇಜೋವಿಶೇಷವನ್ನು ಉಪಾಸನೆಮಾಡುತ್ತೇನೆ. ಉಪಾಸನೆಮಾಡುವ ಇಂತಹ ತೇಜಸ್ಸಿನಲ್ಲಿ ಪ್ರಾತರ್ಮಧ್ಯಾನ್ಹ ಸಂಧ್ಯಾಕಾಲಗಳಲ್ಲಿ ತ್ರಿಮೂರ್ತಿಸ್ವರೂಪಳಾಗಿಯೂ, ವೇದಜನನಿಯಾಗಿಯೂ ಇಪ್ಪತ್ತುನಾಲ್ಕು ಅಕ್ಷರಗಳ ತತ್ವಸ್ವರೂಪಳಾಗಿಯೂ, ಜ್ಯೋತಿಸ್ವರೂಪಳಾಗಿಯೂ ಬೆಳಗುತ್ತಲಿರುವ ಗಾಯತ್ರೀದೇವಿಗೆ ನಮಸ್ಕಾರ

ತತ್ವ|| ಸ್ನಾನ ದಿಗ್ಬಂಧಗಳ ತತ್ವಗಳಲ್ಲಿ ತಿಳಿಸಿರುವಂತೆ ದೇಹ ಮತ್ತು ವಿಷಯಗಳ ಭಾವವನ್ನು ಬಿಟ್ಟು ಧ್ಯಾನಶ್ಲೋಕದಲ್ಲಿ ಹೇಳಿರುವ ಗಾಯತ್ರೀದೇವಿಯ ಭಾವನನ್ನು ಭಕ್ತಿಯಿಂದ ಧರಿಸಿ ಜಪಮಾಡಬೇಕು ಜಪಮಾಡುವಾಗ ಮಂತ್ರವನ್ನು ಬಿಡಿಸಿ ಪಾದಚ್ಛೇದದಿಂದ ಉಚ್ಚರಿಸದೆ ಮಂತ್ರದ ಕೊನೆಯವರೆಗೂ ಪೂರ್ತಿಯಾಗಿ ಉಚ್ಚರಿಸಬೇಕು. ಸಹಸ್ರ ಜಪವು ಉತ್ತಮ. ನೂರೆಂಟು ಜಪವು ಮಧ್ಯಮ. ಹತ್ತು ಜಪವು ಬಹುಕೀಳುವಕ್ಷ. ಉಚ್ಚೋಚ್ಚಾರಣೆಯಿಂದ ಮಾಡುವ ಜಪವು ಕನಿಷ್ಠವೆನಿಸಿಕೊಳ್ಳುವುದು ತುಟಿಯು ಮೆಲ್ಲಗೆ ಅಲ್ಲಾಡುವಂತೆ ಮಾತ್ರ ಮಾಡುವ ಜಪವು ಉತ್ತಮವು ಜಪದ ಪ್ರಥಮದಿಂದ ಅಂತ್ಯದವರೆಗೂ ಏಕರೀತಿಯಾಗಿ ಗಾಯತ್ರೀಭಾವವನ್ನು ಮನಸ್ಸಿನಲ್ಲಿ ಧರಿಸಲು ಪ್ರಥಮಾಭ್ಯಾಸದಲ್ಲೇ ಸಾಧ್ಯವಾಗಲಾರದು ಆದುದರಿಂದ ಪ್ರತಿಯೊಂದಾವೃತ್ತಿ ಮಂತ್ರೋಚ್ಚಾರಣೆಯನ್ನು ಪ್ರಾರಂಭಿಸಿದಾಗಲೂ ಗಾಯತ್ರೀಭಾವವನ್ನು ಮನಸ್ಸಿಗೆ ತಂದುಕೊಳ್ಳಬೇಕು. ಜಪಮಾಡುವುದಕ್ಕೆ ಜಪಮಾಲಿಕೆಯನ್ನು ಉಪಯೋಗಿಸುವುದು ಮಂತ್ರವನ್ನು ಉಚ್ಚರಿಸುವುದಕ್ಕೂ ನಮ್ಮ ಜ್ಞಾನವು ವಿಷಯಾದಿಗಳಿಗೆ ಹೋಗದಂತೆ ತಡೆಯುವುದಕ್ಕೂ, ಅತ್ಯಂತ ಸಹಕಾರಿಯಾಗುವುದು

ಅರ್ಘ್ಯಪ್ರದಾನದ ಭಾಗದಲ್ಲಿ ಕಾಯಿಕ ವಾಚಿಕ ಮಾನಸಿಕದ ಪಾಪಗಳನ್ನು ಪ್ರತಿನಿತ್ಯವೂ ಕಳೆದುಕೊಳ್ಳುವ ಮತ್ತು ದೇಹದ ಒಳಗೂ ಹೊರಗೂ ಶುಚಿಯಾಗಿರಬೇಕಾದ ನಮ್ಮ ನಡೆವಳಿಗಳ ವಿಚಾರಗಳು ಬಂದಿವೆ. ಅಲ್ಲದೆ ವರುಣ, ಅಗ್ನಿ, ಸೂರ್ಯಮುಂತಾದ ದೇವತೆಗಳ ಅನುಗ್ರಹವೂ ನಮಗೆ ಬೇಕೆಂಬ ವಿಚಾರವು ವಿಶದವಾಗಿರುವುದು. ಎರಡನೆಯ ಭಾಗದಲ್ಲಿ ಗಾಯತ್ರೀ ಉಪಾಸನೆಗೆ ಬೇಕಾದ ಆಸನ ಪ್ರಾಣಾಯಾಮಗಳ ವಿಚಾರ, ಯಾವ ದೇವತಾಭಾವವನ್ನು ಆವಾಹನೆಮಾಡಿಕೊಂಡು ಜಪಮಾಡಬೇಕೆಂಬ ವಿಚಾರ, ಆ ದೇವತಾ ಮಹಿಮೆ,

ಧ್ಯಾನಮಾಡುವುದರಿಂದ ಹೊಂದಬಹುದಾದ ಕೊನೆಯ ಸೋಪಾನದವರೆಗಿನ ಫಲಿತಾಂಶ, ಈ ವಿವರಗಳು ಬಂದಿವೆ. ಈಗ ಆ ವಿವರಗಳ ವಿಚಾರವನ್ನು ಕಾರ್ಯತಃ ಅನುಭವಿಸಿ ನಾವು ಕೃತಕೃತ್ಯರಾಗುವುದಕ್ಕೋಸ್ಕರವೂ, ಲೋಕಹಿತಕ್ಕೋಸ್ಕರವೂ ಮಾಡುವುದೇ ಗಾಯತ್ರೀ ಉಪಾಸನಾಕಾರ್ಯವಾಗಿರುವುದು. ನಮ್ಮನ್ನು ನಾವು ಮರೆಯುವಂತಹ ಧ್ಯಾನದ ಕೊನೆಯ ಅಂತಸ್ತನ್ನು ಪ್ರಥಮದಲ್ಲಿಯೇ ನಾವು ಪಡೆಯಲಾರೆವು. ಆದುದರಿಂದ ಯಾವ ದೇವತಾಮೂರ್ತಿ ಭಾವವನ್ನು ಧರಿಸಿ ನಾವು ಧ್ಯಾನಮಾಡಬೇಕು ?. ಧ್ಯಾನಶ್ಲೋಕದಲ್ಲಿ ಗಾಯತ್ರೀದೇವಿಯ ವರ್ಣನೆ ಯಿದೆ. ನಾರಾಯಣನೊಬ್ಬನನ್ನೇ ಧ್ಯಾನಿಸಬೇಕೆಂದು ನಾರಾಯಣನ ವರ್ಣನೆಯ ಶ್ಲೋಕವನ್ನು ಕೆಲವು ವೈಷ್ಣವರು ಹೇಳುವರು. ಅಲ್ಲದೆ ಗಾಯತ್ರೀದೇವಿಯ ಮಂತ್ರಕ್ಕೆ ಸೂರ್ಯ, ನಾರಾಯಣ, ದೇವೀ, ಶಿವ, ಪರಬ್ರಹ್ಮಪರವಾಗಿ ಅರ್ಥಗಳಾ ಗುವುದರಿಂದ ಅವರವರ ಇಷ್ಟಾನುಸಾರ ಉಪಾಸಿಸದೆ ಗಾಯತ್ರೀದೇವಿಯನ್ನೇ ಏತಕ್ಕೆ ಉಪಾಸಿಸಬೇಕೆಂಬ ಅನುಮಾನವುಂಟಾಗಬಹುದು ಇದರ ನಿಶ್ಚಯವಾದ ತತ್ವವೇನೆಂದರೆ:— ಇರುವುದು ಪರಾತ್ಪರವಾದ ಚಿದ್ವಸ್ತು ಒಂದೇ. ಗಾಯತ್ರೀ ದೇವಿಯು ಚಿದ್ವಸ್ತುವಲ್ಲದೆ ಅನ್ಯಥಾ ಅಲ್ಲ. ಈ ತತ್ವಪ್ರತಿಪಾದಿತವಾಗಿ, 'ಗಾಯತ್ರೀ' ಮಂತ್ರವೇ ಪ್ರತ್ಯಕ್ಷವಾಗಿ "ಓಂತತ್ಸತ್" ರೂಪವಾಗಿರುವುದೆಂಬುದನ್ನು ಹಿಂದೆ ಪ್ರಾಣಾಯಾಮ ಮಂತ್ರದ ತತ್ವಾರ್ಥದಲ್ಲಿ ವಿವರಿಸಿರುವುದು ಅಂದರೆ ಈ ದೇವಿಯು ಚಿದ್ವಸ್ತುವೆಂಬುದನ್ನು ಪ್ರತಿಪಾದಿಸುವಿಕೆಯೇ ಮಂತ್ರದಲ್ಲಿನ 'ತತ್' ಪದವಾಗಿಯೂ ಅಂತಹ ಚಿದ್ವಸ್ತುವಾದ ಗಾಯತ್ರೀದೇವಿಯ ವಿರಾಟ್‌ಸ್ವರೂಪ ಪ್ರತಿಪಾದಕವಾದ ೨೪ ಬೀಜಾಕ್ಷರಗಳುಳ್ಳ ಮಂತ್ರಸ್ವರೂಪವಾಗಿಯೂ ಇರುವುದು. ಆದುದರಿಂದ ಗಾಯತ್ರಿಯು ಸರ್ವದೇವತಾಶಕ್ತಿಯಾಗಿರುವಳು. ಸಕಲ ದೇವತಾಮಂತ್ರಗಳು ಚಿದ್ವಸ್ತುವಾದ ಗಾಯತ್ರೀಮಂತ್ರದಲ್ಲಿ ಅಂತರ್ಭೂತವಾಗಿರುವುವು. ಕೆಳಗಿನ ಶ್ರುತಿಪ್ರಮಾಣವು ಈ ತತ್ವವನ್ನು ಸಮರ್ಥಿಸುವುದು.

ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ ತನ್ನೋ ರುದ್ರಃ
ಪ್ರಚೋದಯಾತ್ |
ತತ್ಪುರುಷಾಯ ವಿದ್ಮಹೇ ವಕ್ರತುಂಡಾಯ ಧೀಮಹಿ ತನ್ನೋ ದಂತಿಃ
ಪ್ರಚೋದಯಾತ್ |
ತತ್ಪುರುಷಾಯ ವಿದ್ಮಹೇ ಚಕ್ರತುಂಡಾಯ ಧೀಮಹಿ ತನ್ನೋ ನಂದಿಃ
ಪ್ರಚೋದಯಾತ್ |
ತತ್ಪುರುಷಾಯ ವಿದ್ಮಹೇ ಮಹಾಸೇನಾಯ ಧೀಮಹಿ ತನ್ನಃ ಷಣ್ಮುಖಃ
ಪ್ರಚೋದಯಾತ್ |

ತತ್ಪುರುಷಾಯ ವಿದ್ಮಹೇ ಸುವರ್ಣಪಕ್ಷಾಯ ಧೀಮಹಿ ತನ್ನೋ ಗರುಡಃ ಪ್ರಚೋದಯಾತ್ ।

ವೇದಾತ್ಮನಾಯ ವಿದ್ಮಹೇ ಹಿರಣ್ಯಗರ್ಭಾಯ ಧೀಮಹಿ ತನ್ನೋ ಬ್ರಹ್ಮಃ ಪ್ರಚೋದಯಾತ್ ।

ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ತನ್ನೋ ವಿಷ್ಣುಃ ಪ್ರಚೋದಯಾತ್ ।

ವಜ್ರನಖಾಯ ವಿದ್ಮಹೇ ತೀಕ್ಷ್ಣದಂಷ್ಟ್ರಾಯ ಧೀಮಹಿ ತನ್ನೋ ನಾರಸಿಂಹಃ ಪ್ರಚೋದಯಾತ್ ।

ಭಾಸ್ಕರಾಯ ವಿದ್ಮಹೇ ಮಹದ್ಯುತಿಕರಾಯ ಧೀಮಹಿ ತನ್ನೋ ಆದಿತ್ಯಃ ಪ್ರಚೋದಯಾತ್ ।

ವೈಶ್ವಾನರಾಯ ವಿದ್ಮಹೇ ಲಾಲೀಲಾಯ ಧೀಮಹಿ ತನ್ನೋ ಅಗ್ನಿಃ ಪ್ರಚೋದಯಾತ್ ।

ಕಾತ್ಯಾಯನಾಯ ವಿದ್ಮಹೇ ಕನ್ಯಕುಮಾರಿ ಧೀಮಹಿ ತನ್ನೋ ದುರ್ಗಿಃ ಪ್ರಚೋದಯಾತ್ ।

ಮಹಾಲಕ್ಷ್ಮ್ಯೈಚ ವಿದ್ಮಹೇ ವಿಷ್ಣುಪತ್ನ್ಯೈಚ ಧೀಮಹಿ ತನ್ನೋ ಲಕ್ಷ್ಮೀಃ ಪ್ರಚೋದಯಾತ್ ।

ಹಂಸಹಂಸಾಯ ವಿದ್ಮಹೇ ಪರಮಹಂಸಾಯ ಧೀಮಹಿ ತನ್ನೋ ಹಂಸಃ ಪ್ರಚೋದಯಾತ್ ।

## ಗಾಯತ್ರೀಮಂತ್ರ.

ತತ್ಸವಿತುರ್ವರೇಣಿಯಂ ಭರ್ಗೋದೇವಸ್ಯಧೀಮಹಿ ಧಿಯೋಯೋನಃ ಪ್ರಚೋದಯಾತ್ ॥

ಮುಖ್ಯ ತತ್ವವೇನೆಂದರೆ:—ಪರಾಶಕ್ತಿಯಾದ ಚಿದ್ವಸ್ತುವೇ ಜಗತ್ಸೃಷ್ಟಿ ಸ್ಥಿತಿ ಲಯರೂಪವಾಗಿ ಲಂಬಿಸಿ ಮಂತ್ರಾಂತ್ಯದಲ್ಲಿ ಪುನಃ ಒಂದಾದಸ್ಥಿತಿಗೆ ಬರುವ ಅರ್ಥಾಕ್ಷರವೇ ಅಂತ್ಯವಾಗುಳ್ಳ "ಪ್ರಚೋದಯಾತ್" ಎಂಬುದು ಗಾಯತ್ರೀ ಮಂತ್ರದಲ್ಲಿರುವಂತೆ ಮೇಲಿನ ದೇವತಾಶಕ್ತಿಗಳಲ್ಲೆಲ್ಲಾ ಇರುವುದು. ಅಂದರೆ, ಎಲ್ಲಾ ದೇವತಾಶಕ್ತಿಗಳೂ ಒಂದಾದ ಚಿದ್ವಸ್ತುವೆಂಬುದನ್ನು ಪ್ರತಿಪಾದಿಸುವುದು. ಅಲ್ಲದೆ ಎಲ್ಲಾ ದೇವತಾಮಂತ್ರವೂ ಗಾಯತ್ರೀಮಂತ್ರದಲ್ಲಿ ಅಂತರ್ಭೂತವಾಗಿರುವುದೆಂಬ ತತ್ವವನ್ನು ಸಹ ಪ್ರತಿಪಾದಿಸುವುದರಿಂದಲೇ ಮೇಲಿನ ಮಂತ್ರಗಳಿಗೆ ರುದ್ರ ಗಾಯತ್ರೀ, ಬ್ರಹ್ಮಗಾಯತ್ರೀ, ಹಂಸಗಾಯತ್ರೀ, ವಿಷ್ಣುಗಾಯತ್ರೀ, ಎಂಬ ನಾಮವು ಆಯಾಯಾ ದೇವತಾ ನಾಮುಗಳೊಡಗೂಡಿರುವುದರಿಂದ ಬಂದಿದೆ. ಮೇಲಿನ ಎಲ್ಲಾ ಮಂತ್ರಗಳಲ್ಲಿಯೂ ಆಯಾಯ ದೇವತಾಹೆಸರುಗಳು ಬಂದಿವೆ.

ಗಾಯತ್ರೀಮಂತ್ರದಲ್ಲಿ ಮಾತ್ರ ಯಾವ ಹೆಸರೂಬಂದಿಲ್ಲ ಆದುದರಿಂದ ಸಕಲ ದೇವತಾಶಕ್ತಿಗಳಿಗೂ ಮೂಲರೂಪವಾದ ಚಿದ್ವಸ್ತುವಾಗಿರುವ ಗಾಯತ್ರೀದೇವಿಯ ಮಂತ್ರಕ್ಕೆ ಶಿವ, ವಿಷ್ಣು, ಸೂರ್ಯ ಮುಂತಾದ ಎಲ್ಲಾ ದೇವತಾಪರವಾಗಿ ಅರ್ಥ ಮಾಡಬಹುದಾದರೂ ಗಾಯತ್ರೀದೇವಿಯ ಭಾವನೆಯಿಂದಲೇ ಆ ಭುವನೇಶ್ವರಿಯನ್ನು ಉಪಾಸಿಸಬೇಕು. ಉಪಾಸನಾಮಂತ್ರವು ಗಾಯತ್ರೀದೇವಿಯ ಮಂತ್ರವಲ್ಲದೆ ಶಿವ, ಸೂರ್ಯ,ನಾರಾಯಣಮಂತ್ರಗಳೆಂದು ಕರೆಯಲ್ಪಡುವುದಿಲ್ಲ ಗಾಯತ್ರೀದೇವಿಯು ಸರ್ವದೇವತಾಶಕ್ತಿಯಾಗಿರುವುದಕ್ಕೆ ಮೇಲಿನ ಶ್ರುತ್ಯಾಧಾರಕ್ಕೆ ಅನುಸಾರವಾಗಿ ಮಹರ್ಷಿಪ್ರೋಕ್ತವಾದ ಗಾಯತ್ರೀದೇವತಾ ಧ್ಯಾನ ಮಂತ್ರವಾದ "ಮುಕ್ತಾವಿದ್ರುಮ" ಎಂಬ ಮಂತ್ರದ ಅರ್ಥದಲ್ಲಿಯೂ ಗಾಯತ್ರೀದೇವಿಯು ಸಕಲದೇವತಾಶಕ್ತಿಸ್ವರೂಪಳೆಂದು ದೃಢೀಕರಿಸಲ್ಪಟ್ಟಿರುವುದು. ಮುಕ್ತಾವಿದ್ರುಮ ಎಂಬ ಧ್ಯಾನಶ್ಲೋಕದಲ್ಲಿ ಪ್ರತಿಪಾದಿತವಾದ ಮುಕ್ತಾ, ವಿದ್ರುಮ, ಹೇಮ, ನೀಲ, ಧವಳ ವರ್ಣಗಳುಳ್ಳ ಗಾಯತ್ರೀದೇವಿಯ ಪಂಚಮುಖದ ಕಾಂತಿಗಳು ಕ್ರಮವಾಗಿ ಆದಿತ್ಯ, ಗಣನಾಥ, ಅಂಬಿಕಾ, ವಿಷ್ಣು, ಮಹೇಶ್ವರಶಕ್ತಿಗಳಾಗಿ ಪಂಚಾಯತನ ಶಕ್ತಿಗಳಾಗಿರುತ್ತಾರೆ ಗಾಯತ್ರೀದೇವಿಗೆ ವಿಷ್ಣುವಿಗಿದ್ದಂತೆ ಶಂಖಚಕ್ರಗಳಿವೆ ಶಿವನಿಗಿದ್ದಂತೆ ತ್ರಿಶೂಲ ಕಪಾಲಗಳಿವೆ ಪಾರ್ವತೀದೇವಿಗಿರುವಂತೆ ಕಶಾ ಅಂಕುಶಗಳಿವೆ. ಲಕ್ಷ್ಮೀದೇವಿಗಿರುವಂತೆ ಕಮಲದ ಮೊಗ್ಗುಗಳು, ಮತ್ತು ಕಮಲಾಸನವೇ ಗಾಯತ್ರಿಗಿರುವುದು ಆದುದರಿಂದ ಗಾಯತ್ರೀದೇವಿಯು ಸರ್ವಸಗುಣಶಕ್ತಿಯನ್ನು ಒಳಗೊಂಡಿರುವ, ತ್ರಿಮೂರ್ತಿಗಳಿಗೂ ಜನನಿಯಾದ ಸಾಕ್ಷಾತ್ ಪರಾಶಕ್ತಿಯಾಗಿರುತ್ತಾಳೆ ಅಂದರ 'ಮುಕ್ತಾವಿದ್ರುಮ' ಎಂಬ ಶ್ಲೋಕವು ಪರಬ್ರಹ್ಮಸ್ವರೂಪಿಣಿಯಾದ ಗಾಯತ್ರೀದೇವಿಯ ವಿರಾಟ್‌ಸ್ವರೂಪವನ್ನು ಪ್ರತಿಪಾದಿಸುವುದು. ಇಂತಹ ಮಹತ್ವವುಳ್ಳ ಪರಾಶಕ್ತಿಯಾಗಿರುವುದರಿಂದಲೂ, ಸರ್ವದೇವತಾಮಂತ್ರಗಳು ಗಾಯತ್ರೀದೇವಿಯ ಮಂತ್ರದಲ್ಲಿ ಅಡಗಿರುವುದರಿಂದಲೂ, ದ್ವಿಜತ್ವಕ್ಕೆ ಬಹು ಮುಖ್ಯವಾದುದೆಂದು ವೇದವು ವಿಧಿಸಿದೆ. ಮತ್ತು ಮಹರ್ಷಿಗಳೂ ಇದನ್ನು ಅನುಸರಿಸಿರುವರು. ನಾರಾಯಣ, ಶಿವ, ಗಾಯತ್ರೀ ಮುಂತಾದ ಯಾವ ದೇವತಾಭಾವದಿಂದ ಧ್ಯಾನಮಾಡಿದರೂ ಪರಮಾರ್ಥದಲ್ಲಿ ಒಂದೇ ತತ್ವಕ್ಕೆ ಬರುವುದು. ಆದರೆ ಗಾಯತ್ರೀದೇವಿಯ ಭಾವವನ್ನೇ ಉಪಾಸನೆಮಾಡಬೇಕೆಂದು ವೇದವೂ ವಿಧಿಸುವುದಲ್ಲದೆ ಅನೇಕ ಮಹರ್ಷಿಗಳ ವಾಕ್ಯಗಳೂ ಇವೆ

ಆಗಚ್ಛ ವರದೇ ದೇವಿ ಜಪೇಮೇ ಸನ್ನಿಧೌಭವ।
ಗಾಯಂತಂ ತ್ರಾಯಸೇ ಯಸ್ಮಾದ್ಗಾಯತ್ರೀ ತ್ವಮತಃಸ್ಮೃತಾ ॥
ತ್ರಿಮೂರ್ತಿ ರೂಪಾಂ ಗಾಯತ್ರೀಂ ತ್ರಿಸಂಧ್ಯಾಸು ಜಪೇದ್ಬುಧಃ।

ಸರ್ವಬಂಧ ವಿನಿರ್ಮುಕ್ತೋ ವಿಷ್ಣುಲೋಕೇ ಮಹೀಯತೇ ||
ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾವರಾಂ |
ಗಾಯತ್ರೀಂ ಸಂಜಪೇನ್ನಿತ್ಯಂ ಯತವಾಕ್ಕಾಯ ಮಾನಸಃ ||

ತಾ || ಅಭೀಷ್ಟದಾಯಕಳಾದ ಎಲೌ ಗಾಯತ್ರೀದೇವಿಯೇ! ದಯಮಾಡಿ ನನ್ನಲ್ಲಿರು ಉಪಾಸಿಸುವವರನ್ನು ಸಂರಕ್ಷಿಸುವವಳಾದುದರಿಂದ ನೀನು ಗಾಯತ್ರೀ ದೇವಿಯೆಂದು ಪ್ರಸಿದ್ಧಳಾಗಿರುವೆ. ವಿವೇಕಿಯಾದವನು ತ್ರಿಸಂಧ್ಯಾಕಾಲಗಳಲ್ಲಿಯೂ ತ್ರಿಮೂರ್ತಿಸ್ವರೂಪಳಾದ ಗಾಯತ್ರೀದೇವಿಯನ್ನು ಉಪಾಸಿಸಿದರೆ ಸರ್ವಬಂಧಗಳಿಂದಲೂ ಮುಕ್ತನಾಗಿ ವಿಷ್ಣುಪದವನ್ನು ಪಡೆಯುವನು. ಸಹಸ್ರಜಪವು ಉತ್ತಮವು, ನೂರು ಜಪವು ಮಧ್ಯಮವು, ಹತ್ತು ಜಪವು ಅಧಮಪಕ್ಷವು. ಕಾಯಾ ವಾಚಾ ಮನಸಾ ಗಾಯತ್ರೀದೇವಿಯನ್ನು ನಿತ್ಯದಲ್ಲಿಯೂ ತ್ರಿಕಾಲಗಳಲ್ಲಿಯೂ ಉಪಾಸಿಸಬೇಕು ಎಂದು **ಆಗ್ನೇಯಪುರಾಣದಲ್ಲಿ** ಹೇಳಿದೆ.

ನಭಿನ್ನಾಂ ಪ್ರತಿಪದ್ಯೇತ ಗಾಯತ್ರೀಂ ಬ್ರಹ್ಮಣಾಸಹ |
ಸೋಽಹಮಸ್ಮೀ ತ್ಯುಪಾಸೀತ ವಿಧಿನಾ ಯೇನಕೇನಚ ||

ತಾ || ಯಾವ ವಿಧದಿಂದ ಉಪಾಸಿಸಿದರೂ ಗಾಯತ್ರೀದೇವಿಯನ್ನು ಪರಬ್ರಹ್ಮನಿಗಿಂತ ಬೇರೆ ಎಂದು ಭಾವಿಸಬಾರದು. ಪರಿಶುದ್ಧವಾದ ಸ್ವಾತ್ಮ ಪದಾರ್ಥವೇ ಆ ಗಾಯತ್ರೀದೇವಿಯೆಂದು ಉಪಾಸನೆ ಮಾಡತಕ್ಕದ್ದು, ಎಂದು **ವ್ಯಾಸಮಹರ್ಷಿಗಳ** ವಚನವಿರುವುದು

ಯಾಸಂಧ್ಯಾ ಸಾಜಗತ್ಸೂತಿ ರ್ಮಾಯಾತೀತಾಹಿ ನಿಷ್ಕಳಾ |
ಈಶ್ವರೀ ಕೇವಲಾಶಕ್ತಿ ಸ್ತತ್ವತ್ರಯ ಸಮುದ್ಭವಾ ||
ಧ್ಯಾತ್ವಾರ್ಕಮಂಡಲಗತಾಂ ಸಾವಿತ್ರೀಂ ವೈಜಪೇತ್‌ದ್ವಿಜಃ |

ತಾ || ಪ್ರಪಂಚದ ಉತ್ಪತ್ತಿಗೆ ಮೂಲಕಾರಣವಾಗಿದ್ದರೂ ಪ್ರಕೃತಿಸಂಬಂಧವಿಲ್ಲದೆ ನಿರ್ಗುಣವಾಗಿ ಜಗಜ್ಜೀವೇಶ್ವರರೂಪದಿಂದ ಪ್ರಕಾಶಿಸುತ್ತಿರುವ ಪರಿಶುದ್ಧವಾದ ಚಿಚ್ಛಕ್ತಿಯೇ ಸಂಧ್ಯೆ ಅಂದರ ಗಾಯತ್ರೀದೇವಿಯು ತೇಜೋಮಯವಾದ ಸೂರ್ಯಮಂಡಲದ ವ್ಯಾಪ್ತಿಯಿಂದ ಸಾವಿತ್ರೀಯೆಂದು ಕರೆಸಿಕೊಳ್ಳುವ ಈ ದೇವತೆಯನ್ನು ದ್ವಿಜರು ತಪ್ಪದೆ ಧ್ಯಾನಿಸಬೇಕು ಎಂದು **ವಸಿಷ್ಠಮಹರ್ಷಿಗಳ** ವಚನವಿರುವುದು.

ಗಾಯತ್ರೀಂ ಚಿಂತಯೇದ್ಯಸ್ತು ಹೃತ್ಪದ್ಮೇ ಸಮುಪಸ್ಥಿತಾಂ |
ಧರ್ಮಾಧರ್ಮ ವಿನಿರ್ಮುಕ್ತಃ ಸಯಾತಿ ಪರಮಾಂಗತಿಂ || ೧ ||
ಯಾಸಂಧ್ಯಾ ಸೈವಗಾಯತ್ರೀ ದ್ವಿಧಾಭೂತಾ ವ್ಯವಸ್ಥಿತಾ |
ಸಂಧ್ಯಾ ಉಪಾಸಿತಾಯೇನ ವಿಷ್ಣುಸ್ತೇನ ಉಪಾಸಿತಃ || ೨ ||

ತಾ || ಹೃದಯಕಮಲದಲ್ಲಿ ಗಾಯತ್ರೀದೇವಿಯನ್ನು ಧ್ಯಾನಿಸುವವನು ಪುಣ್ಯಪಾಪರಹಿತನಾಗಿ, ಮೋಕ್ಷಪದವಿಯನ್ನು ಪಡೆಯುವನು. ಯಾವುದು ಸಂಧ್ಯೆಯೋ ಅದೇ ಗಾಯತ್ರೀದೇವಿಯು, ಗಾಯತ್ರಿಯೇ ಸಂಧ್ಯೆಯು. ಯಾರಿಂದ ಸಂಧ್ಯೆಯು ಉಪಾಸನೆಮಾಡಲ್ಪಡುವುದೋ ಅವನೇ ವಿಷ್ಣುವನ್ನು ಉಪಾಸನೆಮಾಡಿದವನು ಎಂದು **ಯಾಜ್ಞ್ಯವಲ್ಕ್ಯಮಹರ್ಷಿಗಳ** ವಚನಗಳು.

ಸರ್ವಾತ್ಮನಾಹಿ ಯಾದೇವೀ ಸರ್ವಭೂತೇಷು ಸಂಸ್ಥಿತಾ |
ಗಾಯತ್ರೀ ಮೋಕ್ಷಹೇತುರ್ವೈ ಮೋಕ್ಷಸ್ಥಾನಕ ಲಕ್ಷಣಮ್ ||

ತಾ|| ಯಾವಗಾಯತ್ರೀದೇವಿಯು ಸರ್ವಭೂತಗಳಲ್ಲಿಯೂ ಅಂತರ್ಯಾಮಿಯಾಗಿರವಳೋ ಆ ದೇವಿಯು ಮೋಕ್ಷಕಾರಣಳೂ, ಮೋಕ್ಷಸ್ವರೂಪಳೂ, ಆಗಿರುವಳು ಎಂದು **ಋಷ್ಯಶೃಂಗಮಹರ್ಷಿಗಳ** ವಚನವು.

ಗಾಯತ್ರೀ ವೇದಜನನೀ ಗಾಯತ್ರೀ ಲೋಕಪಾವನೀ |
ನಗಾಯತ್ರ್ಯಾಃ ಪರಂಜಪ್ಯ ಮೇತದ್ವಿಜ್ಞಾನ ಮುಚ್ಯತೇ ||

ತಾ || ಗಾಯತ್ರೀದೇವಿಯು ವೇದಮಾತೆಯು. ಈ ದೇವಿಯೇಲೋಕವನ್ನು ಪಾವನಮಾಡುವವಳು. ಗಾಯತ್ರಿಗಿಂತಲೂ ಶ್ರೇಷ್ಠವಾದ ಜಪ್ಯವಾದ ಮಂತ್ರವಿಲ್ಲ. ಇದೇ ಜ್ಞಾನಸ್ವರೂಪವೆಂದು **ಕೂರ್ಮಪುರಾಣದ** ವಚನವು.

ಗಾಯತ್ರೀ ವೇದಜನನೀ ಗಾಯತ್ರೀ ಪಾಪನಾಶಿನೀ |
ಗಾಯತ್ರ್ಯಾಸ್ತು ಪರಂನಾಸ್ತಿ ದಿವಿಚೇಹಚ ಪಾವನಮ್ ||
ಹಸ್ತತ್ರಾಣ ಪ್ರದಾದೇವೀ ಪತತಾಂ ನರಕಾರ್ಣವೇ |
ತಸ್ಮಾತ್ತಾ ಮಭ್ಯಸೇನ್ನಿತ್ಯಂ ಬ್ರಾಹ್ಮಣೋ ಹೃದಯೇಶುಚಿಃ ||

ತಾ|| ಗಾಯತ್ರೀದೇವಿಯು ವೇದಮಾತೆಯು, ಸಕಲ ಪಾಪನಾಶಕಳು, ಇಹಪರಗಳಲ್ಲಿ ಗಾಯತ್ರೀದೇವಿಗಿಂತ ಪಾವನವಾದುದು ಮತ್ತಾವುದೂ ಇಲ್ಲ. ನರಕಸಮುದ್ರದಲ್ಲಿ ಬೀಳುವ ಪ್ರಾಣಿಗಳಿಗೆ ಹಸ್ತಾವಲಂಬನವನ್ನು ಕೊಡತಕ್ಕವಳು ಇವಳೇ. ಆದುದರಿಂದ ಬ್ರಾಹ್ಮಣರು ನಿತ್ಯವೂ ಶುಚಿಯಾಗಿ ಆ ದೇವಿಯನ್ನು ನಮಸ್ಕರಿಸಿ ಜಪಿಸಬೇಕು, ಎಂದು **ಯೋಗಯಾಜ್ಞವಲ್ಕ್ಯದ** ವಚನವು.

ಆಚಾರಸ್ತ್ವಸ್ಯಯಾಂ ಜಾತಿಂ ವಿಧಿವದ್ವೇದ ಪಾರಗಃ | ಉತ್ಪಾದಯತಿ ಸಾವಿತ್ರೀ ಸಾಸತ್ಯಾ ಸಾಜರಾಮರಾ || ಅಪಾಂಸಮೀಪೇ ನಿಯತೋ ನೈತ್ಯಕಂ ವಿಧಿಮಾಸ್ಥಿತಃ | ಸಾವಿತ್ರೀ ಮಪ್ಯಧೀಯೀತ ಗತ್ವಾರಣ್ಯಂ ಸಮಾಹಿತಃ ||

ಎಂಬ **ಮನುಸ್ಮೃತಿ** ವಚನವೂ ಇರುವುದು.

ಈ ಮೇಲಿನ ಮಹರ್ಷಿಗಳ ವಚನಗಳಿಂದಲೂ, "ಸಾವಿತ್ರೀ ಮುಪಾಸೀತ" ಎಂಬದಾಗಿ ಅನೇಕ ಕಡೆ ವೇದಗಳಲ್ಲಿ ಹೇಳಿರುವುದರಿಂದಲೂ, ಗಾಯತ್ರೀ ಎಂಬುದು ಅಕ್ಷರಗಳ ಪದಕ್ರಮಕ್ಕೆ (ಛಂದಸ್ಸಿಗೆ) ಹೆಸರೇ ಹೊರತು ಗಾಯತ್ರೀ ಎಂಬ ಪರದೇವತೆಯು ಇಲ್ಲವೆಂಬ ಭಾವವನ್ನು ಬಿಟ್ಟು 'ಮುಕ್ತಾವಿದ್ರುಮ' ಎಂಬ ಮಂತ್ರದಲ್ಲಿ ಹೇಳಿರುವಂತೆ ಪರಾಶಕ್ತಿಯಾದ ಗಾಯತ್ರೀದೇವಿಯ ಭಾವನೆಯನ್ನೇ ಉಪಾಸಿಸಬೇಕೆಂಬುದಾಗಿ ವ್ಯಕ್ತಪಡುವುದು. ಗಾಯತ್ರೀ ದೇವತೋಪಾಸನೆಯು ಇತ್ತೀಚಿನ ಮತಸ್ಥಾಪಕರ ಕಾಲದಿಂದ ಪ್ರಾರಂಭವಾದುದಲ್ಲ. ಅನಾದಿಕಾಲದಿಂದಲೂ ಋಷಿಪಾರಂಪರ್ಯವಾಗಿ ಉಪಾಸಿಸಿಕೊಂಡು ಬಂದಿದೆ. ಲೀಲಾವತಾರವೆತ್ತಿದ್ದ ಶ್ರೀರಾಮಚಂದ್ರನೂ ಶ್ರೀಕೃಷ್ಣಪರಮಾತ್ಮನೂ ಸಹ ಲೋಕಕ್ಕೆ ಮಾರ್ಗದರ್ಶಿಗಳಾಗಲು ಗಾಯತ್ರೀದೇವಿಯನ್ನು ಉಪಾಸಿಸಿರುತ್ತಾರೆ. ಆದುದರಿಂದ ವೇದಮಾತೆಯಾದ ಗಾಯತ್ರೀದೇವಿಯ ಭಾವನೆಯಿಂದಲೇ ದ್ವಿಜರೆಲ್ಲರೂ ಜಪಮಾಡುವುದು ವೇದಾನುವರ್ತಿಯಾಗಿಯೂ ಋಷಿಗಳ ವಾಕ್ಯಗಳಿಗನುಸಾರವಾಗಿಯೂ ಇರುವುದು.

ಅಲ್ಲದೆ ಗಾಯತ್ರೀ, ಸಾವಿತ್ರೀ. ಸರಸ್ವತೀ ಸಂಧ್ಯಾ ಎಂಬಿವುಗಳು ಸ್ತ್ರೀಲಿಂಗದಲ್ಲಿವೆ. ವೇದಗಳಿಗೆ ಮಾತೆಯೆಂದರೆ ಲೋಕಕ್ಕೆ ಮಾತೆಯು. ಇದರಿಂದಲೇ ನಾವು ಪ್ರಥಮದಲ್ಲಿ ಮಾತೆಗೆ ನಮಸ್ಕರಿಸಿ ಅನಂತರ ಪಿತನಿಗೆ ನಮಸ್ಕರಿಸುತ್ತೇವೆ. ಹೀಗಿರುವುದು ವೇದವಿಧಿಯೇ ಆಗಿರುವುದಲ್ಲದೆ ವಾಡಿಕೆಯಲ್ಲಿ ಸಕಲರಿಗೂ ತಿಳಿದ ವಿಚಾರವಾಗಿದೆ. ಗಾಯತ್ರೀದೇವಿಯು ಲಕ್ಷ್ಮೀದೇವಿಗಿಂತ ಪ್ರತ್ಯೇಕಳಲ್ಲ, ಮತ್ತು ಪಾರ್ವತೀದೇವಿಗಿಂತ ಭಿನ್ನಳಲ್ಲ. ಗಾಯತ್ರೀದೇವಿಯೂ ಲಕ್ಷ್ಮೀದೇವಿಯೂ ಒಂದೇ ಎನ್ನುವುದಕ್ಕೂ, ಗಾಯತ್ರೀದೇವಿಯೇ ಸರ್ವಸ್ವರೂಪಳೂ ಎನ್ನುವುದಕ್ಕೂ **ನೃಸಿಂಹತಾಪಿನಿ** ಉಪನಿಷತ್ತಿನಲ್ಲಿಕೂಡ.

> ಓಂ ಭೂರ್ಲಕ್ಷ್ಮೀ ರ್ಭುವರ್ಲಕ್ಷ್ಮೀ ಸ್ಸ್ವರ್ಲಕ್ಷ್ಮೀಃ ಕಾಳಕರ್ಣೀ ತನ್ನೋ ಲಕ್ಷ್ಮೀಃ ಪ್ರಚೋದಯಾತ್ | ಇತ್ಯೇಷಾವೈ ಮಹಾಲಕ್ಷ್ಮೀ ಯಜುರ್ಗಾಯತ್ರೀ ಚತುರ್ವಿಂಶತ್ಯಕ್ಷರಾಭವತಿ | ಗಾಯತ್ರೀವಾ ಇದಗ್ಂಸರ್ವಂ ಯದಿದಂ ಕಿಂಚ ತಸ್ಮಾದ್ಯಏತಾಂ ಮಹಾಲಕ್ಷ್ಮೀಂ ಯಾಜುಷೀಂ ವೇದ ಮಹತೀಂ ಶ್ರಿಯಮಶ್ನುತೇ ||

ಎಂದು ಹೇಳಿದೆ. ಗಾಯತ್ರಿಯು ಪರದೇವತೆಯಾಗಿರುವುದಕ್ಕೆ ಮೇಲಿನ ವಾಕ್ಯಗಳಲ್ಲದೆ ಸಂಧ್ಯಾವಂದನೆಯಲ್ಲಿಯೇ ಗಾಯತ್ರಿಯನ್ನು ಆಹ್ವಾನಮಾಡುವ ಆಯಾತುವರದಾದೇವಿ ಎಂಬ, ಗಾಯತ್ರೀ ಮಾವಾಹಯಾಮಿ, ಮತ್ತು ಗಾಯತ್ರಿಯನ್ನು ವರ್ಣನೆಮಾಡತಕ್ಕ ಗಾಯತ್ರೀದೇವಿಯ ಇರುವಿಕೆಯನ್ನೂ ಪ್ರದರ್ಶಿ

ಸುವ "ಸವಿತಾದೇವತಾ" ಎಂಬ ವೇದಾಧಾರಗಳೇ ಇರುವವು. ಉಪನಯನ ಕಾಲದಲ್ಲಿಯೂ "ಹೇಭೋ ಸಾವಿತ್ರೀಮನುಬ್ರೂಹಿ" ಎಂಬದಾಗಿ ಗಾಯತ್ರೀ ದೇವಿಯ ಮಂತ್ರವನ್ನು ಉಪದೇಶಿಸಬೇಕೆಂಬದಾಗಿ ವಟುವು ಕೇಳಿಕೊಳ್ಳುತ್ತಾನೆ. ಇದು ಗಾಯತ್ರೀ ಉಪದೇಶವಲ್ಲದೆ ಅನ್ಯಥಾ ಅಲ್ಲ. ಅಲ್ಲದೆ "ನಗಾಯತ್ರ್ಯಾಃ ಪರಂಮಂತ್ರಂ ನಮಾತುಃ ಪರದೈವತಂ" ಎಂಬ ಆಧಾರವಾಕ್ಯವೂ ಇರುವುದು. ಆದುದರಿಂದ ಈ ಜಗದಂಬಾಸ್ವರೂಪ ಭಾವವನ್ನೇ ದ್ವಿಜರು ಕಾಯಾ, ವಾಚಾ, ಮನಸಾ, ಉಪಾಸಿಸಿ ಆ ದೇವಿಯ ಅನುಗ್ರಹಕ್ಕೆ ಪಾತ್ರರಾಗಬೇಕೆಂಬ ಮಹತ್ತನ್ನು ತಿಳಿದೇ ಋಷಿಪಾರಂಪರ್ಯವಾಗಿ ಈ ಏಕದೇವತೋಪಾಸನೆಯನ್ನು ವಿಧಿಸಿರುವುದು. ದ್ವಿಜರಲ್ಲೂ ಬ್ರಾಹ್ಮಣರಿಗೆ ಮಂತ್ರಸಿದ್ಧಿಗೂ, ಇತರ ಕರ್ಮಾಚರಣೆಗೂ, ತಪಶ್ಶಕ್ತಿಗೂ, ದೇಹಯಾತ್ರೆಗೂ, ಗಾಯತ್ರೀದೇವಿಯೇ ಪ್ರಧಾನ ದೇವತೆ. ಈ ದೇವಿಯನ್ನು ಬಿಟ್ಟರೆ ದ್ವಿಜತ್ವವೇ ಇರುವುದಿಲ್ಲ. ಋಷಿಗಳು ಈ ದೇವಿಯ ಅನುಗ್ರಹಕ್ಕೆ ಪಾತ್ರರಾಗಿ ಅಸದೃಶವಾದ ಕೀರ್ತಿಯನ್ನು ಪಡೆದರೆಂಬುದಕ್ಕೆ

ಋಷಯೋ ದೀರ್ಘಸಂಧಿತ್ವಾ ತ್ಸರ್ವಮಾಯು ರುಪಾಯಯುಃ ।
ಪ್ರಜ್ಞಾಂ ಯಶಶ್ಚ ಕೀರ್ತಿಂಚ ಬ್ರಹ್ಮವರ್ಚ್ಚಸ ಮೇವಚ ॥

ತಾ॥ ಮಹರ್ಷಿಗಳು ಸಂಧ್ಯಾಕಾಲಗಳಲ್ಲಿ ಗಾಯತ್ರೀದೇವಿಯ ಉಪಾಸನೆಯನ್ನು ಬಹುಕಾಲದವರೆಗೆ ಶ್ರದ್ಧಾಭಕ್ತಿಗಳಿಂದ ಆಚರಿಸಿದುದರಿಂದಲೇ ಚಿರಾಯುಷ್ಮಂತರಾಗಿಯೂ ಅಸಾಧಾರಣ ಪ್ರಜ್ಞೆಯುಳ್ಳವರಾಗಿಯೂ ಅಸದೃಶ ಕೀರ್ತಿವಂತರಾಗಿಯೂ ಅನ್ಯಾದೃಶವಾದ ಬ್ರಹ್ಮತೇಜಸ್ಸುಳ್ಳವರಾಗಿಯೂ ಆದರು. ಎಂದು **ಯಮಸ್ಮೃತಿಯಲ್ಲಿ ಹೇಳಿದೆ.**

ಆದುದರಿಂದಲೇ ಭೇದಭಾವವನ್ನು ತ್ಯಜಿಸಿ ಮಂತ್ರದಲ್ಲಿ ಹೇಳಿರುವ ಗಾಯತ್ರೀದೇವಿಯ ಭಾವನೆಯನ್ನೇ ಉಪಾಸಿಸಬೇಕೆಂಬುದು ದೃಢಪಡುವುದು. ಪರಾಭಕ್ತಿಯಿಂದ ಆ ದೇವಿಯ ಭಾವವನ್ನು ಧರಿಸುತ್ತಾ ಜಪಮಾಲಿಕೆಯನ್ನು ಹಿಡಿದು ಮನಸ್ಸಿನಲ್ಲೇ ಉಚ್ಚರಿಸುತ್ತಾ ಹೆಚ್ಚು ಸಂಖ್ಯೆಯ ಜಪವನ್ನು ಮಾಡುತ್ತಾ ಬರಬೇಕು. ದೇವತಾತನ್ಮಯನಾಗಿ ಹೊರಗಿನ ವಿಷಯಗಳಿಗೆ ಗಮನವಿಲ್ಲದೆ ಗಾಯತ್ರೀದೇವಿಯ ಭಾವದಲ್ಲಿಯೇ ಮಗ್ನನಾಗಿ ಜಪಮಾಡುತ್ತಾ ಬಂದರೆ ಜಪವು ವೀರ್ಯವತ್ತಾಗಿ ದೇವತಾಸ್ವಭಾವಾನುಗುಣವಾದ ಒಂದು ವಿಧವಾದ ಸೂಕ್ಷ್ಮ ಚಲನೆಯು ದೇಹದಲ್ಲುಂಟಾಗಿ ಮಲಿನಪ್ರಕೃತಿಯ ಬಲವು ಕುಗ್ಗಿ ಗಾಯತ್ರೀ ದೇವಿಯ ದಿವ್ಯತೇಜಸ್ಸೆಂದರೆ ಬ್ರಹ್ಮತೇಜಸ್ಸನ್ನು ಅಧಿಕಾರಿಯು ಹೊಂದುತ್ತಾನೆ. ಅಧಿಕಾರಿಯು ಸತ್ವಾಪತ್ತಿ, ಪರಿಶುದ್ಧತೆ, ಪವಿತ್ರತೆ, ನಿಯಮಗಳ ಬಲವಿದ್ದಂತೆ ತಪಶ್ಶಕ್ತಿಯು ವಿರ್ಯವತ್ತಾಗುತ್ತಾ ಬರುವುದು ಆ ದೇವಿಯ ಅನುಗ್ರಹಕ್ಕೆ ಪಾತ್ರರಾದರೆ ಇಷ್ಟೇ ಫಲವೆಂದು ತಿಳಿಯಬಾರದು. "ಗಾಯಂತಂ ತ್ರಾಯಸೇ

ಯಸ್ಮಾದ್ಗಾಯತ್ರೀ ತ್ವಮತಸ್ಸ್ಮೃತಾ” ಗಾನಮಾಡುವವರನ್ನು ಸಂರಕ್ಷಿಸುವವಳಾದುದರಿಂದ ಗಾಯತ್ರೀ ಎಂಬ ನಾಮವು ಸಾರ್ಥಕವಾಗಿದೆ ಎಂದು ಹೇಳುವ ಆ ವೇದಮಾತೆಯ ಮಹಿಮೆಗೆ ಮೇಲಿನ ಅನುಷ್ಠಾನದ ಫಲವು ಬಹು ಅತ್ಯಲ್ಪವಾದುದು. ಬಹು ಹೆಚ್ಚಿನದೆಂದರೆ ಮತ್ತಾವ ಸೋಪಾನದ ಫಲವೂ ಅದಕ್ಕೆ ಅಧಿಕವೆನಿಸಿಕೊಳ್ಳದ ನಿರತಿಶಯಾನಂದ ಸ್ವರೂಪವಾದ ಪರಬ್ರಹ್ಮಸಾಕ್ಷಾತ್ಕಾರದ ಪದವಿಯೇ ಅವಳ ಪೂರ್ಣಾನುಗ್ರಹದ ಫಲ. ಅಂದರೆ ಅವಳ ಪದವಿಯನ್ನೇ ಅವಳು ಅನುಗ್ರಹಿಸುತ್ತಾಳೆ.

ಹೇಗೆಂದರೆ, ಗಾನವೆಂದರೆ ಶಬ್ದೋಚ್ಚಾರಣೆ. ಈ ಶಬ್ದೋಚ್ಚಾರಣೆಯಲ್ಲಿ, ಪರಾ, ಪಶ್ಯಂತೀ, ಮಧ್ಯಮಾ, ವೈಖರೀ, ಎಂಬ ನಾಲ್ಕು ಭೇದಗಳಿವೆ. ದೇವತಾ ಪ್ರಾರ್ಥನೆಯೂ, ದೇವತಾ ಗಾನವೂ, ಶಬ್ದವನ್ನುಚ್ಚರಿಸಿ ಜಪಮಾಡುವುದೂ ವೈಖರೀ ಎನಿಸಿಕೊಳ್ಳುವುದು. ಇಂತಹ ವೈಖರೀಸ್ಥಿತಿಯಲ್ಲಿಯೂ ಆ ಗಾಯತ್ರೀ ದೇವಿಯನ್ನು ಭಕ್ತಿಯಿಂದ ಭಜಿಸಿದರೆ ಅದಕ್ಕೆ ತಕ್ಕ ಫಲವನ್ನು ಕೊಟ್ಟು ಕಾಪಾಡುವಳು. ವೈಖರಿಗಿಂತ ಮೇಲಿನದಾದ ಮಧ್ಯಮದ ಸ್ವರೂಪವೇನೆಂದರೆ – ಮನಸ್ಸಿನಲ್ಲೇ ಉಚ್ಚರಿಸಿದ ಶಬ್ದವು ತನ್ನ ಬುದ್ಧಿಗೆ ಮಾತ್ರ ಗೋಚರವಾಗುವಿಕೆಗೆ ಮಧ್ಯಮವೆಂದು ಹೆಸರು. ಮಾನಸಿಕಜಪದಿಂದ ಆ ದೇವಿಯನ್ನು ಉಪಾಸಿಸಿದರೆ ವೈಖರಿಗಿಂತಲೂ ಅಧಿಕಫಲದಾಯಕಳಾಗಿ ತನ್ನ ತೇಜಸ್ಸನ್ನು ಅಧಿಕಾರಿಗೆ ಕೊಡುತ್ತಾಳೆ. ಮಧ್ಯಮಕ್ಕಿಂತ ಹೆಚ್ಚಿನದಾದ ಪಶ್ಯಂತಿಗೆ ಹೋಗುವುದೇ ಕಷ್ಟವಾದುದು. ಮಾನಸಿಕ ಉಚ್ಚಾರಣೆಗಿಂತ ಹೊರಗಡೆ ನಮಗೆ ಹೆಚ್ಚಿನದು ಸಾಧ್ಯವೇಇಲ್ಲ ಇನ್ನು ಯಾವ ವಿಧದಿಂದ ಪಶ್ಯಂತಿಯನ್ನು ಹೊಂದಬೇಕಾಗಿದೆ ಎನ್ನುವುದೇ ಗಹನವಾದ ವಿಚಾರವಾಗಿಯೂ, ಗೋಪ್ಯವಾಗಿಯೂ, ನಮ್ಮ ಅಂತರ್ಮುಖದ ದಾರಿಯಲ್ಲಿ ಇರತಕ್ಕದ್ದಾಗಿಯೂ ಇದೆ. ಇದನ್ನು ಬಿಡಿಸಿ ವಿವರಿಸದಿದ್ದರೆ ಗಾಯತ್ರೀದೇವಿಗೆ ಗಾನಮಾಡುವವರನ್ನು ಕಾಪಾಡುವವಳೆಂದು ಹೇಳಿರುವುದು ಸಾರ್ಥಕವಿಲ್ಲವಾಗುವುದು. ಆದುದರಿಂದ ಆ ದೇವಿಯ ಮಹಿಮೆಯನ್ನು ಆ ದೇವಿಯ ಅನುಗ್ರಹದಿಂದಲೇ ವಿವರಿಸೋಣ.

ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಸ್ವರೂಪಗಳ ವಿಚಾರಕ್ಕೆ ಶ್ರೀ ಶಂಕರಾಚಾರ್ಯರವರು ‘ಪ್ರಪಂಚಸಾರ’ ದಲ್ಲಿ ಹೇಳಿರುವುದೇನೆಂದರೆ:—

ಮೂಲಾಧಾರಾತ್ ಪ್ರಥಮ ಮುದಿತೋ ಯಸ್ತುಭಾವಃ ಪರಾಖ್ಯಃ ।
ಪಶ್ಚಾತ್ ಪಶ್ಯಂತ್ಯಥ ಹೃದಿಗೋ ಬುದ್ಧಿಯುಙ್ಮಧ್ಯಮಾಖ್ಯಃ ॥

ತಾ|| ಮೂಲಾಧಾರದಿಂದ ಪ್ರಥಮದಲ್ಲಿ ಹೊರಟ ಪರಾ ಎಂಬ ನಾದವು ಹೃದಯಸ್ಥಾನವನ್ನು ಹೊಂದಿ ಪಶ್ಯಂತೀಯೆಂದು ಕರೆಯಲ್ಪಟ್ಟು ಬುದ್ಧಿಯೊಡನೆ ಸೇರಿ ಮಧ್ಯಮಾ ಎಂದು ಹೇಳಿಸಿಕೊಳ್ಳುವುದು.

ವೈಖರೀ ಶಕ್ತಿ ನಿಷ್ಪತ್ತಿಃ ಮಧ್ಯಮಾ ಶ್ರುತಿಗೋಚರಾ |
ದ್ಯೋತಿತಾರ್ಥಾತು ಪಶ್ಯಂತೀ ಸೂಕ್ಷ್ಮಾವಾಗನಪಾಯಿನೀ ||

ತಾ|| ನಾಶರಹಿತವಾದ ಪರಾಶಕ್ತಿಯು ವ್ಯಕ್ತವಾದ ಅರ್ಥವುಳ್ಳ ಪಶ್ಯಂತೀ ರೂಪವನ್ನು ಹೊಂದಿ ಅನಂತರ ಶ್ರುತಿಗೋಚರವಾದ ಮಧ್ಯಮಸ್ವರೂಪವನ್ನು ಧರಿಸಿ ಅನಂತರ ವೈಖರೀಶಕ್ತಿರೂಪವನ್ನು ಹೊಂದುವುದು, ಎಂಬ ಶ್ರುತ್ಯಾಧಾರವೂ ಇರುವುದು.

ಮಾನಸಿಕ ಉಚ್ಚಾರಣೆಗಿಂತ ಹೆಚ್ಚಿನದು ಹೊರಗೆ ಇರುವುದಿಲ್ಲವಷ್ಟೆ! ಒಳಗಡೆ ಯಾವುದೋ ಒಂದು ಶಕ್ತಿ ಇದ್ದು ಪ್ರಕಾಶಪಡಿಸುತ್ತಿರುವುದರಿಂದಲೇ ಹೊರಗಿನ ಉಚ್ಚಾರಣೆಯಾಗುವುದು. ಈ ಶಕ್ತಿಯೇ ಓಂಕಾರನಾದಶಕ್ತಿಯಾಗಿ ಗಾಯತ್ರೀದೇವಿಯ ಅವತಾರವಾದ ಶಬ್ದಬ್ರಹ್ಮಸ್ವರೂಪಳಾದ ಸರಸ್ವತೀದೇವಿಯು. ಈ ಸರಸ್ವತಿಯೇ ನಮ್ಮವಾಕ್ಕಿಗೂ ಅಭಿಮಾನದೇವತೆ. ಈ ಶಬ್ದಬ್ರಹ್ಮಸ್ವರೂಪವಾದ ಶಕ್ತಿಯು ಒಂದೇ ಆದರೂ ಬ್ರಾಹ್ಮೀ, ಮಾಹೇಶ್ವರೀ ಮುಂತಾದ ಏಳು ಮುಖ್ಯ ಮಾತೃಶಕ್ತಿಗಳಾಗಿ ವಿಂಗಡವಾಗಿರುವ ವಿಚಾರ ಹಿಂದೆಯೇ ತಿಳಿಸಿದೆ. ಸಂಸ್ಕೃತ ಭಾಷೆಯಲ್ಲಿರುವ ಐವತ್ತು ಅಕ್ಷರಗಳೂ ಈ ಏಳು ಶಕ್ತಿಗಳಲ್ಲಡಗಿವೆ. ಮುಖ್ಯವಾಗಿ ನಮ್ಮ ಉಚ್ಚಾರಣೆಯು ಸುಷುಮ್ನೆಯಲ್ಲಿನ ಓಂಕಾರದ ಪ್ರಕಾಶದಿಂದುಂಟಾಗುವುದು. ಆಂತರ್ಯದಲ್ಲಿರುವ ಈ ಓಂಕಾರನಾದಸ್ಥಿತಿಯನ್ನು ಪಡೆಯುವುದೇ ಪಶ್ಯಂತೀ ಎನಿಸುವುದು. ಓಂಕಾರನಾದಸ್ಥಿತಿಯನ್ನು ಪಡೆಯಬೇಕಾದರೆ ಓಂಕಾರ ವರ್ಣೋಚ್ಚಾರಣೆಯ ಮೂಲಕವೇ ಆಗಬೇಕು ಅಂದರೆ ಓಂಕಾರ ವರ್ಣೋಚ್ಚಾರಣೆಯ ಅಭ್ಯಾಸದಿಂದ ಓಂಕಾರನಾದಕ್ಕೆಂದರೆ ಪಶ್ಯಂತೀಗೆ ಹತ್ತಬೇಕು. ಅನಂತರ ಓಂಕಾರನಾದದಿಂದ ಕಳಾಸ್ಥಿತಿಗೆ ಹತ್ತಬೇಕು. ಪರವೆನಿಸುವ ಕಳೆಯಿಂದ ಗಾಯತ್ರೀಸ್ಥಿತಿಯೆಂದರೆ ಪರಬ್ರಹ್ಮಸ್ಥಿತಿಗೆ ಹತ್ತಬೇಕು. ಈ ಪರಬ್ರಹ್ಮಸ್ಥಿತಿಯನ್ನು ಹೊಂದುವವರೆಗೂ, ಗಾಯತ್ರೀದೇವಿಯು ಕಾಪಾಡುವಳು. ಯಾವ ಅಕ್ಷರಕ್ಕಾಗಲೀ ಅನುಸ್ವಾರವನ್ನು ಸೇರಿಸಿ ಬೆಳೆಸಿದರೆ ಓಂಕಾರವರ್ಣೋಚ್ಚಾರಣೆಯೆನಿಸುವುದು. ಎಲ್ಲಾ ಅಕ್ಷರಕ್ಕೂ ಸೇರಿಸುವುದಕ್ಕೆ ಬದಲಾಗಿ ಓಕಾರಕ್ಕೆ ಅನುಸ್ವಾರವನ್ನು ಸೇರಿಸಿ ನೆತ್ತಿಯವರೆಗೆ ಹೋಗಿ ಭ್ರೂಮಧ್ಯದಲ್ಲಿ ದೃಷ್ಟಿಯಿಟ್ಟು ಧ್ಯಾನಿಸಬೇಕು. ಹೀಗೆ ಓಂಕಾರ ವರ್ಣೋಚ್ಚಾರಣೆಯಿಂದ ಧ್ಯಾನಿಸುವುದು ಅಭಿವೃದ್ಧಿಯಾದರೆ ಓಂಕಾರ ನಾದೋತ್ಪತ್ತಿಯಾಗುವುದು.

ಓಂಕಾರ ವರ್ಣೋಚ್ಚಾರಣೆಯಿಂದ ಧ್ಯಾನಮಾಡುವುದುಕೂಡ ಪರಾ, ಪಶ್ಯಂತೀ, ಮಧ್ಯಮಾ, ವೈಖರಿಗಳಲ್ಲಿನ ಮಧ್ಯಮಕ್ಕೆ ಸೇರಿದುದು. ಹೇಗೆಂದರೆ, ಪಶ್ಯಂತೀಸ್ವರೂಪವೇ ಓಂಕಾರನಾದಸ್ವರೂಪ. ಪಶ್ಯಂತೀಸ್ಥಿತಿಯನ್ನು ಪಡೆಯು

ವುದಕ್ಕೆ ಮುಂಚೆ ಓಂಕಾರವರ್ಣೋಚ್ಚಾರಣಾ ಶಬ್ದವು ಮಧ್ಯದಲ್ಲಿದೆ. ಆದುದರಿಂದ ಮಧ್ಯಮಾ ಎನ್ನುವುದು ಒಳಗಿನ ಓಂಕಾರನಾದಕ್ಕೂ ಹೊರಗಿನ ವೈಖರಿಗೂ ಸಂಬಂಧವಾಗಿ ಹೊರಗೂ ಒಳಗೂ ಎರಡುಕಡೆಯೂ ಇದ್ದು ಹೊರಗಿನ ವೈಖರೀ ನಾದವನ್ನೂ ಒಳಗಿನ ಓಂಕಾರನಾದವನ್ನೂ ಸೇರಿಸುವ ಮಧ್ಯಸ್ಥವಾದ ಸ್ಥಾನದಲ್ಲಿ ರುವುದರಿಂದ ಮಧ್ಯಮಾ ಎಂದು ಹೆಸರುಬಂದಿದೆ.

ಓಂಕಾರ ವರ್ಣೋಚ್ಚಾರಣೆಯಿಂದ ಧ್ಯಾನಮಾಡುವ ಸೋಪಾನವನ್ನು ಅನುಗ್ರಹಿಸಿ ಗಾಯತ್ರೀದೇವಿಯು ಅಧಿಕಾರಿಯನ್ನು ಹೇಗೆ ಕಾಪಾಡುವಳೆಂಬುದನ್ನು ವಿಚಾರಮಾಡೋಣ. ಓಕಾರಕ್ಕೆ ನೊನ್ನೆ ಸೇರಿಸಿ ಬೆಳೆಸಿಕೊಂಡು ಭ್ರೂಮಧ್ಯ ದಲ್ಲಿ ದೃಷ್ಟಿಯಿಟ್ಟು ಧ್ಯಾನಿಸಲು ಅರ್ಹತೆಬರಬೇಕಾದರೆ ಪತಂಜಲಿಗಳ ವಾಕ್ಯ ದೊಡನೆ ವಿವರಿಸಿರುವಂತೆ ಉಸಿರು ನಿಲುಗಡೆಗೆಬರುವ ಪ್ರಾಣಾಯಾಮದ ಅನು ಷ್ಠಾನದಲ್ಲಿ ಪರಿಪಕ್ವತೆಗೆ ಬಂದಿರಬೇಕು ಅರ್ಘ್ಯಪ್ರದಾನ, ಅಘಮರ್ಷಣಮಂತ್ರ ಗಳ ತತ್ವದಂತೆ ವಿರಕ್ತತೆ, ಅಜ್ಞಾನ ನಿವೃತ್ತಿಯಾಗುವ ಕಾತುರತೆ, ಮಾರ್ಜನಾ ಮಂತ್ರಗಳ ತತ್ವದಂತೆ ಪವಿತ್ರತೆ, ಆಹಾರವ್ಯವಹಾರನಿಯಮ, ನ್ಯಾಸದ ತತ್ವದಂತೆ ದೇಹ ನಾನಲ್ಲವೆಂಬ ಜ್ಞಾನ, ದಿಗ್ಬಂಧಃ ಎಂಬುದರ ತತ್ವವಾದ ಪರಾಭಕ್ತಿಯಿಂದ ಗಾಯತ್ರೀದೇವಿಯ ಭಾವವನ್ನು ಸ್ಥಿರವಾಗಿ ಧರಿಸಿಕೊಳ್ಳುವ ಮನಸ್ಥೈರ್ಯ, ಮುಂತಾದ ಯೋಗ್ಯತೆಗಳು ಅಧಿಕಾರಿಯಲ್ಲಿ ಇದ್ದರೇನೇ ಓಂಕಾರವರ್ಣೋ ಚ್ಚಾರಣೆಯ ಅನುಷ್ಠಾನಕ್ಕೆ ಅರ್ಹತೆಯೂ ಮುಂದಿನ ಸೋಪಾನವನ್ನು ಹತ್ತುವ ಯೋಗ್ಯತೆಯೂ ಬರುವುದು. ಆದುದರಿಂದ ಮುಂದೆಬರೆಯುವ ವಿಚಾರಗಳಲ್ಲಿ ಅನಧಿಕಾರಿಗಳು ಪ್ರವೇಶಿಸಲಾರರು ಪ್ರತಿಯೊಬ್ಬ ದ್ವಿಜನೂ ಈ ಅಧಿಕಾರವನ್ನು ಕ್ರಮೇಣ ಪಡೆಯಬೇಕೆಂಬ ತಾತ್ಪರ್ಯದಿಂದಲೇ ಮಹರ್ಷಿಗಳು ಮಂತ್ರಗಳನ್ನು ಆಯಾಯ ಸ್ಥಳಗಳಲ್ಲಿಟ್ಟಿರುವರು.

ಓಕಾರಕ್ಕೆ ಅನುಸ್ವಾರವನ್ನು ಸೇರಿಸಿ ನೆತ್ತಿಯವರೆಗೆ ಬೆಳೆಸಿ ಭ್ರೂಮಧ್ಯ ದಲ್ಲಿ ದೃಷ್ಟಿಯಿಟ್ಟು ಧ್ಯಾನಿಸಿದರೆ ಅಂತರ್ಮುಖದಲ್ಲಿ ತೇಜಸ್ಸು ಕಾಣುವುದು. ಈ ತೇಜಸ್ಸನ್ನು ಚೆನ್ನಾಗಿ ಧರಿಸಿದರೆ ಕ್ರಮೇಣ ಪ್ರಾತಃಕಾಲದ ಸೂರ್ಯಬಿಂಬದಂತೆ ದುಂಡಾದ ತೇಜಸ್ವರೂಪವಾಗಿ ನಿಲ್ಲುತ್ತದೆ. ಇದಕ್ಕೆ ಬಿಂದು, ನಾದ, ಕಳೆಗಳಲ್ಲಿನ ಬಿಂದುವೆಂದುಹೆಸರು. ಥಳಥಳಾಯಮಾನವಾದ ವಜ್ರದ ಹರಳಿನೋಪಾದಿಯಲ್ಲಿ ರುವ ತೇಜಃಕಿರಣಗಳಿಂದ ಸೇರಿದ ಈ ಬಿಂದುವೇ ಸೂರ್ಯನು. ಇದರ ಶಕ್ತಿಯೇ ಸಾವಿತ್ರೀ; ಗಾಯತ್ರಿಯ ಅವತಾರವಾದ ಸಾವಿತ್ರೀಯೆನಿಸಿಕೊಂಡಿರುವ ದೇವತೆಯು. ಇಂತಹ ತೇಜೋಬಿಂದುವನ್ನು ಅದೇ ನಾನೆಂದು ಧರಿಸಿ ಧ್ಯಾನ ಮಾಡಬೇಕು. ಈರೀತಿ ಮಾಡದಿದ್ದರೆ ಧ್ಯಾನನಿಲ್ಲದೆ ಬಹಿರ್ಮುಖವಾಗಲೇಬೇಕು.

ಕಾರಣವೇನೆಂದರೆ, ಅಜ್ಞಾನ ಶಕ್ತಿಗಳು ಬಿಂದುಧಾರಣೆಯನ್ನು ನಿಲುಗಡೆಗೆ ತರುವುದಿಲ್ಲವಾದುದರಿಂದ ಧ್ಯಾನವು ನಿಲ್ಲುವುದಿಲ್ಲ. "ಜ್ಞಾನಾನ್ಮೋಕ್ಷಃ" ಎಂಬುದರ ತತ್ವವು ನಿಶ್ಚಯವಾಗಿಯೂ ಇಲ್ಲಿಂದ ಪ್ರಾರಂಭವಾಗುವುದು. ಯಾವಾಗ ದೇಹ ನಾನಲ್ಲವೆಂಬ ಜ್ಞಾನಬಂತೋ ಆಗ ನಾನೆಂಬ ಜ್ಞಾನ ಮತ್ತೊಂದರಲ್ಲಿ ಇದ್ದೇ ಇರಬೇಕು. ಆದುದರಿಂದ ಬಿಂದುವೇ ನಾನೆಂಬ ತಾದಾತ್ಮ್ಯಜ್ಞಾನದಿಂದ ಧ್ಯಾನಿಸುತ್ತಾಬಂದರೆ ಗಾಯತ್ರೀದೇವಿಯು ಅಜ್ಞಾನದ ಅನೇಕಶಕ್ತಿಗಳನ್ನು ನಿರ್ವೀರ್ಯಮಾಡಿ ಉದಯಿಸಿದ ಸೂರ್ಯನು ತೇಜಸ್ವಿಯಾಗುವಂತೆ ಅಧಿಕಾರಿಯ ಅಂತರ್ಮುಖದಲ್ಲಿ ಜ್ವಲಿಸುವ ತೇಜಸ್ಸನ್ನೂ ಓಂಕಾರನಾದವನ್ನೂ ಉಂಟುಮಾಡಿ ಕಾಪಾಡುವಳು. ನಾವು ಓಂ ಎಂದು ಕೊಂಚ ಉಚ್ಚರಿಸಿದ ಮಾತ್ರದಿಂದ ಓಂಕಾರವರ್ಣೋಚ್ಚಾರಣೆಯಾಗಲಾರದು. ಓಕಾರಕ್ಕೆ ಸೇರಿದ ಅನುಸ್ವಾರವು ತೇಜೋಬಿಂದುವಾಗಿ ನಿಂತರೇನೇ ಓಂಕಾರೋಚ್ಚಾರಣೆಯೆನಿಸುವುದು. ಈತತ್ವಕ್ಕೆ ಶ್ರೀ ಶಂಕರಾಚಾರ್ಯರವರು : —

ಓಂಕಾರಂಬಿಂದುಸಂಯುಕ್ತಂ ನಿತ್ಯಂ ಧ್ಯಾಯಂತಿ ಯೋಗಿನಃ ।
ಕಾಮದಂ ಮೋಕ್ಷದಂ ತಸ್ಮಾದೋಂಕಾರಾಯ ನಮೋನಮಃ ॥

ಬಿಂದುಸಹಿತವಾದ ಓಂಕಾರವನ್ನು ಬ್ರಹ್ಮವಿದ್ಯಾಧಿಕಾರಿಯು ಅನವರತವೂ ಧ್ಯಾನಮಾಡಲಿ. ಸಕಲೇಷ್ಟವನ್ನೂ ಮೋಕ್ಷವನ್ನೂ ಕೊಡುವುದಾದುದರಿಂದ ಓಂಕಾರ ಸ್ವರೂಪಕ್ಕೆ ನಮಸ್ಕಾರ, ಎಂದು ಹೇಳಿರುವರು. ಆದುದರಿಂದ ಬಿಂದುಸಹಿತವಾದ ಓಂಕಾರೋಪಾಸನೆಯನ್ನು ಪವಿತ್ರತೆಯಿಂದಲೂ, ಭಕ್ತಿಯಿಂದಲೂ ಧ್ಯಾನಮಾಡುತ್ತಾ ಬಂದರೆ ಗಾಯತ್ರೀದೇವಿಯು ಅನುಗ್ರಹಿಸುವಳೆಂಬುದನ್ನು ಮೇಲಿನ ಶ್ರೀ ಶಂಕರಾಚಾರ್ಯರವರ ವಾಕ್ಯವು ದೃಢಪಡಿಸುವುದು ಈ ಬಿಂದುವಿನಲ್ಲೇ ಸಕಲ ದೇವತಾಶಕ್ತಿಗಳಿರುವುವು. ಈ ಬಿಂದುಸ್ವರೂಪದ ತತ್ವವೇ ಸಾಲಿಗ್ರಾಮ. ಬಿಂದುಸ್ವರೂಪವೇ ಲಿಂಗ. ಬಿಂದುವೆಂದರೆ ಆದ್ಯಂತರಹಿತವಾದ ಚುಕ್ಕಿ. ಬ್ರಹ್ಮಾಂಡವೂ ಬಿಂದುಸ್ವರೂಪ. ಇದೇ ಹಿರಣ್ಯಗರ್ಭ. ಅಣುವಿಗಿಂತ ಅಣುವಾಗಿರುವ ಸ್ವರೂಪವೂ ಬಿಂದುವೆನಿಸುವುದು. ಓಂಕಾರನಾದೋತ್ಪತ್ತಿಯಾಗುವವರೆಗೆ ಬಿಂದುಸಹಿತವಾದ ಓಂಕಾರೋಪಾಸನೆ ಮಾಡಬೇಕು. ಇದೇ ಪರಾ, ಪಶ್ಯಂತೀ, ಮಧ್ಯಮಾ ವೈಖರಿಗಳಲ್ಲಿ ಮಧ್ಯಮದ ತತ್ವವಾಗಿರುವುದು.

[ಈ ವಿಚಾರವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಸೇತುಬಂಧನದಾರಭ್ಯ ಇಂದ್ರನ ರಥಾರೋಹಣದವರೆಗಿನ ಕಥೆಯ ತತ್ವಗಳಾಗಿವೆ.]

ಪಶ್ಯಂತೀ ಸ್ಥಿತಿಯಾವುದೆಂದರೆ, ಬಿಂದುಸಹಿತವಾದ ಓಂಕಾರೋಪಾಸನೆಯ ಅಭ್ಯಾಸವು ಅಭಿವೃದ್ಧಿಯಾದರೆ ಓಂಕಾರನಾದೋತ್ಪತ್ತಿಯಾಗುವುದು. ಹೀಗೆ ಉದಯಿಸಿದ ಓಂಕಾರನಾದವು ಪ್ರಥಮದಲ್ಲಿ ಸ್ಥೂಲಶಬ್ದಸ್ಥಿತಿಯುಲ್ಲಿದ್ದು ಅನಂತರ

ಹೃದಯಂಗಮವಾದ ಕಿಂಕಿಣಿ, ವೇಣು, ವೀಣಾ ನಾದಗಳಂತಾಗುವುದು. ಈ ನಾದವೇ ನಾನೆಂದು ಧರಿಸಿ ಧ್ಯಾನಿಸುತ್ತಾ ಬರುವುದೇ 'ಸರಸ್ವತೀಮಾವಾಹಯಾಮಿ' ಎಂಬ ಮಂತ್ರದ ತತ್ತ್ವವಾಗಿರುವುದು. ಈ ಓಂಕಾರನಾದಶಕ್ತಿಯೇ ಗಾಯತ್ರಿಯ ಅವತಾರವಾದ ಸರಸ್ವತೀದೇವಿಯಾಗಿರುವಳು. ಈ ದೇವಿಯು ಅಜ್ಞಾನಶಕ್ತಿಯನ್ನು ನಿರ್ವೀರ್ಯಮಾಡಿ ಆತ್ಮಲಾಭವನ್ನು ಉಂಟುಮಾಡಿಸುವುದೇ ಗಾನಮಾಡುವವರನ್ನು ಗಾಯತ್ರೀದೇವಿಯು ಕಾಪಾಡುವುದಾಗಿದೆ ಗಾಯತ್ರೀದೇವಿಗೆ ಪ್ರಿಯವಾಗಿರುವುದೇ ಈ ಓಂಕಾರಗಾನ. ಓಂಕಾರ ನಾದಾನುಸಂಧಾನದಿಂದ ಅಧಿಕಾರಿಯ ಹೃದಯದಲ್ಲಿ ಉದ್ಭವಿಸುವ ಆನಂದವನ್ನು ಈ ವಿಧವಾದುದೆಂದು ವರ್ಣಿಸಲು ಯಾರಿಗೂ ಸಾಧ್ಯವಿಲ್ಲವೆಂದು ಶ್ರುತಿಯು ತಿಳಿಸುತ್ತದೆ ಅಲ್ಲದೆ ನಮ್ಮ ಜ್ಞಾನವನ್ನು ಬಹಿರ್ಮುಖ ವಾಗಲು ಬಿಡದೆ ಕಟ್ಟುತ್ತಾ ಜಿಂಕೆಯು ನಾದವನ್ನು ಆಲೈಸಿ ಕೇಳುತ್ತಾ ಪ್ರಾಣ ಬಿಡುವಂತೆ ನಮ್ಮ ಬುದ್ಧಿಯನ್ನು ನಾದದಿಂದ ಕಟ್ಟಿಹಾಕಿ ಪರಬ್ರಹ್ಮನಲ್ಲಿ ಲೀನ ಮಾಡಿಸುವುದು. ಇದೇ ತಾತ್ಪರ್ಯಕ್ಕೆ ಶ್ರೀ ಶಂಕರಾಚಾರ್ಯರವರು

ಬದ್ಧಂ ವಿಮುಕ್ತ ಚಾಂಚಲ್ಯಂ ನಾದಗನ್ಧಕ ಚಾರಣಾತ್ ।
ಮನಃ ಪಾರದಮಾಪ್ನೋತಿ ನಿರಾಲಂಬಾಖ್ಯ ಖೇಟನಮ್ ॥

ತಾ ॥ ಚಂಚಲವಾದ ಪಾದರಸವು ಹೇಗೆ ಗಂಧಕದಿಂದ ಕಟ್ಟಲ್ಪಡುವುದೋ ಹಾಗೆ ಓಂಕಾರನಾದಾನುಸಂಧಾನವು ಚಂಚಲವಾದ ಮನಸ್ಸನ್ನು ಕಟ್ಟಿಹಾಕಿ ನಿರಾಲಂಬ ವೆಂದರೆ ಪರಬ್ರಹ್ಮನಲ್ಲಿ ಲೀನವಾಗುವಂತೆ ಮಾಡುವುದು ಎಂದು ಹೇಳಿರುವರು. ಮೇಲೆ ತಿಳಿಸಿದ ಓಂಕಾರನಾದಬ್ರಹ್ಮಶಕ್ತಿಯೇ ಸಾಕ್ಷಾತ್ ಸರಸ್ವತೀದೇವಿ ಯೆಂಬುದಕ್ಕೆ ಶ್ರುತಿಯಲ್ಲಿ:—

ಅಕ್ಷರಂ ಪರಮೋನಾದಃ ಶಬ್ದಬ್ರಹ್ಮೇತಿ ಕಥ್ಯತೇ ।
ಮೂಲಾಧಾರ ಗತಾಶಕ್ತಿಃ ಸ್ವಾಧಾರಾ ಬಿಂದುರೂಪಿಣೀ ॥
ತಸ್ಯಾಮುತ್ಪದ್ಯತೇ ನಾದ ಸೂಕ್ಷ್ಮಬೀಜಾ ದಿವಾಂಕುರಃ ।
ಏಷಾ ಸರಸ್ವತೀದೇವೀ ಸರ್ವಭೂತ ಗುಹಾಶ್ರಯಾ ॥
ಉಚ್ಚಾರಯೇ ತ್ಪರಾಶಕ್ತಿಂ ಬ್ರಹ್ಮರಂಧ್ರ ನಿವಾಸಿನೀಂ ॥

ತಾ॥ ವರ್ಣಗಳ( ಅಕ್ಷರಗಳ )ಉಚ್ಚಾರಣೆಯ ಸರ್ವೋತ್ಕೃಷ್ಟವಾದ ನಾದವೇ ಶಬ್ದಬ್ರಹ್ಮವೆಂದು ಹೇಳಲ್ಪಡುವುದು. ಮೂಲಾಧಾರಪೀಠವನ್ನು ಹೊಂದಿದ ಪರಾಶಕ್ತಿಯು (ಕುಂಡಲಿನೀ ಅಥವಾ ಸಂಧ್ಯಾದೇವಿಯು) ತನಗೆ ಆಧಾರವಾಗಿರುವ ಬಿಂದುರೂಪವಾಗಿಯೂ ಇರುವಳು. ಬೀಜದಲ್ಲಿ ಅಂಕುರವು ಸೂಕ್ಷ್ಮರೂಪದಲ್ಲಿರು ವಂತೆ ಅವಳಲ್ಲಿ ಓಂಕಾರವರ್ಣೋಚ್ಚಾರಣೆಗೆ ಕಾರಣವಾದ ಓಂಕಾರನಾದೋತ್ಪತ್ತಿ ಯಾಗುವುದು. ಈ ಓಂಕಾರನಾದಸ್ವರೂಪಳಾದ ಶಕ್ತಿಯೇ ಸಮಸ್ತಪ್ರಾಣಿಗಳ ಅಂತರಾಳವೆಂದರೆ ಬ್ರಹ್ಮರಂಧ್ರನಾಡಿಯಲ್ಲಿರುವ ಸರಸ್ವತೀದೇವಿಯು. ಬ್ರಹ್ಮ

ರಂಧ್ರನಿವಾಸಿನಿಯಾಗಿರತಕ್ಕ ಪರಾಶಕ್ತಿಸ್ವರೂಪಳಾದ ಈ ಶಕ್ತಿಯನ್ನು ಉಚ್ಚರಿಸೆಂದರೆ "ನಾದಾನುಸಂಧಾನಮಾಡು" ಎಂದು ಹೇಳಿದೆ. ಈ ನಾದಾನುಸಂಧಾನಮಾಡುವ ಸೋಪಾನವೇ ಪಶ್ಯಂತೀಸೋಪಾನವಾಗಿರುವುದು. ಗಾಯತ್ರೀ ದೇವಿಯನ್ನು ಯಾರು ಅಂತಃಕರಣ ಶುದ್ಧಿಯಿಂದ ಉಪಾಸಿಸುವರೋ ಅವರನ್ನು ಮಹತ್ತಾದ ಈ ಓಂಕಾರ ನಾದಾನಂದಕ್ಕೆ ಭಾಗಿಗಳಾಗುವಂತೆ ಮಾಡಿ ಕಾಪಾಡುತ್ತಾಳೆ.

[ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಇಂದ್ರನ ರಥಾರೋಹಣದಾರಭ್ಯ ಮಾತಲಿಯು ಶ್ರೀರಾಮನಿಗೆ ಅರಿಕೆಮಾಡಿದ ವರೆಗಿನ ಕಥೆಯ ತತ್ವಗಳಲ್ಲಿ ಈ ವಿಚಾರವು ಬಂದಿರುವುದು.]

ಪರಾ, ಪಶ್ಯಂತೀ, ಮಧ್ಯಮಾ, ವೈಖರಿಗಳಲ್ಲಿ ಉಳಿದಿರುವ ಪರಾಸ್ಥಿತಿಯೇನೆಂದರೆ –"ಅರ್ಧಮಾತ್ರಾ ಪರಾಜ್ಞೇಯಾ ತತ ಊರ್ಧ್ವಂ ಪರಾತ್ಪರಂ, ನಾದೋಯಾವನ್ಮನಸ್ತಾವ ನ್ನಾದಾನ್ತೇತು ಮನೋನ್ಮನೀ ||" ಎಂಬ ಶ್ರುತಿವಚನಗಳಂತೆ ಅರ್ಧಮಾತ್ರಾಸ್ವರೂಪವಾದುದೇ ಪರಾಯೆಂದು ಕರೆಯಲ್ಪಡುವುದು. ಅರ್ಧಮಾತ್ರೆಯೆಂದರೆ, ಘಂಟೆಬಾರಿಸಿದಾಗ "ಮ್" ಎಂಬದಾಗಿ ಕೊನೆಯಲ್ಲಿ ಒಂದು ವಿಧವಾದ ಸೂಕ್ಷ್ಮಶಬ್ದಕೇಳುವುದಷ್ಟೆ! ನಮಗೆ ಕಿವಿಗೂ ಕೇಳಿಸದಂತೆ ಇನ್ನೂ ಬಹು ಸೂಕ್ಷ್ಮವಾಗಿ "ಮ್" ಎಂಬುದರ ಶಬ್ದವಿರುವುದು. ಹೆಚ್ಚುಕಡಿಮೆ ನಿಶ್ಶಬ್ದದ ಸ್ಥಿತಿಗೆ ಬರುವುದು. ಇಂತಹ ಶಕ್ತಿಸ್ಥಿತಿಗ ಪರಾ ಅಥವಾ ಕಳಾ ಎಂದು ಹೆಸರು. ಅಧಿಕಾರಿಯು ನಾದಾನುಸಂಧಾನಮಾಡುತ್ತ ಮಾಡುತ್ತ ನಾದವು ಬಹು ಸೂಕ್ಷ್ಮಸ್ಥಿತಿಗೆ ಬಂದು ತೇಜಸ್ಸು ತಗ್ಗುವುದು. ಮುಂದಕ್ಕೆ ಧ್ಯಾನಿಸಲು ಬುದ್ಧಿಗೆ ಧ್ಯೇಯವಾದ ವಸ್ತುವೇ ಸಿಕ್ಕುವುದಿಲ್ಲ. ಮುಂದಿನ ಸೋಪಾನವಾದ ಪರಾ (ಕಳಾ) ಸ್ಥಿತಿಯನ್ನು ಹೇಗೆ ಹೊಂದಬೇಕೆಂದರೆ- ಕಳಾ ಮತ್ತು ಪರಬ್ರಹ್ಮಸ್ಥಿತಿಗಳೆರಡೂ ಧಾರಣೆಗೆ ದೊರಕುವದಿಲ್ಲವಾದುದರಿಂದ ನಾದವು ಸೂಕ್ಷ್ಮವಾಗುವ ಕಾಲದಲ್ಲಿ ಆ ಪರಬ್ರಹ್ಮವೇ ನಾನೆಂದು ಅಥವಾ ಪರಾಶಕ್ತಿಯಾದ ಗಾಯತ್ರೀದೇವಿಯೇ ನಾನೆಂದು ಧ್ಯಾನದಲ್ಲಿ ಮುಳುಗಲೇ ಬೇಕು. ಮತ್ತಾವ ದಾರಿಯೂ ಇರುವುದಿಲ್ಲ. ಈ ತತ್ವವೇ "ಗಾಯತ್ರೀ ಮಾವಾಹಯಾಮಿ" ಎನ್ನುವುದರ ತತ್ವವಾಗಿರುವುದು. "ಗಾಯತ್ರೀಮಾವಾಹಯಾಮಿ" ಎನ್ನುವುದರ ತತ್ವವೇ ಅಹಂ ಬ್ರಹ್ಮಾಸ್ಮಿ, ಅಚ್ಯುತೋಹಂ, ನಾರಾಯಣೋಹಂ, ಶಿವೋಹಂ, ಎಂಬಿವುಗಳ ಸ್ವರೂಪವು. ಪರಮಾತ್ಮನು ಇಂದ್ರಿಯಾತೀತನೆಂಬುದು ತಿಳಿದ ವಿಚಾರವೇ ಆಗಿದೆ. ಇಂದ್ರಿಯಗೋಚರವಾದ ವಸ್ತುವೇ ಪರಮಾತ್ಮನೆಂದು ತಿಳಿದುಕೊಳ್ಳುವುದಾದರೆ ಅಂತರ್ಮುಖದ ದಾರಿಯಾದ ಧ್ಯಾನಕ್ಕೆ ಪ್ರವೇಶಿಸದೆ ಬಹಿರ್ವ್ಯಾಪಾರದಲ್ಲಿಯೇ ಸುಖವಾಗಿರಬಹುದು. ಇಂದ್ರಿಯಾತೀತ ವಸ್ತುವನ್ನು ಸೇರಿ ಜನನ ಮರಣ ಪ್ರವಾಹ ರೂಪವಾದ ಭವಬಂಧನದಿಂದ ಬಿಡಿಸಿಕೊಳ್ಳಲು ಯಾರಿಗೆ ತೀವ್ರತಮವಾದ ಇಚ್ಛೆ

ಇರುವುದೋ ಅವರು ಬಾಹ್ಯದಲ್ಲಿ ಆಚರಿಸಬೇಕಾದ ಸದ್ಧರ್ಮ ಸತ್ಕರ್ಮಾಚರಣೆಗಳಲ್ಲಿದ್ದುಕೊಂಡು ಧ್ಯಾನಮಾಡುತ್ತಾ ಅಂತರ್ಮುಖದಲ್ಲಿ ತೇಜಸ್ಸು ನಾದಗಳು ಅಗೋಚರವಾಗುವ ಕಾಲದಲ್ಲಿ ಅಹಂಬ್ರಹ್ಮಾಸ್ಮಿ ಅಥವಾ ನಾರಾಯಣೋಹಂ ಎಂಬ ಉತ್ಕಟವಾದ ಬಯಕೆಯಿಂದ ಸಮಾಧಿಯಲ್ಲಿ ಮುಳುಗಿದರೆ ವಿಷ್ಣುಸಾಯುಜ್ಯಪದವಿಯು ದೊರಕುವುದು ದ್ವೈತಾದ್ವೈತಗಳ ಸಂಧಿಸ್ಥಳವೇ ಇದು. ಅದ್ವೈತಸ್ಥಿತಿಯ ಬೀಗದಕೈ ಇರುವುದೇ ಈ ಸೋಪಾನದಲ್ಲಿ. ಬೀಗದ ಕೈಯಿಂದ ಬೀಗ ತೆಗೆಯುವಂತೆ ಪೂರ್ಣತತ್ವವಾದ ಅದ್ವೈತಸ್ಥಿತಿಯನ್ನು ಹೊಂದುವುದಕ್ಕೆ "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನದಿಂದ ಧ್ಯಾನದಲ್ಲಿ ಮುಳುಗಬೇಕಾದುದೇ ಈ ಸೋಪಾನದಿಂದ ತಾನು ಧ್ಯಾನಿಸುತ್ತಿದೇನೆಂಬುದನ್ನೂ ಮರೆತು ತನ್ನನ್ನೂ ಮರೆಯುವ ಸ್ಥಿತಿಯುಂಟಾಗುವುದೇ ಈ ಸೋಪಾನದಿಂದ. ತತ್ವಮಸಿ, ಅಹಂಬ್ರಹ್ಮಾಸ್ಮಿ ಮುಂತಾದ ವಾಕ್ಯಗಳ ಉಪದೇಶದಿಂದ ಗುರುಮುಖೇನ ತಿಳಿಯುವುದರ ಸಾರ್ಥಕತೆಯು ಈ ಸೋಪಾನದಲ್ಲಿ ಉಂಟಾಗುವುದು. ಆದುದರಿಂದ "ಗಾಯತ್ರೀಮಾವಾಹಯಾಮಿ" ಎಂಬ ಮಂತ್ರದ ತತ್ವವಾದ ನಾನೇ ಚಿದ್ರೂಪವಸ್ತುವೆಂಬ ಜ್ಞಾನದಿಂದ ತನ್ನನ್ನು ತಾನು ಮರೆಯುವಂತೆ ಧ್ಯಾನದಲ್ಲಿ ಮುಳುಗಿದರೇನೇ ಗಾಯತ್ರೀದೇವಿಯು ತನ್ನ ಪದವಿಯನ್ನು ಅನುಗ್ರಹಿಸುವಳೆಂದರೆ ಸರ್ವವ್ಯಾಪಕವಾದ ಪರಬ್ರಹ್ಮಸಾಕ್ಷಾತ್ಕಾರವೇ ಅಧಿಕಾರಿಗೆ ಲಭ್ಯವಾಗುವುದು.

ಈ ಮೇಲಿನ ಸ್ಥಿತಿಯನ್ನು ಪಡೆಯುವುದೇ ಪರಮಪುರುಷಾರ್ಥ. ಓಂ ಇತ್ಯೇಕಾಕ್ಷರಂಬ್ರಹ್ಮ, ಪ್ರಾಣಾಯಾಮ, ಗಾಯತ್ರೀಮಾವಾಹಯಾಮಿ ಎಂಬ ಮಂತ್ರಗಳ ತತ್ವವೂ ಈ ಸ್ಥಿತಿಯನ್ನೇ ಪ್ರತಿಪಾದಿಸುವುದು. ಗಾಯತ್ರೀಮೂಲಮಂತ್ರದ ಅರ್ಥವನ್ನು ಶಿವ, ವಿಷ್ಣು, ದೇವೀ, ಪರಬ್ರಹ್ಮ, ಪರಗಳಾಗಿ ಹೇಗೆ ಹೇಗೆ ವ್ಯಾಖ್ಯಾನಮಾಡಿದರೂ 'ಧೀಮಹಿ' ಎಂಬ ಪದವೇ ಕ್ರಿಯಾಪದವಾಗಿ ಧ್ಯಾನಮಾಡುತ್ತೇವೆಂಬುದನ್ನು ಎಲ್ಲರೂ ಒಪ್ಪಿಕೊಳ್ಳಲೇಬೇಕು. ಅಂದರೆ ಧ್ಯಾನದಿಂದಲೇ ಕಾರ್ಯಪ್ರಾರಂಭವೆಂಬತತ್ವ. ಈ ಮಂತ್ರದ ಆದಿಯಿಂದ ಇದುವರೆಗೂ ತಿಳಿಸಿರುವುದು ಧ್ಯಾನಾಭ್ಯಾಸದ ವಿವರವೇ ಆಗಿದೆ. ಯಾವ ಯಾವ ದೇವತಾ ಪರವಾಗಿ ಅರ್ಥಮಾಡಿದರೂ ಧ್ಯಾನದ ಅಂತ್ಯಸೋಪಾನವಾದ ಆತ್ಮಸಾಕ್ಷಾತ್ಕಾರದ ಈ ಸೋಪಾನದಲ್ಲಿ ಎಲ್ಲಾದೇವರೂ ಏಕೀಭವಿಸಿದ ಸ್ಥಿತಿಯಾಗಿರುವುದು. ಅಂದರೆ ಚಿದ್ವಸ್ತು ಒಂದಲ್ಲದೆ ಎರಡಲ್ಲ ಆ ಚಿದ್ವಸ್ತುವಿನ ಸ್ಥಿತಿಯೇ ಇದು. ಈ ಚಿದ್ವಸ್ತುವನ್ನು ಹೊರಗೆ ಜನಗಳು ನಾನಾ ನಾಮರೂಪಗಳಿಂದ ಆರಾಧಿಸಿದರೂ ಧ್ಯಾನದಲ್ಲಿ ಬಿಂದು, ನಾದ, ಕಳಾಸ್ಥಿತಿಗಳ ದಾರಿಯಲ್ಲಿಯೇ ಹೋಗಿ ಅಂತ್ಯದಲ್ಲಿ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಬೇಕು. ಈ ಚಿದ್ವಸ್ತುಸ್ಥಿತಿಯನ್ನೇ ಸೂರ್ಯ, ವಿಷ್ಣು, ನಾರಾಯಣ, ಪರಶಿವ, ಪರಬ್ರಹ್ಮ, ಗಾಯತ್ರೀ ಪದವಿಗಳೆಂದಾದರೂ ಕರೆಯ

ಬಹುದು. ಆದರೆ ದ್ವಿಜರಿಗೆ ಗಾಯತ್ರೀದೇವಿಯೇ ಮುಖ್ಯವೆಂದು ಶಾಸ್ತ್ರವು ವಿಧಿಸಿದೆ. ಆ ಲೋಕಮಾತೆಯನ್ನೇ ಉಪಾಸಿಸಿ ಚಿದ್ವಸ್ತುಸೋಪಾನವನ್ನು ಹೊಂದಬೇಕು. ಈ ಚಿದ್ವಸ್ತು ಸ್ಥಿತಿಯನ್ನು ಪಡೆದರೆ ಮುಂದಕ್ಕೆ ಮಾಡಬೇಕಾದ ಕಾರ್ಯವಾವುದೂ ಇಲ್ಲ. ಬಾಹ್ಯದಲ್ಲಿ ಆಚರಿಸುವ ಭಕ್ತಿ ಜ್ಞಾನ ಕರ್ಮಗಳೆಲ್ಲಾ ಒಂದಾಗಿ ಕೂಡಿಕೊಂಡೇ ಧ್ಯಾನಕಾರ್ಯ ಪ್ರಾರಂಭವಾಗುವುದು. ಭಕ್ತಿ, ಜ್ಞಾನ, ಕರ್ಮಗಳು ಬೇರೆಬೇರೆ ದಾರಿಯಲ್ಲಿ ಪುರುಷಾರ್ಥವನ್ನು ಉಂಟುಮಾಡುತ್ತವೆಂಬುದು ಅಚಿನ್ತ್ಯ ಮತ್ತು ಅಸಾಧ್ಯ. ಭಕ್ತಿ, ಜ್ಞಾನ, ಕರ್ಮ, ಉಪಾಸನೆಗಳು ಪ್ರತ್ಯೇಕವಾದವುಗಳೆಂದು ತೋರಿದರೂ ಸ್ವರೂಪತಃ ಒಂದಕ್ಕೊಂದು ಸಹಕಾರಿಯಾಗಿ ಧ್ಯಾನದಲ್ಲಿ ಕೂಡಿಕೊಂಡು ಪರಿಣಾಮದಲ್ಲಿ ಜ್ಞಾನಸ್ವರೂಪದಲ್ಲಿಯೇ ಲಯವಾಗುವುವು.

ಧ್ಯಾನವೆಂದರೆ ಯೋಗವೆಂದಾಗುವುದು. ಯೋಗವೇ, ಇಲ್ಲದೆ ಪರಮ ಪುರುಷಾರ್ಥ ದೊರಕುವುದೆಂದು ತಿಳಿದಿರುವವರು ಸಣ್ಣ ಭಾವಿಯಲ್ಲಿರುವ ಕಪ್ಪೆಯು ಇದಕ್ಕಿಂತ ದೊಡ್ಡ ಸಮುದ್ರವೇ ಇಲ್ಲವೆಂದು ತೃಪ್ತಿಪಡುವ ಸ್ಥಿತಿಯಲ್ಲಿರುತ್ತಾರೆ. ಶಬ್ದಗಳನ್ನು ಬೇಕಾದಂತೆ ತಿರುಗಿಸಿ ಭೂಮಂಡಲ ತುಂಬುವಷ್ಟು ಸಿದ್ಧಾಂತ ಗ್ರಂಥಗಳನ್ನು ಬರೆದರೂ ಅನುಭವಸಿದ್ಧವಾದ ಒಂದು ವಾಕ್ಯದೊಡನೆ ಸಮತೂಗಲಾರದು. ಅಂತರ್ಮುಖದಲ್ಲಿ ಗೋಚರವಾಗುವ ತೇಜಸ್ಸು ನಾದಗಳೇ ತಾನೆಂದು ಧ್ಯಾನಮಾಡುವುದೂ, ನಾದವು ತಗ್ಗುವಕಾಲದಲ್ಲಿ ಅಹಂಬ್ರಹ್ಮಾಸ್ಮಿ ಎಂಬ ಉತ್ಕಟವಾದ ಜ್ಞಾನದಿಂದ ಮುಳುಗಿ "ಧ್ಯಾನವಿಸ್ಮೃತಿಸ್ಸಮಾಧಿಃ" ಎಂಬ ಶ್ರುತಿ ವಾಕ್ಯದಂತೆ ತ್ರಿಪುಟಿರಾಹಿತ್ಯವಾಗುವ ಪರಬ್ರಹ್ಮಸಾಕ್ಷಾತ್ಕಾರದ ಸಮಾಧಿಸ್ಥಿತಿಯನ್ನು ಪಡೆಯುವುದೂ ಅನುಭವಸಂಬಂಧವಾದವು. ಈ ಅನುಭವಕ್ಕೆ ಸರಿಯಾಗಿ ಶಾಸ್ತ್ರಗಳು ತತ್ವಮಸಿ, ಅಹಂಬ್ರಹ್ಮಾಸ್ಮಿ ಮುಂತಾದ ವಾಕ್ಯಗಳನ್ನು ವಿಧಿಸಿರುವುವು. ಬುದ್ಧಿಕುಶಲತೆಯಿಂದ ಶಬ್ದಗಳಿಗೆ ವಿಪರೀತಾರ್ಥಮಾಡಿದ ಮಾತ್ರಕ್ಕೆ ಆ ಅನುಭವದ ಸೋಪಾನಕ್ಕೆ ಎಂದಿಗೂ ಹಾನಿಯಾಗಲಾರದು. ಧ್ಯಾನಮಾಡುವ ವಸ್ತುವೇ ತಾನೆಂದು ಅಭ್ಯಾಸಮಾಡದಿದ್ದರೆ ಯಾವ ಧೀರನೂ ಧ್ಯಾನದಲ್ಲಿ ಮುಂದುವರಿಯಲಾರನು. ಇದು ಶಾಸ್ತ್ರವಚನ ಮತ್ತು ಸ್ವಾನುಭವೈಕವೇದ್ಯವಾದ ವಾಕ್ಯಾಗಿರುವುದು.

ಗಾಯತ್ರೀದೇವಿಯ ಉಪಾಸನೆಯು ಕರ್ಮ ಜ್ಞಾನಗಳೆರಡರ ಮಾರ್ಗಕ್ಕೂ ಅತ್ಯಂತ ಮುಖ್ಯವಾದುದು. ಗಾಯತ್ರಿಯ ಮೂರುಪಾದಗಳುಳ್ಳ ಮಂತ್ರವನ್ನು ಮಾತ್ರ ಜಪಿಸಬೇಕೆಂದು ವೇದವು ವಿಧಿಸಿದೆ. ನಾಲ್ಕನೆಯ ಪಾದದ ಮಂತ್ರವಾದ "ಪರೋರಜಸಿಸಾವದೋಂ" ಎಂಬುದರ ಮುಖ್ಯತತ್ವವು ಈಶ್ವರ ಸೋಪಾನಕ್ಕೆ ಸೇರಿ ಬ್ರಹ್ಮಾಂಡದ ಸೃಷ್ಟಿ ಮತ್ತು ಲಯದ ತತ್ವವಾಗಿ ಅಂತ್ಯದಲ್ಲಿ ಪರಬ್ರಹ್ಮ

ಒಂದೇ ಇರುವ ತತ್ವಪ್ರತಿಪಾದಕವಾಗಿದೆ.

ಗಾಯತ್ರೀ ಜಪಕ್ಕೆ ಮುಂಚೆ ಕೆಲವರು "ಸುಮುಖಂ ಸಂಪುಟಂಚೈವ" ಎಂಬ ಮುದ್ರಾಶ್ಲೋಕವನ್ನು ಹೇಳುತ್ತಾರೆ. ಮುದ್ರೆಯೆಂದರೆ-ಬಂಧಿಸುವುದೆಂದರ್ಥ. ಧನವನ್ನಿಡುವ ಖಜಾನೆ ಅಥವಾ ಕೋಶಕ್ಕೆ ಬೀಗಮುದ್ರೆಯನ್ನು ಹಾಕುವರಷ್ಟೆ! ಇದು ಒಳಗಿರುವ ಧನವನ್ನು ಬಂಧಿಸಲು ಮಾಡಿದ ಕಾರ್ಯವಾಗಿರುವುದು. ಶತ್ರುಗಳನ್ನು ಹೊರಕ್ಕೆ ಹೋಗದಂತೆ ಬಂಧಿಸುವುದಕ್ಕೂ ಮತ್ತು ಯಾವ ವಸ್ತುಗಳನ್ನಾಗಲೀ ನಿರ್ಬಂಧದಲ್ಲಿ ಇಡಿಸುವುದಕ್ಕೂ ಮುದ್ರೆಯೆಂದು ಹೆಸರು. ಅಜ್ಞಾನ ಶಕ್ತಿಗಳು ನಮ್ಮ ಮನಸ್ಸನ್ನು ಸ್ವಾಭಾವಿಕವಾಗಿ ಇಂದ್ರಿಯಗಳ ಮೂಲಕ ವಿಷಯ ಜ್ಞಾನಕ್ಕೆ ಎಳೆಯುತ್ತಿರುವವು. ಧ್ಯಾನಕಾಲದಲ್ಲಿ ನಮ್ಮ ಬುದ್ಧಿ ಮನಸ್ಸುಗಳು ಈ ಅಜ್ಞಾನ ಶಕ್ತಿಗಳನ್ನು ಬಂಧಿಸಿ ನಿಗ್ರಹಿಸಲು ಮತ್ತು ಗಾಯತ್ರೀದೇವತಾ ಭಾವವನ್ನು ಧರಿಸಲು ಅನುಕೂಲಪಡಿಸುವ ಕ್ರಮಗಳ ತತ್ವವೇ ಮುದ್ರೆಗಳೆನಿಸುವವು. ಗಾಯತ್ರಿಯ ಇಪ್ಪತ್ತನಾಲ್ಕು ಮುದ್ರೆಗಳಲ್ಲಿ ಸುಮುಖವೆಂಬುದೇ ಪ್ರಥಮ ಮುದ್ರೆ. ಹಸನ್ಮುಖವಾಗಿರುವುದು ಸುಮುಖ. ಸಂಧ್ಯಾಕರ್ಮ ಮಾಡಬೇಕಾದರೂ, ಧ್ಯಾನದಲ್ಲೂ ಹಸನ್ಮುಖದಿಂದಲೇ ಇರಬೇಕು. ಇದರಿಂದ ರಜಸ್ತಮೋಗುಣಗಳನ್ನು ಕೆಳಕ್ಕೆ ತುಳಿದಂತಾಗುವುದು. ಈ ಮುದ್ರೆಗಳ ತತ್ವಗಳನ್ನು ಕೈಕರಣದಲ್ಲಿ ಮಾಡುವ ಸಂಜ್ಞೆಗಳಿಗೂ ಯೋಗಶಾಸ್ತ್ರದಲ್ಲಿ ಹೇಳಿರುವ ಮುದ್ರೆಗಳ ಅನುಷ್ಠಾನಗಳ ತತ್ವಗಳಿಗೂ ಬಹು ಮುದ್ದಾದ ಸಮನ್ವಯವಿರುವುದು. ಹತ್ತು ಬೆರಳುಗಳನ್ನು ನೀಳವಾಗಿ ಕೈಮುಗಿಯುವಂತೆ ಜೋಡಿಸಿ ಹಿಡಿಯುವುದು ಸುಮುಖವು. ಈ ವಿಧವಾಗಿ ಮಾಡುವುದು ಹಸನ್ಮುಖವನ್ನುಂಟುಮಾಡುವುದು. ಮುಗಿದ ಕೈಯ್ಯನ್ನು ಹಿಂದಕ್ಕೆ ಕುಗ್ಗಿಸಿ ಎರಡು ಕರಗಳ ನಡುವೆ ಸ್ವಲ್ಪ ಟೊಳ್ಳು ಬೀಳುವಂತೆ ಮುಷ್ಟಿಯನ್ನುಹಿಡಿಯುವುದೇ ಸಂಪುಟ. ಮುಷ್ಟಿಯನ್ನು ಟೊಳ್ಳಾಗಿ ಹಿಡಿದರೆ ಮಧ್ಯದಲ್ಲಿ ಟೊಳ್ಳಾಗದೆ ಎರಡು ಕರಗಳನಡುವೆ ಎರಡು ಟೊಳ್ಳಾಗುವುದು. ಈ ಎರಡು ಟೊಳ್ಳು ಮುಚ್ಚಿ ಮಧ್ಯದಲ್ಲಿ ಟೊಳ್ಳಾಗುವಂತೆ ಮುಷ್ಟಿ ಇರಬೇಕು. ಇದು ಕೈಕರಣದಲ್ಲಿ ಮಾಡುವುದಾಗಿರುವುದು. ಇದು ಯೋಗಶಾಸ್ತ್ರದಲ್ಲಿ ಮೂಲ ಬಂಧದ ಮುದ್ರೆಯಾಗಿರುವುದು. ಮೂಲಬಂಧದ ಮುದ್ರೆಯು ಸೂರ್ಯ, ಚಂದ್ರ ನಾಡಿಗಳೆರಡನ್ನೂ ಬಂಧಿಸಿ ಮಧ್ಯನಾಡಿಯಾದ ಬ್ರಹ್ಮರಂಧ್ರ (ಸುಷುಮ್ನಾ) ನಾಡಿಯನ್ನು ತೆಗೆಯಿಸಿ ಧ್ಯಾನಮಾಡಲು ಸಹಾಯವಾಗಿರುವುದು. ಕರಗಳೆರಡರಲ್ಲಿಯೂ ಟೊಳ್ಳುಬೀಳದೆ ಮಧ್ಯದಲ್ಲಿ ಟೊಳ್ಳುಬೀಳುವ ಸಂಜ್ಞೆಯೇ ಬ್ರಹ್ಮರಂಧ್ರ ನಾಡಿಯ ಬಾಗಿಲನ್ನು ತೆಗೆಯಿಸುವುದಾಗಿದೆ. ಸಂಪುಟವೆಂದರೂ ಏಕೀಕರಣ ಮಾಡುವುದು. ಅನೇಕವಾದುವುಗಳನ್ನೆಲ್ಲಾ ಒಂದುಕಡೆ ಸೇರಿಸಿ ಬಂಧಿಸುವುದಕ್ಕೆ ಸಂಪುಟವೆಂದು ಹೆಸರು. ಮೂಲಬಂಧವೆಂಬ ಮುದ್ರೆಯನ್ನು ಮಾಡುವುದರಿಂದ

ಅನೇಕವಾದ ಅಜ್ಞಾನಶಕ್ತಿಗಳನ್ನೆಲ್ಲಾ ನಿಗ್ರಹಿಸಲು ಅವುಗಳನ್ನೆಲ್ಲಾ ಒಂದು ಕಡೆಗೆ ಸೇರಿಸಿ ಬಂಧಿಸುವಕಾರ್ಯವಾಗಿರುವುದು.

[ಈ ತತ್ವವು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಶ್ರೀರಾಮನು ವಾನರರೊಡನೆ ಲಂಕೆಯನ್ನು ಮುತ್ತಿದ ಪ್ರಕರಣದಲ್ಲಿ ಬರುವುದು.]

ಎಲ್ಲಾ ಮುದ್ರೆಗಳ ತತ್ವಗಳನ್ನೂ ವಿವರಿಸಲು ಗ್ರಂಥಬಾಹುಳ್ಯವಾಗುವುದು. ಮುದ್ರೆಗಳು ಧ್ಯಾನಾಭ್ಯಾಸಕ್ಕೆ ಅತ್ಯಂತ ಸಹಕಾರಿಗಳು. ಧ್ಯಾನಮಾಡುವವರು ಗುರುಮುಖದಿಂದ ತಿಳಿದು ೨೪ ಮುದ್ರೆಗಳಲ್ಲಿ ರಾಮಾಯಣದ ಅಂತರಾರ್ಥ ಗ್ರಂಥದಲ್ಲಿ ಬರುವ ಮೂಲ, ಜಾಲಂಧರ, ಉಡ್ಯಾಣ, ಷಣ್ಮುಖೀ ಮುದ್ರೆಗಳನ್ನು ಅಭ್ಯಾಸಮಾಡಿದರೆ ನಾಕಾಗಿರುವುದು ಮುದ್ರಾಶ್ಲೋಕದಲ್ಲಿರುವ ದ್ವಿಮುಖ, ತ್ರಿಮುಖ, ಚತುರ್ಮುಖ, ಪಂಚಮುಖ ಷಣ್ಮುಖಗಳ ಕ್ರಮುಗಳೆಲ್ಲಾ ಷಣ್ಮುಖೀ ಮುದ್ರೆಯನ್ನು ಹಾಕಿಕೊಳ್ಳುವುದರ ಸಂಜ್ಞೆಗಳಾಗಿ ರಾಮಾಯಣದ ಅಂತರಾರ್ಥ ಗ್ರಂಥದಲ್ಲಿ ಇಂದ್ರನ ರಥಾರೋಹಣದ ಕಥೆಯ ತತ್ವದಲ್ಲಿ ಬರುವುದು.

## ಮುದ್ರಾಶ್ಲೋಕ

ಸುಮುಖಂ ಸಂಪುಟಂಚೈವ ವಿತತಂ ವಿಸ್ತೃತಂ ತಥಾ |
ದ್ವಿಮುಖಂ ತ್ರಿಮುಖಂ ಚೈವ ಚತುಃ ಪಂಚಮುಖಂ ತಥಾ ||
ಷಣ್ಮುಖೋಽಧೋಮುಖಂಚೈವ ವ್ಯಾಪಕಾಂಜಲಿಕಂ ತಥಾ |
ಶಕಟಂ ಯಮಪಾಶಂಚ ಗ್ರಥಿತಂ ಸನ್ಮುಖೋನ್ಮುಖಂ ||
ಪ್ರಲಂಬಂ ಮುಷ್ಟಿಕಂಚೈವ ಮತ್ಸ್ಯಃ ಕೂರ್ಮ ವರಾಹಕಂ |
ಸಿಂಹಾಕ್ರಾಂತಂ ಮಹಾಕ್ರಾಂತಂ ಮುದ್ಗರಂ ಪಲ್ಲವಂ ತಥಾ ||

## ಉತ್ತರನ್ಯಾಸ

### ಬ್ರಹ್ಮ ಕ್ಷತ್ರಿಯ ವೈಶ್ಯರು

ಜಪವಾದ ಅನಂತರ ಹಿಂದಿನಂತೆ ಅಂಗನ್ಯಾಸ ಕರನ್ಯಾಸಗಳನ್ನು ಮಾಡಿ, ದಿಗ್ಬಂಧಃ ಎಂಬ ಮಂತ್ರಕ್ಕೆ ಬದಲಾಗಿ ವಿಗ್ವಿಮೋಕಃ ಎಂದು ಹೇಳಿ, ಪುನಃ ಧ್ಯಾನಶ್ಲೋಕವನ್ನು ಪಠಿಸಿದರೆ ಉಪಾಸನೆಯು ಪೂರ್ತಿಯಾಗುವುದು.



# ೪ ನೆಯ ಪ್ರಕರಣ

# ಉಪಸ್ಥಾನ

## ಗಾಯತ್ರೀ ಉದ್ವಾಸನೆ

### ಋಗ್ಯಜುಸ್ಸಾಮಶಾಖಾ ಬ್ರಾಹ್ಮಣರು ಕ್ಷತ್ರಿಯರು ಮತ್ತು ವೈಶ್ಯರು. ತ್ರಿಸಂಧ್ಯಾಕಾಲಗಳಲ್ಲಿಯು.

ಉತ್ತಮೇ ಶಿಖರೇ ಜಾತೇ ಭೂಮ್ಯಾಂ ಪರ್ವತ ಮೂರ್ಧನಿ | ಬ್ರಾಹ್ಮಣೇಭ್ಯೋ ಭ್ಯನುಜ್ಞಾತಾ ಗಚ್ಛದೇವಿ ಯಥಾಸುಖಂ || ಶ್ರೀ ಗಚ್ಛದೇವಿ ಯಥಾಸುಖೋನ್ನಮಃಇತಿ || ೧ ||

ಸ್ತುತೋಮಯಾ ವರದಾ ವೇದಮಾತಾ | ಪ್ರಚೋದಯಂತೀ ಪವನೇ ದ್ವಿಜಾತಾ | ಆಯುಃಪೃಥಿವ್ಯಾಂ ದ್ರವಿಣಂ ಬ್ರಹ್ಮವರ್ಚಸಂ | ಮಹ್ಯಂದತ್ವಾ ಪ್ರಜಾತುಂ ಬ್ರಹ್ಮಲೋಕಂ || ೨ ||

ತಾ|| ಎಲೌ ಸಂಧ್ಯಾದೇವಿಯೇ ! ಭೂಲೋಕದ ಮೇಲೆ ನೆಲೆಸಿರುವ ಉತ್ತರಮೇರುಪರ್ವತ ಶಿಖರಗಳ ಮಧ್ಯಶಿಖರದ ದಿವ್ಯಮಂದಿರದಲ್ಲಿ ಜನಿಸಿದವಳಾದುದರಿಂದ ಆ ಸ್ಥಳದಲ್ಲಿ ವಾಸಿಸಲು ಸಂಧ್ಯಾಕರ್ಮಾನುಷ್ಠಾನ ತತ್ಪರರಾದ ಬ್ರಾಹ್ಮಣರಿಂದ ಪ್ರಾರ್ಥಿತಳಾಗಿ ಸುಖವಾಗಿ ತೆರಳುವವಳಾಗು ನಿನಗೆ ಮನಃಪೂರ್ವಕವಾಗಿ ವಂದಿಸುವೆನು || ೧ ||

ಸಮಸ್ತ ಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿ ಪ್ರೇರಿಸುವ ವೇದಜನನಿಯಾದ ಪರಬ್ರಹ್ಮ ಮತ್ತು ಸೂರ್ಯಮಂಡಲ ಸ್ಥಾನಗಳೆರಡರಲ್ಲಿ ಉದ್ಭವಳಾದ, ಉಪಾಸಕರಿಗೆ ಇಷ್ಟಾರ್ಥಪ್ರದಳಾದ, ಗಾಯತ್ರೀದೇವಿಯೆ! ನಾನು ಮಾಡುವ ಪ್ರಾರ್ಥನೆಗೆ ಅನುಗ್ರಹಿಸಿ ನನಗೆ ಆಯುಸ್ಸನ್ನೂ ಧನವನ್ನೂ ಬ್ರಹ್ಮವರ್ಚಸ್ಸನ್ನೂ ಕೊಟ್ಟು ನಿನ್ನ ಆವಿರ್ಭವದ ಉತ್ಕೃಷ್ಟ ಸ್ಥಳವಾದ ಪರಬ್ರಹ್ಮಸ್ಥಾನಕ್ಕೆ ಹೋಗಿ ನೆಲೆಸು || ೨ ||

ಸಂಧ್ಯಾದೇವಿಯು ಪಿಂಡಾಂಡವಾದ ನಮ್ಮಲ್ಲಿ ಕುಂಡಲಿನೀ ಶಕ್ತಿಯೆಂಬುದನ್ನು 'ಉತ್ತಿಷ್ಠ ದೇವಿ' ಎಂಬ ಮಂತ್ರದ ವಿಚಾರದಲ್ಲಿಯೂ, ಸಂಧ್ಯಾಶಕ್ತಿ ವಿಚಾರದಲ್ಲಿಯೂ ತಿಳಿಸಿರುವುದು. ಕುಂಡಲಿನೀಶಕ್ತಿಯನ್ನು ಪ್ರಬೋಧೆಮಾಡಿ

ಗಾಯತ್ರೀದೇವಿಯ ಭಾವದಲ್ಲಿ ಧ್ಯಾನನಿರತವಾಗಿರುವುದನ್ನು ಪಡೆಯುವುದೇ ೨ ನೆಯ ಪ್ರಕರಣದ ಮುಖ್ಯಸಾರವಾಗಿರುವುದು. ಗಾಯತ್ರೀಧ್ಯಾನದಿಂದ ಬಹಿರ್ಮುಖವಾಗುವ ಪ್ರತಿಪಾದನೆಯೇ ಈ ಮಂತ್ರದ ತತ್ವವಾಗಿರುವುದು. ಅಂದರೆ ಅಂತರ್ಮುಖದ ಉಪಾಸನಾಕಾಲದಲ್ಲಿ ಕುಂಡಲಿನಿಯು 'ಭೂ' ತತ್ವವಾದ ಮೂಲಾಧಾರದಿಂದ ಉತ್ಥಾಪನೆಯಾಗಿ ಸಹಸ್ರಾರಕಮಲವನ್ನು ಸೇರಲು ಹೊರಡುವುದು. ಬಹಿರ್ಮುಖವಾದಾಗ ಪುನಃ ಮೂಲಾಧಾರಕ್ಕೆ ಬಂದು ನೆಲೆಸುವುದೇ "ಉತ್ತಮೇ ಶಿಖರೇ" ಎಂಬ ಈ ಮಂತ್ರದ ತತ್ವವಾಗಿರುವುದು. ಗಾಯತ್ರೀಧ್ಯಾನದಿಂದ ಬಹಿರ್ಮುಖವಾದ ಕೂಡಲೇ ಸ್ವಸ್ಥಾನವನ್ನು ಹೊಂದುವ (ಉತ್ತರಮೇರು ಶಿಖರದ ತತ್ವವಾದ ಮೂಲಾಧಾರಕ್ಕೆ ಇಳಿಯುವ) ಸಂಧ್ಯಾದೇವಿಯನ್ನೂ, ಗಾಯತ್ರೀ ದೇವಿಯನ್ನೂ ಭಕ್ತಿಯಿಂದ ಪ್ರಾರ್ಥಿಸುವುದರಿಂದ ಜೀವನ್ಮುಕ್ತಿಸ್ಥಿತಿಯನ್ನು ಅನುಗ್ರಹಿಸುವಳಲ್ಲದೆ ನಿಗ್ರಹಾನುಗ್ರಹಶಕ್ತಿಯನ್ನೂ ಉಂಟುಮಾಡುವಳು. ಇದೇ ಪ್ರಥಮ ಮಂತ್ರದ ತತ್ವ.

ಎರಡನೆಯ ಮಂತ್ರವು ಗಾಯತ್ರೀ ದೇವಿಯನ್ನು ಪ್ರಾರ್ಥಿಸಿ ಸ್ವಸ್ಥಾನಕ್ಕೆ ಕಳುಹಿಸುವುದಾಗಿದೆ. ಗಾಯತ್ರೀದೇವಿಗೆ ೨ ಸ್ಥಾನಗಳು. ಒಂದನೆಯದು ಅವ್ಯಕ್ತದಲ್ಲಿ ಪರಬ್ರಹ್ಮಸ್ಥಾನ. ಎರಡನೆಯದು ವ್ಯಕ್ತದಲ್ಲಿ ಸೂರ್ಯಮಂಡಲ. ಅಂದರೆ ಪ್ರಥಮ ನಿರ್ಗುಣ, ದ್ವಿತೀಯ ಸಗುಣವೆಂದರೆ ವಿರಾಟ್‌ಸ್ಥಾನ. ಗಾಯತ್ರೀ ದೇವಿಯನ್ನು ಅಂತರ್ಮುಖದಲ್ಲಿ ಉಪಾಸಿಸುವಾಗ ನಮ್ಮಲ್ಲಿಯೂ ಇರುವ ಸೂರ್ಯ ತೇಜಸ್ಸಿನೊಳಗೆ ಸುಕೃತವಿಶೇಷದಿಂದ ನಮ್ಮ ಜ್ಞಾನಚಕ್ಷುಸ್ಸು ತೆರೆದು ದಿವ್ಯ ತೇಜೋರೂಪಿನಲ್ಲಿ ಆ ದೇವಿಯ ದರ್ಶನವು ಲಭ್ಯವಾಗುವುದು. ಸಗುಣವಾದ ತೇಜೋರೂಪವನ್ನು ದಾಟಿದರೆ ಪರಬ್ರಹ್ಮಸ್ಥಿತಿಯೇ ಅವಳ ಮುಖ್ಯಸ್ಥಾನ. ಹೀಗೆ ಸಗುಣನಿರ್ಗುಣಗಳೆರಡರಲ್ಲಿಯೂ ಗೋಚರವಾಗುವ ತತ್ವದವಳಾದುದರಿಂದಲೇ ಮಂತ್ರದಲ್ಲಿ "ದ್ವಿಜಾತಾ" ಎಂದು ಹೇಳಿದೆ. ಗಾಯತ್ರಿಯನ್ನು ಉತ್ಕೃಷ್ಟವಾದ ಉತ್ಪತ್ತಿಯುಳ್ಳ ಬ್ರಹ್ಮಲೋಕಕ್ಕೆ ತೆರಳೆಂದು ಪ್ರಾರ್ಥಿಸುವ ತತ್ವವೇನೆಂದರೆ— ಉಪಾಸನೆ ಮಾಡುತ್ತಿದ್ದ ಚಿದ್ವಸ್ತುವಾದ ಗಾಯತ್ರೀದೇವಿಗೂ ನಮಗೂ ಸಂಬಂಧ ತಪ್ಪಿ ಬಹಿರ್ವ್ಯಾಪಾರೋನ್ಮುಖವಾಗುವುದಾಗಿರುವುದು. ಅಂದರೆ ಉಪಾಸನೆಯಿಂದ ಬಹಿರ್ಮುಖವಾಗುವ ಕಾಲದಲ್ಲಿಯೂ ಜಗನ್ಮಾತೆಯನ್ನು ಪ್ರಾರ್ಥಿಸಿ ಪುನೀತರಾಗಬೇಕು. ಈ ಪ್ರಾರ್ಥನೆಯಿಂದ ಪರಮಹಂಸತ್ವವು ಲಭ್ಯವಾಗುವುದು. ಕೆಲವರು ಈ ಮಂತ್ರವನ್ನು ದಿಗ್ದೇವತಾ ನಮಸ್ಕಾರವಾದ ಅನಂತರ ಹೇಳುತ್ತಾರೆ. ಬಹು ಜನಗಳು ಉಪಾಸನೆಯು ಪೂರೈಸಿದ ಕೂಡಲೆ ಹೇಳುತ್ತಾರೆ. ಉಪಾಸನೆಯಾದಕೂಡಲೆ ಈ ಸ್ಥಳದಲ್ಲಿ ಹೇಳುವುದೇ ತತ್ವಾರ್ಥಕ್ಕೂ ಸಾಧುವಾಗಿದೆ. ಕ್ಷತ್ರಿಯರು, ವೈಶ್ಯರು ಪ್ರಥಮ ಮಂತ್ರವನ್ನು ಮಾತ್ರ ಹೇಳುತ್ತಾರೆ.

# ಪ್ರಾತಸ್ಸಂಧ್ಯೋಪಸ್ಥಾನ

## ಋಕ್ಶಾಖಾಬ್ರಾಹ್ಮಣರು.

ಜಾತವೇದಸ ಇತ್ಯಸ್ಯಸೂಕ್ತಸ್ಯ | ಮರೀಚಿಪುತ್ರಃ ಕಶ್ಯಪಋಷಿಃ | ಜಾತವೇದಾಗ್ನಿ ದುರ್ಗಾದೇವತಾ | ತ್ರಿಷ್ಟುಪ್ಛಂದಃ | ಪ್ರಾತಸ್ಸಂಧ್ಯೋಪಸ್ಥಾನೇವಿನಿಯೋಗಃ ||

ಜಾತವೇದಸೇ ಸುನವಾಮಸೋಮ ಮರಾತೀಯತೋ ನಿದಹಾತಿ ವೇದಃ | ಸನಃ ಪರ್ಷದತಿ ದುರ್ಗಾಣಿ ವಿಶ್ವಾನಾವೇವ ಸಿಂಧುಂ ದುರಿತಾತ್ಯಗ್ನಿಃ || ೧ || ತಚ್ಛಂಯೋರಾವೃಣೀಮಹೆ ಗಾತುಂ ಯಜ್ಞಾಯ | ಗಾತುಂಯಜ್ಞಪತಯೆ ದೈವೀ ಸ್ವಸ್ತಿರಸ್ತುನಃ | ಸ್ವಸ್ತಿರ್ಮಾನುಷೇಭ್ಯಃ ಊರ್ಧ್ವಂಜಿಗಾತುಭೇಷಜಂ ಶನ್ನೋ ಅಸ್ತು ದ್ವಿಪದೇ ಶಂಚತುಷ್ಪದೇ || ೨ || ಓಂನಮೋಬ್ರಹ್ಮಣೆ ನಮೋಅಸ್ತ್ವಗ್ನಯೆ | ನಮಃಪೃಥಿವ್ಯೈ ನಮಓಷಧೀಭ್ಯಃ | ನಮೋವಾಚೇ ನಮೋವಾಚಸ್ಪತಯೆ ನಮೋವಿಷ್ಣವೇ ಮಹತೇಕರೋಮಿ || ೩ ||

ತಾ|| ಸೋಮಲತೆಯಿಂದ ರಸವನ್ನು ತೆಗೆದು ಜ್ಞಾನಪ್ರದನಾದ ಅಗ್ನಿ ಪುರುಷನಿಗೆ ಸಮರ್ಪಣೆಮಾಡುತ್ತೇವೆ. ವೇದಸ್ವರೂಪನಾದ ಆ ಅಗ್ನಿದೇವನು ನಮ್ಮಲ್ಲಿರುವ ಕಾಮಾದಿ ಶತೃಗಳನ್ನು ನಾಶಪಡಿಸಲಿ. ನಾವಿಕನು ಸಮುದ್ರವನ್ನು ದಾಟಿಸುವಂತೆ ಅಗ್ನಿದೇವನೂ ನಮ್ಮ ಸಕಲವಾದ ದಾಟಲಶಕ್ಯವಾಗಿರುವ ದುರಿತಗಳನ್ನೂ ನಾಶಗೊಳಿಸಲಿ || ೧ || ಎಲೈ ಪರಮೇಶ್ವರನೆ ದುಃಖಮಿಶ್ರವಲ್ಲದ ಸುಖವನ್ನು ನಮಗೆ ಅನುಗ್ರಹಿಸುವಂತೆ ನಿನ್ನನ್ನು ನಾವು ಪ್ರಾರ್ಥಿಸುತ್ತೇವೆ. ಯಜ್ಞಾದಿಗಳಲ್ಲಿ ನಿನ್ನನ್ನುಉದ್ದೇಶಿಸಿ ಗಾನಮಾಡುವುದನ್ನೂ ನಮಗೆ ದೇವತಾಸಂಬಂಧವಾದ ಕಲ್ಯಾಣ ಪರಂಪರೆಯುಂಟಾಗುತ್ತಿರುವುದನ್ನೂ ನಮ್ಮ ಬಂಧು ಮಿತ್ರಾದಿಗಳಿಗೂ ಪಶ್ವಾದಿಗಳಿಗೂ ಆರೋಗ್ಯಭಾಗ್ಯವು ಯಾವಾಗಲೂ ಉಂಟಾಗುತ್ತಿರುವಂತೆಯೂ ಅನುಗ್ರಹಿಸು || ೨ || ಸೃಷ್ಟಿಕರ್ತನಾದ ಬ್ರಹ್ಮನಿಗೆ ನಮಸ್ಕಾರ. ಯಜ್ಞೇಶ್ವರನಿಗೆ ನಮಸ್ಕಾರ. ಭೂಮಾತೆಗೆ ನಮಸ್ಕಾರ. ಸಕಲವಾದ ವನಸ್ಪತಿಗಳಿಗೆ ನಮಸ್ಕಾರ. ನಾದಬ್ರಹ್ಮಕ್ಕೆ ನಮಸ್ಕಾರ. ಬೃಹಸ್ಪತಿಗೆ ನಮಸ್ಕಾರ. ಮಹಾವಿಷ್ಣುವಿಗೆ ನಮಸ್ಕಾರವು. ಇವರೆಲ್ಲಾ ಶ್ರೇಯಸ್ಸನ್ನುಂಟುಮಾಡಲಿ.

## ಯಜುಶ್ಶಾಖಾಬ್ರಾಹ್ಮಣರು

ಮಿತ್ರಸ್ಯ ಚರ್ಷಣೀ ಧೃತಃ ಶ್ರವೋದೇವಸ್ಯ ಸಾನಸಿಂ | ಸತ್ಯಂಚಿತ್ರಶ್ರವಸ್ತಮಂ | ಮಿತ್ರೋಜನಾ್ ಯಾತಯತಿ ಪ್ರಜಾನ್ ಮಿತ್ರೋದಾಧಾರ ಪೃಥಿವೀಮುತದ್ಯಾಂ | ಮಿತ್ರಃಕೃಷ್ಟೀ ರನಿಮಿಷಾಭಿಚಷ್ಟೇ | ಸತ್ಯಾಯಹವ್ಯಂ

ಘೃತವದ್ವಿಧೇಮ ||೧|| ಪ್ರಸಮಿತ್ರ ಮರ್ತೋ(ಅಸ್ತು। ಪ್ರಯಸ್ವಾನ್ ಯಸ್ತ ಆದಿತ್ಯ ಶ್ಶಿಕ್ಷತಿವ್ರತೇನ। ನಹನ್ಯತೇ ನಜೀಯತೇತ್ವೋತೋನೈನಂ ಅಗ್ಂಹೋ ಅಶ್ನೋತ್ಯಂತಿತೋನ ದೂರಾತ್ ||೨||

ತಾ|| ಅಹರಭಿಮಾನದೇವತೆಯಾಗಿ ಪ್ರಾಣಿಗಳನ್ನು ರಕ್ಷಿಸತಕ್ಕ ದೇವಶ್ರೇಷ್ಠನಾದ ಸೂರ್ಯಭಗವಂತನ ಭಜನಯೋಗ್ಯವಾದ ಆಶ್ಚರ್ಯವನ್ನೂ, ಶಾಶ್ವತವಾದ ಸುಖವನ್ನೂ ಉಂಟುಮಾಡುವ ಯಶಸ್ಸನ್ನೂ ಸ್ತೋತ್ರಮಾಡುತ್ತೇನೆ. ಸೂರ್ಯಭಗವಂತನು ಪ್ರಾಣಿಗಳನ್ನು ಕರ್ಮಾನುಸಾರವಾಗಿ ನಿಯಮಿಸುತ್ತಾ ಭೂಮ್ಯಾಕಾಶಗಳನ್ನು ಧರಿಸಿ ಪ್ರಾಣಿಗಳನ್ನು ಜಾಗರೂಕನಾಗಿ ಎಲ್ಲಾ ಕಡೆಯಲ್ಲಿಯೂ ಪ್ರಕಾಶಪಡಿಸುತ್ತಾನೆ. ಇಂತಹ ಸತ್ಯಾತ್ಮಕನಿಗೆ ಆಹುತಿಗಾಗಿ ಘೃತಯುಕ್ತವಾದ ಚರುವನ್ನು ಸಮರ್ಪಿಸೋಣ ||೧|| ಎಲೈ ಸೂರ್ಯಭಗವಂತನೆ! ನಿನ್ನ ಸಂಬಂಧವಾದ ಕರ್ಮಾನುಷ್ಠಾನಮಾಡಲು ಯಾವನು ಸಮರ್ಥನೋ ಅಂತಹ ಅಧಿಕಾರಿಯು ನಿನ್ನಿಂದ ರಕ್ಷಿತನಾಗುತ್ತಾನೆ. ಇವನನ್ನು ಯಾರೂ ಸಂಹರಿಸಲಾರರು, ರೋಗಾದಿಗಳು ಪೀಡಿಸಲಾರವು; ಶತ್ರುಗಳು ತಿರಸ್ಕರಿಸಲಾರರು; ಪಾಪಗಳು ಸೇರಲೇ ಆರವು.

## ಸಾಮಶಾಖಾಬ್ರಾಹ್ಮಣರು

ಯಶೋಹಂ ಭವಾಮಿ ಬ್ರಾಹ್ಮಣಾನಾಂ । ಯಶೋರಾಜ್ಞಾಂ ಯಶೋ ವಿಶಾಂ। ಯಶಸ್ಸತ್ಯಸ್ಯಭವಾಮಿ। ಭವಾಮಿಯಶಸಾಂಯಶಃ ‖ ಪುನರ್ಮಾಯಂತು ದೇವತಾ। ಯಾಮದವ ಚಕ್ರಮುಃ। ಮಹಸ್ಸ್ವನ್ತೋ ಮಹಾನ್ತೋ ಭವಾಮ್ಯಸ್ಮಿನ್। ಪಾತ್ರೆಹರಿತೆ ಸೊಮಪೃಷ್ಠೆ ‖ ರೂಪರೂಪಮ್ಮೆದಿಶ ಪ್ರಾತರಹ್ನಸ್ಯತೇಜಸಃ। (ಸಾಯಮಹ್ನಸ್ಯತೇಜಸಃ) ಅನ್ನಮುಗ್ರಸ್ಯ ಪ್ರಾಶಿಷಮಸ್ತುವೈಮಯಿ ‖ ತ್ವಯೀದಮಸ್ತು। ತ್ವಯಿಮಯೀದಂ। ಯದಿದಂ ಪಶ್ಯಾಮಿಚಕ್ಷುಷಾ ತ್ವಯಾದತ್ತಂ ಪ್ರಭಾಸಯ ತೇನಮಾಭುಂಜತೇನ ಭುಕ್ಷಿಷೀಯತೇನಮಾಪಿಶ‖ಅಹರ್ನೋ ಅತ್ಯಪೀಪರದ್ರಾತ್ರಿರ್ನೋ ಅತಿಪಾರಯತ್ | (ರಾತ್ರಿರ್ನೋ ಅತ್ಯಪೀಪರದಹರ್ನೋ ಅತಿಪಾರಯತ್) | ಆದಿತ್ಯನಾವಮಾರೋಕ್ಷಂ ಪೂರ್ಣಾಂ ಪರಿಪಾಧಿನೀಂ। ಅಚ್ಛಿದ್ರಾಂ ಪಾರಯಿಷ್ಣುಂ ಶತಾರಿತ್ರಾಂ ಸ್ವಸ್ತಯೇ ‖ ಓನ್ನಮ ಆದಿತ್ಯಾಯ ನಮಆದಿತ್ಯಾಯ ನಮ ಆದಿತ್ಯಾಯ। ಉದ್ಯನ್ತಂತ್ವಾದಿತ್ಯಾಮಾದಿಯಾಸಂ (ಪ್ರತಿತಿಷ್ಠನ್ತಂತ್ವಾದಿತ್ಯಾನುಪ್ರತಿ ತಿಷ್ಠಾಸಂ) ‖

ತಾ|| ಎಲೈ ಸೂರ್ಯಭಗವಂತನೆ! ನಿನ್ನ ಅನುಗ್ರಹದಿಂದ ನಾನು ಬ್ರಹ್ಮಕ್ಷತ್ರಿಯ ವೈಶ್ಯರಲ್ಲಿಯೂ ಸತ್ಯವಂತರಲ್ಲಿಯೂ ಯಶಸ್ವಿಗಳಲ್ಲಿಯೂ ಯಶೋವಂತನಾಗುತ್ತೇನೆ. “ಎಲ್ಲಾ ದೇವತೆಗಳೂ ನನ್ನನ್ನು ಹೊಂದಿ ರಕ್ಷಿಸುವರಾಗಲಿ.

ತೇಜಸ್ವಿಗಳಾದ ಮಹಾತ್ಮರು ಮನೋಹರವಾದ ಅಮೃತಸ್ಥಾನದಲ್ಲಿ ಹೇಗೆ ಇರುವರೋ ಹಾಗೆ ನಾನೂ ಇರುವೆನು." ಪ್ರಾತಃಕಾಲದ (ಮಧ್ಯಾನ್ಹದ, ಸಾಯಂಕಾಲದ) ತೇಜಸ್ಸನ್ನು ಹೊಂದುತ್ತೇನೆ. ಶ್ರೇಷ್ಠವಾದ ಲಕ್ಷ್ಮಿಕ್ಕೆ ನಾನು ಭಾಗಿಯಾಗುವಂತೆ ಮಾಡು" ಯಾವುವನ್ನು ನಾನು ನೋಡುತ್ತೇನೆಯೋ ಅದು ನೀನೇ ಆಗಿರುವೆ. ನಿನ್ನಿಂದ ಅನುಗ್ರಹೀತವಾದ ಯಾವುದನ್ನು ನಾನು ಭುಂಜಿಸುವೆನೋ ಅದರಲ್ಲಿ ನೀನು ಪ್ರವೇಶಿಸು" ಹಗಲು ರಾತ್ರಿಗಳು ಸುಖವಾಗಿ ಕಳೆಯಲಿ (ರಾತ್ರಿ ಹಗಲುಗಳು ಸುಖವಾಗಿ ಕಳೆಯಲಿ.) ಎಲೈ ಸೂರ್ಯನೆ! ನಿನ್ನ ಅನುಗ್ರಹವೆಂಬ ವಿಸ್ತಾರವಾದ ತಡೆಯಿಲ್ಲದ ಛಿದ್ರವಿಲ್ಲದ ಅನೇಕ ಶತ್ರುಗಳ ದೆಸೆಯಿಂದ ರಕ್ಷಿಸುವ ಹಡಗನ್ನು ಮಂಗಳಕ್ಕೋಸ್ಕರ ಹತ್ತುವೆನು. ನಿನಗೆ ನಮಸ್ಕಾರವು.

## ಕ್ಷತ್ರಿಯರು.

ಧ್ಯೇಯ ಸ್ಸದಾಸವಿತೃಮಂಡಲ ಮಧ್ಯವರ್ತೀ |
ನಾರಾಯಣ ಸ್ಸರಸಿಜಾಸನ ಸನ್ನಿವಿಷ್ಟಃ ||
ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ |
ಹಾರೀ ಹಿರಣ್ಮಯವಪುಃ ಧೃತಶಂಖಚಕ್ರಃ ||

ತಾ|| ಸೂರ್ಯಮಂಡಲ ಮಧ್ಯದಲ್ಲಿರುವ ತಾವರೆಯ ಆಸನದಲ್ಲಿ ಚೆನ್ನಾಗಿ ಕುಳಿತಿರುವ ತೋಳುಬಳೆಗಳು, ಮಕರಕುಂಡಲಗಳು, ಕಿರೀಟಹಾರಗಳು ಇವುಗಳಿಂದ ಕೂಡಿಕೊಂಡಿರುವ ಸ್ವರ್ಣಮಯವಾದ ಶರೀರವುಳ್ಳ ಶಂಖಚಕ್ರಗಳನ್ನು ಧರಿಸಿದವನಾಗಿರುವ ಶ್ರೀಮನ್ನಾರಾಯಣನನ್ನು ಪ್ರಾರ್ಥಿಸುತ್ತೇನೆ.

ನಮಸ್ಸವಿತ್ರೇ ಜಗದೇಕಚಕ್ಷುಷೇ |
ಜಗತ್ಪ್ರಸೂತಿ ಸ್ಥಿತಿನಾಶ ಹೇತವೇ ||
ತ್ರಯೀಮಯಾಯ ತ್ರಿಗುಣಾತ್ಮಧಾರಿಣೇ |
ವಿರಂಚಿ ನಾರಾಯಣ ಶಂಕರಾತ್ಮನೇ ||

ತಾ|| ಈ ಪ್ರಪಂಚಕ್ಕೆಲ್ಲಾ ನೇತ್ರರೂಪನಾದ, ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣಭೂತನಾದ, ವೇದತ್ರಯಾತ್ಮಕನಾದ, ತ್ರಿಗುಣಾತ್ಮಧಾರಿಯಾದ, ಬ್ರಹ್ಮ ವಿಷ್ಣು ಮಹೇಶ್ವರಾತ್ಮಕನಾದ, ಸೂರ್ಯದೇವನಿಗೆ ನಮಸ್ಕಾರವು.

ಕಾಲಾತ್ಮಾ ಸರ್ವಭೂತಾತ್ಮಾ ವೇದಾತ್ಮಾ ವಿಶ್ವಭಾವನಃ |
ಜನ್ಮಮೃತ್ಯುಜರಾವ್ಯಾಧಿ ಸಂಸಾರ ಭಯನಾಶನಃ ||

ತಾ|| ಕಾಲಸ್ವರೂಪನೂ ಸರ್ವಭೂತಸ್ವರೂಪನೂ ವೇದಸ್ವರೂಪನೂ ವಿಶ್ವ ಭಾವನನೂ ಜನನ ಮರಣ ವಾರ್ಧಿಕ್ಯ ರೋಗ ಸಂಸಾರ ಭಯಗಳನ್ನು ಹೋಗಲಾಡಿಸತಕ್ಕವನೂ ಆದ ಸೂರ್ಯದೇವನಿಗೆ ನಮುಸ್ಕಾರವು.

ಉದಯೇ ಬ್ರಹ್ಮಸ್ವರೂಪಃ ಮಧ್ಯಾಹ್ನೇತು ಮಹೇಶ್ವರಃ |
ಅಸ್ತಮಾನೇ ಸ್ವಯಂ ವಿಷ್ಣು ಸ್ತ್ರಯಿಾಮೂರ್ತಿ ರ್ದಿವಾಕರಃ ||

ತಾ|| ಉದಯಕಾಲದಲ್ಲಿ ಬ್ರಹ್ಮಸ್ವರೂಪನಾಗಿಯೂ, ಮಧ್ಯಾಹ್ನದಲ್ಲಿ ಮಹೇಶ್ವರಸ್ವರೂಪನಾಗಿಯೂ, ಅಸ್ತಮಾನಕಾಲದಲ್ಲಿ ಸ್ವಯಂವಿಷ್ಣುವಾಗಿಯೂ, ಹೀಗೆ ತ್ರಿಮೂರ್ತ್ಯಾತ್ಮಕನಾದ ಸೂರ್ಯದೇವನಿಗೆ ನಮುಸ್ಕಾರವು.

## ವೈಶ್ಯರು

ಮಿತ್ರ ತ್ವಮಸಿ ವಿಶ್ವಾತ್ಮಾ ದಾಧಾರ ಪೃಥಿವೀಮಿಮಾಂ |
ದ್ಯಾಂ ಸೂರ್ಯದೇವತಾ ಮಿತ್ರ ಮಿತ್ರರೂಪ ನಮೋಽಸ್ತುತೇ ||

ತಾ|| ಸೂರ್ಯದೇವನೇ! ನೀನು ಪ್ರಪಂಚಸ್ವರೂಪನಾಗಿರುವೆ. ಭೂಮಿಯನ್ನೂ ಅಂತರಿಕ್ಷವನ್ನೂ ಧರಿಸಿರುವೆ ದೇವತಾಶ್ರೇಷ್ಠನಾಗಿರುವೆ ಮತ್ತು ಅವರಿಗೆ ಮಿತ್ರನಾಗಿರುವೆ ನಿನಗೆ ನಮುಸ್ಕಾರವು.

## ದಿಗ್ದೇವತಾನಮುಸ್ಕಾರ.

### ಋಗ್ಯಜುಶ್ಶಾಖಾಬ್ರಾಹ್ಮಣರು

ಓಂನಮಃ ಪ್ರಾಚ್ಯೈದಿಶೇ | ಯಾಶ್ಚದೇವತಾಃ | ಏತಸ್ಯಾಂ ಪ್ರತಿವಸಂತಿ | ಏತಾಭ್ಯಶ್ಚ ನಮೋ ನಮಃ || ದಕ್ಷಿಣಾಯೈದಿಶೇ| ಯಾಶ್ಚದೇವತಾ | ಏತಸ್ಯಾಂ ಪ್ರತಿವಸಂತಿ | ಏತಾಭ್ಯಶ್ಚ ನಮೋ ನಮಃ | ಪ್ರತೀಚ್ಯೈದಿಶೇ | ಯಾಶ್ಚ ದೇವತಾ | ಏತಸ್ಯಾಂ ಪ್ರತಿವಸಂತಿ | ಏತಾಭ್ಯಶ್ಚ ನಮೋನಮಃ || ಉದೀಚ್ಯೈದಿಶೇ| ಯಾಶ್ಚದೇವತಾ| ಏತಸ್ಯಾಂ ಪ್ರತಿವಸಂತಿ ಏತಾಭ್ಯಶ್ಚ ನಮೋ ನಮಃ || ಊರ್ಧ್ವಾಯೈದಿಶೇ| ಯಾಶ್ಚದೇವತಾ | ಏತಸ್ಯಾಂ ಪ್ರತಿವಸಂತಿ | ಏತಾಭ್ಯಶ್ಚನಮೋನಮಃ|| ಅಧರಾಯೈದಿಶೇ | ಯಾಶ್ಚದೇವತಾ| ಏತಸ್ಯಾಂ ಪ್ರತಿಪಸಂತಿ | ಯೇತಾಭ್ಯಶ್ಚ ನಮೋನಮಃ || ಅವಾಂತರಾಯೈದಿಶೇ | ಯಾಶ್ಚದೇವತಾ ಏತಸ್ಯಾಂಪ್ರತಿವಸಂತಿ | ಏತಾಭ್ಯಶ್ಚನಮೋನಮಃ ||

### ಸಾಮಶಾಖಾ ಬ್ರಾಹ್ಮಣರು

ಸಾಮಶಾಖಾ ಬ್ರಾಹ್ಮಣರಲ್ಲಿ ಕೆಲವರು ಮೇಲಿನ ಮಂತ್ರವನ್ನೇ ಹೇಳುವ ವಾಡಿಕೆಯು ಕಂಡುಬರುವುದು. ಕೆಲವರು

"ಪ್ರಾಚ್ಯೈದಿಶೇನಮಃ | ದಕ್ಷಿಣಾಯೈದಿಶೇನಮಃ | ಪ್ರತೀಚ್ಯೈದಿಶೇನಮಃ| ಉದೀಚ್ಯೈದಿಶೇನಮಃ | ಊರ್ಧ್ವಾಯನಮಃ | ಅಧರಾಯನಮಃ |

ಅಂತರಿಕ್ಷಾಯನಮಃ । ಭೂಮ್ಯೈನಮಃ । ವಿಷ್ಣವೇನಮಃ । ಬ್ರಹ್ಮಣೇ ನಮಃ । ಮಹೇಶ್ವರಾಯನಮಃ । ಎಂಬದಾಗಿ ಹೇಳುವ ಸಂಪ್ರದಾಯವೂ ಇರುವುದು.

## ಕ್ಷತ್ರಿಯರು

ಪ್ರಾಚ್ಯೈನಮಃ । ದಕ್ಷಿಣಾಯ್ಯೈನಮಃ । ಪ್ರತೀಚ್ಯೈನಮಃ । ಉದೀಚ್ಯೈ ನಮಃ । ಊರ್ಧ್ವಾಯೈನಮಃ। ಅಧರಾಯ್ಯೈನಮಃ।ಅವಾಂತರಾಯ್ಯೈನಮಃ॥

## ವೈಶ್ಯರು

ಯೇದೇವಾಃ ಪ್ರಾಚ್ಯಾಂವಸಂತಿ — ತದ್ದೇವೇಭ್ಯೋನಮೋನಮಃ
ಯೇದೇವಾಃ ದಕ್ಷಿಣಸ್ಯಾಂವಸಂತಿ — ತದ್ದೇವೇಭ್ಯೋನಮೋನಮಃ
ಯೇದೇವಾಃ ಪ್ರತೀಚ್ಯಾಂವಸಂತಿ — ತದ್ದೇವೇಭ್ಯೋನಮೋನಮಃ
ಯೇದೇವಾಃ ಉದೀಚ್ಯಾಂವಸಂತಿ — ತದ್ದೇವೇಭ್ಯೋನಮೋನಮಃ
ಯೇದೇವಾಃ ಊರ್ಧ್ವಾಯಾಂವಸಂತಿ — ತದ್ದೇವೇಭ್ಯೋನಮೋನಮಃ
ಯೇದೇವಾಃ ಅಧರಾಯಾಂವಸಂತಿ — ತದ್ದೇವೇಭ್ಯೋನಮೋನಮಃ
ಯೇದೇವಾಃ ಅವಾಂತರಾಯಾಂವಸಂತಿ — ತದ್ದೇವೇಭ್ಯೋನಮೋನಮಃ

ತಾ॥ ಎಲ್ಲಾದಿಕ್ಕುಗಳಲ್ಲಿಯೂ ಇರುವ ಪರಮಾತ್ಮನ ರಾಜ್ಯಾಧಿಕಾರವರ್ಗದ ಅಷ್ಟದಿಕ್ಪಾಲಕಾದಿ ಸಕಲ ದೇವತೆಗಳನ್ನೂ ಉದ್ದೇಶಿಸಿ ಅವರಿಗೆ ನಮಸ್ಕರಿಸಬೇಕೆಂಬುದೇ ಈ ಮಂತ್ರದ ತಾತ್ಪರ್ಯವು.

ಋಗ್ಯಜುಶ್ಶಾಖಾ ಬ್ರಾಹ್ಮಣರು ದಿಗ್ದೇವತಾನಮಸ್ಕಾರವಾದ ಅನಂತರ ಈ ಕೆಳಗಿನ ಮಂತ್ರವನ್ನು ಹೇಳುತ್ತಾರೆ.

ನಮೋ ಗಂಗಾಯಮುನಯೋರ್ಮಧ್ಯೇ ಯೇವಸಂತಿ । ತೇಮೇ ಪ್ರಸನ್ನಾತ್ಮಾನಃ ಚಿರಂಜೀವಿತಂ ವರ್ಧಯಂತಿ ॥ ನಮೋ ಗಂಗಾಯಮುನಯೋಃ ಮುನಿಭ್ಯಶ್ಚನಮಃ ॥

ತಾ॥ ಗಂಗಾ ಯಮುನಾನದಿಗಳ ಮಧ್ಯೆ ವಾಸಮಾಡತಕ್ಕವರು ಪ್ರಸನ್ನರಾಗಿ ಚಿರಂಜೀವಿತ್ವವು ಅಭಿವೃದ್ಧಿಯಾಗುವಂತೆ ನನ್ನನ್ನು ಆಶೀರ್ವದಿಸಲಿ. ಮತ್ತು ಗಂಗಾ ಯಮುನಾ ತೀರದಲ್ಲಿರುವ ಮುನಿಗಳಿಗೂ ನಮಸ್ಕರಿಸುತ್ತೇನೆ, ಎಂದು ಸ್ಥೂಲವಾದ ಅರ್ಥ. ಇದರ ತತ್ತ್ವಾರ್ಥವು ಮಹತ್ತಿನದು.

[ಈ ತತ್ತ್ವದ ವಿವರವನ್ನು ರಾಮಾಯಣದ ಅಂತರಾರ್ಥಗ್ರಂಥದಲ್ಲಿ ಅಕ್ಷಕುಮಾರನ ವಧೆಯ ಪ್ರಕರಣದಲ್ಲಿ ನೋಡಬಹುದು ]

## ಋಷಿ ದೇವತಾದಿ ನಮಸ್ಕಾರ.

### ಋಗ್ಯಜುಸ್ಸಾಮಶಾಖಾಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರು

ಸಂಧ್ಯಾಯೈನಮಃ । ಸಾವಿತ್ರ್ಯೈನಮಃ । ಗಾಯತ್ರ್ಯೈನಮಃ । ಸರಸ್ವತ್ಯೈನಮಃ । ಸರ್ವಾಭ್ಯೋ ದೇವತಾಭ್ಯೋನಮಃ । ದೇವೇಭ್ಯೋನಮಃ । ಮುನಿಭ್ಯೋನಮಃ । ಋಷಿಭ್ಯೋನಮಃ । ಗುರುಭ್ಯೋನಮಃ । ಮಾತೃಭ್ಯೋನಮಃ । ಪಿತೃಭ್ಯೋನಮಃ । ಆಚಾರ್ಯೇಭ್ಯೋನಮಃ । ಕಾಮೋಽಕಾರ್ಷೀನ್ಮನ್ಯುರಕಾರ್ಷೀನ್ನಮೋನಮಃ ॥

ತಾ॥ ಸಂಧ್ಯಾದಿ ದೇವತೆಗಳನ್ನುದ್ದೇಶಿಸಿ ವಂದಿಸುವುದಲ್ಲದೆ ಮಾತಾ ಪಿತೃ ಗುರುಗಳನ್ನುದ್ದೇಶಿಸಿ ವಂದನೆಯನ್ನು ಸಮರ್ಪಿಸಬೇಕು. ಮಾತಾಪಿತೃಗಳು ದೇವತಾಸಮಾನರು ಇವರನ್ನುದ್ದೇಶಿಸಿ ವಂದಿಸುವುದರಿಂದ ಇವರಲ್ಲಿ ನೈಜವಾದ ಭಕ್ತಿಯು ನೆಲೆಗೊಳ್ಳುತ್ತಾ ಬರುವುದು.

### ಸ್ತೋತ್ರಗಳು

೧ ಪೃಥಿವ್ಯಾಪಸ್ತೇಜೋ ವಾಯುರಾಕಾಶಾತ್ ।
ಓನ್ನಮೋಭಗವತೇ ವಾಸುದೇವಾಯ ॥

ತಾ॥ ಪೃಥಿವ್ಯಾದಿ ಪಂಚಭೂತಗಳ ಅಭಿಮಾನದೇವತೆಗಳಿಗೂ ಭಗವಂತನಾಗಿ ಪ್ರಣವರೂಪನಾದ ವಾಸುದೇವನಿಗೂ ನಮಸ್ಕಾರವು.

೨ ಯಾಗ್ಂಸದಾ ಸರ್ವಭೂತಾನಿ ಚರಾಣಿ ಸ್ಥಾವರಾಣಿಚ ।
ಸಾಯಂಪ್ರಾತರ್ನಮಸ್ಯನ್ತಿ ಸಾಮಾಸಂಧ್ಯಾಽಭಿರಕ್ಷತು ॥

ತಾ॥ ಇದರ ತಾತ್ಪರ್ಯವನ್ನು ಪ್ರಥಮ ಪ್ರಕರಣದಲ್ಲಿ ಸಂಧ್ಯಾಶಕ್ತಿ ವಿಚಾರದಲ್ಲಿ ಬರೆದಿರುವುದು.

೩ ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ ।
ಶಿವಸ್ಯ ಹೃದಯಂ ವಿಷ್ಣುಃ ವಿಷ್ಣೋಶ್ಚ ಹೃದಯಂ ಶಿವಃ ॥
ಯಥಾ ಶಿವಮಯೋ ವಿಷ್ಣುಃ ಏವಂವಿಷ್ಣು ಮಯಶ್ಶಿವಃ ।
ಯಥಾಂತರಂ ನಪಶ್ಯಾಮಿ ತಥಾಮೇ ಸ್ವಸ್ತಿರಾಯುಷೀ ॥

ತಾ॥ ಶಿವತತ್ವವೇ ವಿಷ್ಣುತತ್ವವು ವಿಷ್ಣುತತ್ವವೇ ಶಿವತತ್ವವು. ಶಿವನೇ ವಿಷ್ಣುರೂಪನು ವಿಷ್ಣುವೇ ಶಿವರೂಪನು. ಶಿವಸ್ವರೂಪನಾದ ವಿಷ್ಣುವಿಗೂ ವಿಷ್ಣುಸ್ವರೂಪನಾದ ಶಿವನಿಗೂ ನಮಸ್ಕರಿಸುವೆನು ಹರಿಹರರಿಗೆ ಅಭೇದಭಾವನೆಯನ್ನು ನಾವು ಹೊಂದಿರುವಂತೆ ನನ್ನ ಆಯುಃಪ್ರಮಾಣದ ವಿಷಯದಲ್ಲಿ ಮಂಗಳವಾಗಲಿ. ಅಂದರೆ ಹರಿಹರರೂಪವಾಗಿ ಬೆಳಗುತಲಿರುವ ಒಂದಾದ ಚಿದ್ವಸ್ತುವಿನ

ಅನುಗ್ರಹದಿಂದ ಚಿರಂಜೀವಿತ್ವವು ನನಗೆ ಉಂಟಾಗಲಿ.

೪ ಬ್ರಹ್ಮಣ್ಯೋ ದೇವಕೀಪುತ್ರೋ ಬ್ರಹ್ಮಣ್ಯೋ ಮಧುಸೂದನಃ ।
ಬ್ರಹ್ಮಣ್ಯಃ ಪುಂಡರೀಕಾಕ್ಷೋ ಬ್ರಹ್ಮಣ್ಯೋ ವಿಷ್ಣುರಚ್ಯುತಃ ॥

೫ ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣ ಹಿತಾಯಚ ।
ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋನಮಃ ॥

ತಾ॥ ಸರ್ವ ಮೂಲಕಾರಣನಾದ ಪರಬ್ರಹ್ಮನ ಅಂಶನಾದ ದೇವಕೀಪುತ್ರನಾದ ಶ್ರೀಕೃಷ್ಣಭಗವಂತನೂ, ಮಧುವೈರಿಯಾದ ಶ್ರೀಮಹಾವಿಷ್ಣುವೂ, ಪುಂಡರೀಕಾಕ್ಷನೆನಿಸಿದ ವೈಕುಂಠವಾಸಿಯಾದ ನಾರಾಯಣನೂ, ಆ ಪರಬ್ರಹ್ಮನೇ. ಬ್ರಾಹ್ಮಣರಿಗೆ ದೇವನಾದ ಗೋಬ್ರಾಹ್ಮಣರಿಗೂ ಜಗತ್ತಿಗೂ ಹಿತವನ್ನುಂಟು ಮಾಡುವ ಶ್ರೀಕೃಷ್ಣನಿಗೆ ನಮಸ್ಕಾರ

೬ ಕ್ಷೀರೇಣ ಸ್ನಾಪಿತೇದೇವಿ ಚಂದನೇನ ವಿಲೇಪಿತೇ ।
ಬಿಲ್ವಪತ್ರಾರ್ಚಿತೇ ದೇವಿ ದುರ್ಗೇಽಹಂ ಶರಣಂ ಗತಃ ॥

ತಾ॥ ಅಮೃತಧಾರೆಯಿಂದ ಸ್ನಾನಮಾಡಿಸಲ್ಪಟ್ಟ (ಅಮೃತಮಯವಾಗಿರುವ) ಪರಿಮಳದಿಂದ ಲೇಪಿಸಲ್ಪಟ್ಟ (ನಿಜಾನಂದರೂಪವಾಗಿರುವ) ತ್ರಿದಳಗಳುಳ್ಳ ಬಿಲ್ವಗಳಿಂದ ಅರ್ಚಿಸಲ್ಪಟ್ಟ ಅಂದರೆ ತ್ರಿಗುಣಾಕಾರವೂ ನಿನ್ನ ಚರಣಾರವಿಂದಗಳಲ್ಲಿ ಅರ್ಪಿತವಾಗಿರುವ ಪರಾತ್ಪರವಸ್ತುವಾದ ಎಲೌ ಸಂಧ್ಯಾದೇವಿಯೇ ! (ಕುಂಡಲಿನಿಯೆ) ನಿನ್ನನ್ನು ನಾನು ಮರೆಹೊಕ್ಕಿರುವೆನು. ಪ್ರಸನ್ನಳಾಗಿ ನನ್ನನ್ನು ಸಂರಕ್ಷಿಸು.

೭ ನಮೋಸ್ತ್ವನಂತಾಯ ಸಹಸ್ರಮೂರ್ತಯೇ ।
ಸಹಸ್ರಪಾದಾಕ್ಷಿ ಶಿರೋರುಬಾಹವೇ ॥
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ ।
ಸಹಸ್ರಕೋಟಿ ಯುಗಧಾರಿಣೇನಮಃ ॥

ತಾ॥ ಅನಂತಗಳಾದ ಆಕಾರಗಳೂ ಚರಣಗಳೂ ನೇತ್ರಗಳೂ ತೊಡೆಗಳೂ ತೋಳುಗಳೂ ಹೆಸರುಗಳೂ ಉಳ್ಳ, ವಿರಾಟ್‌ಪುರುಷನೆನಿಸಿಕೊಂಡಿರುವ, ಹೃದಯದಲ್ಲಿ ವಾಸಿಸುವ, ಜಗನ್ನಿಯಾಮಕನಾದ, ಅನೇಕ ಕೋಟಿ ಸಂಖ್ಯೆಗಳಾದ ಯುಗಗಳನ್ನು ಧರಿಸಿರುವ, ನಿತ್ಯನಾದ ಪರಮಾತ್ಮನಿಗೆ ನಮಸ್ಕಾರವು.

೮ ಆಬ್ರಹ್ಮಲೋಕಾದಾಶೇಷಾತ್ ಆಲೋಕಾಲೋಕಪರ್ವತಾತ್ ।
ಯೇವಸಂತಿ ದ್ವಿಜಾದೇವಾಃ ತೇಭ್ಯೋನಿತ್ಯಂ ನಮೋನಮಃ ॥

ತಾ॥ ಬ್ರಹ್ಮಲೋಕ ಮೊದಲು ಪಾತಾಳಲೋಕದವರೆಗಿರುವ ಬ್ರಾಹ್ಮಣರಿಗೂ ದೇವತೆಗಳಿಗೂ ನಿತ್ಯವೂ ನಮಸ್ಕರಿಸುತ್ತೇನೆ

೯ ಯಮಾಯ ಧರ್ಮರಾಜಾಯ ಮೃತ್ಯವೇಚಾ ನ್ತಕಾಯಚ ।
ವೈವಸ್ವತಾಯ ಕಾಲಾಯ ಸರ್ವಭೂತ ಕ್ಷಯಾಯಚ ॥
ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ।
ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯವೈನಮಃ ॥

ತಾ॥ ಯಮ, ಧರ್ಮರಾಜ, ಮೃತ್ಯು, ಅಂತಕ, ಸೂರ್ಯಪುತ್ರ, ಕಾಲ, ಲಯಕರ್ತೃ, ಔದುಂಬರ, ದಧ್ನ, ನೀಲ, ಪರಮೇಷ್ಠಿ, ವೃಕೋದರ, ಚಿತ್ರ, ಚಿತ್ರಗುಪ್ತ ಎಂಬ ಹೆಸರುಗಳನ್ನು ಹೊಂದಿರುವ ಯಮನಿಗೆ ನಮಸ್ಕಾರ.

೧೦ ಋತಗ್‌ಂ ಸತ್ಯಂ ಪರಂಬ್ರಹ್ಮ ಪುರುಷಂ ಕೃಷ್ಣಪಿಂಗಳಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯವೈನಮಃ ॥

ತಾ॥ ಕರ್ಮಫಲವನ್ನು ಸ್ವೀಕರಿಸುವ ಸತ್ಯರೂಪನಾದ ಪರಬ್ರಹ್ಮನಾದ ಅಂತರ್ಯಾಮಿಯಾದ ಚಿತ್ರವರ್ಣರೂಪನಾದ ಊರ್ಧ್ವರೇತಸ್ಕನಾದ ತ್ರಿಲೋಚನನಾದ ವಿಶ್ವರೂಪನಿಗೆ ನಮಸ್ಕಾರವು.

೧೧ ನರ್ಮದಾಯ್ಯೈನಮಃ ಪ್ರಾತಃನರ್ಮದಾಯ್ಯೆ ನಮೋನಿಶಿ ।
ನಮೋಽಸ್ತು ನರ್ಮದೇತುಭ್ಯಂ ಪಾಹಿಮಾಂ ವಿಷಸರ್ಪತಃ ॥

ತಾ॥ ಪ್ರಾತಸ್ಸಾಯಂಕಾಲಗಳಲ್ಲಿ ನರ್ಮದೆಗೆ ನಮಸ್ಕರಿಸುವೆನು. ನರ್ಮದಾದೇವಿಯೆ! ವಿಷಸರ್ಪದಿಂದ ನನ್ನನ್ನು ರಕ್ಷಿಸು.

೧೨ ಅಪಸರ್ಪ ಸರ್ಪಭದ್ರನ್ತೇ ದೂರಂಗಚ್ಛ ಮಹಾಯಶಃ ।
ಜನಮೇಜಯಸ್ಯ ಯಜ್ಞಾನ್ತೇ ಅಸ್ತೀಕವಚನಂಸ್ಮರ್ರ ॥
ಜರತ್ಕಾರೋ ರ್ಜರತ್ಕಾರ್ವಾಂ ಸಮುತ್ಪನ್ನೋ ಮಹಾಯಶಾಃ ।
ಅಸ್ತೀಕ ಸ್ಸತ್ಯಸಂಧೋ ಮಾಂ ಪನ್ನಗೇಭ್ಯೋಽಭಿರಕ್ಷತು ॥

ತಾ॥ ಎಲೈ ಸರ್ಪವೇ! ದೂರವಾಗಿ ಹೋಗು ನಿನಗೆ ಮಂಗಳವಾಗಲಿ. ಜನಮೇಜಯನ ಯಜ್ಞದಲ್ಲಿ ಅಸ್ತೀಕಋಷಿಯ ವಚನವನ್ನು ಸ್ಮರಿಸಿಕೊ. ಜರತ್ಕಾರು ಋಷಿಯದೆಸೆಯಿಂದ ಜರತ್ಕಾರಿ ಎಂಬ ನಾಗಕನ್ಯೆಯಲ್ಲಿ ಹುಟ್ಟಿದ ಮಹಾಯಶಸ್ವಿಯಾದ ಸತ್ಯಸಂಧನಾದ ಅಸ್ತೀಕಋಷಿಯು ಸರ್ಪಗಳದೆಸೆಯಿಂದ ನನ್ನನ್ನು ರಕ್ಷಿಸಲಿ.

೧೩ ವಾಸನಾ ದ್ವಾಸುದೇವಸ್ಯ ವಾಸಿತಂತೇ ಜಗತ್ರಯಂ ।
ಸರ್ವಭೂತ ನಿವಾಸೋಽಸಿ ವಾಸುದೇವ ನಮೋಸ್ತುತೆ ॥

ತಾ॥ ಎಲೈ ಪರಮಾತ್ಮನೇ! ನೀನು ಸರ್ವಾಂತರ್ಯಾಮಿಯಾಗಿ ಸರ್ವದಾ ವಾಸಮಾಡುತ್ತಿರುವುದರಿಂದ ಲೋಕತ್ರಯವೂ ನಿಂತಿರುವುದು. ಸರ್ವಾಂತರ್ಯಾಮಿಯಾದ ನಿನಗೆ ನಮಸ್ಕಾರವು.

೧೪ ಆಕಾಶಾತ್ಪತಿತಂ ತೋಯಂ ಯಥಾಗಚ್ಛತಿ ಸಾಗರಂ |
ಸರ್ವದೇವನಮಸ್ಕಾರಃ ಕೇಶವಂ ಪ್ರತಿಗಚ್ಛತಿ ||

ತಾ|| ಮೇಘಮಂಡಲದಿಂದ ಬಿದ್ದ ನೀರು ಸಮುದ್ರವನ್ನು ಸೇರುವಂತೆ ಯಾವ ದೇವತೆಗಳಿಗೆ ನಮಸ್ಕಾರಮಾಡಿದರೂ ಪರಮಾತ್ಮನನ್ನೇ ಹೊಂದುವುದು.

ಮೇಲಿನ ದೇವತಾಸ್ತೋತ್ರಗಳಲ್ಲಿ ಋಗ್ವೇದಿಗಳು ೧. ೨. ೩. ೪. ೫. ೬. ೭. ೮. ೧೪ ನೆಯ ಶ್ಲೋಕಗಳನ್ನೂ, ಯಜುರ್ವೇದಿಗಳು ೧. ೨. ೩. ೪. ೫. ೭. ೧೩. ೧೪ ನೆಯ ಶ್ಲೋಕಗಳನ್ನೂ, ಸಾಮವೇದಿಗಳು ೧. ೨. ೩. ೯. ೧೦. ೧೧. ೧೨. ೧೪ ನೆಯ ಶ್ಲೋಕಗಳನ್ನೂ, ಕ್ಷತ್ರಿಯರು ೩. ೪. ೫. ೧೩. ೧೪ ನೆಯ ಶ್ಲೋಕಗಳನ್ನೂ, ವೈಶ್ಯರು ೩ ೪. ೫. ೭. ೧೩. ೧೪ ನೆಯ ಶ್ಲೋಕಗಳನ್ನೂ ಹೇಳುವ ವಾಡಿಕೆಯು ಕಂಡುಬರುವುದು. ಸ್ತೋತ್ರಭಾಗವಾದುದರಿಂದ ಇನ್ನೂ ಅಧಿಕವಾದ ಸ್ತೋತ್ರಗಳನ್ನು ಸೇರಿಸಿಕೊಳ್ಳಬಹುದು.

## ಅಭಿವಾದನೆ.

ಚತುಸ್ಸಾಗರಪರ್ಯಂತಂ ಗೋ ಬ್ರಾಹ್ಮಣೇಭ್ಯಃ ಶುಭಂ ಭವತು |

ಗೋತ್ರ, ಸೂತ್ರ, ಶಾಖೆಗಳನ್ನು ಹೇಳಿಕೊಂಡು "ಅಹಂಭೋ ಅಭಿವಾದಯೇ" ಎಂದು ಹೇಳಿ ನಮಸ್ಕಾರಮಾಡಬೇಕು.

## ಸಂಧ್ಯಾಕರ್ಮ ನ್ಯೂನತಾಪರಿಹಾರ

ಯಸ್ಯಸ್ಮೃತ್ಯಾಚ ನಾಮೋಕ್ತ್ಯಾ ತಪಸ್ಸಂಧ್ಯಾಕ್ರಿಯಾದಿಷು |
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಂ ||
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ |
ಯತ್ಕೃತಂತು ಮಯಾದೇವ ಪರಿಪೂರ್ಣಂ ತದಸ್ತುತೇ ||
ಅನೇನ ಪ್ರಾತಃ (ಮಾಧ್ಯಾಹ್ನಿಕ) (ಸಾಯಂ) ಸಂಧ್ಯಾವಂದನೇನ ಭಗವಾನ್
ಸರ್ವಾತ್ಮಕಃ ತತ್ಸರ್ವಂ ಶ್ರೀವಾಸುದೇವಾರ್ಪಣಮಸ್ತು.
ಮಧ್ಯೇ ಮಂತ್ರ ತಂತ್ರ ಧ್ಯಾನನಿಯಮ ಸ್ವರವರ್ಣ ಲೋಪ ದೋಷ
ಪ್ರಾಯಶ್ಚಿತ್ತಾರ್ಥಂ ನಾಮತ್ರಯ ಮಂತ್ರಜಪಂ ಕರಿಷ್ಯೇ ||

"ಅಚ್ಯುತಾಯನಮಃ ಅನಂತಾಯನಮಃ ಗೋವಿಂದಾಯನಮಃ" ಎಂದು ಮೂರಾವರ್ತಿ ಹೇಳಿ "ಅಚ್ಯುತಾನಂತಗೋವಿಂದೇಭ್ಯೋನಮಃ" ಎಂದು ಅಂತ್ಯದಲ್ಲಿ ಹೇಳಬೇಕು.

ತಾ|| ಯಾವ ಪರಮಾತ್ಮನ ಸ್ಮರಣ ಮತ್ತು ನಾಮೋಚ್ಚಾರಣ ಮಾತ್ರದಿಂದ ತಪಸ್ಸಂಧ್ಯಾದಿ ಕರ್ಮಗಳಲ್ಲಿನ ನ್ಯೂನತೆಗಳೆಲ್ಲವೂ ಪರಿಹಾರವಾಗಿ ಪೂರ್ಣತೆಯನ್ನು ಪಡೆಯುವವೋ ಅಂತಹ ಅಚ್ಯುತನಿಗೆ ನಮಸ್ಕರಿಸುವೆನು. ಮಂತ್ರ, ಕರ್ಮ, ಭಕ್ತಿಗಳಲ್ಲಿ ಲೋಪವುಂಟಾಗಿದ್ದರೆ ಅಂತಹ ದೋಷಗಳು ತೊಲಗಿ

ಪೂರ್ಣಫಲಪ್ರದವಾಗುವಂತೆ ಎಲೈ ಪರಮಾತ್ಮನೇ ! ಅನುಗ್ರಹಿಸು.

## ಪರಮಾತ್ಮನಲ್ಲಿ ಕರ್ಮಫಲ ಸಮರ್ಪಣೆ.

ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾ ತ್ಕರೋಮಿ ಯದ್ಯತ್ಸಕಲಂ ಪರಸ್ಮೈ ಶ್ರೀಮನ್ನಾರಾಯಣಾ ಯೇತಿ ಸಮರ್ಪಯಾಮಿ ॥ ಆಚಮ್ಯ ॥

ತಾ॥ ಶರೀರ ವಾಕ್ಕು ಮನಸ್ಸು ಇಂದ್ರಿಯ ಬುದ್ಧಿ ಅಹಂಕಾರ ಮತ್ತು ಅಜ್ಞಾನಗಳಿಂದ ಮಾಡಲ್ಪಟ್ಟ ಸಕಲವನ್ನೂ ಶ್ರೀಮನ್ನಾರಾಯಣನಿಗೆ ಸಮರ್ಪಿಸುವೆನು.

॥ **ಓಂ ತತ್ಸದ್ಬ್ರಹ್ಮಾರ್ಪಣಮಸ್ತು** ॥



# ಮಾಧ್ಯಾಹ್ನಿಕ ಸಂಧ್ಯಾ ಸೂರ್ಯೋಪಸ್ಥಾನಂ

### ಋುಕ್ಶಾಖಾ ಬ್ರಾಹ್ಮಣರು.

ಗಾಯತ್ರೀ ಉದ್ವಾಸನಾಮಂತ್ರವಾದ "ಉತ್ತಮೇ ಶಿಖರೇ" ಎಂಬ ಮಂತ್ರ ವನ್ನು ಋಗ್ಯಜುಸ್ಸಾಮಶಾಖೆಯವರೆಲ್ಲರೂ ಹೇಳಿ ಅನಂತರ ಸೂರ್ಯೋಪಸ್ಥಾನ ಮಂತ್ರವನ್ನು ಹೇಳತಕ್ಕದ್ದು

ಉದುತ್ಯಂ ಜಾತವೇದಸಮಿತಿ ತ್ರಯೋದಶಸೂಕ್ತಸ್ಯ। ಕಣ್ವಪುತ್ರಃ ಪ್ರಸ್ಕಣ್ವ ಋಷಿಃ । ಸೂರ್ಯೋದೇವತಾ । ನವಾದ್ಯಾ ಗಾಯತ್ರೀ ಛಂದಃ । ಉದ್ವಯಂತಮಸಸ್ಪರೀತಿ ಚತಸ್ರೋನುಷ್ಟುಭಃ । ಉದ್ಯನ್ನದ್ಯೇತಿ ತ್ರಿಚೋ ರೋಗಘ್ನಾಃ । ಉಪನಿಷದಂ ಚೋರ್ಧ್ವ ರ್ಚೋದ್ವಿಷಘ್ನಾಃ । ಸೂರ್ಯೋಪ ಸ್ಥಾನೇ ವಿನಿಯೋಗಃ ॥

ಉದುತ್ಯಂ ಜಾತವೇದಸಂ ದೇವಂವಹನ್ತಿ ಕೇತವಃ। ದೃಶೇ ವಿಶ್ವಾಯ ಸೂರ್ಯಂ ॥ ಅಪತ್ಯೇತಾಯಪೋಯಥಾ। ನಕ್ಷತ್ರಾಯನ್ತ್ಯಕ್ತುಭಿಃ। ಸೂರ್ಯಾಯ ವಿಶ್ವಚಕ್ಷಸೇ। ಅದೃಶ್ರಮಸ್ಯಕೇತವೋ ವಿರಶ್ಮ ಯೋಜನಾಂ ಅನು। ಭ್ರಾಜನ್ತೋ ಅಗ್ನ ಯೋಯಥಾ ॥ ತರಣಿರ್ವಿಶ್ವದರ್ಶತೋ । ಜ್ಯೋತಿಷ್ಕೃ ದಸಿ ಸೂರ್ಯ । ವಿಶ್ವಮಾಭಾಸಿ ರೋಚನಂ ॥ ಪ್ರತ್ಯಙ್ದೇವಾನಾಂ ವಿಶಃ ಪ್ರತ್ಯಙ್ಙುದೇಷಿಮಾನುಷಾನ್। ಪ್ರತ್ಯಙ್ವಿಶ್ವಂ ಸ್ವರ್ದೃಶೇ । ಏನಾಪಾವಕ ಚಕ್ಷಸಾ ಭುರಣ್ಯಂ ತಂಜನಾಂ ಅನು । ತ್ವಂವರುಣ ಪಶ್ಯಸಿ ॥ ವಿದ್ಯಾಮೇಷಿ ರಜಸ್ಪೃಥ್ವಹ । ಮಿಮಾನೋ ಅಕ್ತುಭಿಃ । ಪಶ್ಯನ್ಜನ್ಮಾನಿ ಸೂರ್ಯ ಸಪ್ತತ್ವಾ ಹರಿತೋರಥೇ । ವಹನ್ತಿ ದೇವಸೂರ್ಯ ॥ ಶೋಚಿಷ್ಕೇಶಂವಿಚಕ್ಷಣ ।

ಅಯುಕ್ತ ಸಪ್ತ ಶುಂಧ್ಯುವಃ ಸೂರೋರಥಸ್ಯನಪ್ತ್ಯಃ | ತಾಭಿರ್ಯಾತಿ ಸ್ವಯುಕ್ತಿಭಿಃ ||

ತಾ|| ಹೆಗ್ಗುರುತಾದ ಸೂರ್ಯಕಿರಣಗಳು ಪ್ರಾಣಿಗಳ ದರ್ಶನಕ್ಕೋಸ್ಕರ ಸೂರ್ಯಭಗವಂತನನ್ನು ಅಂತರಿಕ್ಷದ ಮೇಲ್ಭಾಗಕ್ಕೆ ಒಯ್ಯುತ್ತಲಿವೆ || ಸೂರ್ಯನ ಆಗಮನವನ್ನು ನೋಡಿ ನಕ್ಷತ್ರಗಳು ರಾತ್ರಿಯೊಡನೆ ಕಳ್ಳರ ಹಾಗೆ ಮರೆಯಾಗುತ್ತಿವೆ || ಅಗ್ನಿಯಂತೆ ಪ್ರಕಾಶಮಾನಗಳಾದ ಧ್ವಜಪಟಗಳಂತಿರುವ ಸೂರ್ಯಕಿರಣಗಳು ಪ್ರಾಣಿಗಳನ್ನೆಲ್ಲಾ ಪ್ರಕಾಶಪಡಿಸುತ್ತಿವೆ || ಸೂರ್ಯಭಗವಂತನು ವಿಸ್ತಾರವಾದ ಆಕಾಶಮಾರ್ಗವನ್ನು ದಾಟತಕ್ಕವನು ಮತ್ತು ಉಪಾಸಕರನ್ನು ಭವಬಂಧನದಿಂದ ಬಿಡಿಸತಕ್ಕವನು. ಪ್ರಕಾಶಕರ್ತನಾದ ಸೂರ್ಯಭಗವಂತನೆ! ನೀನು ಅಂತರಿಕ್ಷವನ್ನು ವ್ಯಾಪಿಸಿ ಸರ್ವಪ್ರಾಣಿಗಳನ್ನೂ ಪ್ರಕಾಶಪಡಿಸುತ್ತೀಯೆ || ಎಲೈ ಸೂರ್ಯಭಗವಂತನೇ! ಲೋಕತ್ರಯವಾಸಿಗಳಿಗೂ ಅಭಿಮುಖನಾಗಿ ಉದಯಿಸುತ್ತೀಯೆ || ಶೋಧಕನಾಗಿರುವ ಸರ್ವಾರಿಷ್ಟವನ್ನೂ ಪರಿಹರಿಸುವ ಸಮಸ್ತ ಜಗತ್ತನ್ನೂ ತೇಜಸ್ಸಿನಿಂದ ಪವಿತ್ರವಾದದ್ದನ್ನಾಗಿ ಮಾಡುವ ಸೂರ್ಯಭಗವಂತನೇ ನಿನ್ನನ್ನು ಸ್ತುತಿಸುತ್ತೇನೆ || ಸೂರ್ಯಭಗವಂತನೆ! ನೀನು ಹಗಲು ರಾತ್ರಿಗಳಿಗೆ ಜನಕನು ಮತ್ತು ಭೂಮ್ಯಂತರಿಕ್ಷಗಳನ್ನು ಪ್ರಕಾಶಗೊಳಿಸುತ್ತಲಿರುವೆ || ಸರ್ವಪ್ರಕಾಶಕನಾಗಿರುವ ಸೂರ್ಯನೆ! ಹಸಿರುಬಣ್ಣದ ಸಪ್ತಾಶ್ವಗಳಿಂದ ಕಟ್ಟಲ್ಪಟ್ಟು ಕೂದಲುಗಳಂತಿರುವ ಕಿರಣಗಳುಳ್ಳ ರಥದಲ್ಲಿ ಕುಳಿತು ಪ್ರಯಾಣಮಾಡುತ್ತಿರುವೆ || ರಥವು ಪರಿಶುದ್ಧಗಳಾದ ಏಳು ಹೆಣ್ಣು ಕುದುರೆಗಳಿಂದ ಕಟ್ಟಲ್ಪಟ್ಟಿದೆ. ಕುದುರೆಗಳು ರಥವನ್ನು ಕೆಡಹುವುದಿಲ್ಲ. ಸೂರ್ಯಭಗವಂತನು ತನ್ನ ಹೂಟದ ಚಾತುರ್ಯದಿಂದ ಅಶ್ವಗಳ ಮೂಲಕ ಪ್ರಯಾಣ ಮಾಡುತ್ತಾನೆ ||

ಉದ್ವಯಂತಮಸಸ್ಪರಿ | ಪಶ್ಯಂತೋಜ್ಯೋತಿರುತ್ತರಂ | ದೇವಂದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಂ || ಉದ್ಯಂನದ್ಯಮಿತ್ರಮಃ | ಆರೋಹಂ ನ್ನುತ್ತರಾಂದಿವಂ | ಹೃದ್ರೋಗಂಮಮಸೂರ್ಯ | ಹರಿಮಾಣಂಚನಾಶಯ | ಶುಕೇಷುಮೆಹರಿಮಾಣಂ | ರೋಪಣಾಕಾಸುದಧ್ಮಸಿ | ಅಥೋಹಾರಿದ್ರವೇಷುಮೆ | ಹರಿಮಾಣಂನಿದಧ್ಮಸಿ | ಉದಗಾದಯಮಾದಿತ್ಯೋ | ವಿಶ್ವೇನ ಸಹಸಾಸಹ | ದ್ವಿಷಂತಂ ಮಹ್ಯಂರಂಧರ್ಯ ಮೋಅಹಂ ದ್ವಿಷತೇರಥಂ ||

ತಾ|| ಉಪಾಸಕರಾದ ನಾವು ಅಜ್ಞಾನಾಂಧಕಾರಕ್ಕೆ ಸಂಬಂಧವಿಲ್ಲದ ದೇವತೆಗಳೊಳಗೆ ಪ್ರಕಾಶಮಾನನಾದ ಸೂರ್ಯಭಗವಂತನನ್ನು ದರ್ಶನಮಾಡಿ ಶ್ರೇಷ್ಠವಾದ ಆದಿತ್ಯಜ್ಯೋತಿಸ್ವರೂಪವಾದ ಸಾಯುಜ್ಯವನ್ನು ಹೊಂದುತ್ತೇವೆ || ಜಗತ್ತಿಗೆ ಹಿತವನ್ನುಂಟುಮಾಡುವ ಸೂರ್ಯಭಗವಂತನೆ! ಅಂತರಿಕ್ಷದ ಮಧ್ಯಕೇಂದ್ರದಲ್ಲಿ

ಏರಿ ಪ್ರಕಾಶಮಾನನಾಗಿರುವೆ. ನನ್ನ ಅಂತರ ಮತ್ತು ಬಾಹ್ಯರೋಗಗಳನ್ನು ಪರಿಹರಿಸು || ಶರೀರ ರೋಗದಿಂದುಂಟಾದ ಹಸಿರು ಮೊದಲಾದ ವಿರುದ್ಧ ವರ್ಣಗಳನ್ನು ಗಿಣಿ ಮತ್ತು ತಾಳೇಗಿಡಗಳಲ್ಲಿಟ್ಟು ನಾನು ನಿನ್ನ ತೇಜಸ್ಸನ್ನು ಹೊಂದುವಂತೆ ಅನುಗ್ರಹಿಸು || ಈ ಸೂರ್ಯಭಗವಂತನು ವಿಶ್ವಬಲದಿಂದ ನನಗೆ ಹಗೆಯಾದ ರೋಗವನ್ನು ನನ್ನ ಪ್ರಯತ್ನವಿಲ್ಲದೆ ನಾಶಗೊಳಿಸಲಿ ||

ಚಿತ್ರಂದೇವಾನಾ ಮುದಗಾದನೀಕಂ | ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ | ಆಪ್ರಾದ್ಯಾವಾ ಪೃಥಿವೀಅಂತರಿಕ್ಷಂ | ಸೂರ್ಯಆತ್ಮಾ ಜಗತಸ್ತಸ್ಥುಷಶ್ಚ | ತಚ್ಚಕ್ಷುರ್ದೇವಹಿತಂ ಪುರಸ್ತಾ ಚ್ಛುಕ್ರಮುಚ್ಚರತ್ ||

ತಾ|| ದೇವತೆಗಳ ಸಮುದಾಯರೂಪರಾದ ಸೂರ್ಯನ, ವರುಣನ ಮತ್ತು ಅಗ್ನಿಯ ಚಕ್ಷುಸ್ಸಾಗಿ ಆಶ್ಚರ್ಯಕರವಾಗಿರುವ ಸೂರ್ಯಮಂಡಲವು ಉದಯಿಸಿ ಭೂವ್ಯೋಕಾಶಗಳಲ್ಲಿ ಎಲ್ಲೆಲ್ಲಿಯೂ ತನ್ನ ಬೆಳಕಿನಿಂದ ತುಂಬಿತು. ಈ ಮಂಡಲದೊಳಗಿರುವ ಸೂರ್ಯಪರಮಾತ್ಮನು ಚರಾಚರರೂಪವಾದ ಜಗತ್ತಿಗೆ ಆತ್ಮಸ್ವರೂಪನಾಗಿರುವನು. ದೇವತೆಗಳಿಗೆ ಹಿತವಾದ ಚಕ್ಷುರೂಪನಾದ ಸೂರ್ಯನು ತೇಜಸ್ಸನ್ನುಂಟುಮಾಡಲಿ.

ಸೂರ್ಯೋ ದೇವೀ ಮುಷಸಂ ರೋಚಮಾನಾಂ | ಮರ್ಯೋನಯೋಷಾಮಭ್ಯೇತಿಪಶ್ಚಾತ್ | ಯತ್ರಾನರೋದೇವಯಂತೋ ಯುಗಾನಿ | ವಿತನ್ವತೇ ಪ್ರತಿಭದ್ರಾಯ ಭದ್ರಂ || ಭದ್ರಾ ಅಶ್ವಾಹರಿತ ಸ್ಸೂರ್ಯಸ್ಯ ಚಿತ್ರಾಏತಗ್ವಾ ಅನುಮದ್ಯಾನಃ | ನಮಸ್ಯಂತೋದಿವ ಅಪೃಷ್ಠಮುಸುಃ | ಪರಿದ್ಯಾವಾ ಪೃಥಿವೀ ಯಂತಿಸದ್ಯಃ || ತತ್ಸೂರ್ಯಸ್ಯ ದೇವತ್ವಂ ತನ್ಮಹಿತ್ವಂ | ಮಧ್ಯಾ ಕರ್ತ್ರೋರ್ವಿತತಂ ಸಂಜಭಾರ ಯದೇದಯುಕ್ತ ಹರಿತಸ್ಸಧಸ್ಥಾ | ದಾದ್ರಾತ್ರೀ ವಾಸಸ್ತನುತೇ ಸಿಮಸ್ಮೈ || ತನ್ಮಿತ್ರಸ್ಯ ವರುಣಸ್ಯಾಭಿ ಚಕ್ಷೇ | ಸೂರ್ಯೋ ರೂಪಂ ಕೃಣುತೇದ್ಯೌರುಪಸ್ಥೇ| ಅನಂತಮನ್ಯದ್ರುಶತಸ್ಯಪಾಜಃ ಕೃಷ್ಣಮನ್ಯ ಧರಿತಸ್ಸಂಭರಂತೀ || ಅದ್ಯಾದೇವಾ ಉದಿತ ಸೂರ್ಯಸ್ಯ ನಿರಂಹಸಃ ಪಿಪೃತಾ ನಿರವದ್ಯಾತ್| ತನ್ನೋ ಮಿತ್ರೋವರುಣೋಮಾಮಹಂ ತಾಮದಿತಿಸ್ಸಿಂಧುಃ ಪೃಥಿವೀ ಉತದ್ಯೌಃ ||

ತಾ|| ತರುಣನು ತರುಣಿಯನ್ನು ಹಿಂಬಾಲಿಸುವಂತೆ ಸೂರ್ಯನು ಬೆಳಗುತಲಿರುವ ಪ್ರಾತಃಕಾಲವನ್ನು ಅನುಸರಿಸಿ ಹೋಗುವನು, ದೇವತೆಗಳನ್ನುದ್ದೇಶಿಸಿ ಅಗ್ನಿಹೋತ್ರಾದಿ ಕರ್ಮವನ್ನಾಚರಿಸುವ ಯಜಮಾನರು ಪತ್ನೀಸಹಿತರಾಗಿ ಮಂಗಳಕ್ಕೋಸ್ಕರ ಕರ್ಮವನ್ನು ವಿವಿಧವಾಗಿ ವಿಸ್ತರಿಸುವರು. ಮಂಗಳಕರವಾದ ಹರಡುವ ಸ್ವಭಾವವುಳ್ಳ, ಹೊಗಳಿಸಿಕೊಳ್ಳುವ, ಮಾರ್ಗವನ್ನು ಬೇಗನೆ ಗಮನಿಸ

ತಕ್ಕ ಸೂರ್ಯಕಿರಣಗಳು ನಮ್ಮಿಂದ ನಮಸ್ಕರಿಸಿಕೊಳ್ಳುತ್ತ ಭೂಮ್ಯಂತರಿಕ್ಷ ಗಳನ್ನೆಲ್ಲಾ ವ್ಯಾಪಿಸಿಕೊಳ್ಳುತ್ತವೆ || ಸೂರ್ಯನು ಹರಡಿರುವ ತನ್ನ ಕಿರಣಗಳನ್ನು ತನ್ನಲ್ಲಿ ಅಡಗಿಸಿಕೊಂಡಾಗ ಜಗತ್ತು ಲಯವಾಗುವುದು. ಸೂರ್ಯನು ಇಂತಹ ಅಪಾರಮಹಿಮನು. ಸೂರ್ಯಭಗವಂತನು ಅಶ್ವಗಳನ್ನು ತನ್ನ ರಥದಿಂದ ಬಿಚ್ಚಿದ ಕೂಡಲೇ ಅಂಧಕಾರವಾದ ರಾತ್ರಿಯು ಹರಡಿಕೊಳ್ಳುತ್ತದೆ || ಸೂರ್ಯನು ಮಿತ್ರಾ ವರುಣರಿಂದ ಸೂಚಿತವಾದ ಲೋಕಗಳ ಎದುರಾಗಿ ಆಕಾಶದ ಮಧ್ಯೆ ತನ್ನ ತೇಜ ಸ್ಸನ್ನು ಹರಡುತ್ತಾನೆ. ಈತನ ಕಿರಣಗಳು ಹಗಲಿನಲ್ಲಿ ಅಂಧಕಾರವನ್ನು ನಾಶ ಪಡಿಸುವ ಧವಳವರ್ಣದ ಬೆಳಕನ್ನುಂಟುಮಾಡುತ್ತವೆ. ರಾತ್ರಿ ಕೃಷ್ಣವರ್ಣದ ತಮಸ್ಸನ್ನುಂಟುಮಾಡುತ್ತವೆ || ಸೂರ್ಯ ರಶ್ಮಿದೇವತೆಗಳಿರಾ ! ನಮ್ಮನ್ನು ಸಮಸ್ತ ಪಾಪಗಳಿಂದಲೂ ಉದ್ಧರಿಸಿರಿ. ಮಿತ್ರನೂ, ವರುಣನೂ, ದೇವಮಾತೆಯೂ, ಜಲಾಭಿಮಾನದೇವತೆಯೂ, ಭೂಮಾತೆಯೂ, ದ್ಯುಲೋಕಾಭಿಮಾನದೇವತೆಯೂ ಸಂತುಷ್ಟರಾಗಿ ನಮ್ಮನ್ನು ರಕ್ಷಿಸಲಿ ||

ಮುಂದಕ್ಕೆ ಪ್ರಾತಸ್ಸಂಧ್ಯಾವಂದನೆಯಲ್ಲಿ ಬರುವ ಸ್ತೋತ್ರಗಳನ್ನು ಹೇಳಿ ಉಪಸ್ಥಾನವನ್ನು ಪೂರ್ಣಮಾಡತಕ್ಕದ್ದು.

## ಯಜುಶ್ಶಾಖಾ ಬ್ರಾಹ್ಮಣರು.

ಆಸತ್ಯೇನ ರಜಸಾ ವರ್ತಮಾನೋ ನಿವೇಶಯನ್ನ ಮೃತಂಮರ್ತ್ಯಂಚ | ಹಿರಣ್ಯಯೇನ ಸವಿತಾರಥೇನ ಆದೇವೋಯಾತಿ ಭುವನಾವಿಪಶ್ಯ೯ | ಉದ್ವಯಂ ತಮಸಸ್ಪರಿ ಪಶ್ಯಂತೋ ಜ್ಯೋತಿರುತ್ತರಂ | ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಂ | ಉದುತ್ಯಂಜಾತವೇದಸಂ ದೇವಂವ ಹನ್ತಿ ಕೇತವಃ | ದೃಶೇವಿಶ್ವಾಯ ಸೂರ್ಯಂ | ಚಿತ್ರಂ ದೇವಾನಾ ಮುದ ಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ | ಆಪ್ರಾದ್ಯಾವಾ ಪೃಥಿವೀ ಅಂತರಿಕ್ಷಗ್ಂ ಸೂರ್ಯ ಆತ್ಮಾಜಗತಸ್ತಸ್ಥುಷಶ್ಚ ||

ತಾ|| ತೇಜಸ್ಸ್ವರೂಪವಾದ ರಥದಲ್ಲಿ ಕುಳಿತು ಸೂರ್ಯಭಗವಂತನು ಸ್ವರ್ಗ ಭೂಲೋಕಗಳಲ್ಲಿ ಸಂಚರಿಸುತ್ತಾ ನಾಶರಹಿತವಾದ ಪದವಿಯನ್ನೂ, ಜನನ ಮರಣರೂಪವಾದ ಕಾಲಚಕ್ರವನ್ನೂ ಅಧಿಕಾರಾನುಗುಣವಾಗಿ ಕೊಟ್ಟು ಲೋಕ ಗಳನ್ನು ನಿಯಮಿಸುತ್ತಿರುವನು || ಅಜ್ಞಾನವನ್ನು ಮೀರಿ ಮೇಲ್ಭಾಗದಲ್ಲಿರುವ ಜ್ಞಾನದೃಷ್ಟಿಯಿಂದ ನೋಡಬೇಕಾದ ಶ್ರೇಷ್ಠವಾದ ಜ್ಯೋತಿಸ್ವರೂಪನಾದ ದೇವ ಸಮೂಹದಲ್ಲಿ ಪ್ರಕಾಶಮಾನನೂ, ಶ್ರೇಷ್ಠನೂ, ತೇಜೋರೂಪನೂ ಆದ ಸೂರ್ಯನನ್ನು ಹೊಂದುವೆವು || ಲೋಕಾಗ್ರದಲ್ಲಿ ಪ್ರಕಾಶಿಸುತ್ತಿರುವ ಜಗತ್ಕಾರಣ ನಾದ ಸೂರ್ಯನನ್ನು ದರ್ಶನಮಾಡಲು ಅರ್ಹತೆಯನ್ನುಂಟುಮಾಡಲು ಕಿರಣಗಳು ಸೂರ್ಯನಲ್ಲಡಗುತ್ತವೆ || ಮಿತ್ರನಿಗೂ, ವರುಣನಿಗೂ, ಅಗ್ನಿಗೂ ನೇತ್ರಸ್ವರೂಪವಾದ

ಆಶ್ಚರ್ಯಕರವಾದ ದೇವತೆಗಳ ಸೈನ್ಯವು ಹುಟ್ಟಿತು. ಜಗದಾತ್ಮನಾದ ಸ್ಥಿರನಾದ ಸೂರ್ಯನು ಸ್ವರ್ಗವನ್ನೂ ಭೂಮಿಯನ್ನೂ ಆಕಾಶವನ್ನೂ ತುಂಬಿಸಿದನು ||

ತಚ್ಚಕ್ಷುರ್ದೇವಹಿತಂ ಪುರಸ್ತಾಚ್ಛುಕ್ರಮುಚ್ಚರತ್ | ಪಶ್ಯೇಮ ಶರದಶ್ಶತಂ ಜೀವೇಮಶರದಶ್ಶತಂ | ನನ್ದಾಮಶರದಶ್ಶತಂ | ಮೋದಾಮಶರದಶ್ಶತಂ | ಭವಾಮಶರದಶ್ಶತಂ | ಶೃಣವಾಮಶರದಶ್ಶತಂ | ಪ್ರಬ್ರವಾಮಶರದಶ್ಶತಂ | ಅಜೀತಾಸ್ಯಾಮಶರದಶ್ಶತಂ | ಜ್ಯೋಕ್ಚಸೂರ್ಯಂದೃಶೇ ||

ತಾ|| ದೇವತೆಗಳಿಗೆ ಇಷ್ಟನಾಗಿ ನೇತ್ರಪ್ರಾಯನಾಗಿ ಪೂರ್ವದಿಕ್ಕಿನಿಂದ ಸಂಚರಿಸುವ ಶುದ್ಧಸ್ವರೂಪನಾದ ಸೂರ್ಯಭಗವಂತನನ್ನು ನೂರುಸಂವತ್ಸರ ದರ್ಶನ ಮಾಡುವೆವು, ನೂರುಸಂವತ್ಸರ ಬದುಕುವೆವು, ಆನಂದವನ್ನು ಹೊಂದುವೆವು. ಸಂತುಷ್ಟಿಗೊಳ್ಳುವೆವು, ಅಭಿವೃದ್ಧಿಯನ್ನು ಹೊಂದುವೆವು, ಶಭವಾರ್ತೆಗಳನ್ನು ಕೇಳುವೆವು, ಇಷ್ಟವಚನಗಳನ್ನೇ ನುಡಿಯುವೆವು, ಅಜೇಯರಾಗುವೆವು, ಸೂರ್ಯಾತ್ಮಕವಾದ ಪರತರಜ್ಯೋತಿಯನ್ನು ದರ್ಶಿಸಲಪೇಕ್ಷಿಸುವೆವು.

ಯಉದಗಾನ್ಮಹತೋರ್ಣವಾ ದ್ವಿಭ್ರಾಜಮಾನ ಸ್ಸರಿರಸ್ಯಮಧ್ಯಾತ್ಸಮಾ ವೃಷಭೋ ಲೋಹಿತಾಕ್ಷ ಸ್ಸೂರ್ಯೋ ವಿಪಶ್ಚಿನ್ಮನಸಾಪುನಾತು ||

ತಾ|| ವಿಸ್ತಾರವಾದ ಸಮುದ್ರದಲ್ಲಿ ಉದ್ಭವಿಸಿದ ಜಲಮಧ್ಯದಲ್ಲಿ ಹೊಳೆಯುತ್ತಿರುವ ಕೆಂಪಾದ ಕಿರಣವುಳ್ಳವನಾದ ಜ್ಞಾನರೂಪನಾದ ಸೂರ್ಯಭಗವಂತನು ನನ್ನನ್ನು ಮನಃಪೂರ್ವಕವಾಗಿ ಉದ್ಧಾರಮಾಡಲಿ.

ಅನಂತರ ಪ್ರಾತಸ್ಸಂಧ್ಯಾವಂದನೆಯಲ್ಲಿ ಬರುವಂತೆ ಸಂಧ್ಯಾಯೈನಮಃ ಎಂಬುದರಿಂದ ಪ್ರಾರಂಭಮಾಡಿ ಉಪಸ್ಥಾನವನ್ನು ಪೂರ್ಣಮಾಡಬೇಕು.

## ಸಾಮಶಾಖಾ ಬ್ರಾಹ್ಮಣರು.

ಆದಿತ್ಯನಾವಮಾರೋಕ್ಷಂ ಪೂರ್ಣಾಂ ಪರಿಪಾಧಿನೀಂ | ಅಚ್ಛಿದ್ರಾಂ ಪಾರಯಿಷ್ಣುಂ ಶತಾರಿತ್ರಾಂ ಸ್ವಸ್ತಯೇ ಓನ್ನಮ ಆದಿತ್ಯಾಯ ನಮಆದಿತ್ಯಾಯ ನಮಆದಿತ್ಯಾಯ ||

ತಾ|| ಎಲೈ ಸೂರ್ಯನೆ! ನಿನ್ನ ಅನುಗ್ರಹವೆಂಬ ವಿಸ್ತಾರವಾದ ತಡೆಯಿಲ್ಲದಿರುವ ಛಿದ್ರವಿಲ್ಲದಿರುವ ಅನೇಕ ಶತ್ರುಗಳದೆಸೆಯಿಂದ ರಕ್ಷಿಸುವ ಹಡಗನ್ನು ಮಂಗಳಕ್ಕೋಸ್ಕರ ಹತ್ತುವೆನು. ನಿನಗೆ ಪುನಃಪುನಃ ನಮಸ್ಕಾರವು.

ಉದುತ್ಯಮಿತ್ರಸ್ಯಮಂತ್ರಸ್ಯ | ಸೂರ್ಯಋಷಿಃ | ಗಾಯತ್ರೀಚ್ಛನ್ದಃ | ಸೂರ್ಯೋದೇವತಾ | ಅರ್ಘ್ಯಪ್ರದಾನೇ ವಿನಿಯೋಗಃ | ಓಂ ಉದುತ್ಯಂ ಜಾತವೇದಸಂ ದೇವಂವಹಂತಿಕೇತವಃ | ದೃಶೇ ವಿಶ್ವಾಯಸೂರ್ಯಂ | ಇತ್ಯರ್ಘ್ಯಂದತ್ವಾ | ಆಕಾಶಮುದ್ರಾಂಕೃತ್ವಾ ||

ತಾ|| ಹೆಗ್ಗುರುತಾದ ಸೂರ್ಯಕಿರಣಗಳು ಪ್ರಾಣಿಗಳ ದರ್ಶನಕ್ಕೋಸ್ಕರ ಸೂರ್ಯಭಗವಂತನನ್ನು ಅಂತರಿಕ್ಷದ ಮೇಲ್ಭಾಗಕ್ಕೆ ಒಯ್ಯುತ್ತಲಿವೆ. ಅಂದರೆ ಸೂರ್ಯದರ್ಶನಮಾಡುವ ಸೌಕರ್ಯವನ್ನುಂಟುಮಾಡಿಕೊಡುತ್ತವೆ. ಈ ಮಂತ್ರದಿಂದ ಮಾಧ್ಯಾಹ್ನಿಕ ಉಪಸ್ಥಾನದ ಅರ್ಘ್ಯವನ್ನು ಕೊಟ್ಟು ಆಕಾಶಮುದ್ರೆಯಿಂದ ಸೂರ್ಯ ದರ್ಶನಮಾಡಬೇಕು.

ಚಿತ್ರಂದೇವಾನಾಂ ಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ |
ಆಪ್ರಾದ್ಯಾವಾಪೃಥಿವೀ ಅಂತರಿಕ್ಷಂಸೂರ್ಯಆತ್ಮಾ ಜಗತಸ್ತಸ್ಥುಷಶ್ಚ ||

ತಾ|| ದೇವತೆಗಳ ಸಮೂಹರೂಪವಾದ ಸೂರ್ಯನ, ವರುಣನ, ಅಗ್ನಿಯ ಚಕ್ಷುಸ್ಸಾಗಿ ಆಶ್ಚರ್ಯಕರವಾಗಿರುವ ಸೂರ್ಯಮಂಡಲವು ಉದಯಿಸಿ ಭೂವ್ಯಾಕಾಶ ಗಳೆಲ್ಲೆಲ್ಲಿಯೂ ತನ್ನ ಬೆಳಕಿನಿಂದ ತುಂಬಿತು. ಈ ಮಂಡಲದೊಳಗಿರುವ ಸೂರ್ಯ ಪರಮಾತ್ಮನು ಜಗತ್ತಿಗೆ ಆತ್ಮಸ್ವರೂಪನಾಗಿರುವನು.

ವೃಕ್ಷಇವಪಕ್ವಸ್ತಿಷ್ಠಸಿ | ಸರ್ವಾಕಾಮಾನ್‌ಭುವಸ್ಪತೇ | ಯಸ್ತ್ವೈವಂವೇದ ತಸ್ಮೈಮೇಭೋಗಾನ್ ಧುಕ್ಷ್ವಾಕ್ಷತಾಃ ಬೃಹಃಋತಗ್‌ಂಸತ್ಯೇಪ್ರತಿಷ್ಠಿತಂ| ಭೂತಂಭವಿಷ್ಯತಾಸಹ | ಆಕಾಶಉಪನಿರಜ್ಯತು ಮಹ್ಯಮನ್ನಮಥೋ ಶ್ರಿಯಂ ||

ತಾ|| ಎಲೈ ಸೂರ್ಯಭಗವಂತನೆ ! ವೃಕ್ಷವು ಪಕ್ವವಾದ ಹಣ್ಣುಗಳನ್ನು ಕೊಡುವಂತೆ ನೀನು ನಮ್ಮ ಎಲ್ಲಾ ಇಷ್ಟಾರ್ಥಗಳನ್ನೂ ಪೂರ್ತಿಮಾಡು. ನಾನು ಯಾವ ನಾಶರಹಿತಗಳಾದ ಭೋಗಗಳನ್ನು ಅಪೇಕ್ಷಿಸುವೆನೋ ಅವುಗಳನ್ನು ಕೊಡು ವವನಾಗು. ಎಲೈ ಮಹಾನುಭಾವನೆ! ಈಗ ನಡೆಯುವುದನ್ನೂ ಮುಂದಾಗುವು ದರಿಂದ ಸೇರುವಿಕೆಯನ್ನೂ ಸತ್ಯದಲ್ಲಿರುವ ಋತವನ್ನೂ, ಅನ್ನವನ್ನೂ, ಐಶ್ವರ್ಯ ವನ್ನೂ ಅನುಗ್ರಹಮಾಡು.

ಅಭಿಭಾಗೋಸಿ ಸರ್ವಸ್ಮಿಂ ನ್ತ್ರದುಸರ್ವಂ ತ್ವಯಿಶ್ರಿತಂ | ತೇನಸರ್ವೇಣ ಸರ್ವೋಮಾವಿವಾಸನ ವಿವಾಸಯ | ಕೋಶಇವಪೂರ್ಣೋವ ಸುನಾತ್ವಾಂ ಪ್ರೀತೊದಧಸೇಧನಮ್ | ಅದೃಷ್ಟೋ ದೃಷ್ಟಮಾಭರ ಸರ್ವಾಕಾಮಾಃ ಪ್ರಯಚ್ಛಮೇ ||

ತಾ|| ಮೇಲಿನ ಇಷ್ಟಾರ್ಥಗಳೆಲ್ಲವನ್ನೂ ಕೊಡಲು ನೀನು ಸಮರ್ಥ ನಾಗಿರುವೆ. ನೀನು ಸರ್ವವಿಷಯದಲ್ಲಿಯೂ ಸಮರ್ಥನಾಗಿರುವುದರಿಂದ ನೀನು ಅನುಗ್ರಹಿಸಿದ್ದು ನನ್ನನ್ನು ಬಿಟ್ಟು ಹೋಗದಂತೆ ಮಾಡು. ದ್ರವ್ಯದಿಂದ ಭಂಡಾರವು ತುಂಬಿರುವಂತೆ ನೀನು ಸುಪ್ರೀತನಾಗಿ ಧನದಿಂದ ತುಂಬಿಸುವವನಾಗು. ನನಗೆ ದೃಷ್ಟಾದೃಷ್ಟ ಎಲ್ಲಾ ಇಷ್ಟಾರ್ಥಗಳನ್ನೂ ದಯಪಾಲಿಸು.

ಆಕಾಶಸ್ಯೈಷ ಆಕಾಶೋಯ ದೇತದ್ಭಾತಿ ಮಂಡಲಂ | ಏವಂತ್ವಾ ವೇದಯೋ ವೇದೇ ಶಾನೇಶರ್ಾಪ್ರಯಚ್ಛಮೆ | ಓಂ ಭೂರಿತ್ಯಸ್ಯ | ಪರಮೇಷ್ಠೀಋಷಿಃ | ಸೂರ್ಯೋದೇವತಾ | ಉಪಸ್ಥಾನೇವಿನಿಯೋಗಃ ||

ತಾ|| ಆಕಾಶದಲ್ಲಿ ಯಾವಮಂಡಲವು ಪ್ರಕಾಶಿಸುವುದೋ ಅದೇ ಎಲ್ಲಾ ಕಡೆಯಲ್ಲಿಯೂ ಪ್ರಕಾಶಿಸುವ ಸೂರ್ಯನು. ಹೀಗೆ ನಾನು ನಿನ್ನನ್ನು ತಿಳಿದಿರುವುದರಿಂದ ನನಗೆ ದೇವತ್ವವನ್ನುಂಟುಮಾಡು.

ಓಂ ಭೂರ್ಭುವಸ್ಸುವರೋಂ ಸೂರ್ಯಇವದೃಶೇಭೂಯಾಸಂ | ಅಗ್ನಿರಿವ ತೇಜಸಾ ವಾಯುರಿವ ಪ್ರಾಣೇನ ಸೋಮಇವಗಂಧೇನ | ಬೃಹಸ್ಪತಿರಿವ ಬುಧ್ಯಾ ಅಶ್ವಿನಾವಿವರೂಪೇಣ ಇಂದ್ರಾಗ್ನೀ ಇವಬಲೇನ | ಬ್ರಹ್ಮಭಾಗ ಏವಾಹಂ ಭೂಯಾಸಂ ಪಾಪ್ಮಭಾಗಾ ಮೇದ್ವಿಷನ್ತಃ ||

ತಾ|| ದೃಷ್ಟಿಯಿಂದ ಸೂರ್ಯನಂತಾಗುವೆನು ತೇಜಸ್ಸಿನಿಂದ ಅಗ್ನಿಯಂತೆಯೂ ಪ್ರಾಣದಿಂದ ವಾಯುವಂತೆಯೂ, ಗಂಧದಿಂದ ಚಂದ್ರನಂತೆಯೂ, ಬುದ್ಧಿಯಿಂದ ಬೃಹಸ್ಪತಿಯಂತೆಯೂ, ರೂಪದಿಂದ ಅಶ್ವಿನೀದೇವತೆಗಳಂತೆಯೂ, ಶಕ್ತಿಯಿಂದ ಇಂದ್ರಾಗ್ನಿಗಳಂತೆಯೂ, ನಾನು ಪರಬ್ರಹ್ಮಸ್ವರೂಪನೇ ಆಗುವೆನು. ನನ್ನ ಪಾಪಭಾಗಗಳು ನನ್ನ ಶತ್ರುಗಳ ಪಾಲಾಗಲಿ.

### ಕ್ಷತ್ರಿಯರು

ಮಾಧ್ಯಾಹ್ನಿಕ ಉಪಸ್ಥಾನ ವಿಧಿಗಳನ್ನು ಪ್ರಾತಸ್ಸಂಧ್ಯಾವಂದನೆಯಂತೆಯೇ ಅನುಸರಿಸಬೇಕು.

### ವೈಶ್ಯರು

ಆಸತ್ಯಾದ್ಬ್ರಾಜಮಾನಾಯ ಕರ್ಮಸಾಕ್ಷಿಜಗದ್ಗುರು |
ಃ ಗಚ್ಛಕ್ಷುರ್ಜಗನ್ನಾಥ ರವಯೇ ಬ್ರಹ್ಮಣೇನಮಃ ||

ತಾ|| ಕರ್ಮಸಾಕ್ಷಿಯೂ ಜಗದ್ಗುರುವೂ ಜಗತ್ತಿಗೆ ನೇತ್ರಸ್ವರೂಪನೂ ಜಗದೊಡೆಯನೂ ಸತ್ಯಲೋಕಪರ್ಯಂತ ಪ್ರಕಾಶಿಸುವವನೂ ಪರಬ್ರಹ್ಮಸ್ವರೂಪನೂ ಆದ ಸೂರ್ಯಭಗವಂತನಿಗೆ ನಮಸ್ಕರಿಸುವೆನು

ಮುಂದಿನ ವಿಧಿಗಳನ್ನು ಪ್ರಾತಸ್ಸಂಧ್ಯಾವಂದನೆಯಲ್ಲಿ ಆಚರಿಸುವಂತೆಯೇ ಆಚರಿಸಬೇಕು

---

## ಸಾಯಂಸಂಧ್ಯೋಪಸ್ಥಾನ.

### ಋಕ್ ಸಾಮಶಾಖಾ ಬ್ರಾಹ್ಮಣರು (ಪ್ರಾತಃಕಾಲದಂತೆ)

### ಯಜುಶ್ಶಾಖಾ ಬ್ರಾಹ್ಮಣರು.

ಇಮಮ್ಮೇವರುಣ ಶ್ರುಧೀಹವ ಮದ್ಯಾಚಮೃಡಯ | ತ್ವಾಮವಸ್ಯುರಾಚಕೇ| ತತ್ವಾಯಾಮಿ ಬ್ರಹ್ಮಣಾ ವನ್ದಮಾನ ಸ್ತದಾಶಾಸ್ತೇ ಯಜಮಾನೋ

ಹವಿರ್ಭಿಃ | ಅಹೇಡಮಾನೋ ವರುಣೇಹಬೋಧ್ಯುರಶಗ್ಂ ಸಮಾನ ಆಯುಃಪ್ರಮೋಷೀಃ | ಯಚ್ಚಿದ್ಧಿತೇ ವಿಶೋಯಥಾ ಪ್ರದೇವ ವರುಣವ್ರತಂ ಮಿನೀಮ ಸಿದ್ಯವಿದ್ಯವಿ | ಯತ್ಕಿಂಚೇದಂ ವರುಣದೈವ್ಯೇ ಜನೇಭಿ ದ್ರೋಹಂ ಮನುಷ್ಯಾಶ್ಚರಾಮಸಿ |ಅಚಿತ್ತೀಯತ್ತವ ಧರ್ಮಾಯು ಯೋಪಿಮಾ ಮಾನಸ್ತ ಸ್ಮಾದೇನಸೋದೇವ ರೀರಿಷಃ| ಕಿತವಾಸೋ ಯದ್ರಿರಿಪುರ್ನದಿವಿ ಯದ್ವಾಘಾ ಸತ್ಯಮುತಯನ್ನ ವಿದ್ಮ | ಸರ್ವಾತಾವಿಷ್ಯ ಶಿಥಿರೇವದೇವಾ ಥಾತೇಸ್ಯಾಮ ವರುಣ ಪ್ರಿಯಾಸಃ ||

ತಾ|| ಎಲೈ ವರುಣನೇ! ನಿನ್ನನ್ನು ಶರಣುಹೊಂದಿರುವೆನು. ನನ್ನ ಪ್ರಾರ್ಥನೆಯನ್ನು ಲಾಲಿಸಿ ನನಗೆ ಅಮೃತಸುಖವನ್ನುಂಟುಮಾಡುವವನಾಗು || ಎಲೈವರುಣನೇ! ನಾನು ವೇದಮಂತ್ರದಿಂದ ವಂದಿಸಿ ನಿನ್ನನ್ನು ಶರಣ್ಯನನ್ನಾಗಿ ಹೊಂದುವೆನು. ಯಜ್ಞಕರ್ತನು ಹವಿರ್ದ್ರವ್ಯಗಳಿಂದ ತೃಪ್ತಿಪಡಿಸುತ್ತಾ ಸುಖವನ್ನು ಬಯಸುತ್ತಿರುವನು. ನನ್ನ ಪ್ರಾರ್ಥನೆಯನ್ನು ಅನಾದರಣೆ ಮಾಡದೆ ಬಹು ಮಂತ್ರಗಳಿಂದ ಹೊಗಳಿಸಿಕೊಳ್ಳುವ ನೀನು ಪೂರ್ಣಾಯುರ್ಯೋಗ ವನ್ನು ಅನುಗ್ರಹಿಸಿ ಕಾಪಾಡು || ಪ್ರಕಾಶಮಾನನಾದ ವರುಣನೇ! ನಿನ್ನನ್ನು ದ್ವೇಶಿಸಿ ಪ್ರಕೃಷ್ಟವಾದ ಕರ್ಮವನ್ನಾದರೋ ಅಜ್ಞಜನರಂತೆ ಪ್ರತಿದಿನವೂ ಆಲೋಚಿ ಸುತ್ತೇವೆಯೆ ಹೊರತು ಸರಿಯಾಗಿ ಅನುಷ್ಠಿಸುವುದಿಲ್ಲ. ಎಲೈ ವರುಣನೆ! ದೇವ ಲೋಕವಾಸಿಯಾದ ನಿನ್ನಲ್ಲಿ ಮನುಷ್ಯರಾದ ನಾವು ದ್ರೋಹಮಾಡುತ್ತಿರುವೆವೋ ಅಥವಾ ನಿನ್ನ ಸಂಬಂಧವಾದ ಧರ್ಮವನ್ನು ನಾಶಮಾಡಿದೆವೋ ಈ ಲೋಪಗಳ ದೋಷದಿಂದ ನಮ್ಮನ್ನು ಹಿಂಸಿಸದೆ ಕಾಪಾಡು || ಪ್ರಕಾಶಮಾನನಾದ ವರುಣನೆ! ವಂಚಕರಾಗಿ ಯಾವ ಕರ್ಮವನ್ನು ನಾಶಪಡಿಸಿದೆವೋ, ಧರ್ಮವಾಗಿ ಎಲ್ಲಿ ವ್ಯವಹರಿಸ ಲಿಲ್ಲವೋ, ಪರಬ್ರಹ್ಮಸ್ವರೂಪವನ್ನೂ, ಧರ್ಮಸ್ವರೂಪವನ್ನೂ ಎಲ್ಲೆಲ್ಲಿ ತಿಳಿಯ ಲಿಲ್ಲವೋ ಅಂತಹ ಎಲ್ಲಾ ಪಾಪಗಳನ್ನೂ ಪರಿಹರಿಸಿ ನಿನ್ನ ಪ್ರೀತಿಪಾತ್ರರನ್ನಾಗಿ ಮಾಡಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

ಅನಂತರ ಪ್ರಾತಸ್ಸಂಧ್ಯಾವಂದನೆಯಂತೆ ದಿಗ್ದೇವತಾದಿ ನಮಸ್ಕಾರ.

## ಕ್ಷತ್ರಿಯರು

ಸಾಯಂಸಧ್ಯಾ ಉಪಸ್ಥಾನ ವಿಧಿಗಳನ್ನು ಪ್ರಾತಸ್ಸಂಧ್ಯಾವಂದನೆಯಂತೆಯೇ ಅನುಸರಿಸಬೇಕು.

## (ವೈಶ್ಯರು)

ವರುಣ ತ್ವಂ ಜಗಜ್ಜೀವ ಜೀವನಂ ಜೀವಿನಾಂ ಸದಾ |
ತಸ್ಮಾದ್ವರುಣ ಚಿದ್ರೂಪ ಬ್ರಹ್ಮತುಭ್ಯಂ ನಮೋಸ್ತುತೇ ||

ತಾ|| ಜಗತ್ತಿಗೆ ಜೀವನಾಧಾರಕನಾದ ವರುಣನೇ! ನೀನು ಸದಾ ಪ್ರಾಣಿ ಗಳಿಗೆ ಜೀವನಾಧಾರನು. ಆದುದರಿಂದ ಸಚ್ಚಿದಾನಂದ ಸ್ವರೂಪನೂ ವರುಣ

ನಾಮಕನೂ ಆದ ಎಲೈ ಬ್ರಹ್ಮನೇ ನಿನಗೆ ನಮಸ್ಕರಿಸುವೆನು.

ಮುಂದಿನ ವಿಧಿಗಳು ಪ್ರಾತಸ್ಸಂಧ್ಯಾವಂದನೆಯಂತೆಯೇ.

---

ಸಂಧ್ಯಾವಂದನೆಯ ತತ್ವಾರ್ಥವು ಪೂರ್ಣವಾದುದು. ಮುಖ್ಯವಾಗಿ ಗಾಯತ್ರೀ ದೇವಿಯ ಉಪಾಸನೆಯೇ ಸಂಧ್ಯಾಕರ್ಮದಲ್ಲಿ ಅತ್ಯಂತ ಪ್ರಧಾನವಾದುದು. ಈ ಉಪಾಸನಾರ್ಹತೆಯನ್ನು ಪಡೆಯಲು ಇತರ ಅಂಗವಾದ ಕರ್ಮಗಳಿರುವವು. ದ್ವಿಜರಿಗೆ **ಮುಖ್ಯವಾದ ಕುಲದೇವತೆಯು** ವೇದಮಾತೆಯೆಂದರೆ ತ್ರಿಮೂರ್ತಿಗಳಿಗೂ ಜನನಿಯಾದ ಪರಾತ್ಪರವಸ್ತುವಾದ **ಗಾಯತ್ರೀದೇವಿಯೇ.** ಹೀಗೆ ಬಹು ಪ್ರಾಮುಖ್ಯವಾಗಿರುವುದರಿಂದಲೇ ಅನಾದಿಕಾಲದಿಂದಲೂ ಋಷಿಪಾರಂಪರ್ಯವಾಗಿ ಆಚರಣೆಯಲ್ಲಿದೆ.

ಯಾಚಿನ್ತಾ ಭುವಿಪುತ್ರಪೌತ್ರ ಭರಣ ವ್ಯಾಪಾರ ಸಂರಕ್ಷಣೇ ।
ಯಾಚಿನ್ತಾ ಧನಧಾನ್ಯ ಭೋಗಯಶಸಾಂಲಾಭೇ ಸದಾ ಜಾಯತೇ ॥
ಸಾಚಿನ್ತಾಯದಿ ವೇದಮಾತೃ ಚರಣಾಂಭೋಜೇಕ್ಷಣೇ ಹ್ಯೈತುಕೀ ।
ಕಾಚಿನ್ತಾಯಮರಾಜ ಭೀಮಸದನದ್ವಾರ ಪ್ರಯಾಣೇ ನೃಣಾಮ್ ॥

ಪುತ್ರ, ಪೌತ್ರ, ಉದರಭರಣವ್ಯಾಪಾರ, ಧನಧಾನ್ಯ, ಭೋಗ, ಯಶಸ್ಸುಗಳ ಸಂಪಾದನೆ ಮತ್ತು ಅವುಗಳ ರಕ್ಷಣೆಗಳ ಚಿಂತನೆಯಲ್ಲಿ ಪ್ರವೃತ್ತಿಸುತ್ತಿರುವ ಮನಸ್ಸನ್ನು ಸಂಧ್ಯಾಕಾಲಗಳಲ್ಲಿ ಹತ್ತು ನಿಮಿಷವಾದರೂ ವೇದಮಾತೆಯಾದ ಗಾಯತ್ರೀ ದೇವಿಯ ಚರಣಾರವಿಂದಗಳನ್ನು ಉಪಾಸಿಸುವಂತೆ ಮಾಡಿಕೊಂಡರೆ ಭಯಂಕರವಾದ ಯಮಪಾಶದ ಭೀತಿಯ ಚಿಂತೆಯು ನಿಶ್ಚಯವಾಗಿಯೂ ಇರುವುದಿಲ್ಲ. ಆದುದರಿಂದ ದ್ವಿಜರೆಲ್ಲರೂ ನಿರ್ಬಂಧದಿಂದಲಾದರೂ ಉಪನಯನಾನಂತರ ಬಾಲಕರಿಂದ ಸಂಧ್ಯಾಕರ್ಮವನ್ನು ಮಾಡಿಸುತ್ತಾ ತಾವೂ ಆಚರಿಸುತ್ತಾ ಕೃತಕೃತ್ಯರಾಗಬೇಕು. ವೇದಮಾತೆಯಾದ ಗಾಯತ್ರೀದೇವಿಯ ಮಹಿಮೆಯು **ವೇದಪ್ರಕಾಶಿಕೆ (ವೀಣಾರಹಸ್ಯ)** ವಿಚಾರದಲ್ಲೂ ಅತಿಶಯವಾಗಿರುವುದರಿಂದ ಆ ಗ್ರಂಥವನ್ನೂ ಇದರೊಡನೆ ಸೇರಿಸಿದೆ.

**॥ ಓಂ ತತ್ಸದ್ಬ್ರಹ್ಮಾರ್ಪಣಮಸ್ತು ॥**



ಶ್ರೀಃ

# ವೇದಪ್ರಕಾಶಿಕೆ (ವೀಣಾರಹಸ್ಯ)



ಚೈತನ್ಯಂ ಸರ್ವಭೂತಾನಾಂ ನಿರ್ವೃತಿರ್ಜಗದಾತ್ಮನಾಮ್ |
ನಾದಬ್ರಹ್ಮ ತದಾನಂದ ಮದ್ವಿತೀಯ ಮುಪಾಸ್ಮಹೇ ||

ತಾ|| ಸರ್ವಭೂತಗಳಿಗೂ ಚೈತನ್ಯಸ್ವರೂಪವಾಗಿಯೂ ಶಬ್ದಮಯ ಪ್ರಪಂಚ ರೂಪವಾಗಿಯೂ ಸರ್ವದಾ ಆನಂದಸ್ವರೂಪವಾಗಿಯೂ ಅದ್ವಿತೀಯವಾಗಿಯೂ ಇರುವ ನಾದಬ್ರಹ್ಮವನ್ನು ಉಪಾಸನೆ ಮಾಡುತ್ತೇವೆ.

ಅಕಚಟತಪ ಯಾದ್ಯೈಸ್ಸಪ್ತಭಿ ರ್ವರ್ಣವರ್ಗೈಃ |
ವಿರಚಿತ ಮುಖ ಬಾಹೂಪಾದ ಹೃತ್ಕುಕ್ಷಿ ಮಧ್ಯಾ ||
ಸಕಲ ಜಗದಧೀಶಾ ಶಾಶ್ವತಾ ವಿಶ್ವಯೋನಿಃ |
ವಿತರತು ಪರಿಶುದ್ಧಿಂ ಚೇತಸಃ ಶಾರದಾವಃ ||

(ಶ್ರೀಶಂಕರಾಚಾರ್ಯರವರ ಪ್ರಪಂಚಸಾರ ಗ್ರಂಥದ ಮಂಗಳಶ್ಲೋಕ)

ತಾ|| ಅಕಾರಾದಿ ಕ್ಷಕಾರಾಂತದವರೆಗಿನ ಸಪ್ತವರ್ಣವರ್ಗಮಾಲೆಗಳಿಂದ ಅಲಂಕರಿಸಲ್ಪಟ್ಟ ಮುಖಾದ್ಯವಯವಗಳುಳ್ಳವಳಾಗಿಯೂ, ಸಕಲಜಗತ್ತಿಗೆ ಅಧೀಶಳಾಗಿಯೂ, ಶಾಶ್ವತಳಾಗಿಯೂ, ಸಕಲಕ್ಕೂ ಕಾರಣಳಾಗಿಯೂ ಇರುವ ಶಾರದಾ ದೇವಿಯು ಮನಸ್ಸಿಗೆ ಪರಿಶುದ್ಧಿಯನ್ನುಂಟುಮಾಡಲಿ.

---

## ಅವತರಣಿಕೆ

ಈಗಿನ ಕಾಲದಲ್ಲಿ ವೇದದ ವಿಚಾರವಾಗಿ ಅನೇಕ ಭಿನ್ನಾಭಿಪ್ರಾಯಗಳಿವೆ. ವೇದವು ಅನಾದಿಯಾದುದಲ್ಲವೆಂದೂ ಐದಾರು ಸಾವಿರ ವರುಷಗಳಿಂದೀಚೆಗೆ ಹುಟ್ಟಿದವುಗಳೆಂದೂ ಋಗ್ವೇದ ಯಜುರ್ವೇದಗಳು ಪ್ರತ್ಯೇಕ ಪ್ರತ್ಯೇಕ ಕಾಲಗಳಲ್ಲಿ

ರಚಿತವಾದವುಗಳೆಂದೂ ವೇದವು ಅಪೌರುಷೇಯ ವಾದುದಲ್ಲವೆಂದೂ, ವೇದಾಧ್ಯಯನಕ್ಕೆ ಜನಸಾಮಾನ್ಯವೆಲ್ಲ ಅಧಿಕಾರಿಗಳೆಂದೂ ಕೆಲವರು ವಿಧವಿಧವಾಗಿ ಅಭಿಪ್ರಾಯ ಪಡುತ್ತಾರೆ.

ವೇದದ ವಿಷಯದಲ್ಲಿರತಕ್ಕ ಸಂಶಯವನ್ನು ಪರಿಹರಿಸಲು ಅದಕ್ಕೆ ಸರಿಯಾದ ಮಹತ್ವವುಳ್ಳ ಸಹಕಾರಿಯಾದ ಮತ್ತೊಂದು ವಸ್ತುವಿನ ಉದಾಹರಣೆಯ ಮೂಲಕವೇ ವಿಚಾರಮಾಡಬೇಕು. ವೇದಕ್ಕೆ ಸಮಾನವಾದ ಮತ್ತೊಂದು ಪ್ರಾಪಂಚಿಕ ವಸ್ತುವನ್ನು ಉದಾಹರಣೆಗೆ ಕೊಡುವುದು ಖಂಡಿತವಾಗಿಯೂ ಅಸಾಧ್ಯ. ಆದುದರಿಂದ ವೇದದ ಮಹತ್ವವನ್ನರಿಯಲು ವೇದಮಾತೆಯಾದ ಗಾಯತ್ರೀದೇವಿಯ ಮತ್ತು ವೇದಾಭಿಮಾನದೇವತೆಯಾದ ಶ್ರೀಶಾರದಾದೇವಿಯ ಮಹಿಮಾವರ್ಣನೆಗಳ ತತ್ವಾರ್ಥಗಳ ಮಹತ್ತನ್ನೇ ಉದಾಹರಣೆಗೆ ತೆಗೆದುಕೊಂಡಿದೆ. ನಾದಬ್ರಹ್ಮಸ್ವರೂಪಳಾಗಿಯೂ ಸಕಲವಿದ್ಯೆಗಳಿಗೂ ಅಭಿಮಾನದೇವತಾಸ್ವರೂಪಳಾಗಿಯೂ ಇರುವ ಶ್ರೀಶಾರದಾಂಬೆಯು ಹಸ್ತಗಳಲ್ಲಿ ವೀಣೆಯನ್ನೂ, ಪುಸ್ತಕವನ್ನೂ ವರ್ಣಮಾಲೆಯನ್ನೂ ಧರಿಸಿರುವ ಮಹತ್ತುಳ್ಳವಳಾಗಿರುವಳೆಂಬುದನ್ನು ನಾವು ಪ್ರತ್ಯಕ್ಷವಾಗಿ ವಿಗ್ರಹಗಳಲ್ಲಿಯೂ ಚಿತ್ರಗಳಲ್ಲಿಯೂ ನೋಡುತ್ತೇವೆ. ಅವಳು ಧರಿಸಿರುವ ವಸ್ತುಗಳೆಲ್ಲಾ ಅವಳ ಮಹಿಮಾವರ್ಣನೆಗಳನ್ನೇ ಪ್ರತಿಪಾದಿಸುತ್ತವೆ. ಮತ್ತು ಈ ವಸ್ತುಗಳು ಒಂದಕ್ಕೊಂದು ಸಹಕಾರಿಯಾಗಿ ಆ ತಾಯಿಯ ಮಹಿಮಾರೂಪವಾದ ಏಕಾರ್ಥದ ತತ್ವಗಳನ್ನೇ ಪ್ರತಿಪಾದಿಸುತ್ತವೆ. ಆದುದರಿಂದ ಶ್ರೀ ಶಾರದಾದೇವಿಯು ನುಡಿಸುತ್ತಿರುವ ಮಹಾವೀಣೆಯನ್ನೂ ಗಾಯತ್ರೀಮಂತ್ರವನ್ನೂ ಪರಸ್ಪರ ಸಮನ್ವಯಮಾಡಿ ಈ ಸಮನ್ವಯವನ್ನು ವೇದದ ವಿಚಾರವನ್ನು ನಿರ್ಧರಿಸಲು ಸಹಕಾರಿಯಾದ ಉದಾಹರಣೆಯನ್ನಾಗಿ ತೆಗೆದುಕೊಂಡಿರುವುದು.

ಶ್ರೀ ಶಾರದಾದೇವಿಯು ಕೈಯ್ಯಲ್ಲಿರುವ ವೀಣೆಯು ಅಸ್ಮದಾದಿಗಳು ನುಡಿಸುವ ವೀಣೆಯಂತೆಯೇ ಇರುವುದರಿಂದ ಅಂತಹ ಮಹಿಮಾಶಾಲಿಯಾದ ವಸ್ತುವಲ್ಲವೆಂದು ಭಾವಿಸಬಾರದು. ನಾವುಗಳು ನುಡಿಸುವ ವೀಣೆಯೂ ಮನುಷ್ಯನ ಸ್ವಬುದ್ಧಿಕೃತವಲ್ಲ ಅಮೋಘವಾದ ದೇವತ್ವದ ಮೂಲಾಧಾರದ ಅಂತರಾರ್ಥವನ್ನನುಸರಿಸಿರುವುದಾಗಿದೆ. ಈ ವಿಚಾರವು ಮುಂದೆ ಗ್ರಂಥದಲ್ಲಿ ಬರುವುದು. ಪ್ರಪಂಚದಲ್ಲಿ ಗಾನವನ್ನು ನುಡಿಸುವ ಮನುಷ್ಯಕೃತವಾದ ಅನೇಕ ವಾದ್ಯಗಳಿವೆ. ವೀಣೆಯ ಮಹತ್ವಕ್ಕೆ ಸಾಟಿಯಾದ ವಾದ್ಯವು ಮತ್ತೊಂದಿಲ್ಲ. ವಿಶ್ವದ ರಚನೆಯ ಆಧಾರದ ಮೇಲೆಯೇ ವೀಣಾರಚನೆಯು ಇರುವುದು. ವಿಶ್ವದ ಸಕಲ ಅಂಶಗಳನ್ನೂ ಒಳಗೊಂಡು ಪುಟ್ಟ ವಿಶ್ವವೆನಿಸುವ ಪಿಂಡಾಂಡವಾದ ಮನುಷ್ಯರಚನೆಯೂ ವೀಣಾರಚನೆಯ ಆಧಾರದ ಮೇಲೆಯೇ ಉಂಟಾಗಿರುವುದು. ಈ ಗ್ರಂಥದಲ್ಲಿ ಕೊಟ್ಟಿರುವ

ಚಿತ್ರಗಳಿಂದ ಇದು ವ್ಯಕ್ತವಾಗುವುದು. ಶ್ರೀಶಾರದಾದೇವಿಯ ಸಂಗೀತವು ವೇದ ಗೀತೆಯೆನಿಸುವ ವಿಶ್ವದ ಸಂಗೀತವಾಗಿರುವುದು. ಆಕೆಯು ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಗಳನ್ನು ನಾದಬ್ರಹ್ಮಸ್ವರೂಪದಲ್ಲಿ ಅಡಗಿಸಿಕೊಂಡು ವೀಣೆಯಲ್ಲಿ ಗಾನ ರೂಪವಾಗಿ ನುಡಿಸುತ್ತಿರುವಳು. ಈ ಜಗನ್ಮಾತೆಯ ಇಂಪಾದ ಸಂಗೀತ ಪ್ರವಾಹದ ತೆರೆಗಳ ಮೇಲೆಯೇ ಈ ವಿಶ್ವವು ಲೋಲಾಡುತ್ತಿದೆ. ಅಲ್ಲದೆ ಶ್ರೀಶಾರದಾದೇವಿಯ ಹಸ್ತದಲ್ಲಿ ಪುಸ್ತಕವೂ ಇದೆ. ಪ್ರಪಂಚದಲ್ಲಿ ವಿವಿಧ ವಿಚಾರಗಳ ವಿವರಣೆಗಳನ್ನೊಳಗೊಂಡ ಪುಸ್ತಕಗಳನೇಕ ಇವೆ. ಶ್ರೀ ಶಾರದಾದೇವಿಯ ಹಸ್ತದಲ್ಲಿರುವ ಪುಸ್ತಕವಾದರೋ ಪರಾತ್ಪರ ವಸ್ತುವಿಚಾರ ಮೊದಲುಗೊಂಡು ಬ್ರಹ್ಮಾಂಡದ ಚರ, ಅಚರ, ಸಜೀವ, ನಿರ್ಜೀವ ಮುಂತಾದ ಸಕಲ ವಸ್ತುಗಳ ಸೃಷ್ಟಿ ಸ್ಥಿತಿ ಲಯ ವಿಚಾರಗಳ ಸಂಪೂರ್ಣ ವಿವರಣೆಗಳನ್ನೊಳಗೊಂಡ ವೇದವೆಂದರೆ ಜ್ಞಾನಭಂಡಾರ ರೂಪವಾದುದು. ಆ ತಾಯಿಯ ಹಸ್ತದಲ್ಲಿರುವ ವರ್ಣ (ಅಕ್ಷರ) ಮಾಲೆಯು ಶಬ್ದಕ್ಕೆ ಮೂಲಕಾರಣವಾದ ಅಕ್ಷರಗಳ ಶಕ್ತಿರೂಪವಾದುದು. ಅಂದರೆ ವರ್ಣ ಮಾಲೆಯೇ ಶಬ್ದಶಕ್ತಿ. ಪುಸ್ತಕವೇ ಜ್ಞಾನಭಂಡಾರ. ಇವುಗಳಿಂದಾಗುವ ಕಾರ್ಯರೂಪವೇ ವೀಣೆ. ಈ ಮೂರೂ ಸೇರಿ ವೇದವೆನಿಸಿಕೊಳ್ಳುವುದು. ಆದುದ ರಿಂದ ಶ್ರೀಶಾರದಾದೇವಿಯ ಹಸ್ತದಲ್ಲಿರುವ ವೀಣೆಗೂ ಗಾಯತ್ರೀಮಂತ್ರಕ್ಕೂ ಸಮನ್ವಯಮಾಡಿ, ಆ ಸಮನ್ವಯವನ್ನು ವೇದಮಹಿಮೆಯನ್ನರಿಯಲು ಉದಾ ಹರಣೆಯಾಗಿ ತೆಗೆದುಕೊಂಡಿರುವುದು. ಈ ಉದಾಹರಣೆಯಿಂದ ವೇದವಿಚಾರ ವನ್ನೂ ತಿಳಿದುಕೊಳ್ಳಬಹುದಲ್ಲದೆ ಆ ಜಗನ್ಮಾತೆಯ ಅಸದೃಶವಾದ ಮಹಿಮೆಯೂ ನಮಗೆ ಗೊತ್ತಾಗುವುದು. ಇದರಿಂದ ಆ ತಾಯಿಯನ್ನು ಇತೋಽಪ್ಯತಿಶಯವಾಗಿ ಅರ್ಚಿಸಿ, ಭಜಿಸಿ, ಧ್ಯಾನಿಸಿ ಆಕೆಯ ಅನುಗ್ರಹದ ಜ್ಞಾನಾಮೃತ ಸೇವನೆಗೆ ನಾವು ಪಾತ್ರರಾಗಬಹುದು.

ಗಾಯತ್ರೀ, ಸಾವಿತ್ರೀ, ಸರಸ್ವತೀ, ಲಕ್ಷ್ಮೀ ದೇವಿಯರು ಭಿನ್ನರಲ್ಲ. ಒಬ್ಬಳಾದ ಪರಾಶಕ್ತಿಯೇ ಕಾರ್ಯಭೇಧಗಳಿಂದ ಪ್ರತ್ಯೇಕ ನಾಮಗಳನ್ನು ಹೊಂದಿ ನಾದಬ್ರಹ್ಮಶಕ್ತಿಯಾಗಿ ಸರಸ್ವತೀ ಎನಿಸಿಯೂ, ತೇಜೋರೂಪವಾಗಿ ಸಾವಿತ್ರೀ ಎನಿಸಿಯೂ, ಚರಾಚರ ವಸ್ತುಗಳಲ್ಲಿರುವ ಮನೋಹರವಾದ ಕಾಂತಿರೂಪವಾಗಿ ಲಕ್ಷ್ಮೀ ಎನಿಸಿಯೂ ವಿರಾಜಿಸುತ್ತಿರುವಳು. ಹೀಗೆ ಗಾಯತ್ರೀ ಸಾವಿತ್ರೀ ಸರಸ್ವತೀ ಲಕ್ಷ್ಮೀ ದೇವಿಯರ ವಿಚಾರಗಳು ಏಕತತ್ವಾರ್ಥವಾಗಿರುವುದರಿಂದಲೇ ಶ್ರೀಶಾರದಾದೇವಿಯ ಹಸ್ತದಲ್ಲಿರುವ ಮಹಾವೀಣೆಯು ಲಕ್ಷ್ಮೀ ಮಹಿಮಾ ತತ್ವಸ್ವರೂಪವೂ ಆದುದೆಂದು ವೇದವೇ ತಿಳಿಸುವುದು.

ಬ್ರಾಹ್ಮಣೌ ವೀಣಾಗಾಥಿನೌ ಗಾಯತಃ । ಶ್ರಿಯಾವಾ ಏತದ್ರೂಪಮ್ ।
ಯದ್ವೀಣಾ ಶ್ರಿಯಮೇವಾಸ್ಮಿನ್ ತದ್ಧತ್ತಃ । ಯದಾಖಲುವೈ ಪುರುಷಃ

ಶ್ರಿಯಮಶ್ನುತೇ ವೀಣಾಸ್ಮೈ ವಾದ್ಯತೇ ||
(ಯಜುರ್ವೇದ ಬ್ರಾಹ್ಮಣ ಅಷ್ಟಕ ૩. ಪ್ರಶ್ನೆ ೯. ಅನುವಾಕ ೧೪.)

ಆದುದರಿಂದ ಶ್ರೀಶಾರದಾದೇವಿಯೂ ಶ್ರೀಲಕ್ಷ್ಮೀದೇವಿಯೂ ಭಿನ್ನರಲ್ಲ. ಹೇಗೆಂದರೆ, ಚರಾಚರ ವಸ್ತುಗಳಲ್ಲಿನ ಮನೋಹರವಾದ ಕಾಂತಿಯು ಆನಂದಾಂಶಕ್ಕೆ ಸೇರಿದುದು. ದುಃಖದಿಂದ ಕಾಂತಿಯುಂಟಾಗುವುದಿಲ್ಲ. ಸಂತೋಷವೇ ಕಾಂತಿರೂಪ. ಐಹಿಕಸಂಪತ್ತಿರುವ ಮನುಷ್ಯರು ಆನಂದಾಂಶವಾದ ಸಂತೋಷದಿಂದ ಕಾಂತಿಯುತರಾಗುತ್ತಾರೆ. ವೀಣೆಮುಂತಾದ ನಾದಾನಂದದಿಂದಲೂ ಹರ್ಷಚಿತ್ತರಾಗಿ ಕಾಂತಿಯನ್ನು ಪಡೆಯುತ್ತಾರೆ. ಇವು ವಿಷಯಾನಂದಕ್ಕೆ ಸೇರಿದವುಗಳು. ಬ್ರಹ್ಮನಿಷ್ಠರು ಬ್ರಹ್ಮಾನಂದದ ಕಾಂತಿಯನ್ನು ಹೊಂದುತ್ತಾರೆ ಇದು ನಿಜಾನಂದಕ್ಕೆ ಸೇರಿದುದು. ಆನಂದವೇ ಪರಬ್ರಹ್ಮಸ್ವರೂಪ. ಲಕ್ಷ್ಮೀದೇವಿಯೂ ಕೂಡ ಪರಬ್ರಹ್ಮಸ್ವರೂಪಳು. ಆನಂದದಿಂದ ಸೃಷ್ಟಿ, ಸ್ಥಿತಿ, ಲಯಗಳಾಗುವುವು. ಆನಂದದಿಂದ ಸೃಷ್ಟಿಯಾಗುವ ವಿಚಾರವು ಸ್ತ್ರೀಪುರುಷರಿಗೆ ತಿಳಿದವಿಚಾರವಾಗಿದೆ. ಆನಂದಾಂಶವಾದ ಉತ್ಸಾಹದಿಂದಲೇ ಪ್ರಪಂಚವ್ಯಾಪಾರವು ನಡೆಯುತ್ತಿರುವುದು ನಿಜಾನಂದಸ್ವರೂಪವಾದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವುದೇ ಮೋಕ್ಷವೆನಿಸುವುದು. ಆದುದರಿಂದ ಆನಂದದಿಂದಲೂ ಸೃಷ್ಟಿ, ಸ್ಥಿತಿ, ಲಯಗಳಾಗುವುವು. ಈ ತತ್ವಕ್ಕೆ ಅನೇಕ ಶ್ರುತಿ ಪ್ರಮಾಣಗಳಿವೆ.

ಆದಕಾರಣ ಶ್ರೀಶಾರದಾಂಬೆಯ ಹಸ್ತದಲ್ಲಿರುವ ವೀಣೆಯು, ನಾದಬ್ರಹ್ಮಸ್ವರೂಪದಲ್ಲಿ ಹೇಗೆ ಸೃಷ್ಟಿಸ್ಥಿತಿಲಯಗಳ ತತ್ವಪ್ರತಿಪಾದಕವಾಗಿದೆಯೋ ಹಾಗೆಯೆ ಆನಂದದಿಂದ ಸೃಷ್ಟಿ ಸ್ಥಿತಿ ಲಯಗಳಾಗುವ ತತ್ವಪ್ರತಿಪಾದಕವಾಗಿಯೂ ಇರುವುದರಿಂದಲೇ ವೀಣೆಯು ಲಕ್ಷ್ಮೀದೇವಿಯ ಮಹಿಮಾ ಸ್ವರೂಪವೆಂದು ವೇದವು ತಿಳಿಸುವುದು. ನಾದ ಮತ್ತು ಆನಂದದಂತೆ ತೇಜಸ್ಸಿನಿಂದಲೂ ಸಕಲ ಸೃಷ್ಟಿ ಸ್ಥಿತಿ ಲಯಗಳಾಗಿ ಅಂತ್ಯದಲ್ಲಿ ಸ್ವಯಂಪ್ರಕಾಶವೇ ಆಗುವ ಸಾವಿತ್ರೀತತ್ವವೂ ವೀಣೆಯಲ್ಲಿನ ತತ್ವಕ್ಕೆ ಅನ್ವಯವಾಗುವುದು ಅಂದರೆ ಎಲ್ಲಾದೇವಿಯರ ತತ್ವಗಳೂ ಏಕಾರ್ಥಪ್ರತಿಪಾದಕಗಳಾಗಿಯೇ ಇವೆ.

ವೇದದ ವಿಚಾರವನ್ನು ತಿಳಿಯಲು ಶ್ರೀಶಾರದಾದೇವಿಯ ಮಹಿಮಾತತ್ವಗಳನ್ನು ಉದಾಹರಣೆಯಾಗಿ ತೆಗೆದುಕೊಂಡಿರುವುದಷ್ಟೆ! ಈ ವಿಚಾರವನ್ನು ಪುಷ್ಟೀಕರಿಸಲು ಪಿಂಡಾಂಡವಾದ ಮನುಷ್ಯಶರೀರದ ಉದಾಹರಣೆಯನ್ನೂ ಸಹಾಯಕವಾಗಿ ತೆಗೆದುಕೊಂಡಿರುವುದು. "ನಾನುಯಾರು, ಹೇಗೆ ಸೃಷ್ಟಿಯಾದೆ, ಈ ದೇಹದ ಯೋಗ್ಯತೆಯೇನು, ಎಲ್ಲಿಗೆ ನಾನುಹೋಗಿ ಸೇರುತ್ತೇನೆ, ನನಗೂ ದೇವತೆಗಳಿಗೂ ಇರುವ ಸಂಬಂಧವೇನು" ಎಂಬ ವಿಚಾರಗಳು ವೇದದ ಮಹತ್ವವನ್ನರಿಯಲು









| | | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ | ೧೬ | ೧೭ | ೧೮ | ೧೯ | ೨೦ | ೨೧ | ೨೨ | ೨೩ | ೨೪ |
| | ರಿ | ರಿ | ರಿ | ಗ | ಮ | ಮ | ಪ | ಧ | ಧ | ಧ | ನಿ | ಸ | ರಿ | ರಿ | ರಿ | ಗ | ಮ | ಮ | ಪ | ಧ | ಧ | ಧ | ನಿ | ಸ |
| | | ಗ | ಗ | ಅಂ | | ಪ್ರ | | | ನಿ | ವಿ | ಕಾಕಲಿ | | | ಗ | ಗ | ಅಂ | | ಪ್ರ | | | ನಿ | ನಿ | ಕಾಕಲಿ | |
| ಗಾಯತ್ರೀ ಮಂತ್ರ (ತತ್ರ) | ಸ | ವಿ | ತುಃ | ವ | ರೇ | ಣಿ | ಯಂ | ಭ | ರ್ಗಃ | ದೇ | ವ | ಸ್ಯ | ಧೀ | ಮ | ಹಿ | ಧಿ | ಯೋ | ಯೋ | ನಃ | ಪ್ರ | ಚೋ | ದ | ಯಾತ್ | ತತ |
| | ಸೃಷ್ಟಿ | | | ವ್ಯಾಪಾರ | | | | | | | | | | | ಮೋಕ್ಷಕ್ಕೆ ಹತ್ತುವುದು (ಲಯ) | | | | | | | | | |
| | ಮಂತ್ರ | | | | | | | | ಮಧ್ಯಮ | | | | | | | | | ತಾರ. | | | | | | |
| | ಅವರೋಹಣ. | | | | | | | | | | | | | | ಆರೋಹಣ. | | | | | | | | | |

ವೀಣೆಯನ್ನು ಗಾಯತ್ರಿಗೂ ವೇದಕ್ಕೂ ಅನ್ವಯಿಸಿರುವ ಚಿತ್ರ.

ಬಹು ಸಹಕಾರಿಗಳಾಗಿವೆ. ವೀಣೆಯನ್ನು ಶರೀರಕ್ಕೆ ಅನ್ವಯಿಸಿರುವುದರಲ್ಲಿಯೂ, ಶ್ರೀಮದ್ರಾಮಾಯಣದಲ್ಲಿರುವ ವೇದತತ್ವಪ್ರತಿಪಾದನೆ ಮಾಡಿರುವುದರಲ್ಲಿಯೂ ವೇದಕ್ಕೂ ಮನುಷ್ಯನಿಗೂ ಇರುವ ಸಂಬನ್ಧವೇನೆಂಬುದು ವ್ಯಕ್ತವಾಗುವುದು ಜೀವಚೈತನ್ಯನೂ ವೇದರೂಪನಾಗಿರುವನೆಂಬ ತತ್ವವು ಹೊರಸೂಸುವುದು.

---

# ೧ ನೆಯ ಪ್ರಕರಣ

## ವೀಣಾತಂತ್ರೀ ಚತುಷ್ಟಯಕ್ಕೂ ಚತುರ್ವೇದಗಳಿಗೂ ಸಮನ್ವಯ.

ವಾಣೀಂ ಜಿತಶುಕವಾಣೀಂ ಮಣಿಕುಲ ವೇಣೀಂ ಭವಾಂಬುಧಿ ದ್ರೋಣೀಮ್ |
ವೀಣಾ ಶುಕಶಿಶುಪಾಣೀಂ ನತಸುರ ರಮಣೀಂ ನಮಾಮಿ ಗೀರ್ವಾಣೀಮ್ ||



ವೀಣೆಯಲ್ಲಿ ಇಪ್ಪತ್ತುನಾಲ್ಕು ಮನೆಗಳಿವೆ. ಮೇಲುಗಡೆ ನಾಲ್ಕು, ಪಕ್ಕದಲ್ಲಿ ಮೂರು, ಒಟ್ಟು ಏಳು ತಂತಿಗಳಿವೆ. ವೀಣೆಯಮೇಲಿರುವ ನಾಲ್ಕುತಂತಿಗಳೂ ಒಟ್ಟಿಗೆಸೇರಿ ಶುದ್ಧಸತ್ವಗುಣದ ತತ್ವವಾಗಿವೆ ಪಕ್ಕದಮೂರು ತಂತಿಗಳೂ ಕ್ರಮವಾಗಿ ಮಲಿನಸತ್ವಗುಣ, ರಜೋಗುಣ, ತಮೋಗುಣಗಳ ತತ್ವವಾಗಿವೆ. ಶುದ್ಧಸತ್ವಗುಣಸ್ವರೂಪವಾದ ವೀಣೆಯ ಮೇಲ್ಭಾಗದಲ್ಲಿರುವ ನಾಲ್ಕು ತಂತಿಗಳು ಶುದ್ಧಸತ್ವಗುಣದ ಜ್ಞಾನ, ಕ್ರಿಯಾ, ಇಚ್ಛಾಶಕ್ತಿಗಳಾದ ಮೂರರತತ್ವವಾಗಿ ನಾಲ್ಕು ಭಾಗಗಳಾಗಿರುತ್ತವೆ ಇದರಲ್ಲಿ ಸಾರಣೀ ಎಂಬ ಪ್ರಥಮತಂತಿಯೇ ಶುದ್ಧಸತ್ವಗುಣದಲ್ಲಿರುವ ಸತ್ವಾಂಶವಾಗಿ 'ಜ್ಞಾನಶಕ್ತಿ' ಯೆನಿಸಿಕೊಂಡು ಋಗ್ವೇದಶಕ್ತಿಯಾಗಿರುವುದು ಎರಡನೆಯ ತಂತಿಯು ಶುದ್ಧಸತ್ವಗುಣದಲ್ಲಿರುವ 'ಕ್ರಿಯಾಶಕ್ತಿ' ಯೆನಿಸಿಕೊಂಡು ಯಜುರ್ವೇದ ಶಕ್ತಿಯಾಗಿರುವುದು. ಮೂರನೆಯ ತಂತಿಯು ಶುದ್ಧಸತ್ವಗುಣದಲ್ಲಿರುವ 'ಇಚ್ಛಾಶಕ್ತಿ' ಯೆನಿಸಿಕೊಂಡು ಸಾಮವೇದಶಕ್ತಿಯಾಗಿರುವುದು. ನಾಲ್ಕನೆಯ ತಂತಿಯು ಶುದ್ಧಸತ್ವಗುಣದಲ್ಲಿರುವ 'ಇಚ್ಛಾಶಕ್ತಿಯ ಅನುವರ್ತಿ'ಯಾಗಿ ಅಧರ್ವಣವೇದಶಕ್ತಿಯಾಗಿರುವುದು. ಮುಖ್ಯವಾಗಿ ಮೇಲಿನ ನಾಲ್ಕು ತಂತಿಗಳೂ ಶುದ್ಧಸತ್ವಗುಣಕ್ಕೆ ಸೇರಿದವುಗಳಾಗಿವೆ ಗುಣಗಳಲ್ಲಿ ರಜಸ್ತಮೋಗುಣಗಳ ಉಲ್ಬಣವಿಲ್ಲದ ಶುದ್ಧಸತ್ವಗುಣಕ್ಕೆ ಶುದ್ಧಸತ್ವಪ್ರಧಾನಮಾಯೆಯೆಂದೂ, ರಜೋಗುಣ ತಮೋಗುಣ, ಮಲಿನಸತ್ವಗುಣಗಳು ಒಟ್ಟಿಗೆ ಸೇರಿ

ಮಲಿನವಾಯೆಯೆಂದೂ ವೇದಾಂತದಲ್ಲಿ ಹೇಳಿರುವುದು. ಆದುದರಿಂದ ಮೇಲಿನ ನಾಲ್ಕು ತಂತಿಗಳು ಶುದ್ಧಸತ್ವಪ್ರಧಾನಮಾಯೆಯೆಂದರೆ ಪ್ರಕೃತಿಸ್ವರೂಪವಾಗಿಯೂ, ಪಕ್ಕದ ಮೂರುತಂತಿಗಳು ಮಲಿನಮಾಯೆಯೆಂದರೆ ವಿಕೃತಿಸ್ವರೂಪವಾಗಿಯೂ ಇರುವವು. ಅಂದರೆ ಒಂದು ಪರ ಮತ್ತೊಂದು ಅಪರ. ಒಂದು ವಿದ್ಯಾ ಮತ್ತೊಂದು ಅವಿದ್ಯಾ. ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳು ಶುದ್ಧಸತ್ವ ಗುಣವಾಗಿ ದೇವತಾಶಕ್ತಿಗಳಾಗಿರುವ ತತ್ವಕ್ಕೆ ಆಧಾರ.

**ಸೀತೋಪನಿಷತ್ತಿನಲ್ಲಿ**:—

ಸಾದೇವೀ ತ್ರಿವಿಧಾಭವತಿ ಶಕ್ತ್ಯಾತ್ಮನಾ ।
ಇಚ್ಛಾಶಕ್ತಿ ಕ್ರಿಯಾಶಕ್ತಿ ಸ್ಸಾಕ್ಷಾಚ್ಛಕ್ತಿರಿತಿ ॥

**ಯೋಗಚೂಡಾಮಣ್ಯುಪನಿಷತ್ತಿನಲ್ಲಿ**:—

ಕ್ರಿಯಾ ಇಚ್ಛಾ ತಥಾಜ್ಞಾನಂ ಬ್ರಾಹ್ಮೀ ರೌದ್ರೀಚ ವೈಷ್ಣವೀ ॥

**ಅಕ್ಷಮಾಲಿಕೋಪನಿಷತ್ತಿನಲ್ಲಿ**:—

ಸರ್ವವಿದ್ಯಾತ್ಮಿಕೇ ಸರ್ವಶಕ್ತ್ಯಾತ್ಮಿಕೇ ಸರ್ವದೇವಾತ್ಮಿಕೇ ॥

**ಭಾವನೋಪನಿಷತ್ತಿನಲ್ಲಿ**:—

ಕುಂಡಲಿನೀ ಜ್ಞಾನಶಕ್ತಿಗೃಹಮ್ ।
ಇಚ್ಛಾಶಕ್ತಿ ರ್ಮಹಾತ್ರಿಪುರ ಸುಂದರೀ ಕ್ರಿಯಾಶಕ್ತಿಪೀಠಂ ॥

**ಕಾಳಿದಾಸನ ಲಘುಸ್ತುತಿಯಲ್ಲಿ**:—

ದೇವಾನಾಂ ತ್ರಿತಯಂ ತ್ರಯಿಾಹುತಭುಜಾಂ ಶಕ್ತಿತ್ರಯಂ ತ್ರಿಸ್ವರಾ ॥

**ಲಲಿತಾಸಹಸ್ರನಾಮಭಾಷ್ಯದಲ್ಲಿ**:—

ತ್ರಿಪುರಾ ತ್ರಿವಿಧಾ ದೇವೀ ಬ್ರಹ್ಮವಿಷ್ಣ್ವೀಶ ರೂಪಿಣೀ ।
ಜ್ಞಾನಶಕ್ತಿಃ ಕ್ರಿಯಾಶಕ್ತಿ ರಿಚ್ಛಾಶಕ್ತ್ಯಾತ್ಮಿಕಾ ಪ್ರಿಯೇ ॥

ಜ್ಞಾನಕ್ರಿಯಾಇಚ್ಛಾಶಕ್ತಿಗಳೇ ವೇದಶಕ್ತಿಗಳಾಗಿರುವ ತತ್ವಕ್ಕೆ ಬ್ರಹ್ಮ ವಿಷ್ಣು ರುದ್ರರೇ ಋಗ್ಯಜುಸ್ಸಾಮಾಥರ್ವಣ ವೇದಗಳ ಸ್ವರೂಪರಾಗಿರುವರು. ಇದಕ್ಕೆ ಅನೇಕ ಶ್ರುತಿಪ್ರಮಾಣಗಳಿವೆ. ಗುಣಗಳ ಸಮ್ಮೇಳನದಿಂದ ಪ್ರಪಂಚದ ಸೃಷ್ಟ್ಯಾದಿಗಳು ನಡೆಯುತ್ತಿವೆ. ಇದರಂತೆ ವೀಣೆಯ ಮೇಲಿನ ಮತ್ತು ಪಕ್ಕದ ತಂತಿಗಳ ಕಾರ್ಯಗಳು ಒಟ್ಟಿಗೆ ಸೇರಿಯೇ ವೀಣೆಯೆನಿಸಿಕೊಳ್ಳುವುದು. ಸತ್ವರಜಸ್ತಮೋಗುಣಗಳ ಕಾರ್ಯಗಳಲ್ಲಿ ಆಯಾ ಗುಣಗಳ ಪ್ರತ್ಯೇಕ ಪ್ರತ್ಯೇಕ ಕಾರ್ಯಗಳ ಸ್ವರೂಪಗಳೂ, ಸಮ್ಮೇಳನದಿಂದ ಆಗುವ ಕಾರ್ಯಗಳೂ ಇವೆ. ಇದರಂತೆ ಶುದ್ಧ

ಸತ್ವಗುಣ ತತ್ವವಾದ ವೀಣೆಯ ಮೇಲಿನ ನಾಲ್ಕು ತಂತಿಗಳ ಪ್ರತ್ಯೇಕ ಕಾರ್ಯಗಳೂ ಇವೆ. ಪಕ್ಕದ ತಂತಿಗಳ ಪ್ರತ್ಯೇಕ ಕಾರ್ಯಗಳೂ ಇವೆ. ಇವುಗಳೆಲ್ಲಾ ಒಟ್ಟು ಸೇರಿದ ಕಾರ್ಯಗಳೂ ಇವೆ. ಮುಖ್ಯವಾಗಿ ಶುದ್ಧ ಸತ್ವಗುಣಕ್ಕೆ ಸೇರಿದ ವೀಣೆಯ ಮೇಲಿನ ನಾಲ್ಕು ತಂತಿಗಳೂ ದೇವತಾಶಕ್ತಿಗಳಾಗಿರುವವು. ವೀಣೆಯಮೇಲಿನ ತಂತಿಗಳು ನಾದಭೇದದಿಂದ ಪ್ರತ್ಯೇಕ ಪ್ರತ್ಯೇಕವಾದ ನಾಮಗಳನ್ನು ಪಡೆದಿರುವಂತೆ ಒಂದಾದ ವೇದವು ಕಾರ್ಯಭೇದಗಳಿಂದ ನಾಲಕ್ಕಾಗಿರುವುದು. ವೀಣೆಯ ಮೇಲಿನ ತಂತಿಗಳ ಶಬ್ದಗಳು ಪಕ್ಕದ ತಂತಿಗಳ ಶಬ್ದಗಳೊಡನೆ ಸಮ್ಮಿಳಿತವಾಗುವಂತೆ ವೇದವು ಕೂಡ ವಿಕೃತಿಗಳೆನಿಸುವ ಪದ, ಕ್ರಮ, ಜಟೆ, ಘನ ಮುಂತಾದ ವಿಕೃತಿಗಳಲ್ಲಿ ಬೆರೆಯುವುದು ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ " ತ್ರೈಗುಣ್ಯವಿಷಯಾವೇದಾಃ " ಎಂದಪ್ಪಣೆ ಕೊಡಿಸಿರುವಂತೆ ವೇದಗಳು ತ್ರೈಗುಣ್ಯ ವಿಷಯಗಳೆಂದರೆ ಮೂರು ಗುಣಗಳ ಶಬ್ದಶಕ್ತಿಯಿಂದಾಗಿರುವ ಸೃಷ್ಟಿ ಸ್ಥಿತಿ ಲಯಗಳೆಂಬ ತತ್ವಪ್ರತಿಪಾದಕವಾಗಿರುವವು. ಪ್ರಪಂಚವೂ ಸಹ ಮೂರು ಗುಣಗಳ ಸ್ವರೂಪವಲ್ಲದ ಬೇರೆ ಯಾವುದೂ ಅಲ್ಲ.

ವೀಣೆಯ ಮೇಲಿರುವ ನಾಲ್ಕುತಂತಿಗಳು ಕ್ರಮವಾಗಿ ಋಗ್ಯಜುಸ್ಸಾಮಾಥರ್ವಣ ವೇದಗಳಾಗಿ ಜ್ಞಾನ ಕ್ರಿಯಾ ಇಚ್ಛಾಶಕ್ತಿಗಳ ಸ್ವರೂಪಗಳೆಂದು ತಿಳಿಸಿತಷ್ಟೆ! ಋಗ್ವೇದವು ಜ್ಞಾನಶಕ್ತಿಯ ತತ್ವದ್ದು. ಸಕಲ ಸ್ವರೂಪವನ್ನೂ ತಿಳಿಯಬೇಕಾದರೆ ಜ್ಞಾನಶಕ್ತಿಯಿಂದಲೇ. ಋಗ್ವೇದವೆಂದರೆ ಯಜ್ಞದೇವತೆಗಳ ಸ್ವರೂಪದ ಜ್ಞಾನವನ್ನು ತಿಳಿಸುವ ಮಂತ್ರವು. "ಋಚ್ಯಂತೆ-ಸ್ತೂಯಂತೆ ದೇವಾ ಅನಯೇತಿ ಋಕ್" ಎಂಬ ವ್ಯುತ್ಪತ್ತಿಯಂತೆ ಸಮಸ್ತ ದೇವತಾಶಕ್ತಿಗಳ ಗುಣರೂಪಗಳನ್ನು ನಿರೂಪಿಸುವುದು ಋಗ್ವೇದವು. ದೇವತೆಗಳ ಗುಣರೂಪಗಳನ್ನು ತಿಳಿದುಕೊಳ್ಳುವುದು ಜ್ಞಾನಶಕ್ತಿಯಿಂದಲೇ. ಯಜುರ್ವೇದದ ೩೬ನೇ ಅಧ್ಯಾಯದ ಮಂತ್ರದಲ್ಲಿ "ಋಚಂವಾಚಂಪ್ರಪದ್ಯೇ" ಎಂದಿದೆ. ನಾನು ವಾಣಿಯನ್ನು ತೆಗೆದುಕೊಂಡು ಋಗ್ವೇದದ ಶರಣು ಹೊಂದುತ್ತೇನೆಂದರೆ, ನನ್ನವಾಣೀರೂಪವಾದ ಸ್ತೋತ್ರದ ಮೂಲಕ ನನ್ನಜ್ಞಾನಶಕ್ತಿಯನ್ನು ಯಜ್ಞದೇವತೆಗಳ ಸ್ವರೂಪದಲ್ಲಿಟ್ಟು ಪ್ರಾರ್ಥಿಸುತ್ತೇನೆಂಬ ತಾತ್ಪರ್ಯ. ಆದುದರಿಂದ ಋಗ್ವೇದವು ಜ್ಞಾನಶಕ್ತಿ ವಿಷಯಕವಾದುದೇ ಆಗಿರುವುದು.

ಯಜುರ್ವೇದವು ಜಪ ಹೋಮ ಮುಂತಾದ ಯಜ್ಞಕರ್ಮಗಳನ್ನು ನಿರೂಪಿಸುವುದು. ಜಪಹೋಮಾದಿಗಳ ಕ್ರಿಯೆಯನ್ನು ಯಜುರ್ವೇದವು ಸೂಚಿಸುವುದಾದುದರಿಂದ ಕ್ರಿಯಾಶಕ್ತಿಸ್ವರೂಪವಾದುದು. "ಇಜ್ಯತೇ ಅನೇನೇತಿ ಯಜುಃ। ಯಜದೇವ ಪೂಜಾ ಸಂಗತಿ ಕರಣ ದಾನೇಷು" ದೇವತೆಗಳ ಪ್ರೀತ್ಯರ್ಥವಾಗಿ

ಮಾಡುವ ಯಜ್ಞಕರ್ಮಗಳನ್ನು ನಿರೂಪಿಸುವುದು ಯಜುರ್ವೇದವು. ಅಲ್ಲದೆ ಯಜುರ್ವೇದದ ೩೬ನೆಯ ಅಧ್ಯಾಯದಲ್ಲಿ "ಮನೋ ಯಜುಃ ಪ್ರಪದ್ಯೇ" ಎಂಬ ಮಂತ್ರಕ್ಕೆ ನಾನು ಮನಸ್ಸನ್ನು ತೆಗೆದುಕೊಂಡು ಯಜುರ್ವೇದವನ್ನು ಶರಣು ಹೊಂದುತ್ತೇನೆ ಎಂದಿದೆ. ಅಂದರೆ ಮನಸ್ಸೇ ಸರ್ವಕಾರ್ಯಪ್ರವರ್ತನೆಗೂ ಮುಖ್ಯವಾದುದರಿಂದ ದೇವತೆಗಳ ಆರಾಧನರೂಪವಾದ ಯಜ್ಞಕರ್ಮ ಮಾಡುವುದೇ ಆಗಿದೆ. ಆದುದರಿಂದ ಯಜುರ್ವೇದವು ಕ್ರಿಯಾಶಕ್ತಿ ಸ್ವರೂಪವಾದುದು.

ಯಜ್ಞದೇವತೆಗಳನ್ನು ಕುರಿತು ನಾನು ನಿಮ್ಮವನೆಂದು ನಮ್ರತೆಯಿಂದಲೂ ಗಾಂಭೀರ್ಯದಿಂದಲೂ ಪ್ರಾರ್ಥಿಸುವ ಮತ್ತು ಪರಸ್ಪರ ಸಂಬಂಧವನ್ನು ತೋರಿ ಪ್ರಿಯವನ್ನೂ ಹೊಂದುವ ಸ್ತೋತ್ರವನ್ನು ನಿರೂಪಿಸುವುದೇ ಸಾಮವೇದವು. ಸಾಮ ಶಬ್ದಾರ್ಥಕ್ಕೂ "ಸಾಂತ್ವೇನಾಂತ್ವಃ (ಪ್ರಿಯಕರಣಂ)" ಅತ್ಯಂತಪ್ರಿಯವಾದ ನುಡಿ ಎಂದರ್ಥವಾಗುವುದು. ಅಲ್ಲದೆ "ಸಾಮಂ ಪ್ರಾಣಂ ಪ್ರಪದ್ಯೇ" ಎಂಬ ಯಜುರ್ವೇದದ ವಾಕ್ಕಿನಿಂದ ಪ್ರಾಣವನ್ನು ತೆಗೆದುಕೊಂಡು ಸಾಮವೇದವನ್ನು ಶರಣು ಹೊಂದುತ್ತೇನೆಂದರೆ ಪ್ರಾಣವು ಆತ್ಮನಿಗೆ ಸೇವಕನ ಸ್ಥಾನದಲ್ಲಿರುವುದು. ಅಲ್ಲದೆ "ಪ್ರಾಣಾಂತ್ಸರ್ವಾನ್ಪರಮಾತ್ಮನಿ ಪ್ರಣಾಮಯತಿ ತ್ಯೇತಸ್ಮಾತ್ಪ್ರಣವಃ" ಎಂಬ ಅಥರ್ವಶಿಖ ಶ್ರುತ್ಯಾಧಾರದಂತೆ ಪ್ರಾಣವು ಪ್ರಣಾಮ ಸ್ವರೂಪವಾಗಿ ಪರಮಾತ್ಮನಲ್ಲಿ ಲೀನವಾಗುವುದು. ಆದುದರಿಂದ ಸಾಮಶಬ್ದಾರ್ಥವು ಪ್ರೀತಿ ಪೂರ್ವಕವಾದ ನಮ್ರತೆ ಮತ್ತು ಗಾಂಭೀರ್ಯದೊಡನೆ ಪ್ರಾರ್ಥಿಸಿ ಯಜ್ಞದೇವತೆಗಳೊಡನೆ ಏಕೀಕರಣದ ತತ್ವವನ್ನು ನಿರೂಪಿಸುವುದು. ಅಲ್ಲದೆ ಯಜ್ಞದೇವತೆಗಳೊಡನೆ ನಾನು ನಿಮ್ಮವನೆಂದು ಗಾಂಭೀರ್ಯ ಮತ್ತು ನಮ್ರತೆಯಿಂದ ಪ್ರಾರ್ಥಿಸಿ ತೋರಿಸುವ ಇಚ್ಛೆಯೂ ಇರುವುದರಿಂದ ಸಾಮವೇದವು ಇಚ್ಛಾಶಕ್ತಿಸ್ವರೂಪವಾದುದು.

ಅಥರ್ವಣ ವೇದವೆಂಬುದು ಈ ಮೂರು ವೇದಗಳ ಶೇಷಾಂಶಗಳನ್ನು ಪೂರ್ತಿಮಾಡತಕ್ಕದ್ದಾಗಿ ಸರ್ವವಿದ್ಯೆಗಳ ರಕ್ಷಣೆಯನ್ನು ಮಾಡತಕ್ಕದ್ದಾಗಿ ಈ ಮೂರು ವೇದಗಳನ್ನೂ ಅನುಸರಿಸಿಕೊಂಡಿರುವುದು. ಅಲ್ಲದೆ "ಥರ್ವತಿ ಶ್ಚರತಿ ಕರ್ಮ ತತ್ಪ್ರತಿಷೇಧಃ" ಎಂಬ ನಿರುಕ್ತ ವಚನದಂತೆ ಸಕಲ ಸಂಶಯ ನಿವರ್ತಕವಾದದ್ದು. ಆದುದರಿಂದ ಇದಕ್ಕೆ ಅಥರ್ವಣವೆಂದು ಹೆಸರು. ಅಲ್ಲದೆ ಅಥರ್ವಣ ಎನ್ನುವುದಕ್ಕೆ "ಅಥಲೋಕಮಂಗಳಾಯ ಅರ್ವತೇ = ಪ್ರಸ್ತೂಯತೇ ಇತಿಯತ್ ಸಅಥರ್ವಃ ಕರ್ಮಣಿಅನಿಪ್ ಶಕಂ ಧ್ವಾದಿತ್ವಾತ್ ಪರರೂಪಂ. ಅಥರ್ವಣಃ ಶಿವಃ" ಎಂಬ ವ್ಯುತ್ಪತ್ತಿಯು ಶಬ್ದಾಥಕಲ್ಪದ್ರುಮದಲ್ಲಿ ಇರುವುದು. ಅಂದರೆ

ಸಂಕಲ್ಪವನ್ನನುಸರಿಸಿ ಮಂಗಳವನ್ನುಂಟುಮಾಡುವುದು ಅಥರ್ವಣವೇದವು 'ಅಥ' ಶಬ್ದವೇ ಮಂಗಳ ವಾಚಕವಾದುದು. ಮಂಗಳವು ಸಂಕಲ್ಪವನ್ನನುಸರಿಸಿ ಕೊಂಡಿರುವುದರಿಂದ ಇಚ್ಛಾಶಕ್ತಿಯ ಅನುವರ್ತಿಯಾಗಿ ಅಥರ್ವಣ ವೇದವೆನಿಸಿ ಕೊಳ್ಳುವುದು ಅಥವಾ ಋಗ್ಯಜುಸ್ಸಾಮಗಳಾದ ಮೂರನ್ನೂ ಅನುಸರಿಸಿ ಮಂಗಳ ವನ್ನುಂಟುಮಾಡುವುದೆಂಬ ಅರ್ಥವೂ ಆಗುವುದು. ಮೇಲಿನ ಅನ್ವಯಗಳ ಸಮರ್ಥನೆಗೆ.

ಋಗ್ವೇದೇನ ಹೋತಾಶಂಸತಿ । ಯಜುರ್ವೇದೇನ ಅಧ್ವರ್ಯುರ್ಯಜತಿ ।
ಸಾಮವೇದೇನೋದ್ಗಾತಾ । ಸರ್ವೈರ್ಬ್ರಹ್ಮ ॥

ಎಂಬ ಶ್ರುತಿವಾಕ್ಯವೂ ಇರುವುದು. ಅಂದರೆ ಯಜ್ಞಕರ್ಮದಲ್ಲಿರುವ ಋತ್ವಿಕ್ಕುಗಳಲ್ಲಿ ಮುಖ್ಯವಾದವರು ನಾಲ್ವರು. ಋಗ್ವೇದದ ಕಾರ್ಯಮಾಡತಕ್ಕವನಿಗೆ ಹೋತೃವೆಂತಲೂ, ಯಜುರ್ವೇದದ ಕಾರ್ಯಮಾಡತಕ್ಕವನಿಗೆ ಅಧ್ವರ್ಯುವೆಂತಲೂ, ಸಾಮವೇದದ ಕಾರ್ಯಮಾಡತಕ್ಕವನಿಗೆ ಉದ್ಗಾತೃವೆಂತಲೂ, ಈ ಮೂರುಕರ್ಮ ಗಳನ್ನೂ ಅನುಸರಿಸಿ ಕರ್ಮಗಳ ನ್ಯೂನಾತಿರಿಕ್ತಗಳನ್ನು ಸರಿಪಡಿಸಿ ಕರ್ಮವನ್ನು ರಕ್ಷಿಸಿ ಕರ್ಮಪೂರ್ಣವಾಗುವ ಮಂಗಳವನ್ನುಂಟುಮಾಡಿಸುವವನಿಗೆ ಬ್ರಹ್ಮ ನೆಂದು ಹೆಸರುಗಳಿರುವುವು. ಬ್ರಹ್ಮತ್ವದ ಸ್ಥಾನದಲ್ಲಿರತಕ್ಕವನೇ ಅಥರ್ವಣವೇದದ ಕಾರ್ಯದ ಸ್ಥಾನದಲ್ಲಿರತಕ್ಕವನು. ನಾಲ್ಕುವೇದಗಳಿಗೂ ಅನ್ವಯಮಾಡಿರುವ ಶಕ್ತಿಗಳ ತತ್ವಗಳಂತೆಯೆ ಈ ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮ ಇವರುಗಳ ಕಾರ್ಯಗಳೂ ಇರುವುವು. ಜ್ಞಾನ ಕ್ರಿಯಾ ಇಚ್ಛಾಶಕ್ತಿಗಳನ್ನನುಸರಿಸಿ ನಾಲ್ಕು ವೇದಗಳಿಗೂ ಸ್ವರೂಪಭೇದಗಳಿರುವವು. ಕೆಲವು ಮಂತ್ರಗಳು ಚತುರ್ವೇದ ಗಳಲ್ಲಿಯೂ ಸ್ವರಭೇದದಿಂದ ಅಧ್ಯಯನ ಮಾಡಲ್ಪಡುವವು. ಈ ಸ್ವರಭೇದ ದಿಂದಲೇ ಅರ್ಥಭೇದ ಮತ್ತು ಗುಣಭೇದಗಳಿರುವವು. ಆಯಾ ಶಾಖಾಧ್ಯಯನ ಮಾಡುವಾಗ ಸ್ವರಭೇದಗಳಿಂದ ಮೇಲೆ ವಿವರಿಸಿರುವ ಸ್ವರೂಪಗಳಂತೆ ಶಕ್ತಿಭೇದಗಳೂ ವಿದ್ವಾಂಸರಿಗೆ ಗೋಚರವಾಗುವವು.

ವೀಣೆಯ ಮೇಲಿರುವ ನಾಲ್ಕುತಂತಿಗಳನ್ನೂ ನಾಲ್ಕುವೇದಗಳಿಗೆ ಅನ್ವಯ ಮಾಡಿರುವುದಷ್ಟೆ! ವೀಣೆಯಮೇಲಿರುವ ನಾಲ್ಕು ತಂತಿಗಳ ಹೆಸರುಗಳೂ ನಾಲ್ಕು ವೇದಗಳಿಗೆ ಅನ್ವಯವಾಗುವವು. ಋಗ್ವೇದವೇ ಸಾರಣೀ ತಂತಿಯಾಗಿರುವುದು. ಸಾರಣೀ ಎಂದರೆ 'ಸೃ' ಎಂಬ ಧಾತುವಿನಮೇಲೆ ಬಿಡಿಸಿಕೊಂಡು ಹೋಗುವಿಕೆ. ಋಗ್ವೇದವು ಕೂಡ ಸಮಸ್ತ ದೇವತೆಗಳ ಸ್ವರೂಪ ಲಕ್ಷಣಗಳನ್ನು ಬಿಡಿಸಿ ವಿವರಿಸುವುದು. ಆದುದರಿಂದ ಸಾರಣೀತಂತಿಯೆ ಋಗ್ವೇದವು.

ಯಜುರ್ವೇದವೇ ಸಾರಣೀತಂತಿಯ ಪಕ್ಕದಲ್ಲಿರುವ ಪಂಚಮವೆಂಬ ಹೆಸರುಳ್ಳ ತಂತಿಯಾಗಿರುವುದು. ಪಂಚಮವೆಂದರೆ "ಪಚಿ" ಧಾತುವಿನಮೇಲೆ ವಿಸ್ತಾರ ಅಥವಾ ವಿವರಣೆಯೆಂದರ್ಥವಾಗುವುದು ಕಾರ್ಯರೂಪವಾದ ಕ್ರಿಯೆಯೇ ಮನಸ್ಸಿನಲ್ಲಿರುವ ಸಂಕಲ್ಪವನ್ನು ವಿಸ್ತಾರ ಅಥವಾ ವಿವರಣೆ ಮಾಡುವುದಾದುದ ರಿಂದ ಎರಡನೆಯ ತಂತಿಗೆ ಪಂಚಮವೆಂದು ಹೆಸರು ಬಂದಿದೆ. ಯಜುರ್ವೇದವೂ ಕ್ರಿಯಾರೂಪವೆಂದರೆ ಯಜ್ಞಾದಿಕರ್ಮಗಳನ್ನು ನಿರೂಪಿಸುವುದರಿಂದ ವಿವರಣೆ ಅಥವಾ ವಿಸ್ತಾರ ರೂಪವಾಗಿರುವುದು. ಆದುದರಿಂದ ಎರಡನೆಯ ತಂತಿಯಾದ ಪಂಚಮವೆಂಬ ಹೆಸರುಳ್ಳ ತಂತಿಯೇ ಯಜುರ್ವೇದ ಸ್ವರೂಪವು.

ಪಂಚಮದ ಪಕ್ಕದಲ್ಲಿರುವ ತಂತಿಗೆ ಮಂದ್ರವೆಂದು ಹೆಸರು. ಮಂದ್ರವೆಂದರೆ "ಮಂದತೆ ಶನೈರ್ನಿಸ್ಸರತೀತಿ ಮಂದ್ರಃ(ಮದಿಃಸ್ತುತಿ ಮೋದ ಮದ ಸ್ವಪ್ನಕಾಂತಿ ಗತಿಷು)'ಮೆಲ್ಲಗೂ ಗಂಭೀರವಾಗಿಯೂ ನುಡಿಯುವುದು ಮಂದ್ರವು. ಸಾಮವೇದವು ಕೂಡ ಗಂಭೀರ ನಮ್ರತೆ ಮುಂತಾದ ಭಾವಗಳಿಂದ ಪ್ರಾರ್ಥನೆಮಾಡುವ ಸ್ವಭಾವ ದ್ದಾದುದರಿಂದ ಮಂದ್ರದ ತಂತಿಯೇ ಸಾಮವೇದಸ್ವರೂಪವು. ಮಂದ್ರವೆಂಬ ಹೆಸರುಳ್ಳ ತಂತಿಯಪಕ್ಕದ್ದೆಂದರೆ ಕೊನೆಯತಂತಿಗೆ ಅನುಮಂದ್ರವೆಂದು ಹೆಸರು. ಮತ್ತೊಂದನ್ನು ಅನುಸರಿಸಿ ಸಾವಧಾನವಾಗಿರುವುದಕ್ಕೆ ಅನುಮಂದ್ರವೆಂದು ಹೆಸರು. ಅಂದರೆ ವೇದತ್ರಯೋಕ್ತವಾದ ವಿದ್ಯಾಫಲವಿಚಾರಗಳನ್ನು ಪೂರ್ತಿಮಾಡಿ ಅವುಗಳ ರಕ್ಷಣೆಮಾಡತಕ್ಕದ್ದು. ಈರೀತಿ ವೇದತ್ರಯವನ್ನು ಅನುಸರಿಸುವುದರಿಂದ ಅನುಮಂದ್ರದತಂತಿಯೇ ಅಥರ್ವಣ ವೇದಸ್ವರೂಪವು.

ಮುಖ್ಯವಾಗಿ ತಂತಿಗಳಲ್ಲಿನ ನಾದದಿಂದಲೇ ತಂತಿಗಳಿಗೆ ಆಯಾಯ ಹೆಸರು ಗಳು ಬಂದಿರುವವೇಹೊರತು ತಂತಿಯ ಲೋಹ ಮಾತ್ರಕ್ಕೆ ಪ್ರಾಶಸ್ತ್ಯವಿಲ್ಲ. ಇದರಂತೆ ವೇದಮಂತ್ರಗಳಲ್ಲಿರುವ ದೇವತಾಧಿಷ್ಠಾನ ಸ್ವರದೊಡಗೂಡಿದ ನಾದಶಕ್ತಿಗೆ ಪ್ರಾಶಸ್ತ್ಯವಲ್ಲದೆ ಬರೀ ಮಂತ್ರದ ಅಕ್ಷರಮಾತ್ರಗಳಿಗಲ್ಲ ಸಂಗೀತವನ್ನು ಹೆಚ್ಚಾಗಿ ನುಡಿಸುವ ಕಾರ್ಯಗಳು ವೀಣೆಯ ಮೇಲ್ಭಾಗದ ತಂತಿಗಳಲ್ಲಿ ಸಾರಣೀ ಮತ್ತು ಪಂಚಮವೆಂಬ ಹೆಸರುಳ್ಳ ತಂತಿಗಳಿಂದಲೇ ಆಗುವವು. ಅಂದರೆ ಸಾರಣೀ ಮತ್ತು ಪಂಚಮ ತಂತಿಗಳಿಗೆ ಹೆಚ್ಚು ಕಾರ್ಯವಿರುವುದರಿಂದ ಹೆಚ್ಚು ಅಧಿಕಾರ ಬಂದಿರುತ್ತದೆ. ಇದರಂತೆ ಸಾರಣೀ ಮತ್ತು ಪಂಚಮ ಸ್ವರೂಪಗಳಾದ ಋಗ್ವೇದ ಮತ್ತು ಯಜುರ್ವೇದಗಳಿಗೇ ಹೆಚ್ಚು ಅಧಿಕಾರಬಂದಿದೆ. ಈಗಲೂ ನಮ್ಮ ಭಾರತಭೂಮಿಯಲ್ಲಿ ಋಗ್ಯಜುಶ್ಶಾಖಾಧ್ಯಾಯಿಗಳೇ ಅಧಿಕರಾಗಿರುತ್ತಾರೆ. ಕಾರಣ ವೇನೆಂದರೆ ಒಂದು ಜ್ಞಾನಶಕ್ತಿಯಾಗಿ ಮತ್ತೊಂದು ಕ್ರಿಯಾಶಕ್ತಿಯಾಗಿರುವುದ ರಿಂದಲೂ ಜ್ಞಾನಕ್ರಿಯಾಶಕ್ತಿಗಳೇ ಸಕಲ ಕಾರ್ಯಗಳಿಗೂ ಅವಶ್ಯಕವಾಗಿ ಹೆಚ್ಚಾಗಿ

ಬೇಕಾಗಿರುವುದರಿಂದಲೂ ಋಗ್ಯಜುರ್ವೇದಗಳೇ ಹೆಚ್ಚು ಅಧಿಕಾರವುಳ್ಳವುಗಳಾಗಿವೆ. ಪ್ರಾಶಸ್ತ್ಯದಲ್ಲಿ ನಾಲ್ಕು ವೇದಗಳೂ ಸಮನಾಗಿವೆ. ಈ ನಾಲ್ಕು ವೇದಗಳನ್ನು ಕ್ರಮವಾಗಿ ಧರ್ಮಾರ್ಥಕಾಮಮೋಕ್ಷಗಳಾದ ಚತುರ್ವಿಧ ಪುರುಷಾರ್ಥಗಳಿಗೆ ಅನ್ವಯಿಸಬಹುದು ಧರ್ಮ-ದೇವಲಕ್ಷಣ ಋಗ್ವೇದ; ಅರ್ಥ-ಕರ್ಮವಿವರಣೆ ಯಜುರ್ವೇದ; ಕಾಮ-ನಯಸಂಗಮನ ಸಾಮವೇದ; ಮೋಕ್ಷ-ಫಲಪ್ರಾಪ್ತಿ ಅಥರ್ವಣವೇದ. ಹೀಗೆ ಚತುರ್ವಿಧ ಪುರುಷಾರ್ಥಗಳೂ ಚತುರ್ವೇದಗಳ ಲಕ್ಷಣಗಳಾಗಿವೆ.

ಇದುವರೆಗೂ ವೀಣೆಯ ಮೇಲಿನ ತಂತಿಗಳಿಗೂ ನಾಲ್ಕು ವೇದಗಳಿಗೂ ಅನ್ವಯಿಸಿತಷ್ಟೆ! ವೀಣೆಯಲ್ಲಿರುವ ಇಪ್ಪತ್ತುನಾಲ್ಕು ಮನೆಗಳ ಪ್ರಾಶಸ್ತ್ಯವು ಅವುಗಳಲ್ಲಿ ಉತ್ಪನ್ನವಾಗುವ ನಾದಗಳಿಂದಲ್ಲದೆ ಮನೆಯ ಪ್ರದೇಶವನ್ನಾಕ್ರಮಿಸಿರುವ ಕೇವಲ ಮರಕ್ಕೆ ಅಲ್ಲ. ೨೪ ಮನೆಗಳಲ್ಲಿ ಯಾವ ಯಾವ ಮನೆಗಳು ಎಷ್ಟೆಷ್ಟು ಪ್ರದೇಶಗಳನ್ನಾಕ್ರಮಿಸಿಕೊಂಡರೆ ಆಯಾಯ ಮನೆಯ ನಾದಗಳು ಉತ್ಪತ್ತಿಯಾಗುವುವೆಂಬ ವಿಧಿಯೂ ಇದ್ದೇ ಇರುವುದು. ಆದುದರಿಂದ ಪ್ರದೇಶಗಳನ್ನು ವಿಭಾಗಮಾಡುವುದರಲ್ಲಿ ಕಾರಣವಿದೆ. ಮತ್ತು ಆಯಾ ಪ್ರದೇಶಗಳಲ್ಲಿ ಉತ್ಪನ್ನವಾಗುವ ನಾದಗಳಲ್ಲಿ ವಿಶೇಷವಿದೆ. ಅಂದರೆ ಪ್ರತಿಯೊಂದು ತಂತಿಯಲ್ಲಿಯೂ ಸ್ವಾಭಾವಿಕವಾದ ಒಂದು ನಾದವಿರುವುದಷ್ಟೆ! ಆಯಾಯ ಮನೆಗಳನ್ನು ಅನುಸರಿಸಿ ತಂತಿಯನ್ನು ನುಡಿಸಿದರೆ ತಂತಿಯಲ್ಲಿರುವ ಸ್ವಾಭಾವಿಕವಾದ ನಾದವನ್ನನುಸರಿಸಿ ಇನ್ನೊಂದು ವಿಲಕ್ಷಣವಾದ ನಾದವು ಮನೆ ಮತ್ತು ತಂತಿಯ ಸಂಯೋಗದಿಂದ ಅಭಿವ್ಯಕ್ತವಾಗುವುದು. ಇದು ಆಯಾಯ ಸ್ಥಳಗಳ ಪ್ರಾಶಸ್ತ್ಯದಿಂದುಂಟಾದುದು. ಆದುದರಿಂದ ವೀಣೆಯಲ್ಲಿರುವ ೨೪ ಮನೆಗಳ ಸ್ಥಳಗಳ ಪ್ರಾಶಸ್ತ್ಯಗಳು ಯಾವ ತತ್ವಕ್ಕೆ ಸೇರಿರುವುವು ಎಂಬುವುಗಳನ್ನು ತಿಳಿದುಕೊಳ್ಳೋಣ.

ನಾದಗಳ ಉತ್ಪತ್ತಿ ಸ್ಥಿತಿಲಯಗಳು ಹೇಗಿವೆಯೋ ಹಾಗೆಯೇ ಬ್ರಹ್ಮಾಂಡಕ್ಕೂ ಸೃಷ್ಟಿ ಸ್ಥಿತಿ ಲಯಗಳುಂಟು. ಆದುದರಿಂದ ವೀಣೆಯಲ್ಲಿನ ಮನೆಗಳು ಸೃಷ್ಟಿ ಸ್ಥಿತಿ ಲಯಗಳನ್ನು ಪ್ರತಿಪಾದಿಸುವ ಗಾಯತ್ರೀದೇವಿಯ ಮಂತ್ರವಾದ "ತತ್ಸವಿತುರ್ವರೇಣಿಯಂ ಭರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್" ಎಂಬ ೨೪ ಅಕ್ಷರಗಳೊಡಗೂಡಿದ ಮಂತ್ರದ ತತ್ವಗಳುಳ್ಳ ಮನೆಗಳಾಗಿರುವುವು. ಈ ಮಂತ್ರದ ಪದವಿಭಾಗಗಳು "ತತ್, ಸವಿತುಃ, ವರೇಣಿಯಂ, ಭರ್ಗಃ, ದೇವಸ್ಯ, ಧೀಮಹಿ, ಧಿಯಃ, ಯಃ, ನಃ, ಪ್ರಚೋದಯಾತ್". ಈ ಪದಗಳ ತತ್ವಾರ್ಥಗಳು ಕ್ರಮವಾಗಿ ವೀಣೆಯ ಚಿತ್ರದಲ್ಲಿ ತೋರಿಸಿರುವಂತೆ ಮನೆಗಳಿಗೆ ಅನ್ವಯವಾಗುವುವು. ಸೃಷ್ಟಿ ವ್ಯಾಪಾರ ಲಯ ಮತ್ತು ಪರಬ್ರಹ್ಮತತ್ವಗಳ ಪ್ರತಿಪಾದನೆಯೇ

ಈ ಮಂತ್ರದ ಅರ್ಥವಾಗಿರುವುದು. ಮಂತ್ರವನ್ನನುಸರಿಸಿ ಸೃಷ್ಟಿಸ್ಥಿತಿಲಯಗಳ ವಿಭಾಗಗಳನ್ನೂ ಚಿತ್ರದಲ್ಲಿ ತೋರಿಸಿರುವುದು. ಮುಖ್ಯವಾಗಿ ನಾಲ್ಕು ತಂತಿಗಳ ಸ್ವರೂಪವಾದ ನಾಲ್ಕು ವೇದಗಳೂ ಗಾಯತ್ರೀದೇವಿಯ ಮಂತ್ರಪ್ರತಿಪಾದ್ಯವಾದ ಸೃಷ್ಟಿಸ್ಥಿತಿಲಯರೂಪಗಳಾದ ಸ್ಥಾನಗಳಲ್ಲಿ ಪ್ರಸರಿಸಿಕೊಂಡು ಕಾರ್ಯರೂಪವಾಗಿರುವವು ಎಂಬ ತತ್ವವಾಗಿರುವುದು.

ಇದುವರೆಗೂ ವೀಣೆಯ ರಚನೆಯ ಸ್ವರೂಪ ಮತ್ತು ವೇದವಿಭಾಗಗಳ ಸ್ವರೂಪಗಳನ್ನು ತಿಳಿಸಿದುದಲ್ಲದೆ ವೀಣೆಗೂ ವೇದಗಳಿಗೂ ಅನ್ವಯ ಮಾಡಿತು ವೀಣೆಯಲ್ಲಿರುವ ೨೪ ಮನೆಗಳಲ್ಲುಂಟಾಗುವ ಕಾರ್ಯಗಳಿಗೆ ಅನುಸಾರವಾಗಿ ವೇದಗಳಿಂದುಂಟಾಗುವ ಕಾರ್ಯಗಳ ಸ್ವರೂಪವನ್ನು ತಿಳಿದುಕೊಳ್ಳೋಣ ವೇದಗಳ ಕಾರ್ಯಗಳನ್ನು ತಿಳಿಯುವುದಕ್ಕೆ ವೇದಗಳ ಉದಯವನ್ನು ಪ್ರಥಮದಲ್ಲಿ ತಿಳಿಯಬೇಕಾಗಿದೆ. ವೀಣೆಯ ಚಿತ್ರದಲ್ಲಿ ಗಾಯತ್ರೀಮಂತ್ರದ ಪ್ರಥಮಪದವಾದ 'ತತ್' ಎಂಬುದನ್ನು ಬರೆದಿರುವುದಷ್ಟೆ! "ತತ್" ಎಂಬುದು ವೇದದಲ್ಲಿ ಪರಬ್ರಹ್ಮ ಬೋಧಕವಾದ ಪದವಾಗಿರುವುದು ಈ "ತತ್" ಪ್ರತಿಪಾದ್ಯವಾದ ಪರಮಾತ್ಮನಿಂದ ಪ್ರಪಂಚಸೃಷ್ಟಿಯಾಗಲು 'ಓಂಕಾರ' ಸ್ವರವು ಪ್ರಥಮದಲ್ಲಿ ಉದಯಿಸಿತು. ಪರಮಾತ್ಮನಿಂದ ಉದಯಿಸಿದ ಓಂಕಾರ ಸ್ವರವು ಮನುಷ್ಯನು ಗಾನಮಾಡುವ ಮತ್ತು ವಾದ್ಯದಿಂದ ನುಡಿಸುವ ನಾದದಂತೆ ಉದಯಿಸುವುದಿಲ್ಲ ಮನುಷ್ಯನ ಮಾತು, ವಾದ್ಯದ ನುಡಿ ಮತ್ತು ನಾವು ಕೇಳುವ ಇತರ ಶಬ್ದಗಳೂ, ಒಂದು ವಸ್ತುವಿನೊಡನೆ ಮತ್ತೊಂದು ವಸ್ತುವಿನ ಸಂಯೋಗದಿಂದುಂಟಾಗುವುದೇ ಹೊರತು ಸಂಯೋಗವಿಲ್ಲದೆ ಶಬ್ದ ಉಂಟಾಗುವುದೇ ಇಲ್ಲ ಅಂದರೆ ನಾವು ಕೇಳುವ ಶಬ್ದಗಳೆಲ್ಲಾ ಪಂಚಭೂತಗಳಲ್ಲಿ ಒಂದಕ್ಕೊಂದು ಸಂಯೋಗವಾಗುವುದರಿಂದಲೇ ಉತ್ಪನ್ನವಾಗುವುವು. ಈ ಸಂಯೋಗದಿಂದುತ್ಪನ್ನವಾಗುವ ಶಬ್ದಕ್ಕೆ 'ಆಹತ' ಶಬ್ದವೆಂದುಹೆಸರು. ಇಂತಹ ಸಂಯೋಗದಿಂದುಂಟಾಗದೆ ತನ್ನ ಸಹಜವಾದ ಸ್ವಭಾವದಿಂದ ಇರುವ ನಾದಕ್ಕೆ 'ಅನಾಹತ' ಎಂದು ಹೆಸರು. ಅಂದರೆ "ಸದೇವಸೌಮ್ಯೇದಮಗ್ರ ಆಸೀ ದೇಕಮೇವಾದ್ವಿತೀಯಂ","ಆತ್ಮಾವಾ ಇದಮೇಕ ಏವಾಗ್ರ ಆಸೀತ್" ಎಂಬ ಶ್ರುತಿವಾಕ್ಯಗಳಂತೆ ಸೃಷ್ಟಿಗೆ ಪೂರ್ವದಲ್ಲಿ ಪರಬ್ರಹ್ಮ ಒಂದೇ ಇತ್ತು ಪರಬ್ರಹ್ಮನ **ಅನಾಹತ** ಸ್ವರೂಪವಾದ ಓಂಕಾರಸ್ವರವು ತನ್ನಷ್ಟಕ್ಕೆ ತಾನೇ ಹೊರಹೊಮ್ಮಿತು. ಹೀಗೆ ಹೊರಕ್ಕೆ ಉದಯಿಸಿದ ಓಂಕಾರಸ್ವರವೇ ತ್ರಿಗುಣಾತ್ಮಕವಾದ ಅವ್ಯಕ್ತಶಕ್ತಿಯೆನಿಸಿಕೊಂಡಿತು. ಅನಂತರ ಸಕಲ ಸೃಷ್ಟಿ ಸ್ಥಿತಿಗಳಿಗೋಸ್ಕರ ಕಾರ್ಯರೂಪವಾಗಿ ಗುಣಗಳ ವಿಭಾಗವಾಯಿತು. ಆದುದರಿಂದ ಸೃಷ್ಟಿಗೆ ಮುಂಚೆ ಪರಬ್ರಹ್ಮ ಒಂದೇ ಇತ್ತು. ಅನಂತರ ಪರಬ್ರಹ್ಮನ ಓಂಕಾರ ಸ್ವರಶಕ್ತಿಯು ಪ್ರಸರಿಸಿತು.

ಯಾವ ಪದಾರ್ಥಗಳ ಸಂಯೋಗವೂ ಇಲ್ಲದೆ ನಿಶ್ಶಬ್ದದಿಂದ ಶಬ್ದಸ್ವರೂಪವಾದ ಓಂಕಾರವು ಹೊರಡುವುದು ಹೇಗೆಂಬ ಪ್ರಶ್ನೆ ಬರಬಹುದು. ಇದರ ತತ್ವವೇನೆಂದರೆ - ನಿಶ್ಶಬ್ದದಿಂದ ಶಬ್ದಹುಟ್ಟುವುದೂ, ಶೂನ್ಯದಿಂದ ಭಾವರೂಪ ಉದಯಿಸುವುದೂ ಅಸಂಭವ. ಭಾವರೂಪದಿಂದ ಭಾವರೂಪ ಹೊರಡುವುದೇ ವಿನಾ ಬೌದ್ಧಸಿದ್ಧಾಂತದಂತೆ ಶೂನ್ಯದಿಂದ ಭಾವರೂಪವು ಉದಯಿಸಲಾರದು. ಆದುದರಿಂದ ಸೃಷ್ಟಿಗೆ ಪೂರ್ವದಲ್ಲಿ ತತ್ ಪ್ರತಿಪಾದ್ಯವಾದ ಪರಬ್ರಹ್ಮಮಾತ್ರ ಇತ್ತೆಂಬ ಸ್ಥಿತಿಯಲ್ಲಿ ಭಾವರೂಪವಾದ ಪ್ರಪಂಚವೆಲ್ಲವೂ ಬೀಜರೂಪವೆನಿಸಿ ಪರಬ್ರಹ್ಮ ಸ್ಥಿತಿಯಲ್ಲಿತ್ತು. ವೃಕ್ಷಗಳ ಸಕಲ ತತ್ವಗಳೂ ಬೀಜರೂಪವೆನಿಸಿ ಬೀಜ ಸ್ಥಿತಿಯಲ್ಲಿ ಹೇಗಿರುವವೋ ಹಾಗೆಯೇ ಶಬ್ದವೊದಲುಗೊಂಡು ಸಕಲ ಭಾವರೂಪ ಪ್ರಪಂಚವೂ ಬೀಜಸ್ಥಿತಿಯಲ್ಲಿ ಬೀಜರೂಪವಾದ ಪರಬ್ರಹ್ಮಸ್ಥಿತಿಯಾಗಿತ್ತು. ಬೀಜರೂಪದಿಂದ ವೃಕ್ಷಸ್ವರೂಪವು ಹೊರಹೊರಡುವಂತೆ ಓಂಕಾರಸ್ವರವು ಸಹಜವಾಗಿಯೇ ಹೊರಉದಯಿಸಿತು. ಬೀಜವು ವೃಕ್ಷವಾಗಲು ಮಣ್ಣು, ನೀರು ಮುಂತಾದ ಇತರ ಸಲಕರಣೆಗಳು ಬೇಕಾಗುವಂತೆ ಪ್ರಪಂಚದ ಸಕಲ ಸಲಕರಣೆಗಳೂ ಪರಬ್ರಹ್ಮನಲ್ಲಿ ಬೀಜಾಂಕುರದಂತೆ ಇವೆ ಸಕಲ ಕಾರಣಗಳೂ ಪರಬ್ರಹ್ಮನಲ್ಲಿಯೇ ಇವೆ. ಅವನಿಗೆ ಮತ್ತೊಂದು ಕಾರಣವಿಲ್ಲ. ಕಾರ್ಯಕಾರಣರೂಪಗಳೆರಡೂ ಅವನೇ. ಸಾಂತವಾದ ಈ ಪ್ರಪಂಚವು ಅನಂತವಾದ ಪರಬ್ರಹ್ಮನಿಂದ ಹೇಗೆ ಉತ್ಪನ್ನವಾಯಿತೆಂಬುದನ್ನು ತಿಳಿಯುವುದು ನಮ್ಮ ಜ್ಞಾನದೃಷ್ಟಿಗೂ ಅತೀತವಾದುದು. ಸೃಷ್ಟಿಯ ಪ್ರಥಮಾರಂಭವು ಅಜ್ಞೇಯವು ಮತ್ತು ಮಾನವನ ಮನಸ್ಸಿನಿಂದ ತಿಳಿಯಲಸಾಧ್ಯವೂ ಆಗಿದೆ ಆದುದರಿಂದ ಓಂಕಾರಸ್ವರವು ತನ್ನ ಸಹಜವಾದ ಸ್ಥಿತಿಯಿಂದಲೇ ಹೊರಹೊರಟುದುದರಿಂದ 'ಅನಾಹತನಾದ' ಎನಿಸಿಕೊಂಡಿರುವುದೆಂದು ತಿಳಿಯಬೇಕು

ಮುಖ್ಯವಾಗಿ ಪರಬ್ರಹ್ಮ ಬೋಧಕವಾದ "ತತ್, ಸತ್, ಚಿತ್" ಎಂಬ ಪದಗಳು ಪರಬ್ರಹ್ಮವನ್ನು ಪ್ರತಿಪಾದಿಸುವುದರಿಂದಲೇ ವೇದಗಳಲ್ಲಿ ಬಹು ಮಹತ್ವವಾದ ಪದಗಳಾಗಿವೆ ಈ ಪದಗಳಲ್ಲಿ "ತ್" ಎಂಬ ಅರ್ಧಾಕ್ಷರವೇ ಪರಬ್ರಹ್ಮ ಶಕ್ತಿಯೆಂದರೆ ಪರಾಶಕ್ತಿಸ್ವರೂಪವು. ಈ ಪರಬ್ರಹ್ಮಶಕ್ತಿಯೇ ಬೀಜರೂಪವಾಗಿಯೂ, ವೃಕ್ಷರೂಪವಾಗುವುದಾಗಿಯೂ, ಪುನಃ ಬೀಜರೂಪಕ್ಕೆ ಬರುವುದಾಗಿಯೂ ಆಗುವ ಸ್ವಭಾವವುಳ್ಳದ್ದಾಗಿದೆ. "ತ್" ಎಂಬ ಅರ್ಧಾಕ್ಷರ ಬಿಟ್ಟರೆ "ತತ್, ಸತ್, ಚಿತ್" ಎಂಬ ಪದಗಳೇ ಆಗುವುದಿಲ್ಲ. ಅಂದರೆ ಪದಗಳ ಅರ್ಥವಾದ ತತ್ ಎಂದರೆ ಅದು, ಸತ್ ಎಂದರೆ ಸದ್ರೂಪ, ಚಿತ್ ಎಂದರೆ ಚೈತನ್ಯರೂಪಗಳೆಂಬ ಅರ್ಥವೇ ಹೊರಸೂಸುವುದಿಲ್ಲ ಆದುದರಿಂದ ಪರಾಶಕ್ತಿಯು ಪರಬ್ರಹ್ಮನಿಗಿಂತ ಭಿನ್ನವಾದುದಲ್ಲ. ಹೇಗೆಂದರೆ ತಲೆಯು ಶರೀರದ ಭಾಗವೇವಿನಾ

ಶರೀರಕ್ಕೆ ವಿಶೇಷಣವಲ್ಲ. ಶರೀರವೆಂದರೆ ತಲೆಯೂ ಸೇರಿರುವುದು. ಇದರಂತೆ 'ತ್' ಎಂಬ ಅರ್ಧಾಕ್ಷರದ ತತ್ವವಾದ ಪರಬ್ರಹ್ಮಶಕ್ತಿಯು ಪರಬ್ರಹ್ಮನಿಗೆ ವಿಶೇಷಣವೆಂದು ಹೇಳಲಾಗುವುದಿಲ್ಲ. ಅಲ್ಲದೆ ಪರಬ್ರಹ್ಮನಿಗಿಂತ ಭಿನ್ನವಾಗಿ ಎರಡನೆಯದೆಂದೂ ಹೇಳಲಾಗುವುದಿಲ್ಲ. "ತತ್, ಸತ್, ಚಿತ್" ಎಂಬ ಪದಗಳಿಗೆ ಅನ್ವಯಮಾಡಿರುವಂತೆ ಅಕ್ಷರಗಳಿಗೂ ಅನ್ವಯವಾಗುವುದು. ಪ್ರತಿಯೊಂದು ಅಕ್ಷರದಲ್ಲಿಯೂ ಬ್ರಹ್ಮವೂ ಬ್ರಹ್ಮಶಕ್ತಿಯೂ ಬೇರೆಯಾಗದೆ ಒಂದರೊಡನೆ ಒಂದು ಸೇರಿಯೇ ಇದೆ. ಇವುಗಳನ್ನು ಪ್ರತ್ಯೇಕಿಸಲು ಸಾಧ್ಯವೇಇಲ್ಲ. ಸಂಬಂಧವು ಹೀಗಿರುವುದರಿಂದಲೇ ಅಕ್ಷರಕ್ಕೆ ನಾಶರಹಿತವೆಂದರ್ಥ. ಆದುದರಿಂದ ಇರುವುದು ಸದ್ವಸ್ತು ಒಂದೇ. ಮುಖ್ಯವಾಗಿ ಬೀಜರೂಪವಾಗಿದ್ದ ಪರಬ್ರಹ್ಮಶಕ್ತಿಯು ಓಂಕಾರಸ್ವರೂಪದಲ್ಲಿ ಹೊರಕ್ಕೆ ಉದಯಿಸಿ ಬ್ರಹ್ಮಾಂಡದ ಸೃಷ್ಟಿಗೆ ಪ್ರಾರಂಭವಾಯಿತೆಂದರೆ ನಾಲ್ಕು ವೇದಗಳು ಉದಯಿಸಲು ಪ್ರಾರಂಭವಾಯಿತು.

ಈ ಪ್ರಕರಣದಲ್ಲಿ ಬರೆದಿರುವ ದೇವತಾತ್ಮಕವಾದ ಇಚ್ಛಾ ಜ್ಞಾನ ಕ್ರಿಯಾ ಶಕ್ತಿಗಳೇ ನಾಲ್ಕುವೇದಗಳ ಶಕ್ತಿಯಾಗಿರುವ, ಓಂಕಾರದಿಂದ ನಾಲ್ಕುವೇದಗಳು ಉದಯಿಸುವ, ಶ್ರೀ ಶಾರದಾಂಬೆಯ ಹಸ್ತದಲ್ಲಿರುವ ವೀಣೆಯ ಕಾರ್ಯವು ವೇದಗೀತೆಯ ತತ್ವದ್ದೆನ್ನುವ ವಿಚಾರಗಳನ್ನೆಲ್ಲಾ ಈ ಕೆಳಗಿನ ಆಧಾರವಾಕ್ಯಗಳು ದೃಢೀಕರಿಸುವುವು.

**ಸೀತೋಪನಿಷತ್ತಿನಲ್ಲಿ:—**

ಓಂಕಾರಾತ್ಪರತೋರಾಮ ವೈಖಾನಸ ಪರ್ವತ ಸ್ತತ್ಪರ್ವತೇ । ಕರ್ಮಜ್ಞಾನ ಮಯೀಭಿ ರ್ಬಹುಶಾಖಾ ಭವಂತಿ। ತತ್ರ್ರಯೀಮಯಂ ಸರ್ವಾರ್ಥ ದರ್ಶನಂ। ಋಗ್ಯಜುಸ್ಸಾಮ ರೂಪತ್ವಾತ್ತತ್ರ್ರಯೀತಿ ಪರಿಕೀರ್ತಿತಾ ॥ ಕಾರ್ಯಸಿದ್ಧೇನ ಚತುರ್ಥಾ ಪರಿಕೀರ್ತಿತಾ । ಋಚೋಯಜೂಂಷಿ ಸಾಮಾನ್ಯಥರ್ವಾಂಗಿ ರಸಸ್ತಥಾ ॥ ಚತುರ್ಹೋತ್ರ ಪ್ರಧಾನತ್ವಾಲ್ಲಿಂಗಾದಿ ತ್ರಿತಯಂತ್ರಯೀ । ಅಥರ್ವಾಂಗಿರಸಂ ರೂಪಂ ಸಾಮಋಗ್ಯಜುರಾತ್ಮಕಂ ॥

**ಅಥರ್ವಶಿಖೋಪನಿಷತ್ತಿನಲ್ಲಿ:—**

ಓಮಿತ್ಯೇ ತದಕ್ಷರಮಾದೌ ಪ್ರಯುಕ್ತಂ ಧ್ಯಾನಂ ಧ್ಯಾಯಿತವ್ಯ ಮಿತ್ಯೇ ತದಕ್ಷರಂ ಪರಬ್ರಹ್ಮಾಸ್ಯ ಪಾದಾಶ್ಚತ್ವಾರೋ। ವೇದಾಶ್ಚತುಷ್ಪಾದಿದಮಕ್ಷರಂ ಪರಂಬ್ರಹ್ಮ ಪೂರ್ವಾಸ್ಯಮಾತ್ರಾ । ಪೃಥಿವ್ಯಕಾರಸ್ಯ ಋಗ್ಭಿರ್ಋಗ್ವೇದೋ ಬ್ರಹ್ಮವಸವೋ ಗಾಯತ್ರೀ ಗಾರ್ಹಪತ್ಯಃ । ದ್ವಿತಿಯಾಂತರಿಕ್ಷಂ ಸಉಕಾರ ಸ್ಸಯಜುರ್ಭಿರ್ಯಜುರ್ವೇದೋ ವಿಷ್ಣುರುದ್ರಾ ಸ್ತ್ರಿಷ್ಟುಬ್ದಕ್ಷಿಣಾಗ್ನಿಃ। ತೃತಿಯಾದ್ಯೌ ಸ್ಸಮಕಾರ ಸ್ಸಸಾಮಭಿ ಸ್ಸಾಮವೇದೋ ರುದ್ರಆದಿತ್ಯ ಜಗತ್ಯಾಹವನೀಯಃ। ಯಾವಸಾನೇಸ್ಯ ಚತುರ್ಥ್ಯರ್ಧಮಾತ್ರಾ ಸಸೋಮ

ಲೋಕ ಓಂಕಾರ ಸ್ಸಾಥರ್ವಣ ಮಂತ್ರ್ಯೈ ರಥರ್ವವೇದ ಸಂವರ್ತಕೋಽಗ್ನಿ ರ್ಮರುತೋ ವಿರಾಡೇಕರ್ಷಿ ರ್ಭಾಸ್ವತೀಃಸ್ಮೃತಾಃ । ಪ್ರಥಮಾ ರಕ್ತಪೀತಾ ಮಹದ್ಬ್ರಹ್ಮ ದೈವತ್ಯಾ । ದ್ವಿತೀಯಾ ವಿದ್ಯುಮತೀ ಕೃಷ್ಣ ವಿಷ್ಣು ದೈವತ್ಯಾ। ತೃತೀಯಾ ಶುಭಾಶುಭಾ ಶುಕ್ಲಾರುದ್ರ ದೈವತ್ಯಾ । ಯಾವಸಾನೇಸ್ಯ ಚತುರ್ಥ್ಯರ್ಧಮಾತ್ರಾ ವಿದ್ಯುಮತೀ ಸರ್ವವರ್ಣಾ ಪುರುಷದೈವತ್ಯಾ । ಸಏಷ ಹ್ಯೋಂಕಾರಃ ॥

ಈ ಮೇಲಿನ ಅರ್ಥಪ್ರತಿಪಾದಕವಾದ ವಾಕ್ಯಗಳು **ಧ್ಯಾನಬಿಂದು, ನರಸಿಂಹತಾಪನಿ, ಮೈತ್ರಾಯಣಿ, ಮಹೋಪನಿಷತ್ತು**ಗಳಲ್ಲಿಯೂ ಇವೆ.

ಅಲ್ಲದೆ **ಮಹೋಪನಿಷತ್ತಿನಲ್ಲಿ** :—

ಸಪ್ರಣವಾ ವ್ಯಾಹೃತಯಃ । ಋಗ್ಯಜುಸ್ಸಾಮಾಥರ್ವಾಂಗಿರಸ ಸರ್ವಾಣಿ ಛಂದಾಂಸಿ ತಾನ್ಯಂಗೇ ಸಮಾಶ್ರಿತಾನಿ ।

**ರಾಮತಾಪಿನ್ಯುಪನಿಷತ್ತಿನಲ್ಲಿ** :—

ನಮೋ ವೇದಾದಿರೂಪಾಯ ಓಂಕಾರಾಯ ನಮೋನಮಃ ।

**ಧ್ಯಾನಬಿಂದೂಪನಿಷತ್ತಿನಲ್ಲಿ** :—

ಓಂಕಾರ ಪ್ರಭವಾ ವೇದಾ ಓಂಕಾರ ಪ್ರಭವಾ ಸ್ವ್ವರಾಃ । ಓಂಕಾರ ಪ್ರಭವಂ ಸರ್ವಂ ತ್ರೈಲೋಕ್ಯಂ ಸಚರಾಚರಂ ॥

**ಕಾಳಿದಾಸಕೃತ ಲಘುಸ್ತುತಿಯಲ್ಲಿ** :—

ಶಬ್ದಾನಾಂ ಜನನಿತ್ವಮತ್ರಭುವನೇ ವಾಗ್ವಾದಿನೀತ್ಯುಚ್ಯತೇ ॥

ದೂರ್ವಾಸಮಹರ್ಷಿಗಳ **ಲಲಿತಾಸ್ತೋತ್ರದಲ್ಲಿ**:—

ಕರವಿಧೃತ ಕೀರಶಾಬಕ ಕಲನಿನದವ್ಯಕ್ತ ನಿಖಿಲ ನಿಗಮಾರ್ಥಾಂ ।
ವಾಮಕುಚ ಸಂಗಿ ವೀಣಾ ವಾದನಸೌಖ್ಯಾರ್ಥ ಮೀಲಿತಾಕ್ಷಿಯುಗಾಂ ॥

**ಶ್ಯಾಮಲಾಷ್ಟೋತ್ತರ ಶತನಾಮಸ್ತೋತ್ರದಲ್ಲಿ**:—

ವೀಣಾಹಸ್ತೇ ನಮಸ್ತುಭ್ಯಂ ನಮೋಗೀತ ರತೇಸದಾ ।
ಸರ್ವವಿದ್ಯಾ ಪ್ರದೇತುಭ್ಯಂ ನಮಃಶಕ್ತ್ಯಾದಿ ಪೂಜಿತೇ ।
ಭಜೇಹಂ ವೇದಗೀತೇತ್ವಾಂ ದೇವಗೀತೇ ನಮೋನಮಃ ॥

**ಸರಸ್ವತೀ ರಹಸ್ಯೋಪನಿಷತ್ತಿನಲ್ಲಿ**:—

ವ್ಯಕ್ತಾವ್ಯಕ್ತಗಿರಸ್ಸರ್ವೆ ವೇದಾದ್ಯಾವ್ಯಾಹರಂತಿಯಾಂ ।
ಸರ್ವಕಾಮ ದುಘಾಧೇನು ಸ್ಸಾಮಾಂಪಾತು ಸರಸ್ವತೀ ॥

**ಶ್ರೀಶಂಕರಾಚಾರ್ಯರ ಶ್ರೀದೇವೀನವರತ್ನಮಾಲಿಕೆಯಲ್ಲಿ :—**

ಆಗಮಪ್ರಣವ ಪೀಠಿಕಾ ಮಮಲವರ್ಣಮಂಗಳ ಶರೀರಿಣೀಂ |
ಆಗಮಾವಯವ ಶೋಭಿನೀ ಮಖಿಲವೇದಸಾರಕೃತ ಶೇಖರೀಂ ||
ಮೂಲಮಂತ್ರ ಮುಖಮಂಡಲಾಂ ಮುದಿತನಾದಬಿಂದು ನವಯೌವನಾಂ |
ಮಾತೃಕಾಂ ತ್ರಿಪುರಸುಂದರೀಂ ಮನಸಿಭಾವಯಾಮಿ ಪರದೇವತಾಂ ||

ತಾ|| ವೇದಗಳಿಂದಕೂಡಿದ ಪ್ರಣವವೇ ಪೀಠವುಳ್ಳವಳಾಗಿಯೂ, ಪರಿಶುದ್ಧವಾದ ಮತ್ತು ಮಂಗಳರೂಪವಾದ ಶರೀರವುಳ್ಳವಳಾಗಿಯೂ, ವೇದವೇ ಅವಯವವಾಗಿ ಶೋಭಿಸುತ್ತಿರುವವಳಾಗಿಯೂ, ವೇದಗಳ ಸಾರಭೂತವೇ ಕಿರೀಟವುಳ್ಳವಳಾಗಿಯೂ, ಮೂಲಮಂತ್ರವಾದ ತತ್ಸತು ರೂಪವಾದ ಪರಬ್ರಹ್ಮರೂಪವೇ ಮುಖಮಂಡಲವಾಗಿರುವವಳಾಗಿಯೂ ಇದರಿಂದ ಉದಯವಾದ ಬಹು ಸ್ಫುಟವಾದ ನಾದ ಬಿಂದುಗಳುಳ್ಳವಳಾಗಿಯೂ ಇರುವ ಜಗಜ್ಜನನಿಯಾದ ಮಹಾತ್ರಿಪುರಸುಂದರೀ ಪರದೇವತೆಯನ್ನು ಸ್ಮರಿಸುತ್ತೇನೆ.

ಮೇಲೆ ಹೇಳಿದಂತೆ ಪರಬ್ರಹ್ಮಶಕ್ತಿಯು ಓಂಕಾರಸ್ವರವಾಗಿ ಹೊರಗುದಯಿಸಿದಕೂಡಲೆ ವೇದಗಳ ಉದಯವೂ, ಶುದ್ಧಸತ್ವಗುಣಪ್ರಧಾನದಿಂದ ಇಂದ್ರಾದಿ ಸಕಲ ದೇವತೆಗಳ ಸೃಷ್ಟಿಯೂ ಆಯಿತು ಅಲ್ಲದೆ ರಜಸ್ತಮೋಗುಣಗಳಿಂದ ರಾಕ್ಷಸರು ಸೃಷ್ಟಿಸಲ್ಪಟ್ಟರು ಶುದ್ಧಸತ್ವಗುಣದಲ್ಲಿನ ಜ್ಞಾನ ಕ್ರಿಯಾ ಇಚ್ಛಾ ಶಕ್ತಿಗಳನ್ನು ಅನುಸರಿಸಿ ನಾಲ್ಕುವೇದಗಳು ಉದಯಿಸಿದುವಷ್ಟೆ! ಶುದ್ಧಸತ್ವಗುಣ ಸ್ವರೂಪವೂ ಕಳಾಸ್ವರೂಪವೂ ಒಂದೇ. ಪರಬ್ರಹ್ಮನಿಂದ ಓಂಕಾರಸ್ವರವು ಹೊರಕ್ಕೆ ಉದಯಿಸಿದಕೂಡಲೆ ನಾದ,ಬಿಂದು,ಕಳೆಗಳಲ್ಲಿ ಪ್ರಥಮದಲ್ಲಿಕಳಾಸ್ವರೂಪವೆನಿಸಿತು. ಆದುದರಿಂದ ವೇದಗಳ ಉದಯವು ಕಳಾಸ್ವರೂಪದಿಂದ ಉಂಟಾಯಿತು. ಕಾರಣವೇನೆಂದರೆ, ನಾದಗಳ ಸ್ವರೂಪವಾಗಿರುವ ವೇದಮಂತ್ರಗಳಿಗೆ ಮೂಲಸ್ಥಾನವು ಕಳಾಸ್ವರೂಪವು ಸುಸ್ವರದಿಂದ ಉಚ್ಚಾರಣೆಮಾಡಿದ ಮಂತ್ರವೇ ಕಳಾಸ್ವರೂಪದ ವರೆಗೂ ಸಂಬಂಧವನ್ನು ಪಡೆಯುವುದು. ಸೃಷ್ಟಿಸಲ್ಪಟ್ಟ, ಇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರ ಈಶಾನ, ಗಂಧರ್ವ, ಮುಂತಾದ ದೇವತೆಗಳ ಪಂಗಡಕ್ಕೆ ಸೇರಿದವರಲ್ಲಾ ಶುದ್ಧಸತ್ವಗುಣ ಪ್ರಾಧಾನ್ಯದಿಂದ ಸೃಷ್ಟಿಸಲ್ಪಟ್ಟವರಾಗಿ ವೇದಾಭಿಮಾನದೇವತೆಗಳೆನಿಸಿ ವೇದದಲ್ಲಿ ಪ್ರತಿಷ್ಠಿತರಾಗಿರುವರು. ವೇದಗಳಿಗೂ ದೇವತೆಗಳಿಗೂ ಮೇಲಿನ ಅಧಿಕಾರಸ್ಥಾನದಲ್ಲಿ ಒಬ್ಬ ಪುರುಷನಿರುವನು. ಇವನೇ ಶುದ್ಧಸತ್ವಗುಣವೆಂದರೆ ಕಳೆಯಲ್ಲಿ ಪರಬ್ರಹ್ಮನು ಪ್ರತಿಫಲಿಸುವುದರಿಂದುಂಟಾದ ಈಶ್ವರಚೈತನ್ಯನು. ಇವನೇ ವೇದಪುರುಷನು ಈ ಪುರುಷನೇ ಇಚ್ಛಾ ಜ್ಞಾನ

ಕ್ರಿಯಾ ಶಕ್ತಿಭೇದ ಮತ್ತು ಕಾರ್ಯಭೇದಗಳಿಂದ ಸಗುಣರೂಪದಲ್ಲಿ ಬ್ರಹ್ಮ, ವಿಷ್ಣು, ರುದ್ರರೆಂಬ ಹೆಸರನ್ನು ಪಡೆದಿರುವನು.

## ೨ ನೆಯ ಪ್ರಕರಣ.

### ವೀಣೆಯ ಮನೆಗಳಲ್ಲಿರುವ ಸ್ವರ ಮತ್ತು ಶ್ರುತಿಗಳಿಗೂ ಗಾಯತ್ರೀಮಂತ್ರಕ್ಕೂ ಸಮನ್ವಯ.

ಶುದ್ಧ ಸತ್ವಗುಣವಿಚಾರವೂ ವೇದವಿಚಾರವೂ ಹಿಂದಿನ ಪ್ರಕರಣದಲ್ಲಿ ತಿಳಿಸಲ್ಪಟ್ಟಿತು. ಓಂಕಾರಸ್ವರವು ಕಳಾಸ್ವರೂಪದಿಂದ ನಾದಬಿಂದುಗಳ ಸ್ವರೂಪಕ್ಕಿಳಿದು ಸಕಲ ಸ್ಥೂಲಸೃಷ್ಟಿಯಾಗಿ ಅನಂತರ ವ್ಯಾಪಾರಕ್ಕೆ ಬರುವುದು. ಲಯಕ್ರಮವನ್ನನುಸರಿಸಿ ಸಕಲವೂ ಓಂಕಾರಸ್ವರಮಾತ್ರದ ಸ್ಥಿತಿಯನ್ನು ಪುನಃ ಹೊಂದುವುದು. ಈ ತತ್ವವನ್ನು ಪ್ರತಿಪಾದಿಸುವ ವೀಣೆಯಲ್ಲಿರುವ ತಂತಿಗಳಿಗೂ ೨೪ ಮನೆಗಳಲ್ಲಿರುವ ಸಂಗೀತ ಶಾಸ್ತ್ರದ ಸ್ವರಗಳಿಗೂ ಮತ್ತು ಗಾಯತ್ರೀ ಮಂತ್ರದಲ್ಲಿನ ಪದಗಳ ಅರ್ಥಗಳಿಗೂ ಸಮನ್ವಯಿಸೋಣ

**ಸ್ವರಗಳ ಪ್ರಕೃತಿ ವಿಕೃತಿ ಭೇದಗಳು.**
**(ಸ್ವರಗಳ ವಿಭಾಗಗಳು.)**

| | ಪ್ರಕೃತಿ. | ವಿಕೃತಿ. |
|---|---|---|
| ಸ | ಷಡ್ಜ | .... .... .... |
| ರಿ | ಶುದ್ಧ ಋಷಭ | ಚತುಶ್ಶ್ರುತಿಋಷಭ - ಷಟ್ಛ್ರುತಿಋಷಭ |
| ಗ | ಶುದ್ಧ ಗಾಂಧಾರ | ಸಾಧಾರಣ ಗಾಂಧಾರ - ಅಂತರಗಾಂಧಾರ |
| ಮ | ಶುದ್ಧ ಮಧ್ಯಮ | ಪ್ರತಿಮಧ್ಯಮ |
| ಪ | ಪಂಚಮ | ... .... .... |
| ಧ | ಶುದ್ಧ ಧೈವತ | ಚತುಶ್ಶ್ರುತಿಧೈವತ - ಷಟ್ಛ್ರುತಿಧೈವತ |
| ನಿ | ಶುದ್ಧ ನಿಷಾದ | ಕೈಶಿಕೀನಿಷಾದ - ಕಾಕಲೀನಿಷಾದ |

**ತತ್‌**|| ತತ್‌ಎಂಬುದು ಗಾಯತ್ರೀಮಂತ್ರದ ಪ್ರಥಮಪದವಾಗಿದೆ. ತತ್ ಎಂಬ ಪದವನ್ನು ಮೇಲಿನ ಚಿತ್ರದಲ್ಲಿ ವೀಣೆಯ ಶಿರಸ್ಥಾನದಕಡೆಗೆ ತಾರ ಸ್ಥಾಯಿಯ ಅಂತ್ಯದ ಮನೆಯಲ್ಲಿ ಬರೆದಿರುವುದು. 'ತತ್' ಎಂಬುದು ಸರ್ವ ವ್ಯಾಪಿಯಾದ ಪರಬ್ರಹ್ಮಬೋಧಕಪದವೆಂದು ಹಿಂದೆ ತಿಳಿಸಿತಷ್ಟೆ! 'ತತ್' ಎಂಬು ದನ್ನು ಅಳನೆಯ ಮನೆಯಲ್ಲಿ ತೋರಿಸಲು ಕಾರಣವೇನೆಂದರೆ:— ಸೃಷ್ಟಿಯಾದ ಜಗತ್ತಿಗೆ ಅಂತ್ಯವೆಂದರೆ ಪರಬ್ರಹ್ಮ ಒಂದೇ ಇದ್ದ ಸ್ಥಿತಿಯುಂಟಾಗಬೇಕು. ಇದರಂತೆ ಮನುಷ್ಯನು ಹುಟ್ಟಿ ವ್ಯಾಪಾರದಲ್ಲಿರುವನು. ಮುಕ್ತನಾಗುವವನಿಗೆ ಅಂತ್ಯದಲ್ಲಿ ಲಭ್ಯವಾಗುವುದು ಪರಬ್ರಹ್ಮವು. ಆದುದರಿಂದ ವೀಣೆಯ ಅಂತ್ಯದಲ್ಲಿ 'ತತ್' ಪದವಿರುವ ತತ್ವವಾಗಿದೆ. ಅಲ್ಲದೆ ಯಾವುದು ಅಂತ್ಯವೋ ಅದೇ ಆದಿ ಯಾಗಿರುವುದು. ಯಾವುದು ಆದಿಯೋ ಅದೇ ಅಂತ್ಯವಾಗಿರುವುದು. ಅಂದರೆ 'ತತ್'ಪ್ರತಿಪಾದ್ಯವಾದ ಪರಬ್ರಹ್ಮವೇ ಸರ್ವಕ್ಕೂ ಆದಿಯಾಗಿಯೂ, ಅಂತ್ಯದಲ್ಲಿ ಉಳಿಯುವುದಾಗಿಯೂ ಇರುವುದು. ಆದುದರಿಂದ ಆದ್ಯಂತಗಳೆರಡೂ ಒಂದೇ ಆದ್ದರಿಂದ ತತ್ ಎಂಬ ಪದವು ವೀಣೆಯ ಅಂತ್ಯದ ಮನೆಯಲ್ಲಿದ್ದರೂ 'ಸವಿತುಃ' ಎಂಬ ಪದದ ಹಿಂದೆ ಮೂಲರೂಪವಾಗಿ ಇದ್ದೇ ಇರುವುದು. ಅಲ್ಲದೆ ತಾರಸ್ಥಾಯಿ ಯೆಂದರೆ "ತಮೋನಾಶಯತೀತಿ ತಾರಃ, ತಾರಯತೀತಿ ತಾರಃ" ಎಂಬ ವ್ಯುತ್ಪತ್ತಿ ಗಳಂತೆ ಅಜ್ಞಾನ ನಾಶವಾಗಿ ಅಂತ್ಯದಲ್ಲಿ ಲಭ್ಯವಾಗುವುದೇ 'ತತ್' ಪ್ರತಿಪಾದ್ಯ ವಾದ ಪರಬ್ರಹ್ಮಸ್ಥಿತಿ. ಈ ತತ್ವವನ್ನೂ ಅನುಸರಿಸಿ ತಾರಸ್ಥಾಯಿಯ ಅಂತ್ಯವಾಗಿಯೂ ವೀಣೆಯಮನೆಗಳಿಗೆ ಅಂತ್ಯವಾಗಿಯೂ ಇರುವ ಮನೆಯಲ್ಲಿ 'ತತ್' ಎಂಬ ಪದದ ತತ್ವ (ರಹಸ್ಯ) ವಿರುವುದು.

'ತತ್' ಎಂಬ ಪದವಿರುವ ಮನೆಯಲ್ಲಿ ಸಪ್ತಸ್ವರದಲ್ಲಿ ಷಡ್ಜ (ಸ) ಸ್ವರವಿದೆ. ಈ ಸ್ವರವು ವಿಕೃತಿ ಸ್ವರಕ್ಕೆ ಸೇರುವುದೇ ಇಲ್ಲ. ಅಂದರೆ ವಿಕಾರ ವಾಗುವುದಿಲ್ಲವಾದುದರಿಂದ ಇದಕ್ಕೆ ಪ್ರಕೃತಿಸ್ವರವೆಂದು ಸಂಗೀತಶಾಸ್ತ್ರದಲ್ಲಿ ಹೇಳಿದೆ. ಆದುದರಿಂದ ಪ್ರಕೃತಿಯೆಂದರೆ ಪರಬ್ರಹ್ಮಶಕ್ತಿ. ಸಪ್ತಸ್ವರಗಳಾದ **ಸ. ರಿ. ಗ ಮ. ಪ. ಧ. ನಿ** ಗಳಲ್ಲಿ ಷಡ್ಜ (ಸ) ಸ್ವರವು ಸರ್ವಸ್ವರಗಳಿಗೂ ಮೂಲರೂಪವಾಗಿಯೂ ಅಂತ್ಯರೂಪವಾಗಿಯೂ ಇರುವುದರಿಂದಲೇ ಷಡ್ಜ ಎಂಬ ದಾಗಿ ಹೆಸರುಬಂದಿರುವುದೆಂದು ಸಂಗೀತಶಾಸ್ತ್ರದಲ್ಲಿ ಹೇಳಿದೆ. ಈ ಸಪ್ತಸ್ವರಗಳಿಗೂ ಸಪ್ತಮಾತೃಕೆಯರೇ ಅಧಿದೇವತೆಗಳು. ಸ್ವರಗಳಿಗೆ ಮೂಲರೂಪವಾಗಿರುವ ಷಡ್ಜಸ್ವರಕ್ಕೆ 'ಬ್ರಾಹ್ಮೀ' ಎಂದರೆ ಪರಾಶಕ್ತಿಯಾದ ಶ್ರೀಶಾರದಾದೇವಿಯೇ ಅಧಿದೇವತೆಯು. ಈ ಆಧಾರಕ್ಕೆ ಸಂಗೀತಶಾಸ್ತ್ರದಲ್ಲಿ.

ಜಾತಸ್ತ್ವಮಾಯಾಂ ಷಡ್ಜಸ್ತು ರೌದ್ರರ್ಕ್ಷೇಭಾಸ್ವರೋದಯೇ |
ಆಂಗೀರಸೋ ಋಷಿ ಬ್ರಾರ್ಹ್ಮೀದೇವತಾ ಪರಿಕೀರ್ತಿತಾ ||

ಎಂದು ಹೇಳಿದೆ. ಅಲ್ಲದೆ ಸಪ್ತಸ್ವರಗಳೂ ಭೂಃ, ಭುವಃ, ಮುಂತಾದ ಸಪ್ತ ವ್ಯಾಹೃತಿಗಳ ತತ್ವವಾಗಿರುವುವು. ವ್ಯಾಹೃತಿಯೆಂದರೆ ಉಚ್ಚರಿಸುವಿಕೆಯೆಂದರ್ಥ. ಈ ವ್ಯಾಹೃತಿಗಳಲ್ಲಿ ನಮ್ಮ ಶಿರಸ್ಸಿನಲ್ಲಿ ಬ್ರಹ್ಮರಂಧ್ರವೆಂದರೆ 'ಸಹಸ್ರಾರ ಕಮಲ' ದಲ್ಲಿ ಪರಬ್ರಹ್ಮಪ್ರತಿಪಾದಕವಾಗಿರುವ 'ಸತ್ಯಂ' ಎಂಬ ವ್ಯಾಹೃತಿಯೇ ಷಡ್ಜಸ್ವರವಾಗಿರುವುದು. ಅಲ್ಲದೆ ಸಾರಣೀ ತಂತಿಯನ್ನು ಮೀಟಿದಮಾತ್ರದಿಂದಲೇ ಷಡ್ಜಸ್ವರವು ಉದಯಿಸುವುದು ಮತ್ತು ಇತರ ಯಾವ ಮನೆಗಳನ್ನು ಹಿಡಿದು ನುಡಿಸಿದರೂ ಷಡ್ಜಸ್ವರವನ್ನನುಸರಿಸಿಕೊಂಡೇ ನುಡಿಯುವುದು. ಅಂದರೆ ತಚ್ಛಬ್ದ ಪ್ರತಿಪಾದ್ಯವಾದ ಪರಬ್ರಹ್ಮವು ಸರ್ವವ್ಯಾಪಕವಾದುದು ಮತ್ತು ಸರ್ವಕ್ಕೂ ಆಶ್ರಯವಾದುದೆಂಬ ತತ್ವವನ್ನು ಪ್ರತಿಪಾದಿಸುವುದು. ಅಲ್ಲದೆ ವೀಣೆಯನ್ನು ನುಡಿಸುವಾಗ ತಾರಸ್ಥಾಯಿಯು ಬಹು ಹೆಚ್ಚಿನಸ್ಥಾಯಿ ಅಂದರೆ ನಾದವು ಬಹು ಸೂಕ್ಷ್ಮವಾಗುತ್ತ ಆಗುತ್ತ ಅವ್ಯಕ್ತಸ್ಥಿತಿಯಾಗಿ ಪರಬ್ರಹ್ಮನಲ್ಲಿ ಐಕ್ಯವಾಗುವ ತತ್ವಕ್ಕೋಸ್ಕರಲೇ ತಾರಸ್ಥಾಯಿಯ ಅಂತ್ಯದ ಸುನೆಯಲ್ಲಿ ಷಡ್ಜಸ್ವರವು ಮತ್ತು 'ತತ್' ಎಂಬ ಪದವೂ ಇರುವುವು ಮುಖ್ಯವಾಗಿ ಸೃಷ್ಟಿ ವ್ಯಾಪಾರಗಳೆಲ್ಲಾ ಲಯವಾದಾಗ ಪರಬ್ರಹ್ಮ ಒಂದೇ ಎಂಬುದನ್ನು ಪ್ರತಿಪಾದಿಸುವುದೇ ಷಡ್ಜಸ್ವರವೂ 'ತತ್' ಎಂಬ ಪದವೂ ವೀಣೆಯ ಅಂತ್ಯದಲ್ಲಿ ೨೪ ನೆಯ ಮನೆಯಲ್ಲಿರುವುದಾಗಿದೆ.

**ಸವಿತುಃ** || ಗಾಯತ್ರೀಮಂತ್ರದಲ್ಲಿ ಸವಿತುಃ ಎಂಬುದು ಎರಡನೆಯ ಪದವಾಗಿರುವುದು. "ಸೂಯತ ಇತಿ ಸವಿತಾ ತಸ್ಯಸವಿತುಃ" ಅಂದರೆ ಸೃಷ್ಟಿಕಾರ್ಯ ಮತ್ತು ಸೃಷ್ಟಿಕರ್ತ ಎಂಬ ಅರ್ಥದಂತೆ ಈಶ್ವರನ ಮತ್ತು ವೇದಗಳ ಉದಯ, ದೇವತೆಗಳ ಮತ್ತು ಇತರ ಚರಾಚರಸ್ವರೂಪವಾದ ಸಕಲ ಜಗತ್ತಿನ ಸೃಷ್ಟಿವಿಚಾರ ವೆಲ್ಲಾ "ಸವಿತುಃ" ಎಂಬ ಪದದ ಅರ್ಥದಲ್ಲಿದೆ 'ಸವಿತುಃ' ಪದದ ಅರ್ಥಕ್ಕೂ 'ಸವಿತುಃ' ಪದವಿರುವ ಮನೆಗಳಲ್ಲಿರುವ ಸ್ವರ ಮತ್ತು ಶ್ರುತಿಗಳ ಅರ್ಥಕ್ಕೂ ಅನ್ವಯಮಾಡೋಣ. 'ತತ್' ಎಂಬ ಪದದಲ್ಲಿ ಸೃಷ್ಟಿಗೆ ಮುಂಚೆ ಪರಬ್ರಹ್ಮ ಒಂದೇ ಇದ್ದ ಸ್ಥಿತಿಯೆಂಬುದನ್ನು ತಿಳಿಸಿಕೊಂಡು ಬಂದಿರುವುದಷ್ಟೆ! ಸೃಷ್ಟಿ ಗಾರಂಭದಲ್ಲಿ ಪರಬ್ರಹ್ಮದಿಂದ ಓಂಕಾರಸ್ವರವು ಉದಯಿಸಿ ಪ್ರಥಮದಲ್ಲಿ ಕಳಾಸ್ವರೂಪವೆನಿಸಿಕೊಂಡು ಈಶ್ವರ ಸೋಪಾನವಾಗುವಿಕೆಯೂ, ದೇವ ಮಾನ ವಾದಿ ಸಕಲ ಜಗತ್ತುಗಳ ಸೃಷ್ಟಿಯು ಪೂರ್ಣವಾಗುವ ವಿಚಾರಗಳೂ "ಸವಿತುಃ" ಪದದ ಮನೆಗಳಲ್ಲಿರುವ ಸ್ವರಗಳ ತತ್ವಗಳಲ್ಲಿವೆ.

ವೀಣೆಯಲ್ಲಿ 'ಸವಿತುಃ' ಪದವಿರುವ ಮೂರು ಮನೆಗಳಲ್ಲಿ ಒಂದನೆಯ ಮನೆಯು ಸಪ್ತಸ್ವರಗಳಲ್ಲಿ ಶುದ್ಧ ಋಷಭಸ್ವರದ ಮನೆಯಾಗಿದೆ. ಋಷಭವೆಂದರೆ, 'ಋಷತಿ-ಗಾಂ ಪ್ರತಿಗಚ್ಛತೀತಿ=ಋಷಭಃ(ಋಗತೌ)'ಗಾಂ ಎಂದರೆ ಪ್ರಪಂಚವನ್ನೂ

ವಾಣಿಯನ್ನೂ ಕುರಿತು ಹೋಗುವುದು. ಅಂದರೆ ಪ್ರಪಂಚವನ್ನು ಸೃಷ್ಟಿಸುವಿಕೆ ಮತ್ತು "ತತ್‌ಸೃಷ್ಟ್ವಾ ತದೇವಾನು ಪ್ರಾವಿಶತ್" ಎಂಬ ಶ್ರುತಿವಾಕ್ಯದಂತೆ ದೇವತೆಗಳಾದಿಯಾಗಿ ಸಕಲ ಬ್ರಹ್ಮಾಂಡ ಪಿಂಡಾಂಡಗಳನ್ನೂ ಸೃಷ್ಟಿಸಿ ಅದರಲ್ಲಿ ಅಂತರ್ಯಾಮಿಯಾಗಿರುವುದೆಂಬ ಅರ್ಥವಾಗುವುದು ಆದುದರಿಂದ ಸವಿತುಃ ಪದದಲ್ಲಿನ ಪ್ರಥಮಾಕ್ಷರವಿರುವ ಶುದ್ಧಋಷಭಸ್ವರವಿರುವ ಮನೆಯು ಸಾಕ್ಷಾತ್ ಈಶ್ವರ ಸ್ಥಾನವಾಗಿದೆ ಋಷಭದಲ್ಲಿಯೂ ಶುದ್ಧಋಷಭವೆನಿಸಿಕೊಂಡಿದೆ. ಅಂದರೆ ಶುದ್ಧಋಷಭಸ್ವರಸ್ಥಾನವು ಅತ್ಯಂತ ಶ್ರೇಷ್ಠವಾದ ಸಾಕ್ಷಾತ್ ಈಶ್ವರ ಸ್ಥಾನವೆಂಬ ತತ್ವವೇ ಆಗಿದೆ ಋಷಭವೆಂದರೆ ಅತ್ಯಂತ ಶ್ರೇಷ್ಠವಾದುದೆಂದು ಅಮರದ ವ್ಯಾಖ್ಯಾನದಲ್ಲಿ ವ್ಯುತ್ಪತ್ತಿಯು ಇದೆ. ಅಲ್ಲದೆ "ಸ್ತ್ರೀಗವೀಷು ಯಥಾ ತಿರ್ಷ್ಯ ವಿಭಾತಿ ಋಷಭೋ ಮಹಾನ್" ಗೋವುಗಳ ಮಧ್ಯದಲ್ಲಿ ದೊಡ್ಡ ಗೂಳಿಯೋಪಾದಿಯಲ್ಲಿ ಋಷಭವು ಸ್ವರಗಳ ಮಧ್ಯದಲ್ಲಿದ್ದು ಪ್ರಕಾಶಿಸುತ್ತಿದೆಯೆಂದು ಸಂಗೀತಶಾಸ್ತ್ರದಲ್ಲಿ ಹೇಳಿದೆ. ಇದರಂತೆ ಸೃಷ್ಟಿಕರ್ತನಾದ ಈಶ್ವರನು 'ಗೋ' ಎಂದರೆ ಪ್ರಪಂಚ ಮತ್ತು ನಾದಬ್ರಹ್ಮದಲ್ಲಿ ಅಂತರ್ಯಾಮಿಯಾಗಿ ಪ್ರಕಾಶಿಸುತ್ತಿರುವನೆಂಬ ತತ್ವವಾಗಿರುವುದು. ಅಲ್ಲದೆ "ಸ್ವರಗ್ರಾಮೇ ಸಮುತ್ಪನ್ನ ಸ್ವರೋಯ ವೃಷಭಸ್ತಥಾ" ಇತರ ಸ್ವರಗಳಿಗಿಂತಲೂ ಇದು ಹೃದಯಂಗಮವಾಗಿರುವುದರಿಂದ ಋಷಭಸಂಜ್ಞೆಯನ್ನು ಪಡೆಯುವುದೆಂಬ ಸಂಗೀತಶಾಸ್ತ್ರದ ವಾಕ್ಯದಂತೆ ಈಶ್ವರ ಸೋಪಾನವು ಆನಂದ (ಕಳಾ) ಮಯವಾಗಿಯೂ, ಶುದ್ಧಸತ್ವಗುಣದ ಸೋಪಾನವಾದ 'ಉನ್ಮನೀ' ಸೋಪಾನವಾಗಿಯೂ ಇರುವುದೆಂಬ ತತ್ವವಾಗಿರುವುದು. ಸಪ್ತ ಸ್ವರಗಳಲ್ಲಿ ಪ್ರಥಮಸ್ವರವಾದ 'ಷಡ್ಜ' (ಸ) ಎಂಬುದು ನಮ್ಮಲ್ಲಿ ಬ್ರಹ್ಮರಂಧ್ರವಲ್ಲಿರುವುದೆಂದು ಹಿಂದೆ ತಿಳಿಸಿತಷ್ಟೆ! ಎರಡನೆಯ ಸ್ವರವಾದ ಶುದ್ಧಋಷಭ (ರಿ) ಸ್ವರವು ಸಪ್ತವ್ಯಾಹೃತಿಗಳಲ್ಲಿ "ಓಂತಪಃ" ಎನ್ನುವುದರ ತತ್ವವಾಗಿ ನಮ್ಮ ಭ್ರೂಮಧ್ಯದಲ್ಲಿರುವ 'ಆಜ್ಞಾಚಕ್ರ'ದ ಸ್ಥಳವಾಗಿರುವುದು. ಋಷಭಸ್ವರಕ್ಕೆ ಅಧಿದೇವತೆಯು ಸಪ್ತಮಾತೃಕೆಯರಲ್ಲಿ ಎರಡನೆಯವಳಾದ ಮಾಹೇಶ್ವರೀ ಶಕ್ತಿಯು. ಇದಕ್ಕೆ ಸಂಗೀತಶಾಸ್ತ್ರದ ಆಧಾರವಾಕ್ಯವೂ ಇರುವುದು.

ತ್ರಯೋದಶ್ಯಾಂತು ಮಧ್ಯಾಹ್ನೇ ಋಷಭಃ ಪುಷ್ಯಋಕ್ಷಕೇ |
ಮಾಹೇಶ್ವರೀ ದೇವತಾಸ್ಯಾತ್ ಭೃಗುಸ್ತಸ್ಯಋಷಿರ್ಮತಃ ||

ಆಜ್ಞಾಚಕ್ರವೆಂದರೆ ನಮ್ಮ ಭ್ರೂಮಧ್ಯಪ್ರದೇಶವು ಉಮಾಮಹೇಶ್ವರಸ್ಥಾನವಾಗಿರುವುದೆಂದು ಅನೇಕ ಶ್ರುತಿಪ್ರಮಾಣಗಳಿರುವುದರಿಂದ ಬಹುಶ್ರೇಷ್ಠವಾದ ಸ್ಥಾನವಾಗಿರುವುದು. 'ಸವಿತುಃ' ಪದದ 'ಸ' ಅಕ್ಷರಕ್ಕೂ ಶುದ್ಧಋಷಭಸ್ವರಕ್ಕೂ ಸಮನ್ವಯವಾಯಿತು.

'ಸವಿತುಃ'ಪದದಲ್ಲಿನ ಎರಡನೆಯ ಅಕ್ಷರವಿರುವ ಮನೆಯು ಶುದ್ಧಗಾಂಧಾರದ ಮನೆಯಾಗಿದೆ. ಈ ಮನೆಯಲ್ಲಿ ಶುದ್ಧಗಾಂಧಾರ ಮತ್ತು ಚತುಶ್ಶ್ರುತಿಋಷಭ ಸ್ವರಗಳೆರಡೂ ಇರುವುವು "ಸವಿತುಃ" ಪದದಲ್ಲಿನ ಮೂರನೆಯ ಅಕ್ಷರವಾದ "ತುಃ" ಎಂಬ ಅಕ್ಷರವಿರುವ ಮನೆಯಲ್ಲಿ ಸಾಧಾರಣ ಗಾಂಧಾರಸ್ವರವೂ ಷಟ್ಛ್ರುತಿಋಷಭಸ್ವರವೂ ಇರುವುವು ಶುದ್ಧ ಋಷಭಸ್ವರದ ವಿಚಾರವನ್ನು ಮೇಲೆ ತಿಳಿಸಿತಷ್ಟೆ! ಗಾಂಧಾರವೆಂದರೆ.—

ಯಸ್ತೃತೀಯ ಸ್ಸ್ವರಶ್ಚಾಪಿ ಗಂಧರ್ವಸ್ಸುಖದೋಽಥವಾ ।
ವಾಚಾಂ ಗಾನಾತ್ಮಕಾಂ ಧತ್ತ ಇತಿ ಗಾಂಧಾರ ಉಚ್ಯತೇ ॥

ಸಪ್ತಸ್ವರಗಳಲ್ಲಿ ಮೂರನೆಯ ಸ್ವರವು ಗಂಧರ್ವರಿಗೆ ಸೌಖ್ಯವನ್ನುಂಟು ಮಾಡುವುವರಿಂದ ಅಥವಾ ಗಾನರೂಪವಾದ ವಾಕ್ಕನ್ನು ಧರಿಸಿರುವುದರಿಂದ 'ಗಾಂಧಾರ'ವೆಂಬ ಸಂಜ್ಞೆಯುಂಟಾಯಿತು ಎಂದು ಸಂಗೀತಶಾಸ್ತ್ರದಲ್ಲಿ ಹೇಳಿದೆ. ಅಲ್ಲದೆ "ಗಾಂ ಧಾರಯತೀತಿ – ಗಾಂಧಾರಃ" ಎಂಬ ವ್ಯುತ್ಪತ್ತಿಯೂ ಆಗುವುದು. ಮುಖ್ಯವಾಗಿ ಗಂಧರ್ವರಿಗೆ ಸೌಖ್ಯವನ್ನುಂಟುಮಾಡುವುದೆಂದೂ, ಪ್ರಪಂಚವನ್ನು ಧರಿಸುವುದೆಂದೂ, ವಾಣಿಯನ್ನು ಧರಿಸುವುದೆಂದೂ, ಅರ್ಥವಾಗುವುದು. ಅಂದರೆ ವಾಣಿಯನ್ನೆಂದರೆ ನಾದಮಯವಾದ ವೇದವನ್ನುಧರಿಸಿ ವೇದಪುರುಷ ನೆನಿಸಿಕೊಳ್ಳುವ ಮತ್ತು ಪ್ರಪಂಚವನ್ನು ಸೃಷ್ಟಿಸಿ ಧರಿಸುವ ಸ್ಥಾನವೇ 'ಸವಿತುಃ' ಪದದಲ್ಲಿನ ಎರಡನೆಯ ಅಕ್ಷರದ ಮನೆಯ ತತ್ವವಾಗಿದೆ. 'ಸವಿತುಃ' ಪದದ ಎರಡು ಮೂರನೇ ಅಕ್ಷರಗಳ ಮನೆಗಳಲ್ಲಿ ಚತುಶ್ರುತಿ ಮತ್ತು ಷಟ್ಛ್ರುತಿಋಷಭ ಸ್ವರಗಳಿರುವುವಷ್ಟೆ! ಶ್ರುತಿಗಳೊಡಗೂಡಿದ ಸ್ವರವೆಂದರೆ ಶ್ರುತಿಗಳ ಸ್ವರೂಪವಾದ ಅವಯವಗಳನ್ನು ಸ್ವರಗಳು ಹೊಂದುವುವೆಂಬ ತತ್ವವಾಗಿರುವುದು. ಆರು ಶ್ರುತಿಗಳ ಅವಯವಗಳನ್ನೊಳಗೊಂಡು ಋಷಭಸ್ವರವಿರುವುದೆಂಬ ತತ್ವವಾಗಿದೆ. ಆರು ಶ್ರುತಿಗಳು ಯಾವುವೆಂದರೆ:— ಛಂದೋವತೀ, ದಯಾವತೀ, ರಂಜನೀ, ರತಿಕಾ, ರೌದ್ರೀ, ಕ್ರೋಧಾ ಎಂಬವುಗಳು

ಶ್ರುತಿಗಳ ತತ್ವವೇನೆಂದರೆ: —"ಶ್ರು-ಶ್ರವಣೇ" ಅಥವಾ "ಪ್ರಥಮಶ್ರವಣಾ ಚ್ಛಬ್ದಃ ಶ್ರೂಯತೇ ಹ್ರಸ್ವಮಾತ್ರಕಃ" ಅಂದರೆ ಶ್ರವಣೇಂದ್ರಿಯದಿಂದ ಗ್ರಹಿಸಲ್ಪ ಡುವ ಭಾವದೊಡಗೂಡಿದ ಪ್ರಥಮಧ್ವನಿಯೇ 'ಶ್ರುತಿ'ಎನ್ನಲ್ಪಡುವುದು. ನಮ್ರತೆ ಯಿಂದ ಯಾರಾದರೂ ಮಾತನಾಡಿದರೆ ಅವರು ನಮ್ರತೆಯಿಂದ ಮಾತಾಡುವ ರೆಂಬ ಭಾವವು ನಮ್ಮ ಕಿವಿಗೆ ಆ ಧ್ವನಿಯು ಬಿದ್ದೊಡನೆಯೇ ಗೊತ್ತಾಗುವುದು. ಯಾರಾದರೂ ಕ್ರೀಡಾದಿ ವಿನೋದವಿಚಾರ ಮಾತಾಡಿದರೆ ಆ ಧ್ವನಿಯು ನಮ್ಮ ಕಿವಿಗೆ ಗೋಚರವಾದ ಕೂಡಲೆ ವಿನೋದಭಾವದ ಧ್ವನಿಯೆಂದು ನಮಗೆ

ಗೊತ್ತಾಗುವುದು ಇದರಂತೆಯೇ ಕೋಪ, ದುಃಖ, ವೀರ, ಮುಂತಾದ ಭಾವಗಳೆಷ್ಟಿವೆಯೋ ಅಷ್ಟೂ ಶ್ರುತಿಗಳೆಂಬ ತಾತ್ಪರ್ಯ. ಅಲ್ಲದೆ ಮೃಗಪಕ್ಷ್ಯಾದಿಗಳ ಧ್ವನಿ ಮತ್ತು ಇತರ ಯಾವ ಶಬ್ದಗಳೇ ಆಗಲಿ ನಮ್ಮ ಶ್ರೋತ್ರೇಂದ್ರಿಯಕ್ಕೆ ಗೋಚರವಾದ ಒಡನೆಯೇ ಆಯಾಯ ಜಾತಿಗಳಿಗೆ ಸಂಬಂಧಪಟ್ಟ ಸ್ವಭಾವದ ಧ್ವನಿಯೆಂದು ಗೋಚರವಾಗುವುದು. ಯಾವ ಭಾವವೇ ಆಗಲಿ ನಮ್ಮಲ್ಲಿ ಪ್ರಥಮದಲ್ಲಿ ಸ್ಫುರಿಸಿ ಅನಂತರ ನಮ್ಮ ಭಾವದ ಪೂರ್ಣತೆಯು ಹೊರಗಿನವರಿಗೆ ಗೋಚರವಾಗುವುದು. ಆದುದರಿಂದ ಶ್ರವಣೇಂದ್ರಿಯದಿಂದ ಗ್ರಹಿಸಲ್ಪಡುವ ಭಾವದೊಡಗೂಡಿದ ಪ್ರಥಮಧ್ವನಿಗೆ 'ಶ್ರುತಿ' ಎಂದು ಹೆಸರು. ಗಾನಮಾಡುವ ಕಾಲದಲ್ಲಿ ಶ್ರುತಿಯೊಡನೆ ಗಾನಮಾಡುತ್ತಾರಷ್ಟೆ! ಇದು ಧ್ವನಿಯ ಹೆಚ್ಚಿನ ಮತ್ತು ತಗ್ಗಿನ ಸ್ಥಾಯಿಗಳೆಂದರೆ ಮಂದ್ರ, ಮಧ್ಯಮ, ತಾರಸ್ಥಾಯಿಗಳಿಗೆ ಸೇರಿದುವೇ ಹೊರತು ಸ್ವರಗಳಲ್ಲಿರುವ ಶ್ರುತಿಗೆ ಸಂಬಂಧಪಟ್ಟವುಗಳಲ್ಲ ಅಲ್ಲದೆ ಸ್ವರಗಳ ಅವಯವಗಳಾದ ಎಲ್ಲಾ ಶ್ರುತಿಗಳ ಮಹತ್ವವನ್ನೂ ಯಥಾರ್ಥವಾಗಿ ತಿಳಿಯಲು ಮನುಷ್ಯನಿಗೆ ಅಸಾಧ್ಯ. ಸೃಷ್ಟಿ, ಸ್ಥಿತಿ, ಲಯಕಾರ್ಯಕ್ರಮಗಳ ಸರ್ವಭಾವೋದಯ ಗಳನ್ನೊಳಗೊಂಡ ಶ್ರುತಿಗಳ ತತ್ವಗಳು ಜಗತ್ಕರ್ತನಾದ ಈಶ್ವರನೊಬ್ಬನಿಗೇ ವೇದ್ಯವಾದುವು ಸಪ್ತಸ್ವರಗಳಲ್ಲಿರುವ ೨೨ ಶ್ರುತಿಗಳ ತತ್ವಗಳೇ ಮುಂದೆ ವಿವರಿಸುವಂತೆ ಬಹು ಅಮೋಘವಾದವುಗಳಾಗಿರುತ್ತವೆ. ಸಪ್ತ ಸ್ವರಗಳಲ್ಲಿರುವ ೨೨ ಶ್ರುತಿಗಳು ಯಾವುವೆಂದರೆ,

| | | |
|---|---|---|
| ಸ | ಷಡ್ಜ | ತೀವ್ರ, ಕುಮುದ್ವತೀ, ಮಂದ, ಛಂದೋವತೀ |
| ರಿ | ಋಷಭ | ದಯಾವತೀ, ರಂಜನೀ, ರತಿಕಾ |
| ಗ | ಗಾಂಧಾರ | ರೌದ್ರೀ, ಕ್ರೋಧಾ |
| ಮ | ಮಧ್ಯಮ | ವಜ್ರಿಕಾ, ಪ್ರಸಾರಿಣೀ, ಪ್ರೀತಿಃ, ಮಾರ್ಜನೀ |
| ಪ | ಪಂಚಮ | ಕ್ಷಿತಿಃ, ರಕ್ತಾ, ಸಂದೀಪಿನೀ, ಆಲಾಪಿನೀ |
| ಧ | ಧೈವತ | ಮದಂತೀ, ರೋಹಿಣೀ, ರಮ್ಯಾ |
| ನಿ | ನಿಷಾದ | ಉಗ್ರಾ, ಕ್ಷೋಭಿಣೀ. |

ಷಡ್ಜ ಹೊರತು ಇತರ ಸ್ವರಗಳು ತಮ್ಮ ಪಕ್ಕದ ಸ್ವರಗಳಲ್ಲಿರುವ ಆದಿ ಮತ್ತು ಅಂತ್ಯ ಶ್ರುತಿಗಳನ್ನು ಆಕ್ರಮಿಸಿಕೊಳ್ಳುತ್ತವೆ. ಅಂದರೆ ಒಂದು ಸ್ವರದಿಂದ ಮತ್ತೊಂದು ಸ್ವರಕ್ಕೆ ಸಂಬಂಧ ತಪ್ಪದಂತೆ ಈ ಶ್ರುತಿಗಳು ಸ್ವರಗಳನ್ನು ಕೂಡಿಸಿಕೊಂಡು ಏಕಸರಣಿಯಂತೆ ಇರುತ್ತವೆ.

ಋಷಭಸ್ವರಕ್ಕೆ ಇರುವ ಆರು ಶ್ರುತಿಗಳ ತತ್ವಗಳೂ ಈಶ್ವರನಿಗೆ ಅಂಗ ಭೂತಗಳಾಗಿವೆ. ಈ ಆರು ಶ್ರುತಿಗಳಲ್ಲಿ ಪ್ರಥಮಶ್ರುತಿಯೇ 'ಛಂದೋವತೀ' ಎಂಬುದು. ಛಂದೋವತಿಯೆಂದರೆ ವೇದಗಳಸ್ವರೂಪಿಣಿಯೆಂದಾಗುವುದು. ಛಂದೋವತೀ ಎಂಬುದು ಷಡ್ಜಕ್ಕೆ ಅಂತ್ಯಶ್ರುತಿಯಾಗಿಯೂ ಋಷಭಕ್ಕೆ ಪ್ರಥಮ ಶ್ರುತಿಯಾಗಿಯೂ ಇರುವುದರಿಂದ ಎರಡು ಸ್ವರಗಳಿಗೂ ಸೇರಿದೆ. ಅಂದರೆ ಸೃಷ್ಟಿಯು ಪ್ರಾರಂಭವಾದಾಗ ಪರಮಾತ್ಮನಿಂದ ವೇದಗಳ ಉದಯವೇ ಪ್ರಥಮ ವೆಂಬ ತತ್ವವಾಗಿರುವುದರಿಂದಲೇ ಋಷಭಕ್ಕೆ ಪ್ರಥಮ ಶ್ರುತಿಯೇ 'ಛಂದೋವತೀ'. ಛಂದೋವತಿಯೆಂದರೆ ವೇದಸ್ವರೂಪಿಣಿಯಷ್ಟೆ! ಚಿತ್ರಗಾರನು ಒಂದು ಚಿತ್ರವನ್ನು ಬರೆಯುವುದಕ್ಕೆ ಮುಂಚೆ ಆ ಚಿತ್ರದ ರೂಪಿನ ವಿವರವೆಲ್ಲಾ ಅವನ ಮನಸ್ಸಿನಲ್ಲಿ ಭಾವರೂಪಜ್ಞಾನವಾಗಿರುವುದಷ್ಟೆ! ಇದರಂತೆ ಸೃಷ್ಟಿ ಸ್ಥಿತಿ ಲಯಗಳ ಸರ್ವ ವಿವರವೂ ಭಾವರೂಪಜ್ಞಾನವಾಗಿ ಈಶ್ವರೀಶಕ್ತಿಯಲ್ಲಿ ಜ್ಞಾನಭಂಡಾರದಂತೆ ಇರುವುದೇ ವೇದಸ್ವರೂಪವಾಗಿರುವುದು. ಕಿಂಚಿತ್ತಾದರೂ ಲೋಪವಿಲ್ಲದೆ ಸೃಷ್ಟಿ ಸ್ಥಿತಿ ಲಯಗಳ ಸಕಲ ವಿವರಣೆಗಳ ಭಾವಜ್ಞಾನದ ಭಂಡಾರವೆನಿಸುವ ವೇದವನ್ನು ಈಶ್ವರೀಶಕ್ತಿಯು ಧರಿಸಿರುವುದರಿಂದಲೇ ಈ ಶಕ್ತಿಗೆ 'ಛಂದೋವತೀ' ಎಂದು ಹೆಸರು ಬಂದಿದೆ. ''ಛಂದಃ ಅಸ್ಯಾಃ ಅಸ್ತೀತಿ-ಛಂದೋವತೀ'' ಯಾವಶಕ್ತಿಯು ವೇದಭಂಡಾರಸ್ವರೂಪವೋ ಅದೇ 'ಛಂದೋವತೀ'. ಆದುದರಿಂದ ಚಿತ್ರಗಾರನು ಭಾವರೂಪಜ್ಞಾನದಿಂದ ಚಿತ್ರವನ್ನು ರಚಿಸುವಂತೆ ಪರಮಾತ್ಮನಿಂದ ಪ್ರಥಮದಲ್ಲಿ ಉದಯವಾದುದೇ ವೇದವು ಈ ಭಾವರೂಪಜ್ಞಾನವಾದ ವೇದವೇ ಸಕಲ ಜಗತ್ಸ್ವರೂಪವಾಗಿದೆ.

ಶ್ರೀ ಶಾರದಾದೇವಿಯು ಹಸ್ತದಲ್ಲಿ ಧರಿಸಿರುವ ಪುಸ್ತಕದ ತತ್ವವೇ ವೇದ ಸ್ವರೂಪವಾದ ಜ್ಞಾನಭಂಡಾರ ಈ ಜ್ಞಾನಭಂಡಾರದ ಕಾರ್ಯರೂಪವೇ ವೀಣೆ. ಛಂದೋವತೀ ಎಂಬ ಶ್ರುತಿಯು ಷಡ್ಜಕ್ಕೆ ನೇರಿದುದೆಂದರೆ ಷಡ್ಜ(ತತ್)ತತ್ವವಾದ ಪರಬ್ರಹ್ಮಸ್ವರೂಪವಾಗಿಯೇ ಇರುವುದು ಅಂದರೆ ವೇದವು ಕೂಡಾ ಪರಬ್ರಹ್ಮ ಸ್ವರೂಪವೆಂದು ನಿರೂಪಿತವಾಗುವುದು. ಪ್ರತಿಸ್ವರಗಳಿಗೂ ಕೆಲವು ಶ್ರುತಿಗಳಿರು ವುವಷ್ಟೆ! ಹೀಗಿರುವ ಶ್ರುತಿಗಳಲ್ಲಿಯೂ ಪ್ರತಿಯೊಂದು ಸ್ವರಕ್ಕೂ ಪ್ರಧಾನ ಶ್ರುತಿಯು ಒಂದೇ. ಷಡ್ಜಕ್ಕೆ ಪ್ರಧಾನಶ್ರುತಿಯೇ 'ಛಂದೋವತೀ'. ಋಷಭಕ್ಕೆ ಪ್ರಧಾನ ಶ್ರುತಿಯು 'ರತಿಕಾ'. ಛಂದೋವತಿಯೇ ಷಡ್ಜಕ್ಕೆ ಪ್ರಧಾನ ಶ್ರುತಿಯಾಗಿರು

ವುದರಿಂದ ವೇದವು ಪರಬ್ರಹ್ಮಸ್ವರೂಪವೆಂಬುದು ನಿಸ್ಸಂಶಯವಾದ ವಿಚಾರ ವಾಗಿದೆ. ಹೇಗೆಂದರೆ, ಚಿತ್ರಗಾರನು ಬರೆಯುವ ಚಿತ್ರವೆಲ್ಲಾ ಅವನಲ್ಲಿ ಭಾವರೂಪದ ಜ್ಞಾನದಲ್ಲಿದ್ದು ಅನಂತರ ಚಿತ್ರರೂಪದಲ್ಲಿ ಹೇಗೆ ವಿಕಸಿತ ವಾಗುವುದೋ ಹಾಗೆಯೇ ವೇದವು ಕೂಡ ಅವ್ಯಕ್ತಸ್ಥಿತಿಯಲ್ಲಿ ಪರಬ್ರಹ್ಮ ಸ್ಥಿತಿಯಾಗಿದ್ದು ಜಗತ್ಸೃಷ್ಟಿಯಲ್ಲಿ ವ್ಯಕ್ತಸ್ಥಿತಿಯನ್ನು ಪಡೆಯುವುದು ವ್ಯಕ್ತಸ್ಥಿತಿ ಯಲ್ಲಿ ಈಶ್ವರನು ವೇದವನ್ನು ಧರಿಸುವುದರಿಂದ ''ಸರ್ವವೇದಮಯಂಶಿವಂ'' ಎಂಬ ಶ್ರುತ್ಯಾಧಾರದಂತೆ ವೇದಪುರುಷನೆನಿಸಿಕೊಂಡನು. ಆದುದರಿಂದ ವೇದವು ಈಶ್ವರನಿಂದಲೂ ಕಲ್ಪಿಸಲ್ಪಟ್ಟುದುದಲ್ಲ.

ಮುಖ್ಯವಾಗಿ ವೃಕ್ಷವು ಬೀಜದಲ್ಲಿ ಅವ್ಯಕ್ತಸ್ಥಿತಿಯಲ್ಲಿದ್ದು ವ್ಯಕ್ತವಾದಾಗ ವೃಕ್ಷವೆಣಿಸುವುದು. ಇದರಂತೆ ವೇದವು ಅವ್ಯಕ್ತಸ್ಥಿತಿಯಲ್ಲಿದ್ದಾಗ ಪರಬ್ರಹ್ಮ ಸ್ವರೂಪವಾಗಿದ್ದು ಸೃಷ್ಟಿಕಾಲದಲ್ಲಿ ವ್ಯಕ್ತಸ್ಥಿತಿಯನ್ನು ಪಡೆಯುವುದು. ಇದಕ್ಕೆ ಅನುಸಾರವಾಗಿ ಸಂಗೀತ ಶಾಸ್ತ್ರದಲ್ಲಿಯೂ ಷಡ್ಜದಲ್ಲಿರುವ 'ಛಂದೋವತೀ' ಶ್ರುತಿಯನ್ನು ಋಷಭಸ್ವರವು ಆಕ್ರಮಿಸಿದಾಗ '**ಚ್ಯುತ**' ವೆಂದೂ, ಆಕ್ರಮಿಸದಿದ್ದಾಗ '**ಅಚ್ಯುತ**' ವೆಂದೂ ಕರೆಯಲ್ಪಡುವುದು. **ಅಚ್ಯುತ**ಸ್ಥಿತಿಯೇ ಪರಬ್ರಹ್ಮ ಒಂದೇ ಇರುವ ಸ್ಥಿತಿ. ಈ ವಿಚಾರವು ಆಧಾರವಾಕ್ಯಗಳೊಡನೆ ಮುಂದೆ ಬರುವುದು.

ಅಲ್ಲದೆ ಛಂದಸ್ಸೆಂದರೆ:— ಮಾತ್ರಾ ಸಂಖ್ಯೆಯನ್ನೂ ಅಕ್ಷರಸಂಖ್ಯೆಯನ್ನೂ ಗಣಸಂಖ್ಯೆಯನ್ನೂ ಕ್ಲುಪ್ತಮಾಡಿ ಅಳತೆಯ ಕ್ರಮವನ್ನನುಸರಿಸಿ ಪಾದಸ್ವರೂಪ ವನ್ನು ನಿರ್ಣಯಿಸುವುದಕ್ಕೆ ಛಂದಸ್ಸೆಂದು ಹೆಸರು. ಅಲ್ಲದೆ ಛಂದಸ್ಸೆಂಬ ಶಬ್ದಕ್ಕೆ ಅಲಂಕಾರ, ಆಹ್ಲಾದ, ಸ್ವತಂತ್ರಗಳೆಂಬ ಅರ್ಥವೂ ಇರುವವು. ಛಂದಸ್ಸುಗಳಲ್ಲಿ ಉಕ್ತಾ, ಗಾಯತ್ರೀ, ಬೃಹತೀ ಮುಂತಾದ ಇಪ್ಪತ್ತಾರು ಛಂದಸ್ಸುಗಳಿವೆ. ಬಹು ದೊಡ್ಡದಾದ **ಈ ಛಂದ**ಶ್ಶಾಸ್ತ್ರವನ್ನೆಲ್ಲಾ ಸೃಷ್ಟಿತತ್ವಕ್ಕೆ ಅನ್ವಯ ಮಾಡಬೇಕಾ ಗುವುದು. ಮುಖ್ಯವಾಗಿ ಸೃಷ್ಟಿಯಲ್ಲಿ ಬ್ರಹ್ಮಾಂಡವು ಎಷ್ಟು ಭಾಗಗಳಾಗಬೇಕು, ಯಾವ ಯಾವ ಭಾಗವು ಎಷ್ಟೆಷ್ಟು ವಿಸ್ತಾರವಾಗಿರಬೇಕು, ಪ್ರತಿಭಾಗಗಳು ಆಹ್ಲಾದಕರವಾಗಿಯೂ ಅಲಂಕಾರವಾಗಿಯೂ ಸ್ವತಂತ್ರವಾಗಿಯೂ ಮಹತ್ವ ಉಳ್ಳವುಗಳಾಗಿಯೂ ಹೇಗೆ ಹೇಗೆ ಇರಬೇಕೆಂಬ ತತ್ವಗಳೆಲ್ಲಾ ಬರಬೇಕಾಗುವುದು. ಈ ವಿಚಾರಗಳ ಭಾವೋದಯಗಳೆಲ್ಲಾ ಸೃಷ್ಟಿಮಾಡಿದ ಸರ್ವಜ್ಞಮೂರ್ತಿ ಯಾದ ಪರಮಾತ್ಮನೊಬ್ಬನಿಗೇ ಗೊತ್ತು. ಮುಖ್ಯವಾಗಿ 'ಛಂದೋವತೀ' ಎಂಬ ಶ್ರುತಿಯು ಬಹು ಮಹತ್ವವಾದ ವೇದಮಹಿಮೆಯ ವಿಚಾರಗಳ ತತ್ವಗಳ ನ್ನೊಳಗೊಂಡಿರುವುದು.

ಉಳಿದ ಶ್ರುತಿಗಳಲ್ಲಿ 'ದಯಾವತಿ'ಯ ತತ್ವವೇನೆಂದರೆ; — ''ದಯಂತೆ ರಕ್ಷ್ಯಂತನಯೇತಿ ದಯಾ ದಯಾ ಅಸ್ಯಾಃ ಅಸ್ತೀತಿ-ದಯಾವತೀ" ರಕ್ಷಣೆಗೂ,

ದುಃಖನಿವಾರಣೆಗೂ, ಕರುಣೆಗೂ ದಯಾಶಬ್ದವು ಉಪಯೋಗಿಸಲ್ಪಡುವುದು. ಸೃಷ್ಟಿಸ್ಥಿತಿಕ್ರಮಗಳಲ್ಲಿ ರಜಸ್ತಮೋಗುಣಗಳಿಂದ ಸತ್ವಗುಣಕ್ಕೆ ಉಂಟಾಗುವ ತೊಂದರೆಯನ್ನು ನಿವಾರಿಸಿ ಈಶ್ವರನು ರಕ್ಷಿಸುವನೆಂಬ ಭಾವದ ತತ್ವವಾಗಿರುವುದು. ಅಲ್ಲದೆ ಈಶ್ವರನೂ ಮಾಹೇಶ್ವರಿಯೂ ಅವ್ಯಾಜಕರುಣಾಮೂರ್ತಿಗಳೆಂಬುದನ್ನು ಸೂಚಿಸುವುದೇ 'ದಯಾವತೀ' ಶ್ರುತಿಯ ತತ್ವವಾಗಿರುವುದು. 'ರಂಜನೀ' ಶ್ರುತಿಯ ತತ್ವವೇನೆಂದರೆ:— ರಜ್ಯತೇ ಧಾತುವಿನಮೇಲೆ ಪ್ರಕಾಶವಾಗಿರುವುದಕ್ಕೂ, ಉಲ್ಲಾಸವಾಗಿರುವುದಕ್ಕೂ 'ರಂಜನೀ' ಎಂದು ಹೇಳಲ್ಪಡುವುದು. ಈಶ್ವರನು ಜ್ಯೋತಿಸ್ವರೂಪನಾಗಿಯೂ, ಉಲ್ಲಾಸವನ್ನುಂಟುಮಾಡುವ ಆನಂದಸ್ವರೂಪನಾಗಿಯೂ, ಸಮಸ್ತ ಪ್ರಪಂಚಕ್ಕೂ ಪ್ರಕಾಶವನ್ನುಂಟುಮಾಡತಕ್ಕವನಾಗಿಯೂ, ರಜೋಗುಣಕ್ಕೂ ನಿಯಂತೃವಾಗಿಯೂ ಇರುವನೆಂಬುದನ್ನು ಸೂಚಿಸುವುದೇ 'ರಂಜನೀ' ಶ್ರುತಿಯ ತತ್ವವಾಗಿರುವುದು 'ರತಿಕಾ' ಶ್ರುತಿಯ ತತ್ವವೇನೆಂದರೆ.- 'ರತಿಕಾ' ಎಂದರೆ ಕ್ರೀಡಿಸುವಿಕೆ ಅಥವಾ ರಮಿಸುವಿಕೆ ಎಂದರ್ಥವಾಗಿ ಈಶ್ವರನೂ ಮಾಹೇಶ್ವರಿಯೂ ಸೇರಿ ಕ್ರೀಡಿಸುವಿಕೆಯಿಂದ ಸಕಲ ಜಗತ್ತನ್ನೂ ಸೃಷ್ಟಿಸುವಿಕೆಯ ತತ್ವವಾಗಿರುವುದು. ಅಥವಾ ಸೃಷ್ಟಿಕಾರ್ಯದಲ್ಲಿ ಕ್ರೀಡಿಸುವಿಕೆಯೆಂಬ ತತ್ವವೂ ಆಗುವುದು. 'ರೌದ್ರೀ' ಶ್ರುತಿಯ ತತ್ವವೇನೆಂದರೆ:— 'ರುದಂ = ರೋದನಂ, ದ್ರಾವಯತಿ' ದುಃಖವನ್ನು ಹೋಗಲಾಡಿಸುವಿಕೆ. 'ರೋದಯತಿಶತ್ರೂನ್' ಶತ್ರುಗಳನ್ನು ದುಃಖಪಡಿಸುವಿಕೆಯೆಂದಾಗಿ ಈಶ್ವರನು ದುಃಖವನ್ನು ಹೋಗಲಾಡಿಸಿ ಸರ್ವಮಂಗಳವನ್ನುಂಟುಮಾಡತಕ್ಕವನು. ಶತ್ರುಗಳಿಗೆ ಭೀಷಣ ಪ್ರಾಯವಾದವನು. "ಭೀಷಾಸ್ಮಾದ್ವಾತಃಪವತೇ ಭೀಷೋದೇತಿಸೂರ್ಯಃ ಭೀಷಾಸ್ಮಾದಗ್ನಿಶ್ಚೆಂದ್ರಶ್ಚ" ಮುಂತಾದ ಶ್ರುತಿಪ್ರಮಾಣಗಳಂತೆ ಸಮಸ್ತವೂ ಈಶ್ವರನಿಗೆ ಹೆದರಿ ತಮ್ಮ ಕೆಲಸಗಳಲ್ಲಿ ನಿಯತವಾಗಿರುವುದೆಂಬುದನ್ನು ಸೂಚಿಸುವಿಕೆಯೇ ರೌದ್ರೀ ಶ್ರುತಿಯ ತತ್ವವಾಗಿರುವುದು. 'ಕ್ರೋಧಾ' ಶ್ರುತಿಯ ತತ್ವವೇನೆಂದರೆ:— ಈಶ್ವರನು ಲಯ ಅಥವಾ ಸಂಹಾರಶಕ್ತಿಯುತನೆಂಬ ತತ್ವವಾಗಿರುವುದು. ಗಾಂಧಾರ, ಋಷಭಸ್ವರಗಳೆರಡೂ ಒಂದೇ ಮನೆಯಲ್ಲಿರುವುದರಿಂದ ರತಿಕಾ, ರೌದ್ರೀ, ಕ್ರೋಧಾ ಶ್ರುತಿಗಳು ಎರಡಕ್ಕೂ ಸಮನಾಗಿವೆ. ಅಂತರಗಾಂಧಾರವು ಮಾತ್ರ ಮಧ್ಯಮಸ್ವರದ ಪ್ರಥಮ ಶ್ರುತಿಯನ್ನು ಆಕ್ರಮಿಸುವುದು.

"ಸವಿತುಃ" ಪದದಲ್ಲಿ ಮೇಲಿನ ಸ್ವರಗಳೂ, ಶ್ರುತಿಗಳೂ ಬಂದಿರುವುದರಿಂದ ಮುಖ್ಯವಾಗಿ ಸೂರ್ಯ, ಚಂದ್ರ, ದೇವತೆಗಳು, ಮನುಷ್ಯರಾದಿಯಾಗಿ ಸಕಲವನ್ನೂ ಈಶ್ವರನು ಸೃಷ್ಟಿಸುವ ಮತ್ತು ಈಶ್ವರನ ಮಹಿಮೆಯ ವಿಚಾರಗಳನ್ನು ಒಳಗೊಂಡಿವೆ. ಅನಂತಶಕ್ತನೆನಿಸುವ ಮಹೇಶ್ವರನು ಅನಂತಶಕ್ತಿಯೆನಿಸುವ

ಮಾಹೇಶ್ವರಿಯೊಡನೆ ಕೂಡಿ ಉಂಟಾಗುವ ಸೃಷ್ಟಿಪೂರ್ಣವಾಗುವವರೆಗಿನ ನಾದ ಬ್ರಹ್ಮದಲ್ಲಿರುವ ಭಾವಗಳನ್ನು ನಿರ್ಧರಿಸಲು ಮಾನವನ ಅರಿವಿಗೆ ನಿಲುಕದು ದಾಗಿದೆ. ಆದುದರಿಂದಲೇ ಶ್ರೀಶಂಕರಾಚಾರ್ಯರವರು ಸೃಷ್ಟಿಯ ವಿಚಾರವನ್ನೂ, ಈಶ್ವರನ ಮಹಿಮೆಯನ್ನೂ ಸಂಪೂರ್ಣವಾಗಿ ತಿಳಿಯಲು ಸುಲಭವಲ್ಲದ ರಹಸ್ಯ ವಾಗಿದೆಯೆಂದು ಹೇಳಿರುವರು. ಸೃಷ್ಟಿಯ ವಿವರಗಳೆಲ್ಲಾ 'ಕಳಾ' ರೂಪವಾದ ವೇದಭಂಡಾರದಲ್ಲಿರುವುವು. ಸಂಗೀತಶಾಸ್ತ್ರದಲ್ಲಿ ೨೨ ಅಥವಾ ೬೬ ಶ್ರುತಿಗಳೆಂದೂ ಮತ್ತೆ ಕೆಲವು ಕಡೆ ಅನಂತವಾದ ಶ್ರುತಿಗಳೆಂದೂ ಹೇಳಿದೆ. ಅನಂತವಾದ ಶ್ರುತಿ ಗಳೆಂಬುದೇ ಸಾಧುವೆಂದು ಕಾಣುವುದು. ಕಾರಣವೇನೆಂದರೆ 'ಅನನ್ತಾವೈ ವೇದಾಃ। ಅನನ್ತಾವೈಶಬ್ದಾಃ' ಎಂಬಂತೆ ಈಶ್ವರನ ಸೃಷ್ಟಿ, ಸ್ಥಿತಿ, ಲಯ ಕ್ರಮಗಳಲ್ಲಿ ಎಂತೆಂತಹ ಭಾವೋದಯದ ಶಬ್ದಗಳಿವೆಯೋ ಆ ಈಶ್ವರನಿಗಲ್ಲದೆ ಮತ್ತಾರಿಗೆ ಗೊತ್ತು ?

ಸಪ್ತಸ್ವರಗಳಲ್ಲಿ ಷಡ್ಜ ಋಷಭ ಸ್ವರಗಳ ಸ್ಥಾನಗಳು ನಮ್ಮಲ್ಲಿ ಸಹಸ್ರಾರ ಕಮಲ ಮತ್ತು ಭ್ರೂಮಧ್ಯದಲ್ಲಿ ಇರುವುದೆಂದು ಹಿಂದೆ ತಿಳಿಸಿತಷ್ಟೆ! ಮೂರನೆಯ ದಾದ ಗಾಂಧಾರಸ್ವರವು ಸಪ್ತವ್ಯಾಹೃತಿಗಳಲ್ಲಿ 'ಓಂಜನಃ' ಎನ್ನುವುದರ ತತ್ವವಾಗಿ ನಮ್ಮ ಕಂಠದಲ್ಲಿರುವ ಆಕಾಶದ ತತ್ವವಾದ 'ವಿಶುದ್ಧ' ಚಕ್ರದಲ್ಲಿರುವುದು. ಗಾಂಧಾರವೆನ್ನುವ ಪದದ ಅರ್ಥವೂ ಅನ್ವಯವಾಗುವುದು. ಗಾನಸೌಖ್ಯ ವನ್ನುಂಟುಮಾಡುವುದು ಮತ್ತು ವಾಣಿಯನ್ನು ಧರಿಸುವ ಸ್ಥಳವೇ ನಮ್ಮ ಕಂಠ ದಲ್ಲಿರುವ 'ವಿಶುದ್ಧ'ಚಕ್ರ. ವಾಗಿಂದ್ರಿಯ ವಿರುವುದೂ ಕಂಠದಲ್ಲೇ. ಅಲ್ಲದೆ ಕಂಠದಲ್ಲಿರುವ ವಿಶುದ್ಧಚಕ್ರವೇ ಪಂಚಭೂತಗಳಲ್ಲಿ ಆಕಾಶದ ತತ್ವವಾಗಿರು ವುದು. ಶಬ್ದಕ್ಕೆ ಸ್ಥಾನವೇ ಆಕಾಶ ಮತ್ತು ಪ್ರಪಂಚವನ್ನು ಧರಿಸುವುದೂ ಆಕಾಶ. ಆದುದರಿಂದ ನಮ್ಮಲ್ಲಿ ಗಾಂಧಾರಸ್ವರಕ್ಕೆ ಸ್ಥಾನವು ಕಂಠವು ಸಪ್ತಮಾತೃಕೆಯರಲ್ಲಿ ಕೌಮಾರಿಯು ಗಾಂಧಾರಸ್ವರಕ್ಕೆ ಅಧಿದೇವತೆಯು. ಈ ತಾತ್ಪರ್ಯಕ್ಕೆ ಸಂಗೀತಶಾಸ್ತ್ರದ ವಾಕ್ಯವನ್ನೇ ಕೆಳಗೆ ಬರೆದಿರುವುದು.

ರೇವತ್ಯಾ ಮಪರಾಹ್ಣೇತು ಗಾಂಧಾರಃ ಪಂಚಮೀ ತಿಥೌ ।
ಕಶ್ಯಪಶ್ಚ ಋಷಿಸ್ತಸ್ಯ ಕೌಮಾರೀ ದೇವತಾಸ್ಮೃತಾ ॥

ಕೌಮಾರೀ ಎನ್ನುವ ಶಬ್ದಕ್ಕೆ (೧) 'ಕುತ್ಸಿತಾನ್ ಶತ್ರೂನ್ಮಾರಯತೀತಿ ಕುಮಾರೀ (ಮೃಙ್-ಪ್ರಾಣತ್ಯಾಗೇ)' ಕುತ್ಸಿತರಾದ ಶತ್ರುಗಳನ್ನು ಧ್ವಂಸಮಾಡು ವವಳು. (೨) 'ಕೌ-ಪೃಥಿವ್ಯಾಂ, ಮಾಂ - ಲಕ್ಷ್ಮೀಂ, ರಾತಿ - ದದಾತೀತಿವಾ ಕೌಮಾರೀ' ಭೂಮಿಯಲ್ಲಿ ಸಂಪತ್ತನ್ನು ಕೊಡುವವಳು. (೩) 'ಕುಮಾರಯತಿ- ಕ್ರೀಡಯತೀತಿ ಕುಮಾರೀ (ಕುಮಾರ-ಕ್ರೀಡಾಯಾಂ)' ಬಾಲ್ಯದ ಕ್ರೀಡೆಯಲ್ಲಿರು

ವವಳು. (೪) 'ಕುತ್ಸಿತೋ ಮಾರೊ ಯಯಾಸಾ ಇತಿ ಕುಮಾರೀ' ಮನ್ಮಥನನ್ನು ತಿರಸ್ಕರಿಸುವವಳೆಂದರೆ ಬಾಲ್ಯಾವಸ್ಥೆಯಲ್ಲಿರುವವಳು. ಮುಖ್ಯ ತತ್ವವೇನೆಂದರೆ ಋಷಭಸ್ವರದಲ್ಲಿ ಉಪಕ್ರಮವಾಗಿದ್ದ ಸೃಷ್ಟಿಯು ಬಾಲ್ಯವಯಸ್ಸಿನ ತತ್ವಕ್ಕೆ ಬರುವುದೇ ಕೌಮಾರಿಯು ಗಾಂಧಾರಸ್ವರಕ್ಕೆ ಅಧಿದೇವತೆಯಾಗಿರುವುದಾಗಿದೆ. ಅಂದರೆ ಸೃಷ್ಟಿಯಾದ ಪ್ರಪಂಚವು ವ್ಯಾಪಾರಕ್ಕೆ ಪ್ರಾರಂಭವಿಲ್ಲದಿರುವ ತತ್ವವಾಗಿ ರುವುದು. ಗಾಂಧಾರಸ್ವರವಾದ ಅನಂತರ ಮಧ್ಯಮ ಸ್ವರವಿರುವುದಷ್ಟೆ! ಮಧ್ಯಮ ಸ್ವರದ ತತ್ವದಲ್ಲಿ ವ್ಯಾಪಾರಕ್ಕೆ ಪ್ರಾರಂಭವಾಗುವುದು. 'ಮಧ್ಯೇವಯಸಿತಿಷ್ಠತೀತಿ-ಮಧ್ಯಮಾ' ಎಂಬ ವ್ಯುತ್ಪತ್ತಿಯಂತೆ ಹೊಸದಾಗಿ ಋತುಮತಿಯಾದ ಕನ್ಯೆಗೆ 'ಮಧ್ಯಮಾ' ಎಂದು ಹೆಸರು. ಆದುಪರಿಂದ ಋಷಭದಲ್ಲಿ ಪ್ರಾರಂಭವಾದ ಸೃಷ್ಟಿಯು ಮಧ್ಯಮಸ್ವರದಲ್ಲಿ ವ್ಯಾಪಾರಪ್ರಾರಂಭಕ್ಕೆ ಅಂಕುರವೆಂಬ ತತ್ವ ವಾಗಿದೆ. ಆದುದರಿಂದ ಪ್ರಪಂಚವು ವ್ಯಾಪಾರಕ್ಕೆ ಪ್ರಾರಂಭವಿಲ್ಲದೆ ಸೃಷ್ಟಿಯ ಬೆಳವಣಿಗೆಯ ಸ್ಥಿತಿಯಲ್ಲಿರುವುದೇ ಕೌಮಾರಿಯು ಗಾಂಧಾರಸ್ವರಕ್ಕೆ ಅಧಿದೇವತೆ ಯಾಗಿರುವ ತತ್ವವಾಗಿದೆ. ಇದುವರೆಗೂ ವಿವರಿಸಿದ 'ಸವಿತುಃ'ಪದದ ತತ್ವಗಳ ವಿವರಣೆಗಳೆಲ್ಲಾ ವೇದಭಂಡಾರದಲ್ಲಿದ್ದೇ ಇರುವುವು.

**ವರೇಣಿಯಂ ||** 'ಸವಿತುಃ' ಪದವಾದ ಅನಂತರ 'ವರೇಣಿಯಂ' ಎಂಬ ಪದವು ಗಾಯತ್ರೀಮಂತ್ರದಲ್ಲಿ ಬರುವುದು. 'ವರೇಣಿಯಂ' ಎಂದರೆ ಸರ್ವಪ್ರಾಣಿ ಗಳಿಂದಲೂ ಅಪೇಕ್ಷ್ಯನಾದವನು ಮತ್ತು ಶ್ರೇಷ್ಠನಾದವನೆಂಬ ಅರ್ಥವಾಗುವುದು. ಸಕಲ ಸೃಷ್ಟಿಯ ವಿಚಾರವು 'ಸವಿತುಃ' ಎಂಬ ಪದದಲ್ಲಿ ಬಂದಿತು. ಸೃಷ್ಟಿ ಯಾದದ್ದು ವ್ಯಾಪಾರಕ್ಕೆ ಬರದೆ ಸೃಷ್ಟಿಯಲ್ಲೇ ತಟಸ್ಥವಾಗುವುದಿಲ್ಲ. ಸೃಷ್ಟಿಯು ಪೂರ್ಣವಾದರೂ ಪ್ರಾಣಿಗಳು ವಿಷಯವ್ಯಾಪಾರಮಾಡಲು ಕೆಲವು ಸಲಕರಣೆ ಗಳಾಗಬೇಕು. ಪಂಚಪ್ರಾಣಗಳೂ ಇಂದ್ರಿಯಗಳೂ ಜೀವಚೈತನ್ಯನೊಡನೆ ಕಲೆತು ಪ್ರಾಣಿಗಳ ವಿಷಯವ್ಯಾಪಾರವು ನಡೆಯಬೇಕಾಗಿದೆ. ಪ್ರಾಣೇಂದ್ರಿಯ ಗಳಿಗಿಂತ ಜೀವಚೈತನ್ಯನು ಶ್ರೇಷ್ಠನು ಮತ್ತು ಪ್ರಾಣೇಂದ್ರಿಯಗಳಿಂದ ಸೇವಿಸಲ್ಪಡಲು ಯೋಗ್ಯನಾದುದರಿಂದ ಜೀವಚೈತನ್ಯನಿಗೆ 'ವರೇಣಿಯಂ' ಎಂಬುದು ಅನ್ವಯವಾಗುವುದು. ಹೀಗೆ ಜೀವಚೈತನ್ಯನು ಕೋಶ ಮತ್ತು ಇಂದ್ರಿಯಗಳಲ್ಲಿ ಪ್ರಸರಿಸಿ ಅವುಗಳನ್ನು ಕಾರ್ಯೋನ್ಮುಖವಾಗುವಂತೆ ಮಾಡುವ ತತ್ವಕ್ಕೆ ಅನುಸಾರವಾಗಿ 'ವರೇಣಿಯಂ' ಎಂಬ ಪದವಿರುವ ವೀಣೆಯ ಮನೆಗಳಲ್ಲಿ 'ಅಂತರಗಾಂಧಾರ, ಮಧ್ಯಮ, ಪ್ರತಿಮಧ್ಯಮ, ಪಂಚಮ' ಸ್ವರಗಳೂ, ಅವುಗಳ ಶ್ರುತಿಗಳೂ ಇರುವುವು.

ಗಾಂಧಾರವೆಂದರೆ:-ಪ್ರಪಂಚ ಮತ್ತು ವಾಣಿಗಳನ್ನು ಧರಿಸುವುದೆಂದೂ,

ಗಂಧರ್ವರಿಗೆ ಸಂತೋಷಗೊಳಿಸುವುದೆಂದೂ, 'ಸವಿತುಃ' ಪದದಲ್ಲಿ ತಿಳಿಸಿತಷ್ಟೆ ! ಅಂತರಗಾಂಧಾರವೆಂದರೆ- ವಾಣಿಯಲ್ಲಿಯೂ, ದೇವತೆಗಳಲ್ಲಿಯೂ ಈಶ್ವರನು ಅಂತರ್ಯಾಮಿಯಾಗಿದ್ದು ಕಾರ್ಯೋನ್ಮುಖವಾಗಿ ಪ್ರೇರಿಸುವತತ್ವವಾಗಿರುವುದು. ಅಂದರೆ 'ಸವಿತುಃ' ಎಂಬ ಪದದಲ್ಲಿ ಪ್ರಾರಂಭವಾದ ಗಾಂಧಾರಸ್ವರವು 'ವರೇಣಿಯಂ' ಎಂಬ ಪದದ ಪ್ರಥಮಾಕ್ಷರದ ತತ್ವದಲ್ಲಿರುವುದು. ಅಂದರೆ ಯಾವ ಈಶ್ವರನು ಸೃಷ್ಟಿಸಿದನೋ ಅದೇ ಈಶ್ವರನು ಪ್ರಪಂಚದಲ್ಲಿ ಅಂತರ್ಯಾಮಿಯಾಗಿದ್ದು ಕೊಂಡು ಕಾರ್ಯೋನ್ಮುಖವಾಗಿ ಪ್ರೇರಿಸುವನೆಂಬ ತತ್ವವಾಗಿರುವುದು. ಅಲ್ಲದೆ ಜೀವಚೈತನ್ಯನು ವಿಷಯವ್ಯಾಪಾರಮಾಡಲು ವೃತ್ತಿಪ್ರಕಾಶಕನಾಗಿ ಕೋಶಗಳಲ್ಲಿ ಪ್ರಸರಿಸಿ ಪ್ರಥಮಕೋಶವಾದ ಆನಂದಮಯಕೋಶದ ಉಪಾಧಿಯನ್ನು ಪಡೆಯುವ ತತ್ವವೂ ಅಂತರಗಾಂಧಾರದಲ್ಲಿರುವುದರಿಂದಲೇ 'ವಜ್ರಿಕ' ಎಂಬ ಶ್ರುತಿಯನ್ನು ಅಂತರಗಾಂಧಾರವು ಆಕ್ರಮಿಸುವುದು. ವಜ್ರವು ಜಡಪದಾರ್ಥ ವಾದರೂ ಪ್ರಕಾಶವುಳ್ಳದ್ದಾಗಿದೆ ಇದರಂತೆ ಪ್ರಾಣಿಗಳಲ್ಲಿನ ಆನಂದಮಯ ಕೋಶವು ಅಜ್ಞಾನಾವರಣವುಳ್ಳ ಕಾರಣ ಶರೀರವೆನಿಸಿದರೂ ವಜ್ರವು ಪ್ರಕಾಶ ವಾಗಿರುವಂತೆ ಆನಂದಮಯಕೋಶವೂ ಪ್ರಿಯ, ಮೋದ, ಪ್ರಮೋದಗಳೆಂಬ ಸುಖವಿಶೇಷ ವೃತ್ತಿಗಳಿಗೆ ಆಧಾರವಾಗಿ ವಿಷಯಾನಂದಸ್ವರೂಪವನ್ನು ಉಂಟು ಮಾಡುವುದು. ಅಂದರೆ ಸೃಷ್ಟಿಯು ಪೂರ್ಣವಾದ ಅನಂತರ ವ್ಯಾಪಾರೋನ್ಮುಖ ವಾಗಲು ಪ್ರಥಮದಲ್ಲಿ ಪ್ರಾಣಿಗಳಲ್ಲಿನ ಜೀವಚೈತನ್ಯನು ಆನಂದಮಯ ಕೋಶದ ಉಪಾಧಿಯನ್ನು ಹೊಂದುವುದೆಂದರೆ ತಮೋಆವರಣದ ಉಪಾಧಿಯನ್ನು ಹೊಂದಿ ಸುಷುಪ್ತ್ಯವಸ್ಥೆಯನ್ನು ಹೊಂದುವುದೇ 'ವಜ್ರಿಕ' ಶ್ರುತಿಯ ತತ್ವವಾಗಿರು ವುದು. 'ಆನಂದಮಯಕೋಶಸ್ಯ ಸುಷುಪ್ತೌ ಸ್ಫೂರ್ತಿರುತ್ಕಟಾ' ಎಂಬ ಶ್ರೀಶಂಕರಾಚಾರ್ಯರವರ ವಾಕ್ಯದಂತೆ ನಿದ್ರಾಸ್ವರೂಪವೇ ಜೀವನಿಗೆ ಪ್ರಥಮೋಪಾಧಿಯಾಗಿರುವುದು. ಮೇಲಿನ ವಿಚಾರವೇ ಅಂತರ ಗಾಂಧಾರದ ತತ್ವವಾಗಿರುವುದು.

ಅಂತರಗಾಂಧಾರವಾದ ಅನಂತರ ಮಧ್ಯಮ ಮತ್ತು ಪ್ರತಿಮಧ್ಯಮ ಸ್ವರಗಳು 'ವರೇಣಿಯಂ' ಪದದ ಮನೆಗಳಲ್ಲಿ ಬರುವುವು. 'ಮಧ್ಯಮ' ಎಂದರೆ ಮಧ್ಯದ ಸ್ಥಿತಿಯೆಂದರ್ಥ. ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ಸ್ವಪ್ನವೇ ಮಧ್ಯದ ಸ್ಥಿತಿ. ಸ್ವಪ್ನಾವಸ್ಥೆಯಲ್ಲಿ ವಿಜ್ಞಾನ ಮನೋಮಯ ಕೋಶಗಳೆರಡರ ಕಾರ್ಯಗಳು ಮಾತ್ರ ನಡೆಯುತ್ತವೆ. ಅಂದರೆ ಜೀವಚೈತನ್ಯನಿಗೆ ಆನಂದಮಯ ಕೋಶದ ಉಪಾಧಿ ಬಂದುದನ್ನು ಮೇಲೆ ಅಂತರಗಾಂಧಾರದ ತತ್ವದಲ್ಲಿ ತಿಳಿಸಿತಷ್ಟೆ ! ಜೀವ ಚೈತನ್ಯನು ವಿಜ್ಞಾನ ಮನೋಮಯಕೋಶಗಳಲ್ಲಿಯೂ, ಜ್ಞಾನೇಂದ್ರಿಯಗಳ ಲ್ಲಿಯೂ ಪ್ರಸರಿಸಿ ಈ ಕೋಶಗಳನ್ನೂ ಜ್ಞಾನೇಂದ್ರಿಯಗಳನ್ನೂ ಕಾರ್ಯೋನ್ಮುಖ

ವಾಗುವಂತೆ ಮಾಡುವುದೇ ಮಧ್ಯಮ ಮತ್ತು ಪ್ರತಿಮಧ್ಯಮ ಸ್ವರಗಳ ತತ್ವವಾಗಿರುವುದು. ಮಧ್ಯಮಕ್ಕೆ ಪ್ರತಿಕಕ್ಷಿಯಾಗಿರುವುದರಿಂದ 'ಪ್ರತಿಮಧ್ಯಮ' ಎಂದು ಹೆಸರು ಬಂದಿರುವುದು. ಇದರ ತತ್ವವೇನೆಂದರೆ 'ನಾನು' ಎಂಬ ಜ್ಞಾನ ಮಾತ್ರಕ್ಕೆ ದೇಹವು ನಾನೆಂಬ ಅಭಿಮಾನಜ್ಞಾನವು ಪ್ರತಿಕಕ್ಷಿಯ ಸ್ಥಾನ ದಲ್ಲಿರುವುದು. 'ನಾನು' ಎಂಬುದಕ್ಕೆ 'ನೀನು' ಎಂಬುದು ಕೂಡ ಪ್ರತಿಕಕ್ಷಿಯ ಸ್ಥಾನದಲ್ಲಿರುವುದು ವಿಜ್ಞಾನಮಯಕೋಶದಲ್ಲಿ ದೇಹವು ನಾನೆಂಬ ಮತ್ತು ಮನೋಮಯಕೋಶದಲ್ಲಿ 'ನೀನು' ಎಂಬ ಜ್ಞಾನವು ಉದಯಿಸುವುದು. ಮಧ್ಯಮ ಪ್ರತಿಮಧ್ಯಮ ಸ್ವರಗಳಿಗಿರುವ ಭೇದಗಳ ತತ್ವಗಳನ್ನು ವಿವರಿಸಲು ಲಂಬಿಸಬೇಕಾಗುವುದು. ಮುಖ್ಯವಾಗಿ ತತ್ವಗಳ ಸಾರವನ್ನು ಮಾತ್ರ ಬರೆದಿರು ವುದು. ಮೇಲಿನ ತತ್ವಾರ್ಥಗಳ ಸಮರ್ಥನೆಗೆ 'ಪ್ರಸಾರಣೀ, ಪ್ರೀತಿ, ಮಾರ್ಜನೀ' ಎಂಬ ಶ್ರುತಿಗಳು ಮಧ್ಯಮ ಸ್ವರದಲ್ಲಿರುವುವು. 'ಪ್ರಸಾರಣೀ' ಎಂದರೆ ವ್ಯಾಪಿಸುವಿಕೆ. ಅಂದರೆ ಜೀವಚೈತನ್ಯನು ಇಂದ್ರಿಯ ಮತ್ತು ಕೋಶಗಳಲ್ಲಿ ಪ್ರಸರಿಸಿ ಕಾರ್ಯೋನ್ಮುಖವಾದದ್ದನ್ನಾಗಿ ಮಾಡುವಿಕೆಯೇ 'ಪ್ರಸಾರಣೀ' ಶ್ರುತಿಯ ತತ್ವವಾಗಿರುವುದು. ದೇಹಾಭಿಮಾನವು ಉದಯವಾಗಿ ಅದರಲ್ಲಿ ವಿಶ್ವಾಸ ಪಡುವಿಕೆಯೇ 'ಪ್ರೀತಿ' ಎಂಬ ಶ್ರುತಿಯ ತತ್ವವಾಗಿರುವುದು. ಇಂದ್ರಿಯ ಗಳಲ್ಲಿರುವ ನಿರ್ವ್ಯಾಪಾರತೆಯನ್ನುಂಟುಮಾಡುವ ಕಲ್ಮಷವನ್ನು ಹೋಗಲಾಡಿಸಿ ಕಾರ್ಯಪ್ರವರ್ತನೆಗೆ ಅರ್ಹವಾದದ್ದನ್ನಾಗಿ ಮಾಡುವಿಕೆಯೇ 'ಮಾರ್ಜನೀ' ಶ್ರುತಿಯ ತತ್ವವಾಗಿರುವುದು. ಮಧ್ಯಮಸ್ವರದಲ್ಲಿ ಮತ್ತೊಂದು ತತ್ವಾರ್ಥವೂ ಇರುವುದು. ಸೃಷ್ಟಿ, ಸ್ಥಿತಿ, ಲಯಗಳಲ್ಲಿ ಸ್ಥಿತಿಯು ಮಧ್ಯದ ಸ್ವರೂಪ. ಆದುದರಿಂದ ಮಧ್ಯಮಸ್ವರವು ಸ್ಥಿತಿಯ, ತತ್ವಕ್ಕೆ ಅನ್ವಯವಾಗುವುದು. ಇಂತಹ ತತ್ವಾರ್ಥವುಳ್ಳದಾದುದರಿಂದಲೇ ಮಧ್ಯಮ ಸ್ವರವು ಸಪ್ತಸ್ವರಗಳಲ್ಲಿ ಮಧ್ಯದಲ್ಲಿರುತ್ತದೆ. ಮಧ್ಯದಸ್ಥಿತಿಯಾದ ಪಾಲನೆಗೆ ಕರ್ತನು ಸುಗುಣ ಚೈತನ್ಯದಲ್ಲಿರುವ ಸಾಕ್ಷಾತ್ ವಿಷ್ಣುವು ಆದುದರಿಂದಲೇ ಮಧ್ಯಮಸ್ವರಕ್ಕೆ ಸಪ್ತಮಾತೃಕೆಯರಲ್ಲಿ ಅಧಿದೇವತೆಯು 'ವೈಷ್ಣವೀ'. ಈ ಸಮರ್ಥನೆಗೆ ಸಂಗೀತಶಾಸ್ತ್ರದಲ್ಲಿರುವ ವಾಕ್ಯವನ್ನೇ ಕೆಳಗೆ ಕೊಟ್ಟಿದೆ.

> ಮಧ್ಯಮೋಽಸ್ತಂಗತೇ ಸೂರ್ಯೇ ವಿಶಾಖರ್ಕ್ಷೇಽಷ್ಟಮೀತಿಥೌ |
> ಗೌತಮಶ್ಚ ಋಷಿಸ್ತಸ್ಯ ವೈಷ್ಣವೀ ದೇವತಾಸ್ಮೃತಾ ||

ಅಂದರೆ ಲಕ್ಷ್ಮೀಸಮೇತನಾದ ವಿಷ್ಣುವೇ ಪಾಲನೆಗೆ ಒಡೆಯನು. ಮಧ್ಯಮ ಸ್ವರವು ಸಪ್ತಸ್ವರಗಳಲ್ಲಿ ನಾಲ್ಕನೆಯದಾಗಿ ವ್ಯಾಹೃತಿಗಳಲ್ಲಿ "ಓಂಮಹಃ" ಎನ್ನುವುದರ ತತ್ವವಾಗಿ ಪ್ರಾಣಿಗಳ ಎದೆಯ ಸ್ಥಳದಲ್ಲಿ ವಾಯುತತ್ವವಾದ 'ಅನಾಹತಚಕ್ರ'ಎನಿಸುವ ಹೃದಯಕೋಶದಲ್ಲಿರುವುದು. ವಿಷ್ಣುವು ಪ್ರತಿಯೊಂದು

ಪ್ರಾಣಿಯ ಹೃದಯಕೋಶದಲ್ಲಿ ಪಾಲನಾಶಕ್ತಿಯಾಗಿರುತ್ತಾನೆ. 'ಅನಾಹತ ಚಕ್ರ'ವಾದ ಎದೆಯ ಸ್ಥಳವೇ ಓಂಕಾರದಲ್ಲಿನ ಮಧ್ಯಮಾತ್ರೆಯಾದ 'ಉ'ಕಾರಕ್ಕೆ ಸ್ಥಳವಾಗಿದೆ. ಈ ತತ್ವಸಮರ್ಥನೆಗೆ "ವಿಷ್ಣುಗ್ರಂಥಿರ್ಹೃದಿಸ್ಥಿತಃ" ಮತ್ತು "ಉಕಾರೇವಿಷ್ಣುರಾಸ್ಥಿತಃ" ಎಂಬ ಶ್ರುತ್ಯಾಧಾರಗಳೂ ಇರುವುವು. ಸಂಗೀತ ದಲ್ಲಿನ ಮಧ್ಯಮಸ್ವರವು ಓಂಕಾರದ **ಉ**ಕಾರದಷ್ಟು ಪ್ರಶಸ್ತವಾದುದು. ಋಷಭಸ್ವರವು ಓಂಕಾರದ **ಮ**ಕಾರದಷ್ಟು ಪ್ರಶಸ್ತವಾದುದು.

ಪಂಚಮಸ್ವರದ ತತ್ವವೇನೆಂದರೆ – (ಪಚಿ-ವಿಸ್ತಾರೇ) ಎಂಬ ಅರ್ಥದಂತೆ ದೇಹವ್ಯಾಪಾರವು ವಿಸ್ತಾರವಾಗುವುದಕ್ಕೋಸ್ಕರ ಜೀವಚೈತನ್ಯನು ಪ್ರಾಣಮಯ ಕೋಶದ ಶಕ್ತಿಯೊಡನೆ ಕಲೆತು ಕರ್ಮೇಂದ್ರಿಯಗಳನ್ನು ಸ್ಫುರಣೆಮಾಡುವುದೂ, ಅನ್ನಮಯಕೋಶವಾದ ಸ್ಥೂಲದೇಹದೊಡನೆ ಕಲೆತು ವಿಷಯವ್ಯಾಪಾರ ಪ್ರಾರಂಭವಾಗುವುದೂ ಪಂಚಮಸ್ವರದ ತತ್ವದಲ್ಲಿರುವುದು. ಎಲ್ಲಾ ಕೋಶಗಳ ಸಲಕರಣೆಗಳೂ ಸಿದ್ಧವಾಗಿ ವಿಷಯವ್ಯಾಪಾರವು ವಿಸ್ತಾರವಾಗಲು ಪ್ರಾರಂಭದ ತತ್ವವೇ ಪಂಚಮಸ್ವರದ ತತ್ವವಾಗಿರುವುದು. "ಸ್ವರಾಂತರಾಣಂವಿಸ್ತಾರಂ ಯೋಮಿ ಮೀತೇ ಸ ಪಂಚಮಃ" ಸ್ವರಗಳ ವಿಸ್ತಾರವನ್ನು ಅಳತೆಮಾಡಿ ನಿರ್ಣಯಿ ಸುವುದರಿಂದ ಪಂಚಮಸ್ವರವೆಂದು ಹೆಸರು ಬಂದಿರುವುದೆಂದು ಸಂಗೀತಶಾಸ್ತ್ರದಲ್ಲಿ ಹೇಳಿರುವುದು. ಸಂಖ್ಯೆಯಲ್ಲಿಯೂ ಪಂಚಮವು ಐದನೆಯದಾದುದರಿಂದಲೂ ಅನ್ನಮಯಕೋಶವಾದ ಸ್ಥೂಲದೇಹವೂ ಕೋಶಗಳಲ್ಲಿ ಐದನೆಯದಾಗಿ ಇತರ ಕೋಶಗಳ ಕಾರ್ಯಗಳನ್ನು ಅಳತೆಗೊಳವಡಿಸಿ ನಿರ್ಣಯಿಸುವುದು. ಅಂದರೆ ಅಳತೆ ಗೊಳಪಡುವ ವಿಷಯವ್ಯಾಪಾರದ ಕಾರ್ಯಪ್ರಾರಂಭದ ತತ್ವವೇ ಪಂಚಮಸ್ವರದ ತತ್ವವಾಗಿರುವುದು.

ಪಂಚಮಸ್ವರದಲ್ಲಿರುವ ಕ್ಷಿತಿಃ, ರಕ್ತಾ, ಸಂದೀಪಿನೀ ಎಂಬ ಶ್ರುತಿಗಳೂ ಮೇಲಿನ ತತ್ವಗಳನ್ನು ಸಮರ್ಥಿಸುವುವು. 'ಕ್ಷಿತಿಃ' ಎಂದರೆ ಭೂಮಿ. ಭೂತತ್ವವಾದ ಸ್ಥೂಲದೇಹವ್ಯಾಪಾರದ ಸ್ವಭಾವವೇ 'ಕ್ಷಿತಿಃ' ಎಂಬ ಶ್ರುತಿಯ ತತ್ವವಾಗಿದೆ. 'ರಕ್ತಾ' ಎಂಬ ಶ್ರುತಿಯ ತತ್ವವೇನೆಂದರೆ :— ಕೆಂಪು ಅಥವಾ ರಜಸ್ಸ್ವರೂಪವಾದ ವಿಷಯಕ್ರಿಯೆಗಳಲ್ಲಿ ಅನುರಕ್ತವಾಗುವ ಸ್ವಭಾವ. ಅಂದರೆ ಬಾಹ್ಯವ್ಯಾಪಾರದ ಉಲ್ಬಣಸ್ಥಿತಿಯೆಂಬ ತತ್ವಾರ್ಥವಾಗಿರುವುದು. 'ಸಂದೀಪಿನೀ' ಶ್ರುತಿಯ ತತ್ವವೇನೆಂದರೆ :— ಸಂದೀಪಿನಿಯೆಂದರೆ ಚೆನ್ನಾಗಿ ಪ್ರಕಾಶಿಸುವಿಕೆ, ಕಾರ್ಯದಿಂದ ಚೆನ್ನಾಗಿ ಪ್ರಕಾಶಕ್ಕೆ ಬರುವುದೆಂದರ್ಥ. ಆದುದರಿಂದ ಬಹಿರ್ವ್ಯಾಪಾರ ಸ್ವರೂಪವಾದ ಕಾರ್ಯಗಳಿಂದ ವಿಸ್ತಾರವಾಗುವಿಕೆಯೇ ಪಂಚಮಸ್ವರ ಮತ್ತು ಅದರ

ಲ್ಲಿರುವ ಶ್ರುತಿಗಳ ತತ್ವವಾಗಿರುವುದು. ಪಂಚಮಸ್ವರಕ್ಕೆ 'ವಾರಾಹಿಯು' ಅಧಿದೇವತೆಯು. ಈ ಸಮರ್ಥನೆಗೆ ಸಂಗೀತಶಾಸ್ತ್ರದಲ್ಲಿ

ಪಂಚಮೋಽಭೂತ್ಪೂರ್ವರಾತ್ರೌ ದ್ವಾದಶ್ಯಾಂ ಜ್ಯೇಷ್ಠಋಕ್ಷಕೇ |
ವಸಿಷ್ಠಶ್ಚ ಋಷಿಸ್ತಸ್ಯ ವಾರಾಹೀ ದೇವತಾಮತಾ ||

ಪಂಚಮಸ್ವರವು ಸಪ್ತವ್ಯಾಹೃತಿಗಳಲ್ಲಿ 'ಸುವಃ' ಎನ್ನುವುದರ ತತ್ವವಾಗಿ ಅಗ್ನಿ ತತ್ವವಾದ ಮಣಿಪೂರಚಕ್ರದ ಸ್ಥಳದಲ್ಲಿರುವುದು. ವಾರಾಹೀ ಎನ್ನುವ ಪದಕ್ಕೂ 'ವರಂ-ಶ್ರೇಷ್ಠಂಸತ್ವಂ, ಆಹಂತಿ-ನಾಶಯತಿ (ಹನ-ಹಿಂಸಾಯಾಂ) ಇತಿ ವರಾಹಃ | ತತ್ಸಂಬಂಧಿನೀ-ವಾರಾಹೀ" ಶ್ರೇಷ್ಠವಾದ ಸತ್ವಗುಣವನ್ನು ಹಿಂಸಿಸುವುದು. ಅಂದರೆ ಶ್ರೇಷ್ಠವಾದ ಶುದ್ಧಸತ್ವಗುಣದ ಸೋಪಾನವನ್ನು ಮುಚ್ಚಿ ಪ್ರಪಂಚವ್ಯಾಪಾರದಲ್ಲಿ ಮಗ್ನಮಾಡಿಸುವ ಶಕ್ತಿಯಾಗಿರುವುದು. ಇದಕ್ಕೆ ಸರಿಯಾಗಿ ವಾರಾಹೀ ಎನ್ನುವುದಕ್ಕೆ ಮತ್ತೊಂದು ವ್ಯುತ್ಪತ್ತಿಯೂ ಆಗುವುದು. "ವರಂ-ಶ್ರೇಷ್ಠಂಪ್ರಪಂಚಂ, ಹಂತಿ-ಗಚ್ಛತಿ (ಹನ-ಗತೌ,) ಇತಿ ವರಾಹಃ | ತತ್ಸಂಬಂಧಿನೀ-ವಾರಾಹೀ" ಅಂದರೆ ಶ್ರೇಷ್ಠವಾದ ಪ್ರಪಂಚವ್ಯಾಪಾರದಲ್ಲಿ ಗಮನ ಮಾಡಿಸುವ ಶಕ್ತಿ. ಅಲ್ಲದೆ ಸಪ್ತಮಾತೃಕೆಯರಲ್ಲಿ ವಾರಾಹಿಯು ಅಗ್ನಿತತ್ವವಾದ ಮಣಿಪೂರಚಕ್ರದಲ್ಲಿದೆ. ಅಗ್ನಿತತ್ವವೂ 'ಕರ್ಮಬ್ರಹ್ಮಸ್ವರೂಪಿಣೀ' ಎಂಬ ಆಧಾರ ವಾಕ್ಯನಂತೆ ಕರ್ಮವನ್ನು ಸೂಚಿಸುವುದು. ಮುಖ್ಯವಾಗಿ ಸೃಷ್ಟಿಯಾದ ಪ್ರತಿಯೊಂದು ಪ್ರಾಣಿಯಲ್ಲಿಯೂ ಇಂದ್ರಿಯಗಳೂ ಪಂಚಪ್ರಾಣಗಳೂ ವಿಷಯ ಗಳಲ್ಲಿ ವ್ಯಾಪಾರಮಾಡಲು ಪರಮಾತ್ಮನ ಪ್ರತಿಫಲಿತ ಚೈತನ್ಯನಾದ ಜೀವನ ಸಹಾಯದಿಂದ ಸ್ಫುರಣೆಹೊಂದುವ ತತ್ವವೇ 'ವರೇಣಿಯಂ'ಪದ ಮತ್ತು ಪದಕ್ಕನು ಸಾರವಾದ ಅಂತರಗಾಂಧಾರ, ಮಧ್ಯಮ, ಪ್ರತಿಮಧ್ಯಮ ಮತ್ತು ಪಂಚಮ ಸ್ವರಗಳ ಮತ್ತು ಸ್ವರಗಳಲ್ಲಿರುವ ಶ್ರುತಿಗಳ ತತ್ವಗಳಾಗಿರುವುವು. ಸ್ವರಗಳ ವಿವರಣೆಗಳು ವೀಣೆಯಲ್ಲಿ ಆಯಾಯ ಮನೆಗಳ ನಾದಗಳಲ್ಲಿ ಹೇಗೆ ಅಡಗಿವೆಯೋ ಹಾಗೆಯೇ 'ವರೇಣಿಯಂ' ಎಂಬ ಪದದ ತತ್ವದ ವಿವರಣೆಗಳೆಲ್ಲಾ ಜ್ಞಾನರೂಪವಾದ ವೇದಭಂಡಾರದಲ್ಲಡಗಿವೆ.

**ಭರ್ಗಃ||** ಗಾಯತ್ರೀಮಂತ್ರದಲ್ಲಿ 'ವರೇಣಿಯಂ' ಎಂಬ ಪದದ ಮುಂದಿನ ಪದವೇ 'ಭರ್ಗಃ' ಎಂದಿರುವುದು. 'ಭರ್ಗಃ' ಎಂಬೆರಡಕ್ಷರಗಳಲ್ಲಿ ಧೈವತ, ಚತುಶ್ಶ್ರುತಿಧೈವತ, ಶುದ್ಧನಿಷಾದ ಸ್ವರಗಳಿರುವುವು ಪರಮಾತ್ಮನ ಪ್ರತಿಬಿಂಬ ನಾದ ಜೀವಚೈತನ್ಯನೇ ಅಜ್ಞಾನ ಕಾರ್ಯಪ್ರಕಾಶಕ ಮತ್ತು ಅಜ್ಞಾನಕಾರ್ಯ ನಾಶಕ ತೇಜೋರೂಪಿನವನಾಗಿರುವನು. 'ಧೈವತ' ಎಂದರೆ ಧೀಮತ್ ಎಂಬುದ ರಿಂದ ಬುದ್ಧಿವಂತರಿಗೇ ಗೋಚರವಾಗುವುದೆಂಬ ಅರ್ಥವಾಗುವುದು. **'ಗಾನರಹಸ್ಯಪ್ರಕಾಶಿನೀ'** ಮುಂತಾದ ಸಂಗೀತಶಾಸ್ತ್ರಗ್ರಂಥಗಳಲ್ಲಿ 'ಧೀಯುಳ್ಳ

ವನು ಧೀವಾನ್' ಎಂದಾಯಿತು. ಆ 'ಧೀ' ಶಬ್ದಕ್ಕೆ ಸಂಬಂದಾರ್ಥದಲ್ಲಿ **ಅಣ್** ಪ್ರತ್ಯಯವೂ ಆದಿವೃದ್ಧಿಯೂ ಬಂದು **'ಧೈವತ'** ಎಂಬ ರೂಪ ಉಂಟಾಯಿತು. ಇಲ್ಲಿ ಸಂಬಂಧವು "ವೇದ್ಯವೇದಕರೂಪವಾದುದು" ಎಂದು ಹೇಳಿರುವುದೆಂದರೆ ತ್ರಿಪುಟೀರೂಪವಾದ ವ್ಯಾಪಾರಸ್ವರೂಪವೆಂದೇ ಆಗುವುದು. ಅಂದರೆ ಪ್ರಪಂಚ ದಲ್ಲಿರುವ ಸಕಲ ಪ್ರಾಣಿಗಳೂ ಅಜ್ಞಾನದಿಂದ ತ್ರಿಪುಟೀಸ್ವರೂಪವಾದ ಬಹಿರ್ವ್ಯಾ ಪಾರದಲ್ಲಿ ಮಗ್ನರಾಗಿರುವ ಸ್ಥಿತಿಯಾಗಿರುವುದು. ಹೇಗೆಂದರೆ ಸಂಗೀತಶಾಸ್ತ್ರದಲ್ಲಿ

ಧೀರ್ಯಸ್ಯಾಸ್ತಿ ಸಧೀವಾಂ ಸ್ತತ್ಸಂಬಂಧೀ ಧೈವತಸ್ಮೃತಃ ।
ಷಷ್ಠಸ್ಥಾನಸ್ಥಿತೋ ಯಸ್ಮಾತ್ತತೋಽಸೌ ಧೈವತಸ್ಮೃತಃ ॥

ವ್ಯಾಖ್ಯಾನ ॥ ಹಿಂದಿನಸ್ವರ ಮತ್ತು ಶ್ರುತಿಗಳ ಸಾಂಕರ್ಯವುಂಟಾಗಿ ಬುದ್ಧಿ ವಂತರಿಗೇ ಗೋಚರವಾಗುವುದರಿಂದಾಗಲಿ ಸಪ್ತಸ್ವರಗಳಲ್ಲಿ ಆರನೆಯ ಸ್ಥಾನದಲ್ಲಿ ರುವುದರಿಂದಾಗಲೀ ಈ ಸ್ವರಕ್ಕೆ 'ಧೈವತ' ಎಂಬ ಸಂಜ್ಞೆಯುಂಟಾಯಿತೆಂದು ಹೇಳಿದೆ.

ಮೇಲಿನ ಶ್ಲೋಕದಲ್ಲಿ ಧೈವತಸ್ವರಕ್ಕೆ ಹಿಂದಿನ ಸ್ವರ ಶ್ರುತಿಗಳ ಸಾಂಕರ್ಯ ವುಂಟಾಗಿರುವುದೆಂದು ಹೇಳಿದೆ. ಅಂದರೆ ಧೈವತದ ಹಿಂದಿನ ಸ್ವರಗಳಾದ ಪಂಚಮ, ಮಧ್ಯಮ ಸ್ವರ ಮತ್ತು ಶ್ರುತಿಗಳನ್ನು ಅನುಸರಿಸಿ ಅವುಗಳೊಡನೆ ಕಲೆತಿರುವ ಸ್ವಭಾವವಾಗಿ ಧೈವತಸ್ವರವಿರುವುದು. ಈ ಧೈವತಸ್ವರದ ನಿಶ್ಚಯವಾದ ಸ್ವರೂಪವು ಬುದ್ಧಿವಂತರಿಗೇ ಗೊತ್ತಾಗುವ ತತ್ವಾರ್ಥವೇನೆಂದರೆ ಸೃಷ್ಟಿಯಾದ ಸಕಲ ಪ್ರಾಣಿಗಳೂ ವಿಷಯವ್ಯಾಪಾರದಲ್ಲಿ ಮಗ್ನವಾಗಲು ಆನಂದ, ವಿಜ್ಞಾನ, ಮನೋ, ಪ್ರಾಣ, ಅನ್ನಮಯಕೋಶಗಳ ಕಾರ್ಯಗಳು ಸ್ಫುರಣೆಯಾಗ ಬೇಕೆಂಬ ತತ್ವವು 'ವರೇಣಿಯಂ' ಎಂಬ ಪದ ಮತ್ತು ವೀಣೆಯಲ್ಲಿ ಆ ಪದದ ಸ್ಥಾನದಲ್ಲಿರುವ ಸ್ವರಗಳ ತತ್ವಾರ್ಥದಲ್ಲಿ ಬಂದಿರುವುದಷ್ಟೆ! ಎಲ್ಲಾ ಕೋಶಗಳ ಕಾರ್ಯಗಳೂ ಸಾಂಕರ್ಯದಿಂದ ಏಕೀಭವಿಸಿ ಕೊನೆಯದಾದ ಅನ್ನಮಯಕೋಶದ ಕಾರ್ಯವಾದ ವಿಷಯವ್ಯಾಪಾರದಲ್ಲಿ ಕೊನೆಗೊಂಡಿರುವ ತತ್ವವೇ ಧೈವತಸ್ವರವು ಇತರ ಸ್ವರ ಶ್ರುತಿಗಳ ಸಾಂಕರ್ಯವನ್ನು ಹೊಂದಿರುವುದಾಗಿದೆ. ಅಂದರೆ ವಿಷಯ ಗಳೇ ಸತ್ಯವೆಂದು ಭಾವಿಸಿ ಅಜ್ಞಾನಕಾರ್ಯದಲ್ಲಿ ಮಗ್ನವಾಗಿರುವ ಸ್ಥಿತಿಯೆಂಬ ತತ್ವವಾಗಿರುವುದು.

ಬುದ್ಧಿವಂತರಿಗೇ ಸಾಂಕರ್ಯಸ್ವರೂಪವಾದ ಧೈವತಸ್ವರದ ಯಥಾರ್ಥವು ಗೋಚರವಾಗುವ ತತ್ವವೇನೆಂದರೆ- ಧೈವತವು 'ಧೀ' ಧಾತುವಿನಿಂದ ಉಂಟಾಗು ವುದು. 'ಧೀ'ಎಂದರೆ ಬುದ್ಧಿ. ಧೀ ಯುಳ್ಳವನು 'ಧೀವಾ಼' ಎಂದರೆ ಬುದ್ಧಿಯುಳ್ಳ ವನು. ಗುಣವಿದ್ದವನನ್ನು 'ಗುಣವಾ಼' ಎಂದು ಹೇಳುವಂತೆ ಬುದ್ಧಿಯುಳ್ಳವನನ್ನು

ಧೀರ್ವಾ ಎಂದು ಕರೆಯುವರು. ಎಂತಹ ಬುದ್ಧಿಯುಳ್ಳವನಾಗಬೇಕೆಂದರೆ - ಧೈವತಸ್ವರದಲ್ಲಿರುವ ಸಾಂಕರ್ಯವನ್ನರಿತು ಯಥಾರ್ಥವನ್ನರಿಯುವಂತಹ ವಿವೇಚನಾಶಕ್ತಿಯುಳ್ಳವನಾಗಬೇಕು. ಅಂದರೆ ಅನ್ನಮಯಾದಿ ಪಂಚ ಕೋಶಗಳ ಕಾರ್ಯಗಳೂ ಏಕೀಭವಿಸಿ ಬುದ್ಧಿಗೆ ವಿಷಯವೇ ಸತ್ಯವೆಂಬ ಭ್ರಾಂತಿಯುಂಟಾಗಿ ಅದರಲ್ಲಿ ಮಗ್ನವಾಗಿರುವುದನ್ನು ವಿವೇಚನೆಮಾಡಿ ಅನಿತ್ಯವೆಂದು ತಿಳಿದು ಅದರಿಂದ ತಪ್ಪಿಸಿ ಪರಮಾತ್ಮನಕಡೆಗೆ ತಿರುಗಿಸುವುದೇ ಧೈವತಸ್ವರಕ್ಕಿರುವ ಸಾಂಕರ್ಯವನ್ನು ತಿಳಿಯುವ ತತ್ವವಾಗಿರುವುದು. ಪ್ರತಿಯೊಂದು ಪ್ರಾಣಿಯೂ ವಿಷಯದ ಜ್ಞಾನ ಕ್ರಿಯೆಗಳಲ್ಲಿದ್ದರೂ ಪ್ರತಿಯೊಂದು ಪ್ರಾಣಿಯನ್ನೂ 'ಧೀರ್ವಾ' ಎಂದು ಕರೆಯಲಾಗುವುದಿಲ್ಲ. ಯಾರಿಗೆ ನಿತ್ಯಾನಿತ್ಯವಸ್ತುವನ್ನು ವಿವೇಚನೆಮಾಡಿ ನಿತ್ಯವಸ್ತುವನ್ನುಮಾತ್ರ ಹೊಂದುವ ಬುದ್ಧಿಯಿರುವುದೋ ಅಂತಹವರೇ 'ಧೀರ್ವಾ' ಎನಿಸಿಕೊಳ್ಳುವರು. ಇಂತಹ ಬುದ್ಧಿಯು ಮನುಷ್ಯನಿಗೆ ಮಾತ್ರವಿರುವುದು. ಈ ತತ್ವಸಮರ್ಥನೆಗೆ ಸರಿಯಾಗಿ ಶ್ರೀಕೃಷ್ಣಪರಮಾತ್ಮನು

ಆಹಾರ ನಿದ್ರಾ ಭಯ ಮೈಥುನಂಚ ಸಮಾನ ಮೇತತ್ಪಶುಭಿ ರ್ನರಾಣಾಂ|
ಜ್ಞಾನಂ ನರಾಣಾಂ ಅಧಿಕೋ ವಿಶೇಷಃ ಜ್ಞಾನೇನಹೀನಃ ಪಶುಭಿಃ ಸ್ಸಮಾನಃ||

ಎಂದು ಹೇಳಿರುವನು. ಮನುಷ್ಯರಲ್ಲಿಯೂ ಯಾರು ಅನಿತ್ಯವಾದ ವಿಷಯಗಳ ಸಾಂಕರ್ಯದಿಂದ ಬುದ್ಧಿಯನ್ನುತಪ್ಪಿಸಿ ನಿತ್ಯನಾದ ಪರಮಾತ್ಮನನ್ನು ಹೊಂದಲು ಪ್ರಾರಂಭಿಸುವರೋ ಅವರು **ಶುದ್ಧಧೈವತ**ಸ್ವರದ ತತ್ವದಲ್ಲಿರುತ್ತಾರೆ. ಮುಖ್ಯವಾಗಿ ಬೀಜವು ವೃಕ್ಷವಾದಂತೆ ಪರಬ್ರಹ್ಮಶಕ್ತಿಯು ಹೊರಗೆ ಉದಯಿಸಿ, ಗುಣಗಳ ವಿಭಾಗವಾಗಿ ಪ್ರಪಂಚವು ಸೃಷ್ಟಿಸಲ್ಪಟ್ಟು, ವ್ಯಾಪಾರಸ್ಥಿತಿಗೂ ಬಂದು ನಿಂತಿತು. ವೃಕ್ಷರೂಪದಲ್ಲಿರುವ ಪ್ರಪಂಚವು ಬೀಜರೂಪವಾದ ಪರಬ್ರಹ್ಮವಾಗಲು ಎಷ್ಟೋ ಕಲ್ಪಾಂತರಗಳಾಗಬಹುದು. ಆ ಪರ್ಯಂತರ ಪ್ರಾಣಿಗಳಲ್ಲಿ ಮನುಷ್ಯನೊಬ್ಬನು ಮಾತ್ರ ಅಧಿಕಾರಪಡೆದು ಅಜ್ಞಾನಪಾಶದಿಂದ ದಾಟಿ ಪರಬ್ರಹ್ಮಸ್ಥಿತಿಯನ್ನು ಹೊಂದಲೆಂಬ ಕರುಣದಿಂದಲೇ ದಯಾಸಾಗರನಾದ ಈಶ್ವರನು ಮನುಷ್ಯನೊಬ್ಬನಿಗೆ ಮಾತ್ರ ದೇವರ ಕಡೆಗೆ ಜ್ಞಾನವನ್ನು ಕೊಟ್ಟಿರುವನು. ಅಲ್ಲದೆ ಅಜ್ಞಾನವನ್ನು ನಾಶಮಾಡಿ ತಾನು ಪರಮಾತ್ಮಸಾಕ್ಷಾತ್ಕಾರಮಾಡಿಕೊಳ್ಳುವ ದಾರಿಯನ್ನೂ ಮನುಷ್ಯನಲ್ಲಿಟ್ಟಿರುವನು. ಆ ದಾರಿಯ ತತ್ವವನ್ನು ತೋರಿಸುವುದೇ ವೀಣೆಯಲ್ಲಿನ ಮುಂದಿನ 'ಗಾಯತ್ರೀ ಮಂತ್ರ' ಮತ್ತು 'ಸ್ವರಗಳ ತತ್ವ'ಗಳಾಗಿವೆ. **ಧೈವತ**ಸ್ವರವು ಬುದ್ಧಿವಂತರಿಗೇ ಗೋಚರವಾಗುವುದೆಂದು ಮೇಲೆ ತಿಳಿಸಿತಷ್ಟೆ! ವಿಷಯಾದಿಗಳು ಅನಿತ್ಯಗಳೆಂದು ತಿಳಿವಳಿಕೆಗೆ ಬಂದು ಪರಮಾತ್ಮಸಾಕ್ಷಾತ್ಕಾರವನ್ನು ಹೊಂದಬೇಕೆಂಬುದು

ಯಾರಿಗಿರುವುದೋ ಅವರೇ **ಬುದ್ಧಿವಂತ**ರೆಂಬ ತತ್ವವಾಗಿರುವುದಷ್ಟೆ ! ಅಂತಹ ಬುದ್ಧಿವಂತರ ವಿಚಾರವೇ ವಿಸ್ತಾರವಾಗುವ 'ಭರ್ಗಃ' ಪದದಲ್ಲಿನ ಎರಡನೆಯ ಅಕ್ಷರವಾದ 'ಗಃ' ಎಂಬಕ್ಷರದ ಮನೆಯಲ್ಲಿರುವ ಚತುಶ್ರುತಿಧೈವತ ಮತ್ತು ಶುದ್ಧನಿಷಾದ ಸ್ವರಗಳ ತತ್ವಗಳನ್ನು ಪ್ರಾರಂಭಿಸೋಣ.

ಚತುಶ್ಶ್ರುತಿ ಧೈವತದಲ್ಲಿನ ಚತುಶ್ಶ್ರುತಿಗಳ್ಯಾವುವೆಂದರೆ.—'ಆಲಾಪಿನೀ, ಮದಂತೀ, ರೋಹಿಣೀ, ರಮ್ಯಾ'ಗಳೆಂಬ ನಾಲ್ಕೇ. 'ಆಲಾಪಿನೀ' ಎಂದರೆ.- ಏಕ ಸರಣಿಯಿಂದ ಚೆನ್ನಾಗಿ ನುಡಿಯುವಿಕೆ. ಅಂದರೆ ಅಧಿಕಾರಿಯಲ್ಲಿ ಮೋಕ್ಷೇಚ್ಛೆಯು ಬಿಡದಂತೆ ಏಕಸರಣಿಯಲ್ಲಿ ಮೇಲಕ್ಕೆ ಹತ್ತುತ್ತಿರಬೇಕೆಂಬ ತತ್ವವು 'ಮದಂತೀ' ಎಂದರೆ:— ಹರ್ಷದಿಂದ ತುಂಬಿರುವುದು. ಅಂದರೆ ಅನಿಷ್ಟವನ್ನು ತೊಲಗಿಸಲು ದೇವತೆಗಳ ಸಂಬಂಧವಾದ ಕರ್ಮವನ್ನು ಮಾಡಿ ಅವರ ಅನುಗ್ರಹಕ್ಕೂ ಪಾತ್ರರಾಗುವಿಕೆ, ಪರಮಾತ್ಮನಲ್ಲಿ ಅತಿಶಯವಾದ ಭಕ್ತಿಯನ್ನುಮಾಡಿ ಆತ್ಮಸಾಕ್ಷಾತ್ಕಾರವನ್ನುಂಟುಮಾಡೆಂದು ಪ್ರಾರ್ಥಿಸುವಿಕೆ, ಆತ್ಮಸಾಕ್ಷಾತ್ಕಾರದ ಸಾಧನಗಳನ್ನು ಮಾಡಲು ಹರ್ಷೋನ್ಮತ್ತನಾಗುವಿಕೆ, ಮೊದಲಾದ ತತ್ವಗಳನ್ನೆಲ್ಲಾ ಮದಂತೀ' ಪದವು ಒಳಗೊಂಡಿರುವುದು. 'ರೋಹಿಣೀ' ಎಂದರೆ —'ರೋಹಯತಿ ಕಲ್ಯಾಣ ಮಿತಿ=ರೋಹಿಣೀ' ಶುಭಹೇತುವಾದುದು. ಮೋಕ್ಷದ ಗುರಿಯನ್ನಿಟ್ಟುಕೊಂಡು ಅದಕ್ಕನುಸಾರವಾದ ಧರ್ಮಾರ್ಥಕಾಮುಗಳಲ್ಲಿರುವಿಕೆ, ವೇದವಿಹಿತವಾದ ಸತ್ಕರ್ಮಾನುಷ್ಠಾನಗಳನ್ನಾಚರಿಸುವಿಕೆ, ಸದ್ಗುರುಗಳ ಮತ್ತು ಮಹಾತ್ಮರ ಸೇವೆ ಮಾಡುವಿಕೆ, ಸದ್ಗುರುಗಳಲ್ಲಿ ವೇದಾಂತ ವಿಚಾರಮಾಡಿ ಆತ್ಮವಿಚಾರವನ್ನು ಚೆನ್ನಾಗಿ ತಿಳಿದುಕೊಳ್ಳುವಿಕೆ, ನಿರಭಿಮಾನದಿಂದಲೂ ಅಸ್ವಾರ್ಥತೆಯಿಂದಲೂ ಪ್ರಪಂಚವ್ಯಾಪಾರದಲ್ಲಿರುವಿಕೆ, ವಿಷಯಲಂಪಟತ್ವವನ್ನು ತಗ್ಗಿಸಿ ವೈರಾಗ್ಯವನ್ನು ಹೊಂದುವಿಕೆ, ಮುಂತಾದವುಗಳೆಲ್ಲಾ ಜೀವನಿಗೆ ಶುಭಹೇತುವಾದವುಗಳಾಗಿ ರೋಹಿಣೀಶ್ರುತಿಯ ತತ್ವವಾಗಿರುವುದು. 'ರಮ್ಯಾ' ಎಂಬ ಶ್ರುತಿಯ ತಾತ್ಪರ್ಯ ವೇನೆಂದರೆ:- ರಮಣೀಯ ಅಥವಾ ಸುಂದರವಾಗಿರುವಿಕೆಯೆಂದರ್ಥ. ಜೀವನಿಗೆ ಸತ್ಸಂಗದಲ್ಲಿರುವಿಕೆಯೂ, ಹಿತವಾಗಿ ಮಿತವಾಗಿ ಕಾಲಕ್ಕೆ ಸರಿಯಾಗಿ ಸಾತ್ವಿಕಾಹಾರವನ್ನು ತೆಗೆದುಕೊಳ್ಳುವಿಕೆಯೂ, ವೇದಾಂತ ವಿಚಾರ ಮಾಡಿದ್ದನ್ನು ಮನನ ಮಾಡುವಿಕೆಯೂ, ಮನನಮಾಡಿದ್ದರಲ್ಲಿಯೂ ಸಾರವನ್ನು ಕಡೆದು ದೇಹವು ನಾನಲ್ಲವೆಂಬ ಭಾವವನ್ನು ಹೊಂದಿ ಆತ್ಮನೇ ನಾನೆಂಬ ಸಾರವನ್ನು ಅನುಸಂಧಾನ ಮಾಡಿಕೊಳ್ಳುತ್ತಿರುವಿಕೆಯೂ, ಗಾಯತ್ರೀ ಮುಂತಾದ ದೇವತಾಶಕ್ತಿಗಳನ್ನು ಉಪಾಸಿಸಿ ತಪಶ್ಶಕ್ತಿಯ ತೇಜಸ್ಸನ್ನು ಹೊಂದುವಿಕೆಯೂ, ಇವುಗಳೆಲ್ಲಾ ಜೀವನಿಗೆ ರಮ್ಯವಾದ ಭಾವೋದಯಗಳಾಗಿರುತ್ತವೆ. ಈ ತತ್ವಗಳೇ ಧೈವತದ ನಾಲ್ಕು ಶ್ರುತಿಗಳ ತತ್ವಗಳಾಗಿವೆ. ಶ್ರುತಿಗಳು ಸ್ವರಗಳಿಗೆ ಹೇಗೆ

ಅವಯುವಗಳೋ ಹಾಗೆಯೇ ಧೈವತಸ್ವರದ ತತ್ವವಾದ ಮೋಕ್ಷೇಚ್ಛೆಯಲ್ಲಿರುವ ಜೀವನಿಗೆ ಶ್ರುತಿಗಳ ತತ್ವಗಳೂ ಉತ್ತಮವಾದ ಅವಯುವಗಳಾಗಿ ಮುಂದಿನ ಸೋಪಾನವನ್ನು ಹತ್ತಿಸಲು ಅರ್ಹತೆಯನ್ನುಂಟುಮಾಡುವುವು.

'ಭರ್ಗಃ' ಎನ್ನುವುದರ ಎರಡನೆಯ ಅಕ್ಷರದ ಮನೆಯಲ್ಲಿ ಶುದ್ಧನಿಷಾದ ಸ್ವರವಿರುವುದು. ನಿಷಾದಸ್ವರದ ತತ್ವವೇನೆಂದರೆ:— "ನಿಷೀದಂತಿ ಸುರಾ ಅತ್ರೇತಿ=ನಿಷಾದಃ (ಷದಲ್-ವಿಶರಣ ಗತ್ಯ ವಸಾದನೇಷು)" ದೇವತೆಗಳು ಇದರಲ್ಲಿರುವರು. ಅಂದರೆ ಬುದ್ಧಿವಂತನೆನಿಸಿಕೊಳ್ಳುವ ಮುಮುಕ್ಷುವು ತನ್ನಲ್ಲಿರುವ ರಾಕ್ಷಸಸ್ವರೂಪವಾದ ಅಜ್ಞಾನವನ್ನು ನಾಶಮಾಡಲು ದೇವತೆಗಳ ಅಂಶವಾಗಿ ತನ್ನಲ್ಲಿರತಕ್ಕ ಪಂಚಪ್ರಾಣ ಮತ್ತು ಇಂದ್ರಿಯಶಕ್ತಿಗಳ ಸಹಾಯದೊಡಗೂಡು ವಿಕೆಯೇ ನಿಷಾದಸ್ವರದ ತತ್ವವಾಗಿದೆ. ಮನುಷ್ಯನು ಶುದ್ಧಧೈವತದ ತತ್ವವಾದ ನಿತ್ಯಾನಿತ್ಯವಸ್ತುವಿವೇಚನೆಯಿಂದ ನಿತ್ಯವಾದ ಪರಮಾತ್ಮನನ್ನು ಹೊಂದಲು ಇಚ್ಛೆಪಟ್ಟು ಅನಂತರ ಅದನ್ನು ಪುಷ್ಟಿಗೊಳಿಸುವ ಧೈವತದ ಚತುಶ್ರುತಿಗಳ ತತ್ವವನ್ನು ಹೊಂದಿ, ತದನಂತರದಲ್ಲಿ ದೇವತೆಗಳ ಅಂಶವಾದ ಪಂಚಪ್ರಾಣಗಳ ಸಹಾಯದೊಡಗೂಡಬೇಕೆಂಬ ತತ್ವಾರ್ಥವೇ ಶುದ್ಧನಿಷಾದಸ್ವರದ ತತ್ವವಾಗಿದೆ. ಶುದ್ಧನಿಷಾದಸ್ವರವೂ ಚತುಶ್ರುತಿಧೈವತವೂ ಒಂದೇ ಮನೆಯಲ್ಲಿರುವುದಾಗಿದೆ. ಮುಖ್ಯವಾಗಿ ಜೀವಚೈತನ್ಯನೇ ಅಜ್ಞಾನಕಾರ್ಯಪ್ರಕಾಶಕ ಮತ್ತು ತತ್ಕಾರ್ಯನಾಶಕ ವಾಗುವ ತೇಜೋರೂಪಿಯಾದವನೆಂದು 'ಭರ್ಗಃ' ಎಂಬ ಪದದ ಅರ್ಥದಲ್ಲಿ ತಿಳಿಸಿ ದಂತೆ ಧೈವತ ಸ್ವರ ಶ್ರುತಿಗಳ ಮತ್ತು ಶುದ್ಧನಿಷಾದಸ್ವರದ ತತ್ವವೂ ಅನ್ವಯ ವಾಗಿ ಬಂದಿರುವುದು. ಈ ತತ್ವಗಳ ವಿವರಣೆಗಳೆಲ್ಲಾ ಜ್ಞಾನಭಂಡಾರವಾದ ವೇದದಲ್ಲಿದ್ದೇ ಇರುವುವು.

**ದೇವಸ್ಯ||** ಗಾಯತ್ರೀ ಮಂತ್ರದಲ್ಲಿ 'ಭರ್ಗಃ' ಎಂಬ ಪದದ ಅನಂತರ 'ದೇವಸ್ಯ' ಎಂಬ ಪದವಿರುವುದು ದೇವಸ್ಯ ಎಂಬ ಮನೆಯಲ್ಲಿ 'ಷಟ್ಶ್ರುತಿ ಧೈವತ, ಕೈಶಿಕೀನಿಷಾದ, ಕಾಕಲೀನಿಷಾದ, ಮತ್ತು ಷಡ್ಜ ಎಂಬ ಸ್ವರಗಳಿರುವುವು. 'ದೇವಸ್ಯ' ಎಂದರೆ - ಪ್ರಕಾಶಮಾನನಾದ ಅಥವಾ ದೇವತೆಗಳೊಡಗೂಡಿ ಕ್ರೀಡಾದಿ ಗುಣವಿಶಿಷ್ಟನೆಂದರ್ಥವು ಅಂದರೆ ಭರ್ಗಃ ಎನ್ನುವ ಪದದಲ್ಲಿ ಹೇಳಿದ ತತ್ವಗಳಿಗನುಸಾರವಾಗಿ ಜೀವನು ನಡೆದುಕೊಂಡು ಅನಂತರ ಮುಂದಿನ ಸೋಪಾನವಾದ 'ದೇವಸ್ಯ' ಎಂಬ ಪದದ ತತ್ವಕ್ಕೆ ಹತ್ತಬೇಕು. ಅಂದರೆ ದೇವತೆಗಳ ಅಂಶವಾಗಿ ನಮ್ಮಲ್ಲಿರುವ ಪ್ರಾಣಗಳ ಮತ್ತು ಇಂದ್ರಿಯಗಳ ಸಹಾಯವನ್ನು ರಾಕ್ಷಸಸ್ವರೂಪವಾದ ಅಜ್ಞಾನವನ್ನು ನಿಗ್ರಹಿಸುವುದಕ್ಕೋಸ್ಕರ ಹೊಂದಬೇಕೆಂದು ಹಿಂದೆ ತಿಳಿಸಿತಷ್ಟೆ! ಈ ಪಂಚಪ್ರಾಣಗಳ ಸಹಾಯದ ತತ್ವವೇ ಷಟ್ಶ್ರುತಿಧೈವತ ಮತ್ತು ನಿಷಾದ

ಸ್ವರಗಳ ತತ್ವವಾಗಿರುವುದು. ಆಸನ, ಪ್ರಾಣಾಯಾಮಗಳನ್ನು ಮಾಡಿ ದೇಹ ದಲ್ಲಿರುವ ರಜಸ್ತಮೋಗುಣಗಳಿಂದಾದ ಮಲಿನಸ್ವರೂಪವಾದ ಪ್ರತಿಬಂಧಕವನ್ನು ನಿವಾರಿಸಿ ದೇವತ್ವವನ್ನುಂಟುಮಾಡುವುದೇ ಮುಮುಕ್ಷುವಿಗೆ ಪಂಚಪ್ರಾಣಗಳಿಂ ದುಂಟಾಗುವ ಸಹಾಯವಾಗಿರುವುದು. ಆಸನಪ್ರಾಣಾಯಾಮಾಭ್ಯಾಸಕ್ಕೆ ಧೈವತ ದಲ್ಲಿನ ನಾಲ್ಕು ಶ್ರುತಿಗಳ ತತ್ವವನ್ನು 'ಭರ್ಗಃ' ಪದದಲ್ಲಿ ತಿಳಿಸಿತಷ್ಟೆ! ಹಿಂದೆ ತಿಳಿಸಿದ ನಾಲ್ಕು ಶ್ರುತಿಗಳ ಜೊತೆಗೆ 'ಉಗ್ರಾ, ಕ್ಷೋಭಿಣೀ' ಎಂಬೆರಡು ಶ್ರುತಿಗಳ ತತ್ವಗಳನ್ನು ಹೊಂದಿದರೆ 'ಷಟ್ಶ್ರುತಿಧೈವತ' ವಾಗುವುದು. 'ಉಗ್ರಾ' ಶ್ರುತಿಯ ತತ್ವವೇನೆಂದರೆ:—ತಪಸ್ಸಿನಲ್ಲಾಗಲೀ ಕೋಪದಲ್ಲಾಗಲೀ ಅತ್ಯಂತ ಶಬ್ದಾರ್ಥ ವನ್ನೂ ಸಹಾ ಮೀರಿ ಉತ್ಕಟಸ್ಥಿತಿಯನ್ನು ಹೊಂದುವಿಕೆ. ಅಂದರೆ ಮೋಕ್ಷವನ್ನು ಹೊಂದಬೇಕೆಂಬ ಇಚ್ಛೆಯಿಂದ ತಪಿಸುತ್ತಿರುವ ಸ್ಥಿತಿಯನ್ನು ಹೊಂದುವುದು, ದೇವತಾನುಗ್ರಹವಾದ ತಪಶ್ಶಕ್ತಿಯನ್ನು ಹೊಂದಲು ಉಗ್ರವಾದ ತಪಸ್ಸನ್ನಾಚರಿ ಸುವುದು, ಅಜ್ಞಾನಸ್ವರೂಪರಾದ ರಾಕ್ಷಸರನ್ನು ನಿಗ್ರಹಿಸಲು ಸಹಕಾರಿಯಾದ ಆಸನ ಪ್ರಾಣಾಯಾಮಾದಿಗಳನ್ನು ಮಾಡಿಯೇ ಮಾಡುತ್ತೇನೆಂಬ ಧೀರತೆಯಿಂ ದೊಡಗೂಡಿದ ಸ್ಥಿರಮನಸ್ಸೂ, ದೇಹ ನಾನಲ್ಲವೆಂಬ ದೃಢಭಾವನೆ ಮತ್ತು ಆತ್ಮನೇ ನಾನೆಂಬ ಚಿಂತನೆಯ ಉತ್ಕಟಸ್ಥಿತಿಯ ತತ್ವಗಳೆಲ್ಲಾ ಉಗ್ರದ ತತ್ವದಲ್ಲಿವೆ. 'ಕ್ಷೋಭಿಣೀ' ಶ್ರುತಿಯ ತತ್ವವೇನೆಂದರೆ:— ಅಲ್ಲೋಲಕಲ್ಲೋಲ ಮಾಡಿ ರೂಪವನ್ನೇ ಬದಲಾಯಿಸುವುದು. 'ಕ್ಷುಭ' ಅಲ್ಲೋಲಕಲ್ಲೋಲಮಾಡು ಎಂಬ ಧಾತುವಿನಿಂದ ಬಂದಿರುವುದು. ದೇಹದ ಅಂಗ ಮತ್ತು ನಾಡಿಗಳಲ್ಲಿರುವ ಅಶುಚಿಸ್ವರೂಪಗಳನ್ನೆಲ್ಲಾ ಅಲ್ಲೋಲಕಲ್ಲೋಲಮಾಡಿ ತೊಲಗಿಸಿ ನೂತನ ಪ್ರಭೆಯನ್ನು ಕೊಡುವ ಆಸನಾಭ್ಯಾಸ, ರೇಚಕ ಪೂರಕ ಕುಂಭಕ ಪ್ರಾಣಾ ಯಾಮಗಳ ಅನುಷ್ಠಾನವೇ 'ಕ್ಷೋಭಿಣಿ' ಶ್ರುತಿಯತತ್ವವಾಗಿರುವುದು. ಕೈಶಕೀ ನಿಷಾದ ಮತ್ತು ಷಟ್ಶ್ರುತಿ ಧೈವತ ಸ್ವರಗಳೆರಡೂ ಒಂದೇ ಮನೆಯಲ್ಲಿರು ವುದರಿಂದ ಇವೆರಡು ಸ್ವರಗಳಿಗೂ ಉಗ್ರಾ ಮತ್ತು ಕ್ಷೋಭಿಣೀಶ್ರುತಿಗಳು ಸಂಬಂಧಪಟ್ಟಿರುವುವು. ನಿಷಾದಕ್ಕೆ 'ಕೈಶಿಕೀ' ಎಂಬ ವಿಶೇಷಣ ಬಂದು ಕೈಶಿಕೀ ನಿಷಾದವಾಗಿರುವುದು. 'ಕೈಶಿಕೀ' ಎಂದರೆ "ಕೇಶಕತೀತಿ=ಕೇಶಿಕಃ ಕೇಶಿಕಏವ ಕೈಶಿಕಃ" ಶಿರಸ್ಸಿನಲ್ಲಿ ವ್ಯಾಪಿಸಿ ನಿಲ್ಲುವುದು. ಇದರ ತತ್ವವೇನೆಂದರೆ:— ದೇವತೆಗಳ ಅಂಶವಾದ ನಮ್ಮಲ್ಲಿರುವ ಪ್ರಾಣವಾಯುವುಗಳು ಪ್ರಾಣಾಯಾಮ ಕಾಲದಲ್ಲಿ ಶಿರಸ್ಸಿನಲ್ಲಿ ಕುಂಭಕರೂಪದಲ್ಲಿ ವ್ಯಾಪಿಸಿ ನಿಲ್ಲುವ ಸ್ಥಿತಿಯೇ ಕೈಶಕೀ ನಿಷಾದಸ್ವರದ ತತ್ವವಾಗಿರುವುದು. ಮುಖ್ಯವಾಗಿ ಉಗ್ರಾ, ಕ್ಷೋಭಿಣೀ ಶ್ರುತಿಗಳ ತತ್ವಗಳ ಸ್ವಭಾವದಂತೆಯೇ ಕೈಶಕೀನಿಷಾದಸ್ವರದ ತತ್ವವೂ ಆಗಿ ಪ್ರಾಣಾಯಾಮದ ಸಾರವನ್ನೊಳಗೊಂಡಿರುವುದು.

ದೇವಸ್ಯ ಎಂಬ ಪದದ ಪ್ರಥಮಾಕ್ಷರದ ಮನೆಯಲ್ಲಿರುವ ಷಟ್ಶ್ರುತಿಧೈವತ ಮತ್ತು ಕೈಶಿಕೀ ನಿಷಾದ ಸ್ವರಗಳ ತತ್ವಗಳನ್ನು ತಿಳಿಸಿದ್ದಾಯಿತು. 'ದೇವಸ್ಯ' ಪದದ ಎರಡನೆಯ ಅಕ್ಷರದ ಮನೆಯಲ್ಲಿರುವ ಕಾಕಲೀನಿಷಾದಸ್ವರದ ತತ್ವವೇನೆಂದರೆ :- 'ಕಾಕಲೀ'ಎಂದರೆ "ಕಃ-ಸೂಕ್ಷ್ಮಃ, ಸಚಾಸೌಕಲಿಶ್ಚ-ಕಾಕಲೀ" ಸೂಕ್ಷ್ಮವಾದ ಕಲಧ್ವನಿಯುಳ್ಳದ್ದು ಕಾಕಲೀ. ಕಲಧ್ವನಿಯೆಂದರೆ - "ಮಧುರೇ ಶ್ರುತಿಸುಖೇ ಅಸ್ಫುಟೇ ಅವ್ಯಕ್ತಾಕ್ಷರೇ ಧ್ವನೌ ಕಲಃ" ಮಧುರವಾಗಿಯೂ ಶ್ರೋತ್ರಕ್ಕೆ ಸುಖವಾಗಿಯೂ ಅಸ್ಫುಟವಾಗಿಯೂ ಅವ್ಯಕ್ತವಾದ ವರ್ಣಗಳುಳ್ಳದ್ದಾಗಿಯೂ ಇರುವ ಧ್ವನಿಗೆ 'ಕಲಧ್ವನಿ'ಯೆಂದು ಹೆಸರು. ಇಂತಹ ಕಲಧ್ವನಿಯು ಸೂಕ್ಷ್ಮಸ್ಥಿತಿಯನ್ನು ಹೊಂದುವುದಕ್ಕೆ 'ಕಾಕಲೀ' ಎಂದು ಹೆಸರು. ಅಂದರೆ ನಾದ, ಬಿಂದು, ಕಳೆಗಳಲ್ಲಿ ಕಳೆಯು ಬಹು ಸೂಕ್ಷ್ಮವಾದುದು (ಕಂ-ಸುಖಂ,ಲಾತೀತಿ-ಕಲಃ) ಸುಖವನ್ನೀಯುವುದೆಂದರೆ ಆನಂದವನ್ನೀಯುವುದು, ಸೌಂದರ್ಯವನ್ನುಂಟು ಮಾಡುವುದು ಮತ್ತು ಶಕ್ತಿಸ್ವರೂಪವಾದುದು. ಶುದ್ಧ ಸತ್ವಗುಣಸ್ವರೂಪವೂ ಕಳಾಸ್ವರೂಪವೂ ಒಂದೇ. 'ಕಾಕಲೀನಿಷಾದ' ಸ್ವರದ ಮುಖ್ಯತಾತ್ಪರ್ಯವೇನೆಂದರೆ- ಮುಮುಕ್ಷುವು ದೇವತೆಗಳ ಅಂಶವಾದ ಇಂದ್ರಿಯಶಕ್ತಿ ಮತ್ತು ಪ್ರಾಣವಾಯುವಿನ ಕಾರ್ಯವಾದ ಪ್ರಾಣಾಯಾಮದ ಸಹಾಯದಿಂದ ಶುದ್ಧಸತ್ವಗುಣದ ಪ್ರಭಾವದ ಸೋಪಾನವನ್ನೆಂದರೆ ದೈವೀಸಂಪತ್ತಿನ ಸೋಪಾನವನ್ನು ಹೊಂದುವುದೇ 'ಕಾಕಲೀನಿಷಾದದ' ತತ್ವವಾಗಿರುವುದು. ಧೈವತ ಮತ್ತು ನಿಷಾದಸ್ವರ, ಅವುಗಳ ಶ್ರುತಿಗಳ ತತ್ವಪ್ರತಿಪಾದಕವಾದ ನಡೆವಳಿಕೆಗಳಿಂದಲೇ ಕಳಾಸ್ವರೂಪವೆಂದರೆ ಶುದ್ಧ ಸತ್ವಗುಣದ ಸೋಪಾನವನ್ನು ಹೊಂದುವುದಕ್ಕಾಗುವುದಿಲ್ಲ. ಮುಮುಕ್ಷುವು ಧ್ಯಾನಾಭ್ಯಾಸದಿಂದ ಬಿಂದುನಾದಗಳ ಸೋಪಾನವನ್ನು ದಾಟಿ ಅನಂತರ ಕಳಾಸ್ಥಿತಿಯನ್ನು ಹೊಂದಬೇಕಾಗಿದೆ. 'ಕಾಕಲೀ' ನಿಷಾದದ ತತ್ವದ ಸೋಪಾನವು ಶುದ್ಧಸತ್ವಗುಣದ ಕಿಂಚಿತ್ಪ್ರಭೆಯನ್ನು ಹೊಂದಿಸುವುದು. ಅಂದರೆ ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಹೇಳಿರುವ ದೈವೀ ಸಂಪತ್ತಿನ ಸ್ಥಿತಿಯನ್ನು ಹೊಂದಿರುವ ಸೋಪಾನವಾಗಿದೆ. ಈ ತತ್ವಕ್ಕನುಸಾರವಾಗಿಯೇ ಕಿಂಚಿತ್ತಾದ ಕಲಧ್ವನಿಯುಳ್ಳದ್ದು ಕಾಕಲೀ ಎನಿಸಿಕೊಳ್ಳುವುದು.

ಧೈವತ ಮತ್ತು ನಿಷಾದಸ್ವರಗಳ ತತ್ವಗಳು 'ಭರ್ಗಃ' ಪದದಿಂದ ಪ್ರಾರಂಭವಾಗಿ ಇಲ್ಲಿಗೆ ಪೂರ್ಣವಾದುವು ಧೈವತಸ್ವರವು ಸಪ್ತಸ್ವರಗಳಲ್ಲಿ ೬ ನೆಯ ಸ್ವರವಾಗಿ ನಮ್ಮ ದೇಹದಲ್ಲಿ 'ಭುವಃ' ತತ್ವವಾಗಿರುವ ಸ್ವಾಧಿಷ್ಠಾನ ಚಕ್ರದಲ್ಲಿರುವುದು. ಸಪ್ತಮಾತೃಕೆಯರಲ್ಲಿ 'ಇಂದ್ರಾಣಿ'ಯು ಅಧಿದೇವತೆಯು. ಇದಕ್ಕೆ ಸಂಗೀತಶಾಸ್ತ್ರದ ಆಧಾರವೂ ಇರುವುದು.

ಚತುರ್ಥ್ಯಾ ಮರ್ಧರಾತ್ರೇಽಭೂ ಧೈವತಸ್ತು ಮುಖರ್ಕ್ಷಕೇ ।
ವಾತ್ಸ್ಯಾಯನೋ ಋಷಿಸ್ತಸ್ಯ ಮಾಹೇಂದ್ರೀ ದೇವತಾಸ್ಮೃತಾ ॥

'ಇಂದ್ರಾಣೀ' ಎಂಬ ಪದಕ್ಕೆ (ಇದಿ-ಪರಮೈಶ್ವರ್ಯೇ) ಎಂಬ ವ್ಯುತ್ಪತ್ತಿಯಂತೆ ಪರಮೈಶ್ವರ್ಯಶಾಲಿನಿಯೆಂದರ್ಥವು. ಪ್ರಪಂಚದಲ್ಲಿಯೂ ದೇವತಾಯೋಗ್ಯವಾದ ಭೋಗ್ಯಪದಾರ್ಥಗಳನ್ನೂ, ಮೋಕ್ಷಮಾರ್ಗಕ್ಕೆ ಸಹಕಾರಿಯಾದ ಸಕಲ ಸಂಪತ್ತನ್ನೂ ಕೊಡತಕ್ಕವಳು ಎಂದು ತಾತ್ಪರ್ಯ. ಇಂತಹ ತತ್ವಶಕ್ತಿಯಾಗಿರುವುದರಿಂದಲೇ ದೈವೀಸಂಪತ್ಸ್ವರೂಪವಾದ ನಡೆವಳಿಕೆಗಳು ಮತ್ತು ದೇವತೆಗಳ ಅಂಶವಾದ ಪಂಚಪ್ರಾಣಗಳ ಸಹಾಯದ ಕಾರ್ಯಗಳಾದ ಪ್ರಾಣಾಯಾಮದ ವಿಚಾರವೂ ನಿಷಾದ ಮತ್ತು ಧೈವತ ಸ್ವರಗಳ ತತ್ವದಲ್ಲಿ ಬಂದಿರುವುವು. ಸಪ್ತಸ್ವರಗಳನ್ನು ಕ್ರಮವಾಗಿ ನಮ್ಮಲ್ಲಿರುವ ಸಹಸ್ರಾರ, ಆಜ್ಞಾ, ವಿಶುದ್ಧ ಮುಂತಾದ ಏಳು ಚಕ್ರಸ್ಥಳಗಳಿಗೂ ಅನ್ವಯಿಸಿರುವುದಷ್ಟೆ! ಸಪ್ತಸ್ವರಗಳಲ್ಲಿ ಕೊನೆಯದಾದ ನಿಷಾದಸ್ವರಕ್ಕೆ ಸ್ಥಳವು 'ಭೂ' ತತ್ವವಾದ ಮೂಲಾಧಾರಚಕ್ರವು. ಸಪ್ತಮಾತೃಕೆಯರಲ್ಲಿ ಶ್ರೀಚಾಮುಂಡೇಶ್ವರಿಯು ನಿಷಾದಕ್ಕೆ ಅಧಿದೇವತೆಯು ಈ ತಾತ್ಪರ್ಯಕ್ಕೆ ಸಂಗೀತ ಶಾಸ್ತ್ರದ ವಾಕ್ಯವನ್ನು ಕೊಟ್ಟಿರುವುದು.

ಅರುಣೋದಯಕಾಲೇತು ಚಿತ್ರರ್ಕ್ಷೇ ದಶಮೀತಿಥೌ ।
ನಿಷಾದೋಽಭೂದ್ವೃಷಿಃ ಕುತ್ಸೋ ಚಾಮುಂಡಾದೇವತಾಸ್ಯತು ॥

ನಿಷಾದಸ್ವರದ ತತ್ವಕ್ಕೆ "ನಿಷೀದಂತಿಸುರಾಅತ್ರೇತಿ=ನಿಷಾದಃ" ಎಂದರೆ ದೇವತೆಗಳು ಇದರಲ್ಲಿರುವರು ಎಂಬ ಅರ್ಥವನ್ನು ಹಿಂದೆ ಬರೆದಿರುವುದಷ್ಟೆ! ಅಂದರೆ ಶ್ರೀಚಾಮುಂಡೇಶ್ವರಿಯು ದೇವತೆಗಳಿಗೆಲ್ಲಾ ಅಧಿದೇವತೆಯಾಗಿರುವಳು. ನಿಷಾದಸ್ವರಕ್ಕೆ "ನಿಷೀದಂತಿಸ್ವರಾಸ್ಸರ್ವೇ ನಿಷಾದಸ್ತೇನಕಥ್ಯತೇ" ಸಪ್ತಸ್ವರಗಳಲ್ಲಿ ನಿಷಾದವು ಕಡೆಯ ಸ್ವರವಾದುದರಿಂದ ಇದರಲ್ಲಿ ಸ್ವರಗಳೆಲ್ಲಾ ಪರ್ಯವಸಾನವನ್ನು ಅಥವಾ ಪೂರ್ಣತೆಯನ್ನು ಹೊಂದುವುದರಿಂದ ಈ ಸ್ವರಕ್ಕೆ ನಿಷಾದವೆಂಬ ಸಂಜ್ಞೆಯುಂಟಾಯಿತೆಂದು ಸಂಗೀತಶಾಸ್ತ್ರದಲ್ಲಿ ಹೇಳಿರುವುದು. ಇದರ ತತ್ವವೇನೆಂದರೆ:— ಬೀಜವು ವೃಕ್ಷರೂಪಕ್ಕೆ ಬಂದುನಿಂತಾಗ ಬೀಜದಿಂದ ಉದಯಿಸಿದ ಪ್ರಸರಣಾದಿ ಕಾರ್ಯಗಳು ವೃಕ್ಷರೂಪದಲ್ಲಿ ಪೂರ್ಣತೆಯನ್ನು ಪಡೆಯುವುವು. ಅನಂತರ ವೃಕ್ಷದರೂಪವೆಲ್ಲಾ ಪುನಃ ಬೀಜರೂಪಕ್ಕೆ ಹಿಂದಿರುಗಬೇಕು. ಇದರಂತೆ ಗೋಚರವಾಗದೆ ಅಡಗಿದ್ದ ಅವ್ಯಕ್ತಶಕ್ತಿಯಿಂದ ಹೊರಟ ಪ್ರಪಂಚದ ಮೊಳಕೆಯು ಪ್ರಪಂಚರೂಪವಾದ ಪೂರ್ಣಸ್ಥಿತಿಯನ್ನು ಹೊಂದಿದಾಗ ಸಕಲವೂ ಪ್ರಪಂಚರೂಪದಲ್ಲಿ ನೇರಿರುವುದು.

ಅಂದರೆ ಈಶ್ವರಸ್ಥಿತಿಯಲ್ಲಿ ಅವ್ಯಕ್ತವಾಗಿದ್ದ ಸೃಷ್ಟಿಯು ಪೂರ್ಣಸ್ಥಿತಿಗೆ ಬಂದುನಿಂತಾಗ ವಿರಾಟ್ ಸ್ವರೂಪವೆನಿಸಿ ಸಕಲವೂ ವಿರಾಟ್‌ಸ್ವರೂಪಕ್ಕೆ ಬಂದು ಸೇರುವುದೆಂಬ ತತ್ವವೇ ನಿಷಾದಕ್ಕೆ ಎಲ್ಲಾ ಸ್ವರಗಳೂ ಬಂದು ನಿಲ್ಲುವ ತತ್ವವಾಗಿರುವುದು. ಆದುದರಿಂದ ಅವ್ಯಕ್ತಶಕ್ತಿಯಾದ ಈಶ್ವರೀಶಕ್ತಿಯ ವಿರಾಟ್‌ಸ್ವರೂಪವೇ ಶ್ರೀಚಾಮುಂಡೇಶ್ವರಿಯು. ನಮ್ಮಲ್ಲಿಯೂ ವಿರಾಟ್ (ವಿಶ್ವ) ಶಕ್ತಿಗೆ ಪ್ರಧಾನಸ್ಥಳವು ಮೂಲಾಧಾರಚಕ್ರವೆಂದು ಶ್ರುತ್ಯಾಧಾರವಿದೆ. ಪರಾಶಕ್ತಿಯ ವಿರಾಟ್‌ಸ್ವರೂಪವಾದ ಶ್ರೀಚಾಮುಂಡೇಶ್ವರಿಯೇ ನಮ್ಮಲ್ಲಿ ಮೂಲಾಧಾರಚಕ್ರದಲ್ಲಿರುವ ಕುಂಡಲಿನೀಶಕ್ತಿಯು. ನಮ್ಮಲ್ಲಿ ರಾಕ್ಷಸರ ತತ್ವವಾದ ಅಜ್ಞಾನಶಕ್ತಿಗಳಿರುವ ಸ್ಥಳವೂ ಮೂಲಾಧಾರಚಕ್ರಪ್ರದೇಶವೇ. ಈ ತತ್ವಕ್ಕೆ ಅನುಸಾರವಾಗಿ ನಿಷಾದವೆನ್ನುವುದಕ್ಕೆ "ನಿಷೀದತಿ ಪಾಪ ಮಸ್ಮಿನ್ನಿತಿ=ನಿಷಾದಃ ( ಷದಲ್ = ವಿಶರಣಗತ್ಯವಸಾದನೇಷು ) " ಇವನಲ್ಲಿ ಪಾಪವಿರುವುದೆಂದರ್ಥವೆಂದು ಅಮರದಲ್ಲಿದೆ. ಪಾಪಪುರುಷರೆಂದರೆ ನಮ್ಮಲ್ಲಿ ರುವ ರಾಕ್ಷಸಸ್ವರೂಪವಾದ ಅಜ್ಞಾನಶಕ್ತಿಗಳು. ಮೂಲಾಧಾರದಲ್ಲಿರುವ ಈ ಅಜ್ಞಾನಶಕ್ತಿಗಳನ್ನು ಧ್ವಂಸಮಾಡುವ ಶಕ್ತಿಯೇ ಶ್ರೀಚಾಮುಂಡೇಶ್ವರಿಯು. ಈ ತತ್ವಕ್ಕೆ ಸರಿಯಾಗಿ ಮಹಿಷಾಸುರನೆಂದರೆ ತಮೋಗುಣ, ಚಂಡವೆಂದರೆ ಕೋಪದ ತತ್ವವಾದ ರಜೋಗುಣ. ಇಂತಹ ರಾಕ್ಷಸರನ್ನು ನಿಗ್ರಹಿಸಿ ದೇವತೆ ಗಳನ್ನು ಕಾಪಾಡಿ ಲೋಕೋದ್ಧಾರಮಾಡಿರುವಳು. ದೇವತೆಗಳಿಗೆ ಹಿತವನ್ನುಂಟು ಮಾಡುವುದರಿಂದಲೇ ದೇವತೆಗಳಿರುವ ನಿಷಾದಸ್ವರಕ್ಕೆ ಅಧಿದೇವತೆಯೇ ಇವಳಾಗಿರುವಳು.

'ದೇವಸ್ಯ' ಎಂಬ ಪದದ ಅಂತ್ಯಾಕ್ಷರದ ಮನೆಯಲ್ಲಿ ಷಡ್ಜಸ್ವರವಿರುವುದು. ಇದರ ತತ್ವವೇನೆಂದರೆ:— ವೀಣೆಯ ೨೪ ನೆಯ ಮನೆಯಲ್ಲಿ ಷಡ್ಜಸ್ವರವನ್ನು ತೋರಿಸಿ ಪರಬ್ರಹ್ಮ ಒಂದೇ ಇರುವ ಸ್ಥಿತಿಯ ತತ್ವದ್ದೆಂದು ಹಿಂದೆ ತಿಳಿಸಿತು. ಬೀಜವು ವೃಕ್ಷವಾಗುವಂತೆ ಪರಬ್ರಹ್ಮವೊಂದೇ ಇದ್ದ ಸ್ಥಿತಿಯಿಂದ ಪ್ರಪಂಚ ಸ್ವರೂಪವಾದ ಮೊಳಕೆಯು ಉದಯಿಸಿ ಪೂರ್ಣತೆಯನ್ನು ಹೊಂದುವುದರ ವಿಚಾರಗಳೇ ಗಾಯತ್ರೀಮಂತ್ರದ 'ಸವಿತುಃ' ಪದದಿಂದ 'ದೇವಸ್ಯ' ಪದದ ಅಂತ್ಯದವರೆಗಿರುವ ಮಂತ್ರ ಮತ್ತು ಸ್ವರ ಶ್ರುತಿಗಳ ತತ್ವಾರ್ಥವಾಗಿ ರುವುದೆಂದು ಇದುವರೆಗೂ ವಿವರಿಸಿಕೊಂಡು ಬಂದಿರುವುದಷ್ಟೆ! ಪ್ರಪಂಚವು ಪೂರ್ಣತೆಯನ್ನೊಂದರೆ ವಿರಾಟ್ ಸ್ವರೂಪಕ್ಕೆ ಬಂದುನಿಂತಾಗ ಪರಬ್ರಹ್ಮವೇ ವಿರಾಟ್ ಸ್ಥಿತಿಯಲ್ಲಿರುವುದೆಂಬುದನ್ನು ಪ್ರತಿಪಾದಿಸುವ ತತ್ವವೇ ಷಡ್ಜಸ್ವರವು 'ದೇವಸ್ಯ' ಪದದ ಅಂತ್ಯದಲ್ಲಿರುವ ತತ್ವವಾಗಿದೆ. ಅಂದರೆ ಪರಬ್ರಹ್ಮನು ಆದ್ಯಂತರಹಿತನೆಂದೂ, ಸರ್ವವ್ಯಾಪಿಯೆಂದೂ, ಸೂಚಿಸುವುದಲ್ಲದೆ "ಏಕಮೇವಾ

ದ್ವಿತೀಯಂಬ್ರಹ್ಮ, ಸರ್ವಂಖಲ್ವಿದಂಬ್ರಹ್ಮ" ಎಂಬ ಶ್ರುತಿವಾಕ್ಯಗಳ ತತ್ವವನ್ನು ಪ್ರತಿಪಾದಿಸುವುದು. ಪರಬ್ರಹ್ಮವೂ, ಪರಾಶಕ್ತಿಯೂ ಅಭಿನ್ನವೆಂದು ಪ್ರಥಮದಲ್ಲಿ ತಿಳಿಸಿತಷ್ಟೆ! ಪರಾಶಕ್ತಿತ್ವೇನ ತೆಗೆದುಕೊಂಡರೂ ಪರಾಶಕ್ತಿಯೇ ಜಗದ್ರೂಪವಾಗಿ ಶ್ರೀಚಾಮುಂಡೇಶ್ವರಿಯು ವಿರಾಟ್‌ಶಕ್ತಿಸ್ವರೂಪಳಾಗಿ ರುವಳಷ್ಟೆ! ಈ ವಿರಾಟ್‌ಶಕ್ತಿಯೇ ಪರಾಶಕ್ತಿಯೆಂಬ ತತ್ವಪ್ರತಿಪಾದನೆಗೋಸ್ಕರ ಷಡ್ಜಸ್ವರವು ನಿಷಾದಸ್ವರದ ಪಕ್ಕದಲ್ಲಿರುವುದು. ವೃಕ್ಷವು ಬೀಜರೂಪಕ್ಕೆ ಬರು ವಂತೆ ಶ್ರೀಚಾಮುಂಡೇಶ್ವರಿಯೂ ವಿರಾಟ್‌ರೂಪವನ್ನು ಉಪಸಂಹಾರಮಾಡಿ ಕೊಂಡು ಪರಾಶಕ್ತಿಯೆನಿಸಿಕೊಳ್ಳುವಳು. ಮಂತ್ರಗಳಲ್ಲಿ ಆರೋಹಣ ಅವ ರೋಹಣ ಕ್ರಮವಿರುವುದಷ್ಟೆ! ಪರಮಾತ್ಮನಿಂದ ಸೃಷ್ಟಿಪ್ರಾರಂಭವಾಗಿ ವಿರಾಟ್ ಸ್ವರೂಪದ ಪೂರ್ಣವಾಗುವವರೆಗೆ ಪರಮಾತ್ಮನಿಂದ ಇಳಿದುಬಂದಂತಾಗುವುದ ರಿಂದ ಅವರೋಹಣವೆನಿಸುವುದು. ವಿರಾಟ್‌ಸ್ವರೂಪವನ್ನು ಉಪಸಂಹಾರಮಾಡಿ ಪುನಃ ಪರಮಾತ್ಮಒಂದೇ ಉಳಿಯುವ ಸ್ಥಿತಿಯುಂಟಾಗುವವರೆಗೆ ಮೇಲಕ್ಕೆ ಹತ್ತುವಂತಾಗುವುದರಿಂದ ಆರೋಹಣವೆನಿಸುವುದು. ಈ ತತ್ವಾರ್ಥವನ್ನನು ಸರಿಸಿಯೇ ಚಿತ್ರದಲ್ಲಿ ವೀಣೆಯ ಅರ್ಧಭಾಗಕ್ಕೆ ಸರಿಯಾಗಿ ಅವರೋಹಣ ಆರೋಹಣಗಳನ್ನು ಗುರುತುಮಾಡಿ ತೋರಿಸಿದೆ. ಇದುವರೆಗೂ ಅನ್ವಯಿಸಿರುವ ತತ್ವದಂತೆ ಮುಮುಕ್ಷುವು ಮೋಕ್ಷಮಾರ್ಗಕ್ಕೆ ಬೇಕಾದ ನಿತ್ಯಾನಿತ್ಯವಸ್ತುವಿವೇಚನೆ ಮುಂತಾದ ದೈವೀಸಂಪತ್ತಿನ ಸಲಕರಣೆಗಳೊಡಗೂಡಿದರೂ ವಿರಾಟ್‌ತತ್ವಕ್ಕೆ ಸೇರಿದ ಬಾಹ್ಯವ್ಯಾಪಾರದಲ್ಲಿರುವನೇ ಹೊರತು ಈ ಬಾಹ್ಯವ್ಯಾಪಾರವನ್ನು ಉಪ ಸಂಹಾರಮಾಡಿಕೊಳ್ಳುವ ಕಾರ್ಯಕ್ಕೆ ಪ್ರಾರಂಭಿಸಲೇಇಲ್ಲ. ಪ್ರಾಣಾಯಾಮದ ಕಾರ್ಯವೂ ಬಾಹ್ಯಕ್ಕೇ ಸೇರಿದುದು. ಬಾಹ್ಯವ್ಯಾಪಾರದ ಶಕ್ತಿಗಳನ್ನು ಉಪ ಸಂಹರಿಸಲು ಅಂತರ್ಮುಖದ ಮಾರ್ಗಕ್ಕೆ ಪ್ರವೇಶಿಸಬೇಕೆಂದರೆ ಧ್ಯಾನಾಭ್ಯಾಸ ಮಾಡಬೇಕು. ಆದುದರಿಂದ ಧ್ಯಾನಾಭ್ಯಾಸದವರೆಗೂ ಆರೋಹಣಕ್ರಮವು ಪ್ರಾರಂಭವಾಗುವುದಿಲ್ಲ. ಧ್ಯಾನದಿಂದಲೇ ಉಪಸಂಹಾರವೆನಿಸುವ ಆರೋಹಣ ಕ್ರಮವು ಪ್ರಾರಂಭವಾಗುವುದು. ಈ ತತ್ವಕ್ಕನುಸಾರವಾಗಿಯೇ ಗಾಯತ್ರೀ ಮಂತ್ರದಲ್ಲಿ ದೇವಸ್ಯ ಪದದ ಮುಂದಿನ ಪದವೇ ಧೀಮಹೀ ಎಂಬ ಪದವಿದೆ. ದೇವಸ್ಯ ಪದದಲ್ಲಿರುವ ತತ್ವಗಳ ವಿವರಣೆಗಳೆಲ್ಲಾ ವೇದದಲ್ಲಿದ್ದೇಇರುವುವು.

**ಧೀಮಹಿ** || 'ಧೀಮಹಿ'ಎಂದರೆ ಧ್ಯಾನಮಾಡುತ್ತೇವೆಂದರ್ಥ. ದೇವಸ್ಯ ಎಂಬ ಪದದಲ್ಲಿ ಪ್ರಾಣಾಯಾಮದ ತತ್ವವು ಬಂದಿತು. ಮುಂದಿನ ಕಾರ್ಯವಾದ ಧ್ಯಾನದ ತತ್ವವು ಪ್ರಾರಂಭವಾಗುವುದು. ಧ್ಯಾನಮಾಡುವಾಗ ನಮ್ಮ ಅಂತರ್ಮುಖದಲ್ಲಿ ಪ್ರಥಮದಲ್ಲಿ ಗೋಚರವಾಗುವುದೇ ತೇಜಸ್ಸು. ಹೊರಗೆ ನೋಡುವ ತೇಜಸ್ಸು ಸವಿತೃಸ್ವರೂಪನಾದ ಸೂರ್ಯನದಾಗಿದೆ. ಆ ಸೂರ್ಯರೂಪವು

ನಮ್ಮಲ್ಲಿಯೂ ಇರುವುದರಿಂದ ನಮಗೆ ಅಂತರ್ಮುಖದಲ್ಲಿ ಗೋಚರವಾಗುವುದು ಸೂರ್ಯನ ತೇಜಸ್ಸೇ ಆಗಿದೆ. ಅಂದರೆ ಸವಿತುಃ ಎಂಬ ಪದದ ತತ್ವದಲ್ಲಿ ತಿಳಿಸಿದಂತೆ ಸೃಷ್ಟಿಕರ್ತನಾದ ಮಾಹೇಶ್ವರೀಶಕ್ತಿಯುತನಾದ ಈಶ್ವರನು ಸೂರ್ಯಾಂತರ್ಯಾಮಿಯಾಗಿರುವುದರಿಂದ ನಮ್ಮ ಅಂತರ್ಮುಖದಲ್ಲಿ ಗೋಚರ ವಾಗುವ ತೇಜಸ್ಸಿನಲ್ಲಿಯೂ ಅಂತರ್ಗತನಾಗಿರುವನು. ಈ ತೇಜಸ್ಸನ್ನನುಸರಿಸಿ ಧ್ಯಾನಿಸುವುದು ಆ ಈಶ್ವರನನ್ನೇ. ಆ ಈಶ್ವರನು ಎಂತಹವನೆಂದರೆ 'ಸವಿತುಃ' ಪದದ ತತ್ವದಲ್ಲಿ ವಿವರಿಸಿರುವ ಶುದ್ಧಋಷಭ, ಚತುಶ್ರುತಿಋಷಭ, ಷಟ್ಶ್ರುತಿ ಋಷಭ, ಶುದ್ಧಗಾಂಧಾರ ಸಾಧಾರಣಗಾಂಧಾರ ಸ್ವರಗಳ ತತ್ವಗಳನ್ನೊಳ ಗೊಂಡವನು. ಈ ತತ್ವಗಳನ್ನೊಳಗೊಂಡ ಆ ಈಶ್ವರನೇ ಧ್ಯಾನಕ್ಕೆ ಗುರಿಯಾಗಿ ರುವನು. ಇವನೇ ನಮಗೆ ಧ್ಯಾನಕಾಲದಲ್ಲಿ ಅಂತರ್ಮುಖದಲ್ಲಿ ಗೋಚರವಾಗುವ ತೇಜೋಬಿಂದುರೂಪನು. ಬಿಂದು, ನಾದ, ಕಳೆಗಳಲ್ಲಿ ಪ್ರಥಮದಲ್ಲಿ ಧ್ಯಾನಕ್ಕೆ ಗುರಿಯಾಗಿರುವುದೇ ತೇಜೋಬಿಂದುವು. ಅಂತರ್ಮುಖದಲ್ಲಿ ಗೋಚರವಾಗುವ ತೇಜೋಬಿಂದುವು ಈಶ್ವರಸ್ವರೂಪವೆನ್ನುವುದಕ್ಕೆ "ಶಿವಸ್ಯ ಬಿಂದು ರೂಪಸ್ಯ ಸ್ಥಾನಂ ತದ್ಧಿ ಪ್ರಕಾಶಕಂ" ಎಂಬ ಶ್ರುತ್ಯಾಧಾರವಲ್ಲದೆ ಇನ್ನೂ ಅನೇಕ ಆಧಾರ ವಾಕ್ಯಗಳಿವೆ. ಸವಿತುಃ ಪದದ ಸಕಲ ತತ್ವಗಳನ್ನೂ ಅಂತರ್ಮುಖದಲ್ಲಿ ಗೋಚರವಾಗುವ ತೇಜೋಬಿಂದುವು ಒಳಗೊಂಡಿರುವುದೆಂಬ ತತ್ವಪ್ರತಿಪಾದನೆ ಯನ್ನನುಸರಿಸಿಯೇ ಬಿಂದುರೂಪವಾದ ಲಿಂಗವನ್ನೂ ಸಾಲಿಗ್ರಾಮಗಳನ್ನೂ ಬಾಹ್ಯದಲ್ಲಿ ಅರ್ಚನೆಮಾಡುತ್ತಾರೆ. ಲಿಂಗದಲ್ಲಿಯೂ, ಸಾಲಿಗ್ರಾಮಗಳಲ್ಲಿಯೂ ಈಶ್ವರನ ಸಕಲ ಮಹಿಮೆಗಳೂ ಪ್ರತಿಷ್ಠಿತವಾಗಿರುವುದೆಂಬ ತತ್ವಪ್ರತಿಪಾದನೆ ಯಾಗಿಯೂ, ವಿರಾಟ್‌ಸ್ವರೂಪದ ತತ್ವವನ್ನು ಸ್ಪಷ್ಟಪಡಿಸುವ ವಿಗ್ರಹಗಳ ತತ್ವಗಳೆಲ್ಲಾ ಲಿಂಗ, ಸಾಲಿಗ್ರಾಮಗಳಲ್ಲಿರುವುದಕ್ಕೆ ತೇಜೋಬಿಂದುವೇ ನಿದರ್ಶನವಾಗಿದೆ.

ವಿರಾಟ್‌ಸ್ವರೂಪಶಕ್ತಿಯಾದ ಶ್ರೀಚಾಮುಂಡೇಶ್ವರಿಯು ಅಜ್ಞಾನ ಸ್ವರೂಪರಾದ ರಾಕ್ಷಸರನ್ನು ನಿಗ್ರಹಿಸಿ ವಿರಾಟ್‌ಸ್ವರೂಪವನ್ನು ಉಪಸಂಹಾರ ಮಾಡುವ ಪ್ರಾರಂಭದ ಸ್ಥಿತಿಯೇ ತೇಜೋಬಿಂದುಧ್ಯಾನದ ಸ್ವರೂಪವಾಗಿರುವುದು. ಮಾತೃಗರ್ಭದಲ್ಲಿ ಅವ್ಯಕ್ತಸ್ಥಿತಿಯಲ್ಲಿದ್ದ ಜೀವನು ದೇಹವೆಂಬ ಉಪಾಧಿಯನ್ನು ಹೊಂದಿ ಗರ್ಭದಿಂದ ಜನಿಸಿ ಬಹಿರ್ವ್ಯಾಪಾರಕ್ಕೆ ಬಂದು ವಿಶ್ವ (ವಿರಾಟ್) ನೆನಿಸಿ ಕೊಳ್ಳುವನು. ಸದ್ಧರ್ಮ ಸತ್ಕರ್ಮಗಳು ವಿರಾಟ್‌ಸ್ವರೂಪವನ್ನು ಉಪ ಸಂಹರಿಸುವ ಕಾರ್ಯಕ್ಕೆ ಸಹಾಯಕಗಳಾಗಿದ್ದರೂ ಆ ಕಾರ್ಯವು ಧ್ಯಾನಾಭ್ಯಾಸ ದಿಂದಲೇ ಪ್ರಾರಂಭವಾಗಬೇಕಾದ ತತ್ವದ ಸೂಚನೆಯಾಗಿರುವುದು. ಅಂದರೆ

ಧ್ಯಾನದಿಂದಲೇ ಆರೋಹಣದ ತತ್ವವು ಪ್ರಾರಂಭವಾಗುವುದು. ಪರಮಾತ್ಮನು ವಿರಾಟ್‌ಸ್ವರೂಪಕ್ಕೆ ಇಳಿಯಲು ಎಷ್ಟು ತತ್ವಗಳಿವೆಯೋ ಅಷ್ಟು ತತ್ವಗಳನ್ನೂ ಪುನಃ ಉಪಸಂಹಾರಮಾಡಬೇಕಾಗಿರುವುದೆಂಬ ತತ್ವವನ್ನನುಸರಿಸಿಯೇ ವೀಣೆಯ ೨೪ ಮನೆಗಳನ್ನು ಎರಡು ಭಾಗಮಾಡಿ ಪ್ರಥಮಭಾಗದಲ್ಲಿ ಯಾವ ತತ್ವಗಳು ಬರುವುವೋ ಆ ತತ್ವಗಳೆಲ್ಲಾ ಎರಡನೆಯ ಭಾಗದಲ್ಲಿಯೂ ಉಪಸಂಹಾರಕ್ರಮದಿಂದ ಬಂದಿರುವುವು. ಈ ಉಪಸಂಹಾರಕ್ರಮವೂ ವೀಣೆಯ ಅರ್ಧಭಾಗದಿಂದ ಸರಿಯಾಗಿ ಎಂದರೆ 'ಧೀಮಹಿ' ತತ್ವದಿಂದಲೇ ಪ್ರಾರಂಭ ವಾಗಿರುವುದು. ವೀಣೆಯು ಇಂತಹ ಮಹತ್ವವುಳ್ಳ ತತ್ವವನ್ನೊಳಗೊಂಡಿರು ವುದರಿಂದಲೇ ಶ್ರೀಶಾರದಾಂಬೆಯ ಹಸ್ತದಲ್ಲಿ ಇತರ ವಾದ್ಯಗಳಿರದೆ ವೀಣೆಯೇ ಇದೆ.

**ಧಿಯೋಯೋನಃ** || 'ಧಿಯೋಯೋನಃ' ಎಂಬುದರಲ್ಲಿ 'ಧಿಯಃ' 'ಯಃ' 'ನಃ' ಎಂಬ ಮೂರು ಪದಗಳಿವೆ. ಧಿಯಃ = ಬುದ್ಧಿಗಳನ್ನು, ಯಃ = ಯಾರು, ನಃ= ನಮ್ಮಗಳ ಎಂದರ್ಥವಾಗಿ, ನಮ್ಮ ಬುದ್ಧಿಯನ್ನು ಯಾರು ಪ್ರೇರಿಸುವರೋ ಅವರ ಸ್ಥಾನವೇ ಇದೆಂಬುದನ್ನು ಪ್ರತಿಪಾದಿಸುವುದಾಗಿರುವುದು. ನಾನೆಂಬ ಸ್ವರೂಪವೂ ನನ್ನ ಬುದ್ಧಿಯ ಸ್ವರೂಪವೂ ನನ್ನ ಬುದ್ಧಿಯನ್ನು ವ್ಯಾಪಾರಾದಿ ಗಳಲ್ಲಿ ಯಾವುದು ಪ್ರಕಾಶಪಡಿಸುತ್ತಿದ್ದೀತೋ ಅಂತಹ ಜೀವನ ಸ್ವರೂಪವೂ ಮತ್ತು ಅಂತರ್ಯಾಮಿಯಾಗಿ ನಿರ್ಲಿಪ್ತನಾಗಿ ಪ್ರೇರಿಸುತ್ತಿದ್ದ ಈಶ್ವರಸ್ವರೂಪ ಗಳೆಲ್ಲಾ ಈ 'ಧಿಯೋಯೋನಃ' ಎಂಬ ಪದದ ತತ್ವದಲ್ಲಿರುವುದೆಂಬುದನ್ನು ಪ್ರತಿಪಾದಿಸುವ ಸೂಚನೆಗೋಸ್ಕರಲೇ ಅಂತರಗಾಂಧಾರ, ಮಧ್ಯಮ, ಪ್ರತಿ ಮಧ್ಯಮ ಪಂಚಮಸ್ವರಗಳು ಧಿಯೋಯೋನಃ ಎಂಬ ಪದದಲ್ಲಿ ಅಡಕ ವಾಗಿರುವುವು. ಅಂದರೆ 'ಧೀಮಹಿ' ತತ್ವದಲ್ಲಿ ತೇಜೋಬಿಂದುವಿನೊಡನೆ ಧ್ಯಾನ ಮಾಡುವ ತತ್ವವೆಂದು ಹಿಂದೆ ತಿಳಿಸಿತಷ್ಟೆ! ಆ ಧ್ಯಾನವು ಅಭಿವೃದ್ಧಿಯನ್ನೈದುವ ಕಾಲದಲ್ಲಿ ಉದಯವಾದ ಸೂರ್ಯನ ಪ್ರಕಾಶವು ಕ್ರಮೇಣ ಹೇಗೆ ಹೆಚ್ಚುವುದೋ ಹಾಗೆ ಅಂತರ್ಮುಖದಲ್ಲಿ ತೇಜಸ್ಸು ಅಧಿಕವಾಗಿ, ಬುದ್ಧಿಯು ಅಂತಹ ತೇಜಸ್ಸಿ ನಲ್ಲಿ ಸ್ಥಿರಪಡುತ್ತಾ ಬರುವುದು. ಹೀಗೆ ಸ್ಥಿರಪಡುವಿಕೆಯು ಸ್ವಪ್ನಾವಸ್ಥೆಗೆ ಹೋಲುವುದು. ಸ್ವಪ್ನಾವಸ್ಥೆಯಲ್ಲಿ ತೇಜಸ್ಸಿನಲ್ಲೇ ಸಕಲ ವ್ಯಾಪಾರಗಳೂ ನಡೆಯುವಂತೆ, ಸ್ವಪ್ನಸದೃಶವಾದ ಸಮಾಧಿಯಲ್ಲಿ ಬುದ್ಧಿಯು ತೇಜಸ್ಸಿನಲ್ಲಿ ನಿಲುಗಡೆಯನ್ನು ಹೊಂದುವುದು ಹೀಗೆ ತೇಜಸ್ಸಿನಲ್ಲಿ ಸ್ಥಿರಪಟ್ಟ ತ್ರಿಪುಟೀ ರೂಪವಾದ ಸ್ಥಿತಿಯನ್ನೂ ಮರೆಯುವುದೆಂದರೆ ತನ್ನನ್ನು ತಾನು ಮರೆಯು ವಂತಹ ಸಮಾಧಿಸ್ಥಿತನಾಗುವ ಪ್ರಾರಂಭದ ಸ್ಥಿತಿಯು 'ಧಿಯೋಯೋನಃ' ಪದ ಮತ್ತು ಸ್ವರಗಳ ತತ್ವಾರ್ಥದಲ್ಲಿರುವುದು.

ಹೀಗೆ ತೇಜಸ್ಸಿನಲ್ಲಿ ಬುದ್ಧಿಯು ಸ್ಥಿರಪಡುವಾಗ ಬುದ್ಧಿಯನ್ನು ಕಾರ್ಯಗಳಲ್ಲಿ ಪ್ರಕಾಶಪಡಿಸುತ್ತಿದ್ದ ಜೀವಚೈತನ್ಯನು ಅಂತರಗಾಂಧಾರಸ್ವರದ ತತ್ವವಾದ ಬುದ್ಧಿಯಲ್ಲಿ ಅಂತರ್ಯಾಮಿಯಾಗಿ ಪ್ರೇರಿಸುತ್ತಿದ್ದ ಈಶ್ವರನ ಸೋಪಾನವನ್ನು ಹೊಂದುವನು. ಈ ವಿಚಾರವೇ 'ಧಿಯಃ-ಯಃ' ಎಂಬುದರ ತತ್ವಗಳು. ಹೀಗೆ ಒಂದಾಗುವ ಕಾಲದಲ್ಲಿ ಅಂತರ್ಮುಖದಲ್ಲಿ ನೋಡುವವನು, ನೋಟ, ನೋಡುವ ವಸ್ತುವಾದ ತೇಜಸ್ಸುಗಳೆಂದು ಕರೆಯಲ್ಪಡುವ, ಜ್ಞಾತೃ, ಜ್ಞಾನ, ಜ್ಞೇಯ ಸ್ವರೂಪವಾದ ತ್ರಿಪುಟಿಯು ನಶಿಸುತ್ತಾ ಬರುವುದು. 'ಮಧ್ಯಮ ಮತ್ತು ಪ್ರತಿ ಮಧ್ಯಮ' ಸ್ವರಗಳ ತತ್ವಗಳು ಹೇಗೆ ಒಂದಕ್ಕೊಂದು ಪ್ರತಿಕಕ್ಷಿಗಳೋ ಹಾಗೆಯೇ ನೋಡುವವ (ಜ್ಞಾತೃ)ನಿಗೆ ನೋಡಿಸಿಕೊಳ್ಳುವ (ಜ್ಞೇಯ) ವಸ್ತುವು ಪ್ರತಿಕಕ್ಷಿಯಾಗಿರುವುದು. ಇವೆರಡೂ ಒಂದಾದರೆ ಮಧ್ಯದಲ್ಲಿರುವ ನೋಟವು (ಜ್ಞಾನವೆಂದರೆ ವೃತ್ತಿಯು) ನಶಿಸುವುದು. ಈ ವೃತ್ತಿನಾಶವೇ ಅಜ್ಞಾನದ ನಾಶವು. ಮಧ್ಯದಲ್ಲಿರುವ ನೋಟವು (ವೃತ್ತಿಯು) ನಶಿಸಿದಾಗ ನೋಡುವವನು (ಜ್ಞಾತೃ) ನೋಡಿಸಿಕೊಳ್ಳುವವಸ್ತು (ಜ್ಞೇಯ) ಗಳೆರಡೂ ಉಳಿದುಕೊಳ್ಳುವುದಷ್ಟೆ! ಇವುಗಳಲ್ಲಿ ನೋಡುವವನು (ಜ್ಞಾತೃ) ಹೋಗಿ ಒಂದೇ ಉಳಿದುಕೊಳ್ಳಬೇಕು. ಹೀಗೆ ಒಂದೇ ಉಳಿದುಕೊಳ್ಳಲು ನೋಡುವವನಾದ 'ನಾನು' ಎನ್ನುವ ಬುದ್ಧಿಯು (ಜ್ಞಾತೃ) ವಿಸ್ತಾರದ ಅರ್ಥವಾದ ಪಂಚಮಸ್ವರದ ತತ್ವವನ್ನು ಹೊಂದುವುದು. 'ನಾನು' ಎನ್ನುವ ಬುದ್ಧಿಯು ಪಂಚಮ ಸ್ವರದ ತತ್ವವಾದ ವಿಸ್ತಾರವನ್ನು ಹೊಂದಲು ಉಪಕ್ರಮಿಸುವುದೆಂದರೆ, ಅಖಂಡಾಕಾರವಾಗಿ ಸರ್ವವ್ಯಾಪಿಯಾಗಲು ಪ್ರಾರಂಭಿಸುವುದು. ಹೀಗೆ 'ನಾನು' ಎಂಬ ಜ್ಞಾನವೆನಿಸುವ ಜ್ಞಾತೃವು ಅಖಂಡಾಕಾರವಾಗಲು ಪ್ರಾರಂಭವಾಗುವಿಕೆಯೇ ಪಂಚಮಸ್ವರದ ಮತ್ತು ಧಿಯೋಯೋನಃ ಪದದಲ್ಲಿನ 'ನಃ' ಎಂಬುದರ ತತ್ವವಾಗಿರುವುದು. ಸೃಷ್ಟಿಯಾಗಿ ವ್ಯಾಪಾರಕ್ಕೆ ಬರುವ ಕ್ರಮದಲ್ಲಿ ನಾನು (ಜ್ಞಾತೃ) ಎಂಬುದು ದೇಹ ಸಂಬಂಧಿಯಾಗಿ ವಿಸ್ತರಿಸಲ್ಪಟ್ಟರೆ ದೇಹಾತ್ಮಬುದ್ಧಿಯುಂಟಾಗಿ ಅನಂತರ ವಿಷಯವ್ಯಾಪಾರಗಳ ವಿಸ್ತಾರದಲ್ಲಿಯೂ ಸೇರುತ್ತದೆ. ಮೋಕ್ಷಕ್ರಮದಲ್ಲಿ ವಿಷಯ ಮತ್ತು ದೇಹನಾನೆಂಬ ಜ್ಞಾನವು ನಶಿಸಿ ಶುದ್ಧವಾದ 'ನಾನು' ಎಂಬ ಜ್ಞಾನವು ಉಳಿಯುವ ಮತ್ತು ನಾನೆಂಬ ಜ್ಞಾನವು ಕೂಡ ಅಖಂಡಾಕಾರವಾಗಲು ಪ್ರಾರಂಭಿಸುವ ಸ್ಥಿತಿಯೇ 'ಧಿಯೋಯೋನಃ' ಎಂಬ ಪದದಲ್ಲಿರುವ 'ನಃ' ಎನ್ನುವುದರ ಮತ್ತು ಪಂಚಮಸ್ವರದ ತತ್ವವಾಗಿರುವುದು.

ಇದರಲ್ಲಿ ಮಹತ್ವವಾದ ಇನ್ನೂ ಕೆಲವು ತತ್ವಗಳಿರುವುವು. ಧೀಮಹಿ ಮತ್ತು ಧಿಯೋಯೋನಃ ಎಂಬ ಪದಗಳಲ್ಲಿ ಗಾಂಧಾರಸ್ವರವಿರುವುದಷ್ಟೆ! ಗಾಂಧಾರವೆನ್ನುವುದಕ್ಕೆ ವಾಣಿಯನ್ನೂ ಪ್ರಪಂಚವನ್ನೂ ಧರಿಸಿರುವುದೆಂಬ

ಅರ್ಥವೆಂದು ಹಿಂದೆಯೇ ತಿಳಿಸಿದೆ. ಮೋಕ್ಷ (ಲಯ) ಕ್ರಮದಲ್ಲಿ ತೇಜೋ ಬಿಂದು ಧ್ಯಾನಾಭಿವೃದ್ಧಿಯಾದ ಅನಂತರ ಅಂತರ್ಮುಖದಲ್ಲಿ ಉದಯಿಸುವ ಓಂಕಾರನಾದವನ್ನೂ ತಾದಾತ್ಮ್ಯದಿಂದ ಧರಿಸಿ ಧ್ಯಾನಿಸುವ ತತ್ವವೇ ಲಯ (ಮೋಕ್ಷ) ಮಾರ್ಗದಲ್ಲಿ ಗಾಂಧಾರಸ್ವರದ ತತ್ವವಾಗಿರುವುದು. ಈ ಓಂಕಾರ ನಾದವನ್ನೇ ತಾದಾತ್ಮ್ಯದಿಂದ ಧರಿಸಿ ಧ್ಯಾನಿಸುತ್ತಾಬಂದರೆ ನಾದವು ಸೂಕ್ಷ್ಮವಾಗಿ ಕಳಾಸ್ವರೂಪಕ್ಕೆ ಬರುವುದು. ಈ ಕಳಾಸ್ಥಿತಿಯೇ ಧಿಯೋಯೋನಃ ಪದದಲ್ಲಿ 'ನಃ' ತತ್ವವಾದ ನಾನೆಂಬ ಜ್ಞಾನ ಮಾತ್ರ ಉಳಿದು ಕೊಳ್ಳುವ ಸ್ಥಿತಿಯಾಗಿರುವುದು. ಕಳೆಯೂ ಪರಬ್ರಹ್ಮನಲ್ಲಿ ಲೀನವಾಗುವುದೇ 'ನಾನೆಂಬ' ಜ್ಞಾನವು ಅಖಂಡಾಕಾರವಾಗುವುದಾಗಿದೆ.

ಮುಖ್ಯವಾಗಿ ಬಿಂದು, ನಾದ, ಕಳಾ ಮತ್ತು ಕಳಾತೀತ ವಿಚಾರಗಳ ತತ್ವಗಳೂ ಇಲ್ಲಿ ಅಡಗಿವೆ ಅಲ್ಲದೆ ಧಿಯೋಯೋನಃ ಪದದ ತತ್ವದಿಂದ ಸಂಗೀತಶಾಸ್ತ್ರದ 'ಮಂದ್ರ, ಮಧ್ಯಮ, ತಾರಸ್ಥಾಯಿ'ಗಳಲ್ಲಿ ತಾರಸ್ಥಾಯಿಯ ಪ್ರಾರಂಭವೆಂಬುದಾಗಿ ವೀಣೆಯ ಚಿತ್ರದಲ್ಲಿ ಗುರ್ತುಮಾಡಿ ಬರೆದಿರುವುದಷ್ಟೆ! ಇದಕ್ಕೆ ಕಾರಣವೇನೆಂದರೆ "ತಾರಯತೀತಿತಾರಂ ತಮೋನಾಶಯತೀತಿವಾ ತಾರಃ" ಎಂಬ ವ್ಯುತ್ಪತ್ತಿಯಂತೆ ಅಜ್ಞಾನವನ್ನು ಹೋಗಲಾಡಿಸಿ ಈ ಭವ ಬಂಧನದಿಂದ ದಾಟುವ ಸ್ಥಳವೇ ಧಿಯೋಯೋನಃ ಎಂಬ ಪದವಿರುವ ಸ್ಥಳದ ತತ್ವವಾಗಿದೆ. ಆದುದರಿಂದ ತಾರಸ್ಥಾಯಿಯು ಈ ತತ್ವದಿಂದ ಪ್ರಾರಂಭ ವಾಗುವುದು. ವೀಣೆಯನ್ನು ನುಡಿಸುವಾಗಲೂ ತಾರಸ್ಥಾಯಿಯಲ್ಲಿ ಮನೆ ಮನೆಗೂ ನಾದವು ಬಹುಸೂಕ್ಷ್ಮವಾಗುತ್ತಾ ಅಂತ್ಯದಲ್ಲಿ ಅವ್ಯಕ್ತ ಸ್ಥಿತಿಯನ್ನು ಹೊಂದುವುದು. ಇದರಂತೆ ಅಧಿಕಾರಿಯು ಧ್ಯಾನಾಭಿವೃದ್ಧಿಯಿಂದ ಬಹು ಸೂಕ್ಷ್ಮವಾಗುವ ಓಂಕಾರನಾದವನ್ನೂ, ಕಳಾಸ್ವರೂಪವನ್ನೂ ದಾಟಿ ಅಂತ್ಯದಲ್ಲಿ "ನಿಶ್ಶಬ್ದಂಬ್ರಹ್ಮಉಚ್ಯತೇ" ಎಂಬ ಶ್ರುತ್ಯಾಧಾರದಂತೆ ಪರಬ್ರಹ್ಮಸ್ಥಿತಿಯನ್ನು ಪಡೆಯುವನು.

ಸಂಗೀತಶಾಸ್ತ್ರದ 'ಮಂದ್ರ, ಮಧ್ಯಮ, ತಾರಸ್ಥಾಯಿಗಳಲ್ಲಿ ತಾರಸ್ಥಾಯಿಯ ವಿಚಾರವನ್ನು ಮೇಲೆ ತಿಳಿಸಿತಷ್ಟೆ! ಮಧ್ಯಮಸ್ಥಾಯಿಯು ಸೃಷ್ಟಿಯಾದ ಅನಂತರ ತಾರಸ್ಥಾಯಿಯವರೆಗೆ ಇರುವ ವ್ಯಾಪಾರದ ತತ್ವದಲ್ಲಿ ರುವುದು. ಸೃಷ್ಟಿಯ ವಿಚಾರವೆಲ್ಲಾ ಮಂದ್ರಸ್ಥಾಯಿಯಾಗಿ ಇರುವುದು. ಮಂದ್ರಸ್ಥಾಯಿ' ಎಂದರೆ ಪಾತಾಳದ ಸ್ಥಾಯಿಯೆಂದಾಗಿ ಧ್ವನಿಯು ಕೆಳಕ್ಕೆ ತಗ್ಗುವುದು ಇದು ಸುಲಭವಾಗಿ ಗೋಚರವಾಗುವುದಿಲ್ಲವೆಂದರೆ ಸೃಷ್ಟಿಯ ವಿಚಾರವನ್ನು ಗೋಚರಕ್ಕೆ ತಂದುಕೊಳ್ಳಲು ಸಾಧ್ಯವಿಲ್ಲವು. ಗಾಯತ್ರೀದೇವಿಯ

ಮಂತ್ರದ ಮೂರು ಪಾದಗಳನ್ನು ಅನುಸರಿಸಿಯೇ ಮಂದ್ರ, ಮಧ್ಯಮ, ತಾರ ಗಳಾದ ಮೂರು ಸ್ಥಾಯಿಗಳೂ ಏರ್ಪಟ್ಟಿರುವುವು. 'ಧಿಯೋಯೋನಃ' ಪದದ ಲ್ಲಿರುವ ತತ್ವಾರ್ಥಗಳು ಅಮೋಘವಾದವುಗಳು. ಈ ತತ್ವಗಳ ವಿವರವೆಲ್ಲಾ ಜ್ಞಾನಭಂಡಾರವಾದ ವೇದದಲ್ಲಿರುವುದು.

**ಪ್ರಚೋದಯಾತ್** || ಚೆನ್ನಾಗಿ ಪ್ರೇರಿಸುವುದೆಂದರ್ಥ. ಯಾವುದಕ್ಕೆ ಪ್ರೇರಿಸುವುದೆಂದರೆ :— ಹಿಂದಿನ ಧಿಯೋಯೋನಃ ಪದದಲ್ಲಿ ತಿಳಿಸಿದಂತೆ ಸರ್ವತ್ರ ವ್ಯಾಪಕವಾಗುತ್ತಿದ್ದ 'ನಾನು' ಎಂಬ ಬುದ್ಧಿವೃತ್ತಿಯು ಪರಬ್ರಹ್ಮನಲ್ಲಿ ಲೀನವಾಗಿ ಬ್ರಹ್ಮಸಾಕ್ಷಾತ್ಕಾರ ಉಂಟಾಗುವುದಕ್ಕೂ, ವಿರಾಟ್‌ಸ್ವರೂಪದಲ್ಲಿದ್ದ ಸಕಲಶಕ್ತಿಗಳೂ ಬೀಜರೂಪವಾದ ಪರಬ್ರಹ್ಮಸ್ಥಿತಿಯನ್ನು ಪಡೆಯುವುದಕ್ಕೂ ಪ್ರೇರಣೆಯಾಗಬೇಕಾಗಿರುವುದು. ಯಾವ ಬುದ್ಧಿಯು ಅಸತ್ಯವಾದ ವಿಷಯ ವ್ಯಾಪಾರದಲ್ಲಿತ್ತೋ ಅದೇ ಬುದ್ಧಿಯೇ ಪರಬ್ರಹ್ಮನಲ್ಲಿ ಏಕಾಕಾರವಾಗಿ ಪ್ರಕೃಷ್ಟ ವಾಗಿ ಲೀನವಾಗಿರುವ ತತ್ವಪ್ರತಿಪಾದನೆಗೋಸ್ಕರವೆ ಸಪ್ತಸ್ವರದಲ್ಲಿ ಶುದ್ಧಧೈವತ ಸ್ವರವು 'ಪ್ರಚೋದಯಾತ್' ಎಂಬ ಪದದ ಪ್ರಥಮಾಕ್ಷರದಲ್ಲಿ ಪುನಃ ಬಂದಿರುವುದು. ಅಂದರೆ ಶುದ್ಧಧೈವತಸ್ವರವು ಅಸತ್ಯವಾದ ವಿಷಯದತತ್ವ ವಾದ ಭರ್ಗಃ ಎಂಬ ಪದದಲ್ಲಿದ್ದು ಪುನಃ ಪ್ರಚೋದಯಾತ್ ಎಂಬ ಪದದ 'ಪ್ರ' ಎಂಬಕ್ಷರದ ಮನೆಯಲ್ಲಿರುವುದರಿಂದ, ಬುದ್ಧಿಲಯವು ಪ್ರಕೃಷ್ಟವಾಗಿಯೇ ಆಗಿರುವುದೆಂಬ ತತ್ವವಾಗಿರುವುದು.

ಹೀಗೆ ಅವಿಚ್ಛಿನ್ನವಾದ ತೈಲಧಾರೆಯಂತೆಯೂ ಪ್ರಕೃಷ್ಟವಾಗಿಯೂ ಲೀನವಾ ಗಿರುವ 'ನಾನು' ಎಂಬ ಬುದ್ಧಿ ವೃತ್ತಿಯು ಪುನಃ ಹೊರಕ್ಕೆ ಉದಯಿಸಿ ದೇಹಪತನ ದವರೆಗೆ ಮನುಷ್ಯನು ಬಹಿರ್ಮುಖನಾಗಿ ಪರಮಹಂಸಸ್ಥಿತಿಯಲ್ಲಿರಬಹುದು. ಅಥವಾ ತೈಲಧಾರೆಯಂತಾಗಿದ್ದ ಸ್ಥಿತಿಯಲ್ಲಿಯೇ ದೇಹಾಂತ್ಯವನ್ನು ಪಡೆಯ ಬಹುದು. ಪರಬ್ರಹ್ಮನಲ್ಲಿ ಲಯವಾಗಿದ್ದ ಬುದ್ಧಿವೃತ್ತಿಯು ಪುನಃ ಉದಯಿಸಿ ಬಹಿರ್ಮುಖನಾಗಿದ್ದರೂ ಮನುಷ್ಯನು ಜೀವನ್ಮುಕ್ತನೆನಿಸಿಕೊಂಡಿರುವನು. ದೇಹದ ಅಂತ್ಯಕಾಲದಲ್ಲಿ ಜೀವನು ಪರಬ್ರಹ್ಮನಾಗಿ ಪುನಃ ಹಿಂದಿರುಗದಿರುವ ತತ್ವಕ್ಕೂ, ವೃಕ್ಷಸ್ವರೂಪದಲ್ಲಿದ್ದ ಸಕಲ ವಿಕೃತಿತತ್ವಗಳೂ ಬೀಜರೂಪಕ್ಕೆ ಬರುವಂತೆ ದೇವತೆಗಳಾದಿಯಾಗಿ ಬ್ರಹ್ಮಾಂಡ ಸ್ವರೂಪವನ್ನೆಲ್ಲಾ ಉಪಸಂಹಾರಮಾಡಿ ಕೊಂಡು ಪರಬ್ರಹ್ಮ ಒಂದೇ ಉಳಿಯುವ ತತ್ವಕ್ಕೂ ಸಕಲಸ್ವರಗಳನ್ನೂ ಸೇರಿಸಿಕೊಳ್ಳುವ ಸ್ವಭಾವದ ಕಾಕಲೀನಿಷಾದಸ್ವರವು ಅಂತ್ಯದಲ್ಲಿರುವುದು. ಅಂದರೆ ವಿರಾಟ್‌ಸ್ವರೂಪದಲ್ಲಿದ್ದ ಶ್ರೀಚಾಮುಂಡೇಶ್ವರೀಶಕ್ತಿಯು ಲಯ ಕಾಲದಲ್ಲಿ ಓಂಕಾರಸ್ವರಶಕ್ತಿಯ ಸ್ಥಿತಿಗೆ ಬಂದು, ಅನಂತರ ಪರಬ್ರಹ್ಮವಾಗುವ

ತತ್ವಪ್ರತಿಪಾದನೆಗೋಸ್ಕರಲೇ ಕಾಕಲೀನಿಷಾದಸ್ವರವು ಪ್ರಚೋದಯಾತ್ ಪದದಲ್ಲಿನ 'ಯಾತ್' ಎಂಬಕ್ಷರದಲ್ಲಿರುವುದು. ಅಂದರೆ ಪ್ರಕೃಷ್ಟವಾಗಿ ಪ್ರಾರಂಭವಾದ ಪ್ರೇರಣೆಯು ಪದದ ಅಂತ್ಯದಲ್ಲಿರುವ ಅರ್ಧಾಕ್ಷರವಾದ 'ತ್' ಪ್ರತಿಪಾದ್ಯವಾದ ಕಳಾಸ್ವರೂಪವೆನಿಸಿ 'ತತ್' ಪ್ರತಿಪಾದ್ಯವಾದ ಪರಬ್ರಹ್ಮ ವಾಗುವುದು.

'ಪ್ರಚೋದಯಾತ್' ಎಂಬ ಪದದ 'ತ್' ಎಂಬ ಅರ್ಧಾಕ್ಷರವು 'ತತ್' ವಾಚ್ಯವಾದ ಪರಬ್ರಹ್ಮವಾಗುವ ತತ್ವಕ್ಕೂ ಶ್ರೀಚಾಮುಂಡೇಶ್ವರೀಶಕ್ತಿಯಾದ ನಿಷಾದಸ್ವರವು ಲಯಕಾಲದಲ್ಲಿ ಅಗ್ರಭಾಗದಲ್ಲಿದ್ದುಕೊಂಡು ಪರಬ್ರಹ್ಮ ಒಂದೇ ಇದ್ದ ಸ್ಥಿತಿಯನ್ನುಂಟುಮಾಡುವುದಕ್ಕೂ ಸಂಗೀತಶಾಸ್ತ್ರದ ಆಧಾರವು ಬಹು ಮುದ್ದಾಗಿ ಅನ್ವಯವಾಗುವುದು. ಗಾನರಹಸ್ಯಪ್ರಕಾಶಿನೀ ಮುಂತಾದ ಗ್ರಂಥಗಳಲ್ಲಿ :

ಪ್ರಣವಾಗ್ರೇ ಸ್ಫುರನ್ನಾಸ್ತೇ ನಿಷಾದಸ್ಸಪ್ತಮಸ್ವರಃ ।
ಪ್ರಣವಾದೌ ದ್ವಿತೀಯಶ್ಚ ಋಷಭಾಖ್ಯಃ ಪ್ರಕೀರ್ತಿತಃ ॥

ತಾ|| ಓಂಕಾರದ ತುದಿಯಲ್ಲಿ ಸಪ್ತಸ್ವರಗಳಲ್ಲಿ ಏಳನೆಯದಾದ ನಿಷಾದ ವೆಂಬ ಸ್ವರವು ಪ್ರಕಾಶಿಸುತ್ತಾ ಇದೆ. ಓಂಕಾರದ ಕೆಳಗಡೆ ಎರಡನೆಯದಾದ ಋಷಭಸ್ವರವು ನೆಲಸಿರುವುದು ಎಂದು ಹೇಳಿದೆ.

ವೀಣೆಯಲ್ಲಿ ಮೊದಲಿನ ೧೨ ಮನೆಗಳು ಅವರೋಹಣವೆಂದರೆ ಪರಬ್ರಹ್ಮ ನಿಂದ ಸೃಷ್ಟಿಯಾಗಿ ವಿರಾಟ್‌ಸ್ವರೂಪಕ್ಕೆ ನಿಲ್ಲುವ ಸ್ಥಿತಿಯಲ್ಲಿ ನಿಷಾದಸ್ವರವು ಅಗ್ರದಲ್ಲಿರುವುದೆಂದರೆ ಶ್ರೀಚಾಮುಂಡೇಶ್ವರಿಯೇ ವಿರಾಟ್ ಶಕ್ತಿಯಾಗಿ ವಿರಾಜಿಸುತ್ತಿರುವಳು. ಋಷಭಸ್ವರವು ಆದಿಯಲ್ಲಿರುವುದೆಂದರೆ ಅಂತರ್ಯಾಮಿ ಯಾದ ಈಶ್ವರನು ಸೃಷ್ಟಿಗೆ ಮೂಲರೂಪನಾಗಿರುವನೆಂಬ ತತ್ವಪ್ರತಿಪಾದಕ ವಾಗಿರುವುದು. ವೀಣೆಯ ದ್ವಿತೀಯಭಾಗದ ೧೨ ಮನೆಗಳು ಆರೋಹಣವೆಂದರೆ ಮೋಕ್ಷ (ಲಯ) ಕ್ರಮದ ತತ್ವಪ್ರತಿಪಾದಕಗಳಾಗಿವೆ. ಮೋಕ್ಷ ಪಡೆಯು ವುದರಲ್ಲಿ ಧ್ಯಾನಕಾರ್ಯದಿಂದಲೇ ಓಂಕಾರವು ಪ್ರಾರಂಭವಾಗುವುದು. ಧ್ಯಾನ ಪ್ರಾರಂಭವಾದಾಗ ಬಿಂದುಪೀಠವಾಗಿ ಈಶ್ವರನು ಓಂಕಾರದ ಆದಿಯಲ್ಲಿರುವುದೇ ಋಷಭಸ್ವರವು ವೀಣೆಯ ದ್ವಿತೀಯಾರ್ಧದಲ್ಲಿಯೂ ಪ್ರಥಮಮನೆಯಲ್ಲಿರುವುದು. ಬಿಂದು ನಾದ ಕಳೆಗಳಲ್ಲಿ ಧ್ಯಾನಕ್ಕೆ ಬಿಂದುವೇ ಆದಿಯಾಗಿರುವುದು.

ವೀಣೆಯ ದ್ವಿತೀಯಾರ್ಧದಲ್ಲಿ ೨೪ ನೇ ಮನೆಯಲ್ಲಿ ನಿಷಾದಸ್ವರವಿರುವಂತೆ ಓಂಕಾರದ ಅಂತ್ಯದಲ್ಲಿ ವಿರಾಟ್‌ಶಕ್ತಿಯಾಗಿದ್ದ ಶ್ರೀಚಾಮುಂಡೇಶ್ವರೀಶಕ್ತಿಯೇ ಕಳಾರೂಪದಲ್ಲಿರುವುದು. ಈ ತತ್ವಸಮರ್ಥನೆಗೆ 'ಅರ್ಧಮಾತ್ರಾ ತಥಾಜ್ಞೇಯಾ

ಪ್ರಣವಸ್ಯೋಪರಿಸ್ಥಿತಾ' ಎಂಬ ಬ್ರಹ್ಮವಿದ್ಯೋಪನಿಷತ್ ಆಧಾರವಾಕ್ಯವಿರುವುದು. ಅಂದರೆ ಧ್ಯಾನಮಾಡತಕ್ಕವನು ಧ್ಯಾನವನ್ನು ಹೆಚ್ಚಿಸುತ್ತಾ ಬಂದರೆ ಬಿಂದು ನಾದಗಳನ್ನು ದಾಟಿ ಕಳಾಸ್ವರೂಪಕ್ಕೆ ಬರುತ್ತಾನೆ. ನಿಷಾದಸ್ವರವು ಸರ್ವ ಸ್ವರಗಳನ್ನೂ ತನ್ನಲ್ಲಿ ಲಯಮಾಡಿಕೊಳ್ಳುವಂತೆ ದೇಹದ ಸಕಲ ಮೂಲತತ್ವಗಳೂ ಕಳೆಯಲ್ಲಿ ಲಯವಾಗುವುವು. ಆ ಕಳೆಯು ಪರಬ್ರಹ್ಮಸ್ವರೂಪವಾಗುವುದು.

ಹೇಗೆಂದರೆ, ಷಡ್ಜಸ್ವರದಲ್ಲಿ ತೀವ್ರಾ, ಕುಮುದ್ವತೀ, ಮಂದಾ ಮತ್ತು ಛಂದೋವತಿಗಳೆಂಬ ನಾಲ್ಕು ಶ್ರುತಿಗಳಿವೆ. ಸೃಷ್ಟಿಕಾಲದಲ್ಲಿ 'ತೀವ್ರ' ಎಂಬ ಒಂದನೇ ಶ್ರುತಿಯನ್ನು ನಿಷಾದಸ್ವರವೂ, ನಾಲ್ಕನೆಯದಾದ ಛಂದೋವತೀ ಶ್ರುತಿಯನ್ನು ಋಷಭಸ್ವರವೂ ಆಕ್ರಮಿಸಿದಾಗ ಚ್ಯುತವೆಂದು ಕರೆಯಲ್ಪಡುವುದು. ಲಯಕಾಲದಲ್ಲಿ ನಿಷಾದಸ್ವರವು ತೀವ್ರ ಮತ್ತು ಕುಮುದ್ವತೀ ಶ್ರುತಿಗಳೆರಡನ್ನೂ ಆಕ್ರಮಿಸಿಕೊಳ್ಳುವುದು. ಆಗ 'ಅಚ್ಯುತ'ವೆಂದು ಕರೆಯಲ್ಪಡುವುದು.

ಚ್ಯುತೋಽಚ್ಯುತೋ ದ್ವಿಧಾಷಡ್ಜೋ ದ್ವಿಶ್ರುತಿರ್ವಿಕೃತೋಭವೇತ್ |
ಸಾಧಾರಣ್ಯೇ ಕಾಕಲಿತ್ವೇ ನಿಷಾದಸ್ಯಚ ದೃಶ್ಯತೇ ||

ಎಂಬ ಸಂಗೀತಶಾಸ್ತ್ರದ ವಾಕ್ಯವೂ ಇರುವುದು. ಅಂದರೆ 'ಪ್ರಚೋದಯಾತ್' ಎಂಬ ಪದದಲ್ಲಿನ 'ತ್' ಎಂಬ ಅರ್ಧಾಕ್ಷರವು ಲಯಕಾಲದಲ್ಲಿ 'ತ'ಕಾರದೊಡಗೂಡಿ 'ತತ್' ಎಂಬ ಪದ ಉಳಿದಾಗ ಅಚ್ಯುತವೆನಿಸುವುದು. ಯಾವಾಗ ಸೃಷ್ಟಿಯಾಯಿತೋ ಆಗ ಚ್ಯುತವೆನಿಸಿಕೊಂಡು ' ಪ್ರಚೋದಯಾತ್ ' ಪದದ ಅಂತ್ಯಾಕ್ಷರವಾಗಿರುವುದು. ಅಂದರೆ ಪ್ರತಿಯೊಂದು ಸೃಷ್ಟಿಗೂ ಆದ್ಯಂತಗಳೆರಡೂ ಇರುವಂತೆ 'ಷಡ್ಜ'ದ ಎರಡು ಶ್ರುತಿಗಳೂ ಆದಿ ಮತ್ತು ಅಂತ್ಯಸ್ವರೂಪವಾಗಿ ಋಷಭ ಮತ್ತು ನಿಷಾದಸ್ವರಗಳಿಂದ ಆಕ್ರಮಿಸಲ್ಪಡುವುವು. ಯಾವಾಗ ಆದ್ಯಂತಗಳಿರುವುವೋ ಅದು ಚ್ಯುತವೇ ಹೊರತು ಅಚ್ಯುತವಲ್ಲ. ನಿಷಾದಸ್ವರವು ಷಡ್ಜದ ಎರಡನೆಯ ಶ್ರುತಿಯಾದ ಕುಮುದ್ವತಿಯನ್ನು ಆಕ್ರಮಿಸಿದಾಗ ಹೇಗೆ ಅಚ್ಯುತವೆನಿಸಿಕೊಳ್ಳುವುದೋ ಹಾಗೆಯೇ ಸರ್ವವನ್ನೂ ಲಯಮಾಡಿಕೊಂಡು ಕಳಾಸ್ವರೂಪದಲ್ಲಿದ್ದ ಶ್ರೀಚಾಮುಂಡೇಶ್ವರೀಶಕ್ತಿಯು ಅಂತ್ಯವಾದ ಕಳಾಸ್ವರೂಪವನ್ನೂ ದಾಟಿ ಅಚ್ಯುತವೆನಿಸುವ ಪರಬ್ರಹ್ಮವಾಗುವುದು. ಅಂದರೆ ಪ್ರಚೋದಯಾತ್ ಪದದಲ್ಲಿನ 'ತ್' ಅರ್ಧಾಕ್ಷರವು 'ತತ್' ಸ್ವರೂಪವಾಗುವುದೆಂಬ ಪ್ರತಿಪಾದನೆಯೇ ಅಚ್ಯುತವಾಗುವುದರ ತತ್ವವಾಗಿರುವುದು. ಈ 'ಅಚ್ಯುತ' ಸ್ಥಿತಿಯು ಗಾಯತ್ರೀ ಮಂತ್ರರೂಪವಾಗಿರುವುದೆಂದು ತಿಳಿಸುವುದಕ್ಕೆ ಆ ಗಾಯತ್ರೀ ದೇವಿಯ ಮಂತ್ರವನ್ನೇ ಈ ಕೆಳಗೆ ಬರೆದು ವಿವರಿಸಿರುವುದು.

ತತ್ ಸ ವಿ ತುಃ ವರೇಣಿಯಂ ಭರ್ಗಃ ದೇ ವ ಸ್ಯ
೧ ೨ ೩ ೪ ೫ ೬ ೭ ೮ ೯ ೧೦ ೧೧ ೧೨ ೧೩
ಧೀ ಮ ಹಿ ಧಿ ಯೋ ಯೋ ನಃ ಪ್ರ ಚೋ ದ ಯಾತ್
೧೪ ೧೫ ೧೬ ೧೭ ೧೮ ೧೯ ೨೦ ೨೧ ೨೨ ೨೩ ೨೪

'ತತ್' ಪದದಲ್ಲಿನ 'ತ್' ಅರ್ಧಾಕ್ಷರದ ತತ್ವವಾದ ಪರಾಶಕ್ತಿಯು ಸೃಷ್ಟಿ ಸ್ಥಿತಿ ಲಯರೂಪವಾಗಿ ಲಂಬಿಸಿಕೊಂಡಿರುವಂತೆ 'ಸವಿತುಃ' ಎಂಬ ಪದ ಮೊದಲು ಮಂತ್ರಾಂತ್ಯದವರೆಗೆ ಇರುವ ಅಕ್ಷರಗಳನ್ನೊಳಗೊಂಡು ಅಂತ್ಯದಲ್ಲಿ 'ತ್' ಎಂಬುದರಲ್ಲಿ ಪರ್ಯವಸಾನವಾಗಿದೆ. ಅಂದರೆ 'ತತ್' ಎಂಬ ಒಂದು ಪದವೇ ಅನೇಕ ಪದಗಳಾಗಿ ವಿಸ್ತರಿಸಿ ಆದಿ, ಮಧ್ಯ, ಅಂತ್ಯಪದಗಳಾಗಿ ಆದಿ ಅಂತ್ಯ ಗಳುಂಟಾಗುವುದರಿಂದ ಚ್ಯುತವೆನಿಸಿಕೊಳ್ಳುವುದು. ಒಂದರಿಂದ ಇಪ್ಪತ್ತುನಾಲ್ಕ ನೆಯ ಸಂಖ್ಯೆಯುವರೆಗೆ ಲಂಬಿಸಿರುವ ಪದಗಳ ಸರ್ವ ತತ್ವಗಳನ್ನೂ 'ತ್' ಎಂಬ ಅರ್ಧಾಕ್ಷರವು ತನ್ನೊಳಗೆ ತಿರೋಭೂತವಾಗಿ ಬೀಜರೂಪವಾಗಿ ಅಡಗಿಸಿ ಕೊಂಡು ತಾನೊಂದೇ 'ತ'ಕಾರದ ಜೊತೆಯಲ್ಲಿದ್ದು ಮುಂದಿನ ಪದಗಳು ಯಾವುವೂ ಇಲ್ಲದ ಕಾಲವೇ 'ಅಚ್ಯುತಸ್ಥಿತಿ' ಯಾಗಿರುವುದು. ಅಂದರೆ ಒಂದನೆಯ ಸಂಖ್ಯೆ ಯಿಂದ ಮುಂದಿರುವ ಸಂಖ್ಯೆಗಳ ತತ್ವಗಳೆಲ್ಲಾ ಪರಿಣಾಮ ರೂಪದಿಂದ ಅಂತರ್ಭವಿಸಿ ೧ ನೆಯ ಸಂಖ್ಯೆಯಲ್ಲಡಗುವುದರಿಂದ, ಇದಕ್ಕೆ 'ಅಚ್ಯುತ'ವೆಂದು ಹೆಸರು. ೧ ನೆಯ ಸಂಖ್ಯೆಯಾದ 'ತತ್' ಪದಕ್ಕೆ (ಪರಬ್ರಹ್ಮಕ್ಕೆ) ನಾಶವಿಲ್ಲದಿರು ವುದರಿಂದ ಅಚ್ಯುತವೆಂದು ಹೆಸರು. ಅಲ್ಲದೆ ಗಾಯತ್ರೀಮಂತ್ರದಲ್ಲಿ ಮೇಲೆ ಹೇಳಿರುವ ಮಹತ್ವಲ್ಲದೆ 'ಚ್ಯುತಾಚ್ಯುತ'ಗಳನ್ನು ಪ್ರತಿಪಾದಿಸುವ ಮತ್ತೊಂದು ಮಹತ್ವೂ ಇರುವುದು.

ತತ್ ಪದವನ್ನು ಬಿಟ್ಟು ಸವಿತುಃ ಪದದಿಂದ ಪ್ರಾರಂಭಮಾಡಿ ತತ್ವವನ್ನು ತಿಳಿಸೋಣ. ಸವಿತುಃ ಪದವು 'ಸ'ಕಾರದಿಂದ ಪ್ರಾರಂಭವಾಗುವುದು. ಮಂತ್ರದ ಅಂತ್ಯದಲ್ಲಿ 'ತ್' ಅರ್ಧಾಕ್ಷರವಿರುವುದು. ಅಂತ್ಯದ ಈ 'ತ್' ಅರ್ಧಾಕ್ಷರವು 'ಸವಿತುಃ' ಪದದ ಪ್ರಥಮಾಕ್ಷರವಾದ 'ಸ' ಎಂಬಕ್ಷರದವರೆಗಿರುವ ಎಲ್ಲಾ ಅಕ್ಷರಗಳ ತತ್ವಗಳನ್ನೂ ಅಡಗಿಸಿಕೊಂಡು 'ಸ' ಎಂಬ ಅಕ್ಷರದೊಡನೆ ಸೇರಿದರೆ 'ಸತ್' ಎಂಬ ಪದವಾಗುವುದು. 'ಸತ್' ಎಂದರೆ ಸದ್ರೂಪ ಅಥವಾ ಇರುವುದು ಎಂದರ್ಥ. "ತತ್" ಪದದೊಡನೆ 'ಸತ್' ಪದವನ್ನು ಸೇರಿಸಿದರೆ 'ತತ್ಸತ್' ಎಂದಾಗಿ ಅದು ಸದ್ರೂಪವೆಂದರ್ಥವಾಗುವುದು. ಇದರಂತೆಯೇ ಸವಿತೃಪದದ 'ವಿ' ಎಂಬಕ್ಷರವು ಮಂತ್ರಾಂತ್ಯದಲ್ಲಿರುವ 'ತ್' ಅಕ್ಷರದೊಡನೆ ಸೇರಿ 'ವಿತ್' ಎಂದಾಗಿ ಆ ಪರವಸ್ತುವು ಚಿದ್ರೂಪವಾದುದು ಎಂಬ ತತ್ವವನ್ನೂ ತಿಳಿಸುತ್ತದೆ.

'ವಿತ್' ಎಂದರೆ ಚೈತನ್ಯವೆಂದರ್ಥ. 'ವಿದ-ಜ್ಞಾನೇ' ಎಂಬುದೇ ವ್ಯುತ್ಪತ್ತಿಯು. ಈ ಮಹಾತತ್ವಕ್ಕನುಸಾರವಾಗಿ ವೀಣೆಯಲ್ಲಿ 'ಸವಿತುಃ' ಪದದ ಒಂದೆರಡನೆಯ ಮನೆಗಳು ಶುದ್ಧನಾದ ಈಶ್ವರನನ್ನು ಪ್ರತಿಪಾದಿಸುವ ಸ್ಥಾನಗಳಾಗಿಯೇ ಇವೆ ಯೆಂಬುದು ಮುದ್ದಾಗಿ ಹೊಂದುತ್ತದೆ. ಹೀಗೆ ಮೂರು ವಿಧದಿಂದಲೂ ಪರಬ್ರಹ್ಮ ಒಂದೇ ಇದ್ದ ಸ್ಥಿತಿಯೇ ಅಚ್ಯುತಸ್ಥಿತಿಯಾಗಿರುವುದು. ಈ ತತ್ವವು ಜೀವ ಮತ್ತು ಈಶ್ವರನಿಗೂ ಅನ್ವಯಿಸುವುದು. ಮುಖ್ಯವಾಗಿ 'ತ್' ಅರ್ಧಾಕ್ಷರದ ತತ್ವವಾದ ಪರಾಶಕ್ತಿಯು ಪ್ರಪಂಚಾಕಾರವಾಗಿ ಹೊರಸೂಸಿದಾಗ 'ತ'ಕಾರದ ತತ್ವವಾದ ಪರಬ್ರಹ್ಮವು ತನ್ನ ಸ್ಥಾನದಲ್ಲಿದ್ದುಕೊಂಡೇ ಬಿಂಬ, ಪ್ರತಿಬಿಂಬಗಳಂತೆ ಪ್ರತಿ ಫಲಿತಚೈತನ್ಯನೆನಿಸುವುದರಿಂದ, ಅಂತಹ ಪ್ರಪಂಚವಿದ್ದ ಕಾಲದಲ್ಲಿ ಪ್ರಪಂಚ ರೂಪವಾದ ಪ್ರಕೃತಿ ಮತ್ತು ಪ್ರತಿಫಲಿತಚೈತನ್ಯಗಳಿಗಿಂತ ಪರವೆನಿಸಿಕೊಂಡು 'ತ'ಕಾರದ ತತ್ವವಾದ ಪರಬ್ರಹ್ಮವು ಇದ್ದೇ ಇರುವುದು. 'ತ್' ಅರ್ಧಾಕ್ಷರವೇ ಪ್ರಪಂಚದ ಸೃಷ್ಟಿ ಪ್ರಳಯರೂಪವಾದ ಆವಿರ್ಭಾವ ತಿರೋಭಾವಗಳನ್ನು ಹೊಂದುವುದು. ಈ ಮೇಲಿನ ತತ್ವವನ್ನೂ, ವೀಣೆಗೆ ಅನ್ವಯವಾಡಿರುವ ವೇದಸ್ವರೂಪದ ತತ್ವಗಳನ್ನೂ ಈ ಕೆಳಗಿನ ವೇದವಾಕ್ಯ ದೃಢೀಕರಿಸುವುದು.

ಯೋವೇದಾದೌ ಸ್ವರಃಪ್ರೋಕ್ತೋ ವೇದಾಂತೇಚ ಪ್ರತಿಷ್ಠಿತಃ |
ತಸ್ಯಪ್ರಕೃತಿ ಲೀನಸ್ಯ ಯಃಪರಸ್ಸ ಮಹೇಶ್ವರಃ ||

ತಾ|| ವೇದದ ಆದಿಯಲ್ಲಿ ಯಾವುದು ಹೇಳಲ್ಪಟ್ಟಿತೋ ವೇದದ ಅಂತ್ಯದಲ್ಲಿಯೂ ಯಾವುದು ಇಡಲ್ಪಟ್ಟಿತೋ ಆ ಓಂಕಾರಸ್ವರಕ್ಕೂ, ವೇದ ಸ್ವರೂಪವಾದ ಶುದ್ಧಸತ್ವಗುಣದಲ್ಲಿ ಪ್ರತಿಫಲಿತಚೈತನ್ಯನೆನಿಸಿ ವೇದದಲ್ಲಿಯೇ ಲೀನವಾಗಿರುವ ಯಾವ 'ಸವಿತೃ' ಎಂಬ ಈಶ್ವರ ಚೈತನ್ಯವಿರುವುದೋ ಇದಕ್ಕೂ, ಶ್ರೇಷ್ಠವಾಗಿರುವ ಯಾವ ಪರಬ್ರಹ್ಮನಿರುವನೋ ಅವನೇ ಮಹೇಶ್ವರನು. ಪ್ರತಿಫಲಿತ ಚೈತನ್ಯವಾದ ಸಗುಣದಲ್ಲಿ ಕಾರ್ಯಭೇದಗಳಿಂದ ಈಶ್ವರನು ಚತುರ್ಮುಖಬ್ರಹ್ಮ, ವಿಷ್ಣು, ರುದ್ರರೆನಿಸಿಕೊಂಡಿರುವನಲ್ಲದೆ ಪರತತ್ವ ದಲ್ಲಿರುವುದು ಚಿದ್ವಸ್ತು ಒಂದೇ.

ಅಂದರೆ ಸೃಷ್ಟಿಕಾಲದಲ್ಲಿ ಉದಯಿಸಿದ ಬೀಜಸ್ವರೂಪವಾದ ಓಂಕಾರಸ್ವರವು ವೇದಗಳ ಸ್ವರೂಪವಾಗಿ ನಾದಬ್ರಹ್ಮದಲ್ಲಿಯೇ ಏರ್ಪಟ್ಟು ಸಪ್ತಸ್ವರಗಳ ರೂಪವಾಗಿ ಸಕಲ ಸೃಷ್ಟಿ ಸ್ಥಿತಿ ಕಾರ್ಯಗಳ ರೂಪಕ್ಕೆ ಬೆಳೆದು ಅನಂತರ ಲಯಮಾರ್ಗವನ್ನು ಅನುಸರಿಸಿ ವೇದಗಳ ವಿಭಾಗಗಳು ಪುನಃ ಒಂದಾಗುವ ಓಂಕಾರಸ್ಥಿತಿಗೆ ಬರುವುದೇ ವೀಣೆಗೂ ಗಾಯತ್ರೀಮಂತ್ರಕ್ಕೂ ಅನ್ವಯವಾಗುವ ತತ್ವವಾಗಿದೆ.

ಅಲ್ಲದೆ ಸೃಷ್ಟಿ ಸ್ಥಿತಿ ಲಯಗಳಿಗೆ ಮೂಲರೂಪವಾದುದೇ ನಾದಬ್ರಹ್ಮ.

ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃಪೃಥಿವೀ । ಪೃಥಿವ್ಯಾ ಓಷಧಯಃ।

ಎಂಬ **ತೈತ್ತರೀಯೋಪನಿಷತ್ತಿನ** ವಚನಾನುಸಾರವೂ ಪರಬ್ರಹ್ಮನಿಂದ ಅನಾಹತಸ್ವರೂಪವಾದ ಓಂಕಾರಸ್ವರವು ಪ್ರಥಮದಲ್ಲಿ ಉದಯಿಸಿ ವ್ಯಾಪಿಸುವುದು. ಹೀಗೆ ವ್ಯಾಪಿಸಿರುವ ಸ್ಥಳವೆಲ್ಲಾ ಆಕಾಶವೆಂದು ಕರೆಯಲ್ಪಡುವುದು. ಪರಬ್ರಹ್ಮನಿಂದ ಉದಯಿಸಿದ ಅನಾಹತಸ್ವರೂಪವಾದ ಓಂಕಾರಸ್ವರವು ಈ ಸ್ಥಿತಿಯಲ್ಲಿ 'ಕಳಾ' ಎಂದು ಕರೆಯಲ್ಪಡುವುದು. ಈ ಸ್ಥಿತಿಯೇ ವೇದಗಳ ಉದಯವೂ ಆಗಿದೆ. ಕಳಾ ಎಂಬುದು ಅವ್ಯಕ್ತಸ್ಥಿತಿಯೇ ಹೊರತು ವ್ಯಕ್ತಸ್ಥಿತಿಯಲ್ಲ. ಓಂಕಾರಸ್ವರವು ವ್ಯಾಪಿಸಿ ಯಾವಾಗ ಅವಕಾಶ (ಆಕಾಶ) ವಾಯಿತೋ ಆಗ ಚಲನರೂಪವಾದ ವಾಯುವು ಉದಯಿಸುವುದು. ಚಲನದಿಂದ ಶಬ್ದವುಂಟಾಗುವುದು. ಈ ಶಬ್ದವು ಆಕಾಶದಲ್ಲಿ ವ್ಯಾಪಿಸಿರುವ ಅನಾಹತಸ್ವರೂಪವಾದ ಓಂಕಾರಸ್ವರ (ಕಳಾ)ದ ಪ್ರತಿಧ್ವನಿಯಾಗಿರುವುದು. ಈ ಪ್ರತಿಧ್ವನಿರೂಪವಾದ ಶಬ್ದವು 'ಓಂಕಾರನಾದ' ಎಂದು ಕರೆಯಲ್ಪಟ್ಟು ಕಳಾ, ನಾದ, ಬಿಂದುಗಳಲ್ಲಿ ಎರಡನೆಯದಾಗಿರುವುದು. ಈ ಓಂಕಾರನಾದವು ವ್ಯಕ್ತಸ್ಥಿತಿ.

ವಾಯುವಿನ ಗುಣವಾದ ಚಲನೆಯು ಯಾವಾಗ ಉಂಟಾಗುವುದೋ ಆಗ ಶಾಖವು ಉತ್ಪತ್ತಿಯಾಗಿ ತೇಜಸ್ಸೆಂದು (ಅಗ್ನಿಯೆಂದು) ಕರೆಯಲ್ಪಟ್ಟು ರೂಪಕ್ಕೆ ಪ್ರಾರಂಭವಾಗುವುದು. ಅಗ್ನಿಯೆಂದು ಕರೆಯಲ್ಪಡುವ ತೇಜಸ್ಸು ಸ್ವಯಂಪ್ರಕಾಶನಾದ ಪರಬ್ರಹ್ಮನ ಪ್ರತಿಫಲಿತದ ಬೆಳಕು. ರೂಪಕ್ಕೆ ಪ್ರಾರಂಭದ ಸ್ಥಿತಿಯೇ ತೇಜಸ್ಸು. ಈ ರೂಪದ ಸ್ಥಿತಿಯೇ ಕಳಾ, ನಾದ, ಬಿಂದುಗಳಲ್ಲಿ 'ಬಿಂದು' ಎಂದು ಕರೆಯಲ್ಪಡುವುದು. ಈ ಬಿಂದುರೂಪಕ್ಕೆ ಸೂರ್ಯನೇ ಪ್ರತ್ಯಕ್ಷ ಪ್ರಮಾಣ. ಪಂಚಭೂತಗಳಲ್ಲಿನ ಅಗ್ನಿಯಿಂದ ಮುಂದಕ್ಕೆ ಜಲ, ಭೂಮಿಗಳೂ ಉಂಟಾಗುವುವು. ಲಯಕ್ರಮದಲ್ಲಿ ನಾದಬ್ರಹ್ಮವೇ ಭೂಮಿ, ಜಲ, ಅಗ್ನಿ, ವಾಯು, ಆಕಾಶಗಳನ್ನೆಲ್ಲಾ ಉಪಸಂಹಾರಮಾಡಿಕೊಂಡು ಓಂಕಾರಸ್ವರವೆನಿಸಿ ಅನಂತರ ಪರಬ್ರಹ್ಮವೇ ಆಗುವುದು. ಮುಖ್ಯವಾಗಿ ನಾದಬ್ರಹ್ಮವೇ ಪಂಚಭೂತಗಳಲ್ಲಿ ಮೂಲರೂಪವಾಗಿದೆ. ಹೀಗಿರುವುದರಿಂದಲೆ ಆಕಾಶಾದ್ವಾಯುಃ। ವಾಯೋರಗ್ನಿಃ। ಎಂಬುದಾಗಿ ಶ್ರುತಿಯು ತಿಳಿಸುವುದು.

ವೀಣೆಯ ೨೪ ಮನೆಗಳಿಗೆ ಗಾಯತ್ರೀಮಂತ್ರವನ್ನು ಅನ್ವಯಿಸಿದೆ. ಶ್ರೀಶಾರದಾಂಬೆಯ ಹಸ್ತಗಳಲ್ಲಿರುವ ವೀಣೆಗೂ ಗಾಯತ್ರೀಮಂತ್ರಕ್ಕೂ ಸಂಬಂಧವೇನೆಂದು ಅನುಮಾನಬರಬಹುದು. ಇದರ ತತ್ವವೇನೆಂದರೆ:— 'ತತ್' ಸ್ವರೂಪವಾದ ಗಾಯತ್ರೀ ಪರಾಶಕ್ತಿಯೇ ಜಗದ್ರೂಪವಾದ ವಿರಾಟ್‌ಸ್ವರೂಪ

ವಾಗುವುದಾಗಿಯೂ, ಜಗದ್ರೂಪದಿಂದ ಪುನಃ ಪರಾತ್ಪರವಸ್ತು ಒಂದೇ ಉಳಿಯುವ ಸ್ಥಿತಿಗೆ ಬರುವುದಾಗಿಯೂ ಇದೆ. ಇದೇ ೨೪ ಮಹಾಬೀಜಾಕ್ಷರಗಳುಳ್ಳ ಗಾಯತ್ರೀಮಂತ್ರದ ತತ್ತ್ವಾರ್ಥವಾಗಿದೆ. ಇದರ ವಿಚಾರವನ್ನು ಗಾಯತ್ರೀ ಮಂತ್ರವೇ 'ಓಂತತ್ಸತ್' ರೂಪವಾಗಿರುವ ತತ್ವದಲ್ಲಿ ವಿವರಿಸಿಯೇ ಇದೆ.

ಯಾವ ದೇವತಾ ಕಾರ್ಯವಾಗಲೀ ಮೂಲಾಧಾರವಾದ ಗಾಯತ್ರೀ ಮಂತ್ರದ ತತ್ವಪ್ರತಿಪಾದಕವಾದ ಸೃಷ್ಟಿ, ಸ್ಥಿತಿ, ಲಯಕ್ರಮಗಳಲ್ಲೇ ಕಾರ್ಯ ನಡೆಯಬೇಕಾಗಿದೆ. ಈ ತತ್ವಕ್ಕೆ ಸಂಧ್ಯಾತತ್ವಾರ್ಥದಲ್ಲಿ ಗಾಯತ್ರೀಜಪದ ಸಂದರ್ಭದಲ್ಲಿ ಗಾಯತ್ರೀಮಂತ್ರದಂತೆ 'ಪ್ರಚೋದಯಾತ್' ಪದವೇ ಅಂತ್ಯವಾಗುಳ್ಳ ಅನೇಕ ದೇವತಾಮಂತ್ರಗಳನ್ನು ಕೊಟ್ಟಿರುವುವುಗಳನ್ನು ಇಲ್ಲೂ ಬರೆದಿದೆ.

ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ ತನ್ನೋ ರುದ್ರಃ ಪ್ರಚೋದಯಾತ್ |
ತತ್ಪುರುಷಾಯ ವಿದ್ಮಹೇ ವಕ್ರತುಂಡಾಯ ಧೀಮಹಿ ತನ್ನೋ ದಂತಿಃ ಪ್ರಚೋದಯಾತ್ |
ತತ್ಪುರುಷಾಯ ವಿದ್ಮಹೇ ಚಕ್ರತುಂಡಾಯ ಧೀಮಹಿ ತನ್ನೋ ನಂದಿಃ ಪ್ರಚೋದಯಾತ್ |
ತತ್ಪುರುಷಾಯ ವಿದ್ಮಹೇ ಮಹಾಸೇನಾಯ ಧೀಮಹಿ ತನ್ನ ಷಣ್ಮುಖಃ ಪ್ರಚೋದಯಾತ್ |
ತತ್ಪುರುಷಾಯ ವಿದ್ಮಹೇ ಸುವರ್ಣಪಕ್ಷಾಯ ಧೀಮಹಿ ತನ್ನೋ ಗರುಡಃ ಪ್ರಚೋದಯಾತ್ |
ವೇದಾತ್ಮನಾಯ ವಿದ್ಮಹೇ ಹಿರಣ್ಯಗರ್ಭಾಯ ಧೀಮಹಿ ತನ್ನೋ ಬ್ರಹ್ಮಃ ಪ್ರಚೋದಯಾತ್ |
ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ತನ್ನೋ ವಿಷ್ಣುಃ ಪ್ರಚೋದಯಾತ್ |
ವಜ್ರನಖಾಯ ವಿದ್ಮಹೇ ತೀಕ್ಷ್ಣದಂಷ್ಟ್ರಾಯ ಧೀಮಹಿ ತನ್ನೋ ನಾರಸಿಂಹಃ ಪ್ರಚೋದಯಾತ್|
ಭಾಸ್ಕರಾಯ ವಿದ್ಮಹೇ ಮಹದ್ಯುತಿಕರಾಯ ಧೀಮಹಿ ತನ್ನೋ ಆದಿತ್ಯಃ ಪ್ರಚೋದಯಾತ್ |
ವೈಶ್ವಾನರಾಯ ವಿದ್ಮಹೇ ಲಾಲೀಲಾಯ ಧೀಮಹಿ ತನ್ನೋ ಅಗ್ನಿಃ ಪ್ರಚೋದಯಾತ್ |
ಕಾತ್ಯಾಯನಾಯ ವಿದ್ಮಹೇ ಕನ್ಯಕುಮಾರಿ ಧೀಮಹಿ ತನ್ನೋ ದುರ್ಗಿಃ ಪ್ರಚೋದಯಾತ್ |
ಮಹಾಲಕ್ಷ್ಮ್ಯೈಚ ವಿದ್ಮಹೇ ವಿಷ್ಣುಪತ್ನ್ಯೈಚ ಧೀಮಹಿ ತನ್ನೋ ಲಕ್ಷ್ಮೀಃ ಪ್ರಚೋದಯಾತ್ |
ಹಂಸಹಂಸಾಯ ವಿದ್ಮಹೇ ಪರಮಹಂಸಾಯ ಧೀಮಹಿ ತನ್ನೋ ಹಂಸಃ ಪ್ರಚೋದಯಾತ್ |

ಮುಖ್ಯವಾಗಿ 'ತತ್' ಪ್ರತಿಪಾದ್ಯವಾದ ಪರಾತ್ಪರವಸ್ತುವು ಬ್ರಹ್ಮ, ವಿಷ್ಣು, ರುದ್ರ ಮುಂತಾದ ಯಾವ ಯಾವ ದೇವತಾಶಕ್ತಿಗಳ ರೂಪವಾಗಿ ಸೃಷ್ಟಿ ಸ್ಥಿತಿ ಲಯಗಳಲ್ಲಿ ಕಾರ್ಯನಡೆಸಿದರೂ ಗಾಯತ್ರೀಮಂತ್ರದ ತತ್ವಕ್ರಮವನ್ನೇ ಅನುಸರಿಸಬೇಕು. ಇದರಂತೆ ಸರಸ್ವತೀ ತತ್ವವಾದ ನಾದಬ್ರಹ್ಮದ ಕಾರ್ಯವೂ, ಸಾವಿತ್ರೀ ತತ್ವವಾದ ತೇಜಸ್ಸಿನ ಕಾರ್ಯವೂ, ಲಕ್ಷ್ಮೀತತ್ವವಾದ ಆನಂದದ ಕಾರ್ಯಕ್ರಮಗಳೂ ಗಾಯತ್ರೀಮಂತ್ರದ ತತ್ವವಾದ ಜಗತ್ತಿನ ಸೃಷ್ಟಿ ಸ್ಥಿತಿ ಲಯಕ್ರಮದ ಆಧಾರವನ್ನು ಅನುಸರಿಸಿಯೇ ಕಾರ್ಯನಡೆಯುವುದು. ಸರ್ವದೇವತಾ ಕಾರ್ಯಕ್ರಮಗಳಿಗೂ ಗಾಯತ್ರೀ ಮಂತ್ರವೇ ಮೂಲಾಧಾರವಾಗಿರುವುದರಿಂದ ನಾದಬ್ರಹ್ಮದ ಕಾರ್ಯವಾದ ವೀಣೆಯೂ ಗಾಯತ್ರೀ ಮಂತ್ರದ ತತ್ವವನ್ನೇ ಹೊಂದಿರುವುದು. ಅಸ್ಮದಾದಿಗಳು ನುಡಿಸುವ ವೀಣೆಯೂ ಇಂತಹ ನಾದಬ್ರಹ್ಮದ ಮಹತ್ತಿನ ಆಧಾರವನ್ನು ಅನುಸರಿಸಿದೆ.

# ೩ ನೆಯ ಪ್ರಕರಣ

೧. ವೇದಕ್ಕೂ ವೀಣೆಯ ಪಕ್ಕದ ತಂತಿಗಳ ಕಾರ್ಯವಾದ ತಾಳ ಮುಂತಾದ ಸಂಗೀತಶಾಸ್ತ್ರದ ಲಕ್ಷಣಗಳಿಗೂ ಸಮನ್ವಯ.

೨. ಸಪ್ತಸ್ವರಗಳ ಮಹಿಮೆ.

೩. ವೀಣೆಗೂ ಮನುಷ್ಯದೇಹಕ್ಕೂ ಸಮನ್ವಯ.

೪. ನಾದೋಪಾಸನೆಯ ವಿಚಾರ.

## ೧. ವೇದಕ್ಕೂ ವೀಣೆಯ ಪಕ್ಕದ ತಂತಿಗಳ ಕಾರ್ಯವಾದ ತಾಳ ಮುಂತಾದ ಸಂಗೀತಶಾಸ್ತ್ರದ ಲಕ್ಷಣಗಳಿಗೂ ಸಮನ್ವಯ.

ಸ್ವರಗಳಿಂದ ಪ್ರಥಮದಲ್ಲಿ ರಾಗಗಳುಂಟಾಗುವುವು. ಅಕ್ಷರವೂ ಸ್ವರೋಚ್ಚಾರಣೆಯೂ ಸೇರಿ ರಾಗವೆನಿಸುವುದು. ಅಂದರೆ ಸ್ವರವರ್ಣಗಳಿಂದ ಅಲಂಕೃತವಾಗಿ ರಸಿಕರ ಚಿತ್ತವನ್ನು ರಂಜನೆಮಾಡುವ ಭಾವದೊಡಗೂಡಿದ ಧ್ವನಿ ವಿಶೇಷವು ರಾಗವೆನಿಸುವುದು. ಸ್ವರಗಳನ್ನನುಸರಿಸಿದ ಭಾವದೊಡಗೂಡಿದ ಧ್ವನಿವಿಶೇಷವು ಅನೇಕ ವಿಧವಾಗಿರಬಹುದಾದುದರಿಂದ ಅನೇಕ ರಾಗಗಳುಂಟಾಗುವುವು ಅಲ್ಲದೆ ಅಕ್ಷರಗಳನ್ನು ಸಮಸ್ಥಿತಿಯಲ್ಲಿ ಉಚ್ಚರಿಸುವ ಸ್ಥಾಯಿ, ಉನ್ನತ ಸ್ಥಾನದಲ್ಲಿ ಉಚ್ಚರಿಸುವ ಆರೋಹಿ, ತಗ್ಗಿನಲ್ಲಿ ಉಚ್ಚರಿಸುವ ಅವರೋಹಿ, ಈ ಮೂರೂ ಸೇರುವ ಸ್ಥಿತಿಯಾದ ಸಂಚಾರಿಗಳೆಂಬ ನಾಲ್ಕು ವಿಧಗಳು ಸಂಗೀತದಲ್ಲಿರುವುವು. ರಾಗವು ಯಾವಾಗ ಕಾಲ, ಕ್ರಿಯಾ, ಪರಿಮಾಣಗಳೊಡಗೂಡುವುದೋ ಆಗ ತಾಳದೊಡನೆ ಸಂಬದ್ಧವಾಗುವುದು. ತಾಳ ಛಂದೋಬದ್ಧಗಳಿಲ್ಲದೆ ಸ್ವರಗಳಿಂದಲೂ, ಸ್ಥಾಯಿಮೊದಲಾದ ವರ್ಣಗಳಿಂದಲೂ ಕೂಡಿ ಏಕಸರಣಿಯಿಂದ ಪ್ರವಹಿಸುವ ಮನೋರಂಜಕವಾದ ಧ್ವನಿಯೇ ಅನಿಬದ್ಧಗಾನರೂಪವಾದ ರಾಗಾಲಾಪನೆಯೆನಿಸುವುದು.

ಸಂಗೀತಶಾಸ್ತ್ರದಲ್ಲಿ ಸಪ್ತಸ್ವರಗಳನ್ನು ಗ್ರಾಮತ್ರಯವೆಂಬದಾಗಿ ವಿಂಗಡಿಸಿ ಷಡ್ಜ, ಗಾಂಧಾರ, ಮಧ್ಯಮಗಳೆಂಬ ಹೆಸರುಗಳನ್ನು ಕೊಟ್ಟಿರುವುದು. ಶ್ರವಣ ಮಾಡತಕ್ಕವರನ್ನು ಪರವಶಗೊಳಿಸುವ ಶಕ್ತಿಯು ಗಾನವಿದ್ಯೆಯಲ್ಲಿರುವುದರಿಂದ ಸಂಗೀತಶಾಸ್ತ್ರದಲ್ಲಿ ಇದಕ್ಕೆ 'ಮೂರ್ಛನೆ'ಎಂದು ಹೆಸರು. ಪ್ರತಿಯೊಂದು

ವಸ್ತುವೂ ಕಲಾಪೂರ್ಣವಾಗಲು ರಮಣೀಯವಾದ ತನ್ನ ಅಂಗಗಳೊಡನೆ ನ್ಯೂನತೆಯಿಲ್ಲದೆ ಶೋಭಾಯಮಾನವಾಗಿರಬೇಕು. ಒಂದು ವಸ್ತುವು ಅಲಂಕಾರದೊಡನೆ ಇರುವುದೆಂದು ಹೇಳಲ್ಪಡುವಂತೆ ರಾಗವು ಪೂರ್ಣತೆಯನ್ನು ಹೊಂದಿರುವುದೆಂಬುದನ್ನು ಸೂಚಿಸುವುದಕ್ಕೆ ಸಂಗೀತಶಾಸ್ತ್ರದಲ್ಲಿ ಅಲಂಕಾರವೆನ್ನುವರು.

ವೀಣೆಯಲ್ಲಿ ನುಡಿಸಲ್ಪಡುವ ಮೇಲೆ ವಿವರಿಸಿರುವ ಸಂಗೀತಶಾಸ್ತ್ರದ ಅಂಶಗಳೆಲ್ಲಾ ಸಂಗೀತಶಾಸ್ತ್ರಕ್ಕೂ ಮೂಲರೂಪವಾಗಿರುವ ವೇದವನ್ನು ಅನುಸರಿಸಿರುವುವು. ಇವುಗಳ ತತ್ವಗಳನ್ನೊಂದೊಂದಾಗಿ ವಿವರಿಸೋಣ. ಪರಬ್ರಹ್ಮನಿಂದ ಉದಯಿಸಿದ ಓಂಕಾರಸ್ವರವು ಪ್ರಥಮದಲ್ಲಿ ಸರ್ವ ವರ್ಣಗಳ ಸಾರಭೂತವಾದ ಮಾತೃಕಾವರ್ಣರೂಪವಾಗಿ ಪರಿಣಮಿಸುವುದು. ಅನಂತರ ಮಾತೃಕಾವರ್ಣರೂಪವಾದ ಮೂಲಶಕ್ತಿಯೇ ವರ್ಣಗಳ ಭಾವವನ್ನು ಪಡೆಯುವುದು. ವರ್ಣಗಳಲ್ಲಿ ಉದಾತ್ತ, ಅನುದಾತ್ತ, ಸ್ವರಿತ ಪ್ರಚಯಗಳೆಂಬ ವೇದದಲ್ಲಿರುವ ನಾಲ್ಕು ಭೇದಗಳನ್ನನುಸರಿಸಿ ಸಂಗೀತಶಾಸ್ತ್ರದಲ್ಲಿಯೂ ಸ್ಥಾಯಿ, ಆರೋಹಿ, ಅವರೋಹಿ, ಸಂಚಾರಿಗಳೆಂಬ ನಾಲ್ಕು ಭೇದಗಳಿರುವುವು. ಸೃಷ್ಟಿ, ಸ್ಥಿತಿ, ಲಯದ ಕಾರ್ಯಗಳಿಗೋಸ್ಕರ ಈಶ್ವರನ ರಾಜ್ಯಾಧಿಕಾರವರ್ಗದವರಾಗಿ ದೇವತೆಗಳು ಏರ್ಪಟ್ಟು ವೇದಾಭಿಮಾನಶಕ್ತಿಗಳಾಗಿರುವರು. ವೇದದ ಈ ಅನೇಕ ದೇವತಾಶಕ್ತಿಗಳನ್ನನುಸರಿಸಿ ಸಂಗೀತ ಶಾಸ್ತ್ರದಲ್ಲಿಯೂ ರಾಗಗಳುಂಟಾಗಿರುವುವು ಪ್ರಕೃತಿರೂಪವಾದ ಶುದ್ಧ ವೇದಾಧ್ಯಯನವು ಪದ, ಕ್ರಮ, ಜಟೆ, ಘನ ಮುಂತಾದ ವಿಕೃತಿಗಳ ಸಂಬಂಧವಾಗುವುದನ್ನನುಸರಿಸಿಯೇ ಸಂಗೀತಶಾಸ್ತ್ರದಲ್ಲಿಯೂ ಶುದ್ಧವಾದ ಗಾನವು ಕಾಲ, ಕ್ರಿಯಾ, ಪರಿಮಾಣಸ್ವರೂಪವಾದ ತಾಳಕ್ಕೆ ಸಂಬಂಧಿಸುವುದಾಗಿದೆ. ಪದ, ಕ್ರಮ, ಜಟೆ, ಘನ ಮುಂತಾದ ವಿಕೃತಿಗಳ ಸಂಬಂಧವಿಲ್ಲದ ಶುದ್ಧವಾದ ವೇದಾಧ್ಯಯನವನ್ನು ಅನುಸರಿಸಿ ಸಂಗೀತದಲ್ಲಿಯೂ ತಾಳನಿಬದ್ಧವಿಲ್ಲದೆ ಏಕಸರಣಿಯಿಂದ ಪ್ರವಹಿಸುವ ಅನಿಬದ್ಧಗಾನರೂಪವಾದ ರಾಗಾಲಾಪನೆ ಇದೆ.

ವೇದದಲ್ಲಿ ಮಂತ್ರಗಳೆಲ್ಲವೂ ಅಭಿಮಾನಿದೇವತಾಶಕ್ತಿಗಳಿಗೆ ಸಂಬಂಧಪಟ್ಟವುಗಳಾಗಿವೆ ಎಲ್ಲಾ ಅಭಿಮಾನಿದೇವತಾಶಕ್ತಿಗಳೂ ಬ್ರಹ್ಮ, ವಿಷ್ಣು, ರುದ್ರರೆಂಬ ಮೂರು ಪ್ರಧಾನ ದೇವತಾಪಂಗಡಗಳಲ್ಲಿ ಅಂತರ್ಭೂತವಾಗುವುವು. ಈ ತತ್ವವನ್ನನುಸರಿಸಿ ಸಂಗೀತಶಾಸ್ತ್ರದಲ್ಲಿಯೂ ಎಲ್ಲಾ ಸ್ವರಗಳೂ ಪ್ರಧಾನವಾದ ಮೂರು ಸ್ವರಗಳನ್ನೂ ಅನುವರ್ತಿಸಿಕೊಂಡಿರುವ ಷಡ್ಜ, ಗಾಂಧಾರ, ಮಧ್ಯಮಗಳೆಂಬ ಗ್ರಾಮತ್ರಯವು ಇರುವುದಾಗಿದೆ. ಕಿವಿಗೆ ಇಂಪಾಗಿ ಪರವಶಗೊಳಿಸುವ ವೇದಘೋಷದ ಶಕ್ತಿಯನ್ನನುಸರಿಸಿ ಸಂಗೀತಶಾಸ್ತ್ರದಲ್ಲಿಯೂ ಮೂರ್ಛನೆ

ಯೆಂಬುದು ಇರುವುದು. ವೇದದಲ್ಲಿರುವ ಸಪ್ತಮಾತೃಕಾಶಕ್ತಿಯ ಸಂಜ್ಞಾ ರೂಪವಾದ ಭೂಃ, ಭುವಃ, ಸುವಃ, ಮಹಃ, ಜನಃ, ತಪಃ, ಸತ್ಯಂ ಎಂಬ ಸಪ್ತವ್ಯಾಹೃತಿಗಳನ್ನನುಸರಿಸಿ ಸಂಗೀತದಲ್ಲಿಯೂ ಸಪ್ತಸ್ವರಗಳ ಸಂಜ್ಞಾರೂಪವಾಗಿ ಸ, ರಿ, ಗ, ಮ, ಪ, ಧ, ನಿ ಗಳೆಂಬ ಏಳು ಅಕ್ಷರಗಳಿರುವುವು. ವೇದದಲ್ಲಿರುವ ಸರ್ವಲಕ್ಷಣಗಳ ಪೂರ್ಣತೆಯನ್ನೊಳಗೊಂಡ ಅಲಂಕಾರವೆಂಬುದನ್ನು ಅನುಸರಿಸಿ ಸಂಗೀತದಲ್ಲಿಯೂ ಅಲಂಕಾರವೆಂಬುದು ಇರುವುದು. ವೇದಗಳಲ್ಲಿ ಸಾಮವೇದವು ಗೀತರೂಪವಾದುದು. ಅಂದರೆ ಉಪಾಸನಾರೂಪವಾದ ಶಕ್ತಿಯುಳ್ಳದ್ದು. ಈ ಶಕ್ತಿಯನ್ನನುಸರಿಸಿಯೇ ಸಂಗೀತವು ನಾದೋಪಾಸನೆಯ ರೂಪವಾದುದು. ಹೀಗೆ ಲಕ್ಷಣದಲ್ಲಿ ವೇದ ಮತ್ತು ಸಂಗೀತಗಳೆರಡೂ ಸಮವಾಗಿದ್ದರೂ ವೇದವು ಸಂಗೀತಕ್ಕಿಂತ ವಿಲಕ್ಷಣವಾಗಿರುವುದು. ಮುಂದೆ ಗ್ರಂಥಾಂತ್ಯದವರೆಗೂ ವಿವರಿಸಿರುವುದರಲ್ಲಿ ವೇದದ ಮಹಿಮೆಯೂ ಪವಿತ್ರತೆಯೂ ತಿಳಿಯುವುದು.

ವೀಣೆಯ ಮೇಲಿನ ನಾಲ್ಕು ತಂತಿಗಳು ಶುದ್ಧಸತ್ವಗುಣದ ತತ್ವದವುಗಳೆಂದೂ, ವೀಣೆಯ ಪಕ್ಕದ ಮೂರು ತಂತಿಗಳೇ ಕಾಲ, ಕ್ರಿಯಾ, ಪರಿಮಾಣಗಳ ಸ್ವರೂಪವಾದ ತಾಳದ ತಂತಿಗಳಾಗಿ ಮಲಿನಸತ್ವ, ರಜಸ್ತಮೋಗುಣಗಳ ತತ್ವಗಳದ್ದೆಂದೂ ಪ್ರಥಮ ಪ್ರಕರಣದಲ್ಲಿಯೆ ತಿಳಿಸಿದೆ. ತಾಳವು ಕಾಲ, ಕ್ರಿಯಾ ಪರಿಮಾಣಗಳಾದ ಮೂರು ಸ್ವರೂಪಗಳುಳ್ಳದ್ದೆಂದು ಸಂಗೀತಶಾಸ್ತ್ರವೇ ತಿಳಿಸುವುದು.

ಕಾಲಃ ಕ್ರಿಯಾಚ ಮಾನಂಚ ಸಂಭವಂತಿ ಯದಾಸಹ |
ತದಾ ತಾಳಸ್ಯ ಸಂಭೂತಿ ರಿತಿಜ್ಞೇಯಂ ವಿಚಕ್ಷಣೈಃ ||

ಅಂದರೆ ಕಾಲ, ಕ್ರಿಯಾ, ಪರಿಮಾಣಗಳಾದ ಮೂರೂ ಯಾವಾಗ ಏಕಕಾಲದಲ್ಲಿ ಸೇರುವುದೋ ಆಗ ತಾಳಕ್ಕೆ ಉತ್ಪತ್ತಿಯೆಂದು ತಿಳಿಯತಕ್ಕದ್ದು. ತಾಳದ ಸ್ವರೂಪವನ್ನು ತಿಳಿಸುವ ವೀಣೆಯ ಪಕ್ಕದ ಮೂರು ತಂತಿಗಳ ತತ್ವವಾದ ಮಲಿನಸತ್ವ, ರಜಸ್ತಮೋಗುಣಗಳೂ, ತಾಳದಂತೆ ಕಾಲ, ಕ್ರಿಯಾ, ಪರಿಮಾಣಗಳ ಸ್ವರೂಪವಾದವುಗಳು.

ಹೇಗೆಂದರೆ, ಪರಿಮಾಣವೆಂದರೆ ಅಳತೆಗೆ ಒಳಪಡುವಿಕೆ. ಇದು ತಮೋಗುಣಸ್ವರೂಪವಾಗಿರುವುದು. ಅಳತೆಗೊಳಪಡುವ ಜಡ ಮತ್ತು ಸ್ಥೂಲ ಪದಾರ್ಥಗಳೆಲ್ಲಾ ತಮೋಗುಣದಿಂದಲೇ ಪ್ರಥಮದಲ್ಲಿ ಉತ್ಪನ್ನವಾದುವು. ವ್ಯವಹಾರಕಾಲದಲ್ಲಿ ಉಂಟಾಗುವ ಮಿಥ್ಯಾಭೂತವಾದ ವಿಷಯಾದಿಗಳು ಸತ್ಯವಾದುವೆಂಬ ಭ್ರಾಂತಿಯೂ, ಬುದ್ಧಿಮಾಂದ್ಯವೂ, ನಿದ್ರಾಸ್ವರೂಪವೂ, ಅಳತೆಗೊಳಪಡುವ ತಮೋಗುಣದ್ದಾಗಿರುವುದು. ರಜೋಗುಣವಾದ ವಿಕ್ಷೇಪಶಕ್ತಿ

ಯಿಂದಲೇ ಸೃಷ್ಟಿಕ್ರಮದಲ್ಲಿ ವಿಭಾಗದ ಕಾರ್ಯಗಳು ಬೆಳವಣಿಗೆ ಮತ್ತು ರೂಪಕ್ಕೆ ತಳುವ ಕಾರ್ಯಗಳು ನಡೆಯುವುವು. ವ್ಯವಹಾರಕಾಲದಲ್ಲಿ ವಿಷಯವ್ಯಾಪಾರಾಭಿವೃದ್ಧಿಗೆ ಅನುಕೂಲವಾಗಿ ಇಂದ್ರಿಯ, ಮನಸ್ಸುಗಳನ್ನು ವಿಷಯಗಳಿಗೆಳೆಯುವ ಮತ್ತು ಕಾಮ, ಕ್ರೋಧ, ಮದ, ಮತ್ಸರ ಸ್ವಭಾವಗಳನ್ನುಂಟುಮಾಡುವ ಕಾರ್ಯವೇ ವಿಕ್ಷೇಪಶಕ್ತಿಯಾದ ರಜೋಗುಣಕ್ಕೆ ಸೇರಿದುದು. ವಿಕ್ಷೇಪವೆಂದರೆ ಕ್ರಿಯಾರೂಪ. ಮಲಿನಸತ್ವಗುಣವು ಸೃಷ್ಟಿಕಾರ್ಯಗಳನ್ನು ಕೊಂಚಮಟ್ಟಿಗೆ ಆಹ್ಲಾದಕರವನ್ನಾಗಿ ಮಾಡುವ ಸ್ವಭಾವವುಳ್ಳದ್ದು ಮತ್ತು ವ್ಯವಹಾರಕಾಲದಲ್ಲಿ ಸಾತ್ವಿಕಸ್ವಭಾವವಾಗಿಯೂ, ಧರ್ಮಮಾರ್ಗದ ಸ್ಥಿತಿಯಾಗಿಯೂ ಇರುವುದು. ಆದುದರಿಂದ ಮಲಿನಮಾಯೆಯೆನಿಸುವ ಮಲಿನಸತ್ವ ರಜಸ್ತಮೋಗುಣಗಳೂ ಕಾಲ, ಕ್ರಿಯಾ, ಪರಿಮಾಣಸ್ವರೂಪಗಳಾಗಿರುವಂತೆ, ತಾಳವು ಕಾಲ, ಕ್ರಿಯಾ ಪರಿಮಾಣಸ್ವರೂಪವಾಗಿರುವುದು. ತಾಳವೆನ್ನುವ ಶಬ್ದಕ್ಕೆ ಸಂಗೀತ ರತ್ನಾಕರದಲ್ಲಿ : —

ತಾಳ ಸ್ತಲಪ್ರತಿಷ್ಠಾಯಾ ಮಿತಿಧಾತೋಃ ಪ್ರಯೋಗತಃ ।
ನೃತ್ಯಗೀತಂ ತಥಾವಾದ್ಯಂ ಯತಸ್ತಾಳೇ ಪ್ರತಿಷ್ಠಿತಮ್ ॥

ಅಂದರೆ 'ತಲಃಪ್ರತಿಷ್ಠಾಯಾಂ' ಎಂಬ ಧಾತುವಿನಿಂದ ತಾಳಶಬ್ದವು ಹುಟ್ಟಿರುವುದು. ನೃತ್ಯ ಗೀತ ವಾದ್ಯಗಳು ತಾಳದಲ್ಲಿ ಚೆನ್ನಾಗಿ ನಿಲ್ಲುವುವು. ವೀಣೆಯ ಮೇಲ್ಭಾಗದ ತಂತಿಗಳ ಕಾರ್ಯವಾದ ಸ್ವರಗಳಿಂದುತ್ಪನ್ನವಾಗುವ ರಾಗವು ಪಕ್ಕದ ತಂತಿಗಳ ಕಾರ್ಯವಾದ ತಾಳವನ್ನನುಸರಿಸಿ ನಿಲ್ಲುವುದೇ ಪ್ರತಿಷ್ಠಿತವೆಂಬುದರ ತತ್ವ. ಇದರಂತೆ ಪ್ರಪಂಚವೇ ಕಾಲ, ಕ್ರಿಯಾ, ಪರಿಮಾಣಗಳ ಸ್ವರೂಪವಾದುದು. ಅಂದರೆ ಸೃಷ್ಟಿ, ಸ್ಥಿತಿ, ಲಯಗಳು ರಜಸ್ತಮೋಗುಣಗಳಿಂದ ಕಾಲ ಕರ್ಮ ಪರಿಮಾಣಗಳುಳ್ಳದ್ದಾಗಿರುವುವು. ಶುದ್ಧಸತ್ವಗುಣವು ಇಂತಹ ಪ್ರಪಂಚವನ್ನನುಸರಿಸಿ ಪ್ರಕಾಶಪಡಿಸಿಕೊಂಡಿರುವಿಕೆಯ ತತ್ವವೇ ವೀಣೆಯ ಮೇಲ್ಭಾಗದ ತಂತಿಯ ಕಾರ್ಯವಾದ ರಾಗವು ಪಕ್ಕದ ತಂತಿಗಳ ಕಾರ್ಯವಾದ ತಾಳದೊಡಗೂಡುವುದಾಗಿರುವುದು. ಶುದ್ಧಸತ್ವಗುಣವು ಮಲಿನಮಾಯಾರೂಪವಾದ ರಜಸ್ತಮೋಗುಣಗಳನ್ನನುಸರಿಸಿ ಪ್ರಕಾಶಪಡಿಸಿಕೊಂಡಿದ್ದರೂ, ತಾನು ರಜಸ್ತಮೋಗುಣಗಳ ಬದ್ಧತೆಗೊಳಗಾಗದೆ ಸ್ವತಂತ್ರವಾಗಿಯೂ, ನಿರ್ಲಿಪ್ತವಾಗಿಯೂ, ರಜಸ್ತಮೋಗುಣಗಳಿಗೆ ನಿಯಂತೃವಾಗಿಯೂ ಇರುವ ತತ್ವವೇ ಸ್ವರಗಳಿಂದುತ್ಪನ್ನವಾದ ರಾಗವು ತಾಳಬದ್ಧವಾಗದೆ ಅನಿಬದ್ಧಗಾನ ರೂಪವಾದ ರಾಗವೆನಿಸಿಕೊಂಡು ಸ್ವತಂತ್ರವಾಗಿರುವುದು. ಹೇಗೆಂದರೆ ವೀಣೆಯಲ್ಲಿ ಪಕ್ಕದ ತಂತಿಗಳ ಕಾರ್ಯವಾದ ತಾಳಗಳಿಲ್ಲದೆ ಮೇಲಿನ ತಂತಿಗಳಿಂದ ರಾಗಾಲಾಪನೆಯನ್ನು ನುಡಿಸಿದರೆ ಎಷ್ಟು ಆನಂದಕರವಾಗಿರುವುದೋ ಇದು ಸರ್ವರಿಗೂ ತಿಳಿದ ವಿಚಾರವಾಗಿದೆ. ತಾಳವಿಲ್ಲದ ರಾಗಾಲಾಪನೆಯೇ ಆನಂದಕರವಾದುದು.

ಆನಂದವೇ ಸತ್ವಗುಣ. ವೀಣೆಯ ಮೇಲಿನ ತಂತಿಗಳ ಕಾರ್ಯದಂತೆ, ಶುದ್ಧವಾದ ವೇದಾಧ್ಯಯನವೂ ಆನಂದಕರವಾಗಿಯೂ, ಪವಿತ್ರವಾಗಿಯೂ, ಶುದ್ಧಸತ್ವಗುಣ ಪ್ರಧಾನರಾದ ದೇವತೆಗಳಿಗೆ ನಿಕಟಸಂಬಂಧವನ್ನು ಉಂಟುಮಾಡುವುದಾಗಿಯೂ ಇರುವುದು.

ತಾಳಕ್ಕೆ ಮುಕ್ತಾಯವಿರುವುದೆಂದರೆ ಕಾಲ, ಕ್ರಿಯಾ, ಪರಿಮಾಣಗಳಿಗೆ ನಾಶವುಂಟು. ವೀಣೆಯ ಮೇಲ್ಭಾಗದ ನಾಲ್ಕುತಂತಿಗಳ ತತ್ವಪ್ರತಿಪಾದಕವಾದ ನಾಲ್ಕು ವೇದಸ್ವರೂಪವಾದ ಶುದ್ಧಸತ್ವಗುಣವೂ ವೇದಗಳ ಅನುವರ್ತಿಯಾದ ವೀಣೆಯ ಪಕ್ಕದ ತಂತಿಗಳ ತತ್ವವಾದ ರಜಸ್ತಮೋಗುಣಗಳೂ ಕಾರ್ಯಗಳಲ್ಲಿ ಒಂದಕ್ಕೊಂದು ಕಲೆತು ಜಗತ್ತಿನ ಸ್ವರೂಪವಾಗಿರುವುದಾದರೂ, ತಾಳಕ್ಕೆ ಮುಕ್ತಾಯವಿರುವಂತೆ ರಜಸ್ತಮೋಗುಣಗಳು ಪರಿಣಾಮಭೇದದಿಂದ ಗುಣಸಾಮ್ಯಾವಸ್ಥೆಗೆ ಬರುವುದರ ಮೂಲಕ ಶುದ್ಧಸತ್ವದಲ್ಲಿ ಲಯವಾಗಿ ಕಡೆಗೆ ಓಂಕಾರ ಸ್ವರಶಕ್ತಿಯಲ್ಲಡಗುವುವು. ಅಂದರೆ ಶುದ್ಧವೇದಾಧ್ಯಯನವು ಪ್ರಕೃತಿಸ್ವರೂಪವು. 'ಅಧ್ಯಯನಸ್ಯ ಸಾಕ್ಷಾತ್ಪ್ರಕೃತಿತ್ವಂ' ಎಂಬ ಶ್ರುತ್ಯಾಧಾರವೂ ಇರುವುದು. ಶುದ್ಧ ವೇದಾಧ್ಯಯನಕ್ಕೆ ಪದ, ಕ್ರಮ, ಘನ ಮುಂತಾದುವುಗಳು ವಿಕೃತಿಸ್ವರೂಪಗಳು. ಈ ವಿಕೃತಿಗಳಿಲ್ಲದ ಶುದ್ಧಸಂಹಿತಾ ಪಾಠಕಾಲದಲ್ಲಿ ಪದ, ಕ್ರಮ ಮುಂತಾದ ವಿಕೃತಿಗಳು ಶುದ್ಧವಾದ ಅಧ್ಯಯನದಲ್ಲಡಗುವುವು. ಇದರಂತೆಯೇ ತಾಳವು ಮುಕ್ತಾಯವನ್ನು ಪಡೆದು ಅನಿಬದ್ಧರಾಗದಲ್ಲಡಗುವುದು. ರಾಗವು ಸ್ವರದಲ್ಲಡಗುವುದು. ಸ್ವರವು ನಿಶ್ಶಬ್ದವಾದ ಪರಬ್ರಹ್ಮವಾಗುವುದು. ಇದರಂತೆಯೇ ಕಾಲಕ್ರಿಯಾ ಪರಿಮಾಣ ಸ್ವರೂಪವಾದ ರಜಸ್ತಮೋಗುಣಗಳು ಪರಿಣಾಮ ಭೇದದಿಂದ ಶುದ್ಧಸತ್ವದಲ್ಲಿ (ಪ್ರಕೃತಿಯಲ್ಲಿ) ಅಡಗುವುವು. ಪ್ರಕೃತಿಯು ಪರಬ್ರಹ್ಮದಲ್ಲಡಗುವುದು.

ಆದುದರಿಂದ ಪದ, ಕ್ರಮ, ಘನ ಮುಂತಾದ ವಿಕೃತಿಗಳಿಗೆ ಶುದ್ಧವಾದ ವೇದಾಧ್ಯಯನವು ಹೇಗೆ ಜನಕಸ್ಥಾನವಾಗಿದೆಯೋ, ಮಲಿನಸತ್ವ ರಜಸ್ತಮೋ ಗುಣಗಳಿಗೆ ಶುದ್ಧಸತ್ವವು ಹೇಗೆ ಜನಕಸ್ಥಾನವಾಗಿದೆಯೋ ಹಾಗೆಯೇ ತಾಳಗಳಿಗೂ ಸ್ವರಗಳೇ ಜನಕಸ್ಥಾನಗಳಾಗಿವೆ. ಈ ತತ್ವಕ್ಕನುಸಾರವಾಗಿ ಸಪ್ತ ಸ್ವರಗಳಿರುವಂತೆ ಸಪ್ತತಾಳಗಳೇ ಇರುತ್ತವೆ. ಈ ತತ್ವಕ್ಕನುಸಾರವಾಗಿಯೇ ವೀಣೆಯ ಪಕ್ಕದ ತಂತಿಗಳಿಗೆ ಅನುಸಾರಣಿ, ಅನುಪಂಚಮ, ಅನುಮಂದ್ರಗಳೆಂಬ ಹೆಸರುಗಳು ಬಂದಿರುವುವು. ಮುಖ್ಯವಾಗಿ ಪಕ್ಕದ ಮತ್ತು ಮೇಲಿನ ತಂತಿಗಳೆಲ್ಲಾ ಸೇರಿಯೇ ಪೂರ್ಣವಾದ್ಯವಾದ ವೀಣೆಯೆನಿಸಿರುವುದರಿಂದ ತಾಳದ ಕಾರ್ಯದ ತತ್ವವೂ ವೇದದಲ್ಲಿದ್ದೇ ಇರುವುದು. ಅಂದರೆ ರಜಸ್ತಮೋ ಮಲಿನ

ಸತ್ವ, ಶುದ್ಧಸತ್ವಗುಣಗಳ ಸೃಷ್ಟಿ, ಸ್ಥಿತಿ, ಲಯಗಳ ವಿವರಗಳೆಲ್ಲಾ ವೇದ ಭಂಡಾರದಲ್ಲಿದ್ದೇ ಇರುವುವು.

ಮುಖ್ಯವಾಗಿ 'ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್' ಎಂಬದಾಗಿ ವೇದಭಾಷ್ಯದಲ್ಲಿರುವ ಶ್ರೀವಿದ್ಯಾರಣ್ಯರವರ ವಾಕ್ಯಕ್ಕನು ಸಾರವಾಗಿ ಮಹೇಶ್ವರನ ನಿಶ್ವಾಸರೂಪವಾದ ಓಂಕಾರ ಸ್ವರದಿಂದ ವೇದವು ಉದಯಿಸಿತು. ವೇದದಿಂದ ಸಕಲ ಜಗತ್ತೂ ಸೃಷ್ಟಿಯಾಗಿರುತ್ತೆಂಬ ವಿಚಾರವು ಶ್ರೀಶಾರದಾಂಬೆಯ ಹಸ್ತದಲ್ಲಿರುವ ವೀಣೆಗೂ ಗಾಯತ್ರೀ ಮಂತ್ರಕ್ಕೂ ಸಮನ್ವಯಮಾಡಿರುವ ತತ್ವಗಳಿಂದ ವ್ಯಕ್ತವಾಗುವುದು. ಇದುವರೆಗೂ ಓಂಕಾರಕ್ಕೂ ತಂತಿಗಳಿಗೂ ಇರುವ ಸಂಬಂಧವು ತಿಳಿಸಲ್ಪಟ್ಟಿತು. ಸಪ್ತಸ್ವರಗಳಿಗೂ ಓಂಕಾರಕ್ಕೂ ಇರುವ ಸಂಬಂಧವೇನು ಮತ್ತು ಸಪ್ತಸ್ವರಗಳ ಮಹಿಮಾಶಕ್ತಿಯೇನೆಂಬುದನ್ನು ತಿಳಿಯೋಣ.

## ೨ ಸಪ್ತಸ್ವರಗಳ ಮಹಿಮೆ

ನಾದಾತ್ಮಕಸ್ತು ಪ್ರಣವ ಸ್ತಥಾನಾದಾತ್ಮಕಾ ಸ್ಸ್ವರಾಃ ।
ತಸ್ಮಾದೋಂಕಾರ ಏವೈತೇ ಸ್ವರಾಲೀನಾ ಸ್ತದಾತ್ಮಕೇ ॥
ತಸ್ಮಿಂಸ್ತು ಮಾತೃಕಾಸ್ತಿಸ್ರ ಸ್ತಾಸುಶಕ್ತಿ ಸ್ತ್ರಿಧಾಮತಾ ।
ಗಾಯತ್ರೀ ಚಾಥಸಾವಿತ್ರೀ ಸಾಮ್ಯರೂಪಾ ಸರಸ್ವತೀ ॥

ತಾ॥ ಓಂಕಾರವು ನಾದಸ್ವರೂಪವಾದುದು. ಷಡ್ಜಾದಿ ಸಪ್ತಸ್ವರಗಳೂ ನಾದಸ್ವರೂಪವಾದವುಗಳು. ಆದುದರಿಂದ ನಾದಬ್ರಹ್ಮಸ್ವರೂಪವಾದ ಓಂಕಾರ ದಲ್ಲಿಯೇ ಸಪ್ತಸ್ವರಗಳು ಅಡಕವಾಗಿವೆ. ಓಂಕಾರನಾದದಲ್ಲಿ ಗಾಯತ್ರೀ, ಸಾವಿತ್ರೀ, ಸರಸ್ವತೀ ಎಂಬ ಶಕ್ತಿತ್ರಯರೂಪವಾದ ಮೂರು ಮಾತೃಕೆಗಳು ಇರುವುವು ಎಂದು ಸಂಗೀತಶಾಸ್ತ್ರದಲ್ಲಿ ಹೇಳಿದೆ.

ಮೇಲಿನ ಆಧಾರ ವಾಕ್ಯದಲ್ಲಿರುವಂತೆ 'ಗಾಯತ್ರೀ, ಸಾವಿತ್ರೀ, ಸರಸ್ವತೀ, ಎಂಬ ಶಕ್ತಿತ್ರಯಗಳೇ ಓಂಕಾರವಾಗಿರುವ ಅ, ಉ, ಮ ಎಂಬ ಮೂರು ಮಾತೃಕೆಗಳಾಗಿರುತ್ತವೆ. ಈ ಮೂರು ಮಾತೃಕೆಗಳೇ ಸಪ್ತ ಮಾತೃಕೆಗಳಾಗಿ ಸಪ್ತ ವ್ಯಾಹೃತಿ ಮತ್ತು ಸಪ್ತ ಸ್ವರಗಳೆನಿಸಿರುವುವು ಓಂಕಾರವೂ, ವ್ಯಾಹೃತಿ ಗಳೂ, ಸ್ವರಗಳೂ ನಾದಸ್ವರೂಪವಾಗಿರುವುದರಿಂದ ಸ್ವರಗಳು ಓಂಕಾರರೂಪ ವಾಗಿಯೇ ಇರುವುವು. ಈ ತತ್ವಕ್ಕನುಸಾರವಾಗಿ ಸಪ್ತ ಸ್ವರಗಳನ್ನು ಷಡ್ಜ, ಗಾಂಧಾರ, ಮಧ್ಯಮಗ್ರಾಮಗಳೆಂದು ಗ್ರಾಮತ್ರಯವಾಗಿ ಸಂಗೀತಶಾಸ್ತ್ರದಲ್ಲಿ

21

ವಿಭಾಗಿಸಿದೆ. ಅಂದರೆ ಸಪ್ತ ಸ್ವರಗಳಲ್ಲಿ ಷಡ್ಜ, ಗಾಂಧಾರ ಮಧ್ಯಮ ಸ್ವರಗಳು ಪ್ರಧಾನತ್ವವನ್ನು ಹೊಂದಿ ಇತರ ಸ್ವರಗಳು ಮುಖ್ಯವಾದ ಈ ಮೂರು ಸ್ವರ ಗಳನ್ನು ಅನುವರ್ತಿಸಿ ಏಕೀಭವಿಸಿರುತ್ತವೆಂಬ ತತ್ವವೇ ಸಪ್ತ ಮಾತೃಕೆಗಳು ಓಂಕಾರದ ಮೂರು ಮಾತೃಕೆಗಳಲ್ಲಿ ಏಕೀಭವಿಸಿರುವುದಾಗಿದೆ. ಈ ತತ್ವಕ್ಕೆ

ತ್ರಯೋಲೋಕಾ ಸ್ತ್ರಯೋವೇದಾ ಸ್ತ್ರಿಸ್ರ ಸ್ಸಂಧ್ಯಾ ಸ್ತ್ರಯಸ್ಸ್ವರಾಃ |
ತ್ರಯೋಗ್ನಯಶ್ಚತ್ರಿಗುಣಾಃ ಸ್ಥಿತಾಸ್ಸರ್ವೇ ತ್ರಯಾಕ್ಷರೇ ||

ಎಂಬ **ಯೋಗತತ್ವೋಪನಿಷತ್ತಿನ** ಆಧಾರವಿದೆ. ವರ್ಣಮಾಲೆಯಲ್ಲಿಯೂ ಅ, ಇ, ಉ, ಋ, ಌ, ಏ, ಓ, ಎಂಬ ಸಪ್ತ ಪ್ರಧಾನಸ್ವರಗಳಿವೆ. ಇವು ಗಳಲ್ಲಿಯೂ ಅ, ಇ, ಉ, ಈ ಮೂರು ಸ್ವರಗಳೇ ಪ್ರಧಾನವಾದವು. ಈ ಸಪ್ತ ಸ್ವರಾಕ್ಷರಗಳೇ ಷೋಡಶ (ಹದಿನಾರು) ಸ್ವರಗಳಾಗುವುವು. ಈ ಷೋಡಶ ಸ್ವರ ಗಳು 'ಉದಾತ್ತಾನುದಾತ್ತಸ್ವರಿತ ಪ್ರಚಯ'ಗಳೆಂಬ ನಾಲ್ಕನ್ನು ಅನುಸರಿಸಿದ ಭೇದಗಳಾಗಿ ಅರವತ್ತ ನಾಲ್ಕು ವಿಧವಾಗುವುವು. ಈ ತತ್ವಸಮರ್ಥನೆಗೆ ಸಂಗೀತ ಶಾಸ್ತ್ರದಲ್ಲಿ :—

ಸಸ್ವರ ಷ್ಷೋಡಶಾಕಾರ ಸ್ತೂದಾತ್ತಾದಿ ವಿಭೇದತಃ |
ಮರು ದೂರ್ಧ್ವ ಮಧಶ್ಚಾರಾ ಶ್ಚತುರಾಕಾರತೋ ಭವೇತ್ ||

ಎಂಬ ವಾಕ್ಯವಿರುವುದು. ಈ ವಿಭಾಗದ ವಿಚಾರಗಳು ಬಹು ಗಹನ ವಾದುವು. 'ಷೋಡಶಕಲೋವೈಪುರುಷಃ' ಎಂಬ ಶ್ರುತ್ಯಾಧಾರದಂತೆ ಹದಿನಾರು ಕಳೆಗಳೇ 'ಚತುಷಷ್ಟಿಕಲಾವಿದ್ಯಾ' ರೂಪವಾದ ಅರವತ್ತುನಾಲ್ಕು ಭಾಗಗಳುಳ್ಳ ತತ್ವವಾಗಿರುವುವು. ಎಲ್ಲಾ ಅಕ್ಷರಗಳನ್ನೂ ಸಮುದಾಯತ್ವೇನ ತೆಗೆದು ಕೊಂಡರೂ ಈ ಗ್ರಂಥದ ಮಂಗಳಶ್ಲೋಕವಾಗಿರುವ ಶ್ರೀಶಂಕರಾಚಾರ್ಯರವರ ಅಕಚಟತಪ ಎಂಬ ಶ್ಲೋಕದಲ್ಲಿ ಸರ್ವವರ್ಣಗಳನ್ನು ಅ, ಕ, ಚ, ಟ, ತ, ಪ, ಯ ಎಂಬ ಏಳೇ ಭಾಗಗಳಾಗಿ ವಿಂಗಡಿಸಲ್ಪಟ್ಟಿವೆ. ಇದನ್ನೇ ಪಾಣಿನಿಮಹರ್ಷಿಯ ವ್ಯಾಕರಣಸೂತ್ರದಲ್ಲಿ "ಅಣುದಿತ್ಸವರ್ಣಸ್ಯಚಾಪ್ರತ್ಯಯಃ || ೧-೧-೬೯ ||" ಎಂಬ ದಾಗಿ ಹೇಳಿರುವರು. ಮುಖ್ಯವಾಗಿ ಬೀಜವು ವೃಕ್ಷದ ಸಕಲ ಭಾಗಗಳ ಸ್ವರೂಪ ವಾಗುವಂತೆ ಪರಾತ್ಪರವಾದ ಪರಬ್ರಹ್ಮಶಕ್ತಿಯೇ ಸರ್ವವರ್ಣಸ್ವರೂಪ, ಸಪ್ತಸ್ವರರೂಪ, ಗಾಯತ್ರೀಮಂತ್ರದ ತತ್ವಪ್ರತಿಪಾದಕವಾದ ವೀಣೆಯ ೨೪ ಮನೆಗಳ ಸ್ವರೂಪವೂ ಆಗಿರುವುದು. ಅಂದರೆ ಸಪ್ತಸ್ವರ ಶಕ್ತಿಗಳ ಮೂಲ ರೂಪಿಣಿಗಳಾದ ಸಪ್ತಮಾತೃಕೆಯರೂ, ಗಾಯತ್ರೀದೇವಿಯೂ ಏಕಾರ್ಥದವರಾಗಿ ಸಾಕ್ಷಾತ್ ಪರಾತ್ಪರವಾದ ಪರಬ್ರಹ್ಮಶಕ್ತಿಯಾಗಿರುವರು. ಸ್ವರವೂ ಪರಾತ್ಪರ ವಸ್ತುವೆಂಬುದಕ್ಕೆ 'ಸ್ವತೋರಂಜಯತೀತಿಸ್ವರಃ' ಎಂದು ಸಂಗೀತ ಶಾಸ್ತ್ರದಲ್ಲಿ ಹೇಳಿರುವಂತೆ ಮತ್ತಾವುದರಿಂದಲೂ ಪ್ರಕಾಶಿಸಿಕೊಳ್ಳದೆ ಸ್ವಯಂಪ್ರಕಾಶವಾದುದು

ಸ್ವರವೆನಿಸುವುದು ಸ್ವಯಂಪ್ರಕಾಶವಾದುದು ಪರಾತ್ಪರವಸ್ತುವಾದ ಪರಬ್ರಹ್ಮ ವೊಂದೇ. ಆದುದರಿಂದ ಸಪ್ತವ್ಯಾಹೃತಿಗಳಿಗೂ ಸಪ್ತಸ್ವರಗಳಿಗೂ ಅಧಿದೇವತೆ ಗಳಾದ ಸಪ್ತಮಾತೃಕೆಯರು ಸ್ವಯಂಪ್ರಕಾಶವಾದ ಪರಬ್ರಹ್ಮಸ್ವರೂಪವೇ ಆಗಿರುವರು. ಇದಕ್ಕೆ ಆಧಾರ.

**ಅಥರ್ವಶಿರೋಪನಿಷತ್ತಿನಲ್ಲಿ** :—

ಯಾಭೂಃ, ಯಶ್ಚಭುವಃ, ಯಶ್ಚಸುವಃ, ಯಶ್ಚಮಹಃ, ಯಶ್ಚಜನಃ, ಯಶ್ಚತಪಃ, ಯಶ್ಚಸತ್ಯಂ

**ರಾಮತಾಪಿನೀ, ನೃಸಿಂಹತಾಪಿನ್ಯುಪನಿಷತ್ತುಗಳಲ್ಲಿ**:—

ಯಾ ಸಪ್ತಮಹಾವ್ಯಾಹೃತಯಃ । ಎಂದಿದೆ.

ವೀಣೆಯಲ್ಲಿ ಸಪ್ತಸ್ವರಗಳಿಗೆ ಸರಿಯಾಗಿ ಏಳು ಮನೆಗಳಿಲ್ಲದೆ ೨೪ ಮನೆಗಳಿವೆ. ಈ ೨೪ ಮನೆಗಳಲ್ಲಿ ಗಾಯತ್ರೀ ಮಂತ್ರದ ೨೪ ಅಕ್ಷರದ ತತ್ವಗಳಿವೆ. ಆದುದರಿಂದ ಗಾಯತ್ರೀ ದೇವಿಯೂ ಸಪ್ತಮಾತೃಕೆಯರೂ ಪ್ರತ್ಯೇಕರೆಂಬ ಸಂಶಯ ಉಂಟಾಗಬಹುದಾದರೂ, ಅವರಿಬ್ಬರೂ ಭಿನ್ನರಲ್ಲ ಒಂದಾದ ಪರಬ್ರಹ್ಮವೇ ಆಗಿರುತ್ತಾರೆ. ಹೇಗೆಂದರೆ, ಪರಬ್ರಹ್ಮಶಕ್ತಿಯು ವ್ಯಕ್ತಸ್ಥಿತಿಯೇ ಗಾಯತ್ರೀ ೨೪ ಅಕ್ಷರಗಳತತ್ವ. ಈ ೨೪ ಅಕ್ಷರಗಳ ಸ್ವರೂಪವಾದ ಶರೀರದ ವಿವರಣೆಯ ಸ್ವರೂಪವೇ ಸಪ್ತವ್ಯಾಹೃತಿ ಅಥವಾ ಸಪ್ತಸ್ವರ. ಹೇಗೆಂದರೆ:— ಮನುಷ್ಯಶರೀರವೆಂದರೆ, ಕಾಲು, ಕೈ, ಮೂಗು, ಕಣ್ಣು ಮುಂತಾದ ಅವಯವ ಗಳೆಲ್ಲಾಸೇರಿ ಶರೀರವೆನಿಸುವುದು. ಶರೀರ ಉಂಟಾಗುವಿಕೆಗೆ ಅವಯವಗಳೇ ಕಾರಣವಾಗಿರುವುದರಿಂದ ಈ ಅವಯವಗಳು ಶರೀರದಿಂದ ಪ್ರತ್ಯೇಕವಲ್ಲ. ಇದರಂತೆಯೇ ಸಪ್ತಮಾತೃಕೆಯರೂ ಗಾಯತ್ರಿಯೂ ಪ್ರತ್ಯೇಕರಲ್ಲ. ಚಿತ್ರಗಾರನು ಬರೆಯುವ ಚಿತ್ರದ ಸರ್ವಾವಯವಗಳ ರೂಪವನ್ನು ಪ್ರಥಮದಲ್ಲಿ ಮನಸ್ಸಿಗೆ ತಂದುಕೊಂಡು ಒಂದು ಚಿತ್ರದ ಪೂರ್ಣಾಕಾರವನ್ನು ಬರೆಯುತ್ತಾನೆ. ಹೀಗೆ ಬರೆಯಲು ಅವಯವಗಳೇ ಕಾರಣ. ಇದರಂತೆ ವೀಣೆಯಲ್ಲಿ ಪೂರ್ಣರೂಪವೆನಿ ಸುವ ೨೪ ಮನೆಗಳಿರಬೇಕಾದರೆ ಆ ಮನೆಗಳಲ್ಲಿರುವ ಅವಯವರೂಪವಾದ ಸ್ವರಗಳೇ ಕಾರಣ ಆದುದರಿಂದ ಪೂರ್ಣರೂಪವೆನಿಸಲು ಅವಯವಗಳೇ ಹೇಗೆ ಮೂಲರೂಪವೋ ಹಾಗೆಯೇ ಪೂರ್ಣರೂಪವಾದ ಗಾಯತ್ರೀ ಎಂದೆನಿಸಿಕೊಳ್ಳ ಬೇಕಾದರೆ ಸಪ್ತಸ್ವರಗಳಿಗೂ ಮೂಲರೂಪವೆನಿಸುವ ಸಪ್ತವ್ಯಾಹೃತಿಯೇ ಕಾರಣ. ಈ ತತ್ವಸಮರ್ಥನೆಗೆ

**ಗಾಯತ್ರ್ಯುಪನಿಷತ್ತಿನ** :—

ಓಂಕಾರಾ ದ್ವ್ಯಾಹೃತಯೋ ಭವನ್ತಿ । ವ್ಯಾಹೃತಿಭ್ಯೋ ಗಾಯತ್ರೀ ಭವತಿ॥

ಎಂಬ ಆಧಾರವಾಕ್ಯವಿರುವುದು. ವ್ಯಾಹೃತಿಯು ಗಾಯತ್ರೀದೇವಿಯ ಅವಯವ ರೂಪವಾಗಿರುವುದಕ್ಕೆ ಗಾಯತ್ರೀಮಂತ್ರದಲ್ಲಿ ವ್ಯಾಹೃತಿಗಳ ಸಂಜ್ಞಾ ಮಂತ್ರವಾದ 'ಓಂಭೂರ್ಭುವಸ್ಸುವಃ' ಎನ್ನುವುದು ಗಾಯತ್ರೀಮಂತ್ರದ ಪ್ರಥಮದಲ್ಲಿದ್ದೇ ಇರುವುದು.

ವೀಣೆಯ ಮೇಲಿರುವ ನಾಲ್ಕು ತಂತಿಗಳಲ್ಲಿಯೂ ಸಪ್ತ ಸ್ವರಗಳು ನುಡಿಸಲ್ಪಡುವುವಷ್ಟೆ! ವೀಣೆಯ ಮೇಲಿನ ನಾಲ್ಕು ತಂತಿಗಳು ಶುದ್ಧಸತ್ವಗುಣ ಸ್ವರೂಪವಾಗಿ ನಾಲ್ಕು ವೇದಗಳ ತತ್ವವಾಗಿರುವುವೆಂದು ಹಿಂದೆಯೇ ವಿವರಿಸಿರುವುದಷ್ಟೆ! ಅಲ್ಲದೆ ವೀಣೆಯ ಮೇಲಿನ ನಾಲ್ಕು ತಂತಿಗಳ ನಾದಭೇದದ ಶಕ್ತಿಯನ್ನನುಸರಿಸಿ ನಾಲ್ಕು ವೇದಗಳ ತತ್ವಗಳಿಗೂ ಸಮನ್ವಯ ಮಾಡಿರುವುದಷ್ಟೆ! ಆದುದರಿಂದ 'ವೇದ' ವೆಂಬುದು ಶಬ್ದಬ್ರಹ್ಮಸ್ವರೂಪವಾದುದು. ವೇದವು ಶಬ್ದಮಯವಾಗಿರುವುದರಿಂದಲೇ ಶ್ರವಣಮಾಡಿ ಅಕ್ಷರವ್ಯತ್ಯಾಸವೂ ಸ್ವರವ್ಯತ್ಯಾಸವೂ ಆಗದಂತೆ ಗುರುಮುಖದಿಂದಲೇ ಕಲಿಯಬೇಕಾಗಿರುವುದು. ಹೀಗೆ ಗುರುಮುಖದಿಂದಲೇ ಅಧ್ಯಯನ ಮಾಡಬೇಕಾಗಿರುವುದರಿಂದ ಶಬ್ದಮಯವಾದ ವೇದಕ್ಕೆ ಶ್ರುತಿಯೆಂದು ಹೆಸರು. ಆದುದರಿಂದ ವೇದವು ಸ್ವರಾಕ್ಷರಗಳಿಂದ ಕೂಡಿದ ಶಬ್ದಮಯವಾದುದೆಂಬುದು ನಿಸ್ಸಂಶಯವಾದ ವಿಚಾರವು. ವೇದವು ಶಬ್ದಮಯವಾಗಿರುವುದರಿಂದ ಇದು ನಿತ್ಯವಾದುದೋ ಅನಿತ್ಯವಾದುದೋ (ನಾಶರಹಿತವಾದುದೋ ನಾಶವುಳ್ಳದ್ದೋ) ವಿಚಾರಮಾಡೋಣ.

ಶಬ್ದರೂಪವಾದ ವೇದವು ನಿತ್ಯವಾದುದು. ಶಬ್ದಕ್ಕೆ ನಾಶವಿಲ್ಲ ಹೇಗೆಂದರೆ, ಶಬ್ದದಲ್ಲಿ ಆಹತ, ಅನಾಹತಗಳೆಂಬ ಎರಡು ಭೇದಗಳೆಂದು ಹಿಂದೆ ವಿವರಿಸಿದೆಯಷ್ಟೆ! ಪರಬ್ರಹ್ಮನಿಂದ ಉದಯಿಸಿದ ಓಂಕಾರಸ್ವರವು ಸಪ್ತಮಾತೃಕಾ ರೂಪವಾಗಿ ವಿಶ್ವವ್ಯಾಪಿಯೂ, ಅಖಂಡವೂ, ಎನಿಸಿ ಆಕಾಶದಲ್ಲಿ ವ್ಯಾಪಿಸಿಕೊಂಡು ವೇದವಾದ ಅನಾಹತನಾದವೆನಿಸಿರುವುದು. ಆಕಾಶಕ್ಕೂ ಶಬ್ದ ಒಂದೇ ಗುಣ. ಅಂದರೆ ಶಬ್ದಕ್ಕೆ ನಿವಾಸಸ್ಥಾನ ಆಕಾಶ. ಆದುದರಿಂದ ಕಳಾಸ್ವರೂಪವೂ, ಸರ್ವವ್ಯಾಪಕವೂ ಆದ ಅನಾಹತನಾದವು ಆಕಾಶದಲ್ಲಿ ವ್ಯಾಪಿಸಿರುವುದು. ಇದರಿಂದಲೇ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಾಗುವುವು ನಾವು ಕೇಳುವ ಸಕಲ ವಿಧವಾದ ಶಬ್ದಗಳೂ ಒಂದು ವಸ್ತುವಿನೊಡನೆ ಮತ್ತೊಂದು ವಸ್ತುವಿನ ಸಂಯೋಗದಿಂದುಂಟಾಗುವುದರಿಂದ ಆಹತ ಶಬ್ದವೆನಿಸಿದೆ. ಈ ಆಹತಶಬ್ದವು ಅನಾಹತಶಬ್ದದ ಪ್ರತಿಧ್ವನಿರೂಪವಾಗಿರುವುದು. ಹೇಗೆಂದರೆ, ಎರಡು ವಸ್ತುಗಳು ಸಂಯೋಗವಾಗುವುದರಿಂದ ವಸ್ತುಗಳ ಯೋಗ್ಯತಾನುಸಾರ ಆಕಾಶದಲ್ಲಿರುವ ಓಂಕಾರರೂಪವಾದ ಆಹತಶಬ್ದವು ಪ್ರತಿಫಲಿತವಾಗಿ ಪ್ರತಿಧ್ವನಿ ಎನಿಸಿಕೊಳ್ಳುವುದು. ಸರ್ವಪ್ರಾಣಿಗಳಲ್ಲಿಯೂ ಪ್ರಾಣಾಗ್ನಿಸಂಯೋಗದಿಂದ ಉಂಟಾಗುವ

ಶಬ್ದವು ಆಹತವೆನಿಸಿ ಸರ್ವವ್ಯಾಪಿಯಾದ ಅನಾಹತದ ಪ್ರತಿಧ್ವನಿಯೇ ಆಗಿರುವುದು. ಉತ್ಪತ್ತಿಯಾದ ಆಹತವೆನಿಸುವ ಪ್ರತಿಧ್ವನಿಯು ಬಿಂಬ ಭೂತವಾದ ಅನಾಹತ ಶಬ್ದದಲ್ಲಿ ಲಯವಾಗುವುದು. ಅನಾಹತ ಶಬ್ದವೂ ಓಂಕಾರಸ್ಥಿತಿಯಾಗಿ ಪರಬ್ರಹ್ಮವಾಗುವುದು. ಆದುದರಿಂದ ಸಂಯೋಗವಾಗುವ ಕ್ರಿಯೆಯು ಮಾತ್ರ ನಾಶವಾಗುವುದೇ ಹೊರತು ಸ್ವರಾಕ್ಷರಗಳ ಸ್ವರೂಪವಾದ ಶಬ್ದಕ್ಕೆ ನಾಶವಿಲ್ಲ. ಹೀಗೆ ನಾಶವೆಂದು ಹೇಳುವುದಾದರೆ ಶಬ್ದಮಯವಾದ ಓಂಕಾರಕ್ಕೆಂದರೆ ಪರಮಾತ್ಮನಿಗೇ ನಾಶವೆಂದಾಗುವುದರಿಂದ ಶಬ್ದಕ್ಕೆ ನಾಶವಿಲ್ಲವೆಂದರೆ ವೇದಕ್ಕೆ ನಾಶವಿಲ್ಲ.

ವೇದವು ಸ್ವರಾಕ್ಷರಗಳ ಸ್ವರೂಪವಾದುದಷ್ಟೆ! ಸ್ವರವೆಂದರೆ 'ಸ್ವರ್ಯಂತೇ ಉಚ್ಚಾರ್ಯಂತೆ ಇತಿ ಸ್ವರಃ' ಉಚ್ಚರಿಸುವುದಾದುದರಿಂದ ಶಬ್ದಸ್ವರೂಪವಾದುದು. ಅಲ್ಲದೆ ಸ್ವರ ಎಂಬ ಶಬ್ದಕ್ಕೆ ಮತ್ತಾವುದರಿಂದಲೂ ಪ್ರಕಾಶಿಸಿಕೊಳ್ಳದೆ ಸ್ವತಃ ಪ್ರಕಾಶವಾದುದೆಂಬ ಅರ್ಥವನ್ನು ಹಿಂದೆಯೇ ತಿಳಿಸಿದೆ. ಸ್ವರ ಎನ್ನುವ ಶಬ್ದಾರ್ಥದಮೇಲೂ ಶಬ್ದಕ್ಕೆ ನಾಶವಿಲ್ಲವೆಂದು ಸ್ಪಷ್ಟವಾಗುವುದು. ಅಕ್ಷರವೆಂದರೂ 'ನಕ್ಷರತೀತ್ಯಕ್ಷರಮ್' ಯಾವುದು ಅವಿನಾಶಿಯೋ ಅದೇ ಅಕ್ಷರವು. ಆದಕಾರಣ ಶಬ್ದಾಕ್ಷರಗಳ ಸ್ವರೂಪವಾದ ವೇದವು ವ್ಯಕ್ತವಾಗಿದ್ದಾಗ ನಾದಬ್ರಹ್ಮವಾಗಿ ಪ್ರಪಂಚರೂಪವಾಗಿರುವುದು. ಅವ್ಯಕ್ತವಾದಾಗ ಪರಬ್ರಹ್ಮವೇ ಆಗುವುದು. ಮೇಲಿನ ತತ್ವಾರ್ಥಗಳನ್ನನುಸರಿಸಿ ಅನಾಹತ ಸ್ವರೂಪವೂ, ನಾದ ಬಿಂದು ಕಳೆಗಳಲ್ಲಿ ಕಳಾಸ್ವರೂಪವೂ ಆದ ವೇದಗಾನದ ಇಂಪಾದ ತೆರೆಗಳ ಮೇಲೆ ಈ ವಿಶ್ವವು ಓಲಾಡುತ್ತಿರುವುದು. ಪರಬ್ರಹ್ಮವು ವಿಶ್ವದ ಹೊರಗೂ ಒಳಗೂ ತುಂಬಿರುವಂತೆ ವೇದಗಾನದ ಮಂಜುಳಧ್ವನಿಯು ಅನಾಹತರೂಪವಾಗಿ ಎಲ್ಲಾಕಡೆಯೂ ವ್ಯಾಪಿಸಿರುವುದು. ನಾದಬ್ರಹ್ಮವಾದ ವೇದವು ಅನಾಹತರೂಪದಲ್ಲಿ ವಿಶ್ವವ್ಯಾಪಿಯಾಗಿರುವುದರ ಆಧಾರದಿಂದಲೇ ಬಹುದೂರದೇಶದಲ್ಲಾಗತಕ್ಕ ಗಾನ ಮುಂತಾದ ಶಬ್ದಗಳನ್ನು ಯೋಗಿಗಳು ತಾವಿದ್ದೆಡೆಯಿಂದಲೇ ಶ್ರವಣಮಾಡುವರು ಮತ್ತು ಈಗ ಅವುಗಳನ್ನು ನಾವು ಯಂತ್ರಗಳ ಮೂಲಕ ಕೇಳಲು ಅರ್ಹರಾಗಿರುವೆವು. ಸ್ವರೂಪತಃ ವೇದವೂ ಸರಸ್ವತಿಯೂ ಪರಬ್ರಹ್ಮವೂ ಒಂದೇ. ಆಹತಶಬ್ದಕ್ಕೆ ಸರ್ವವ್ಯಾಪಿಯಾದ ಅನಾಹತಶಬ್ದವು ಪ್ರಕಾಶಕವಾಗಿರುವುದೆಂಬ ತತ್ವಕ್ಕೆ ಪರಾಶಕ್ತಿಯಾದ ಸರಸ್ವತೀದೇವಿಯೇ ಆಹತನಾದಕ್ಕೆ ಪ್ರಕಾಶಕಳಾಗಿರುವಳೆಂದು ವೇದವೇ ತಿಳಿಸುವುದು. ಇದಕ್ಕೆ ಪ್ರಮಾಣವು

ವಾಗ್ವೈ ದೇವೇಭ್ಯೋಽಪಾಕ್ರಾಮ ದ್ಯಜ್ಞಾಯಾತಿಷ್ಠಮಾನಾ ಸಾವನಸ್ಪತೀ ನ್ಪ್ರಾವಿಶ ದ್ಶೈಷಾ ವಾಗ್ವನಸ್ಪತಿಷು ವದತಿ ಯಾದುಂದುಭಾ

ಯಾತೂಣವೇ ಯಾವೀಣಾಯಾಂ ||

ಸಪ್ತಸ್ವರಗಳು ಸ್ವಯಂಪ್ರಕಾಶವಾದವುಗಳೆಂದೂ ಪರಾತ್ಪರ ವಸ್ತುವೆಂದೂ ಸೂಚಿಸುವ ತತ್ವಕ್ಕೋಸ್ಕರಲೇ ಸಪ್ತಸ್ವರಗಳಿಗೂ ಕ್ರಮವಾಗಿ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಎಂಬ ಸಪ್ತಮಾತೃಕೆಯರೇ ಅಧಿದೇವತೆಗಳಾಗಿರುವ ಆಧಾರವಾಕ್ಯಗಳನ್ನೇ ಹಿಂದೆ ಎರಡನೆಯ ಪ್ರಕರಣದಲ್ಲಿ ಬರೆದಿರುವುದು. ಸಪ್ತಸ್ವರಗಳೂ ಸಂಗೀತ ಶಾಸ್ತ್ರದಲ್ಲಿ ಹೇಳುವ ದಶವಿಧ ಗಮಕಗಳಲ್ಲಿಯೂ 'ವಾದಿ, ಸಂವಾದಿ, ವಿವಾದಿ, ಅನುವಾದಿ'ಗಳೆಂಬ ನಾಲ್ಕು ವಾದಿಲಕ್ಷಣಗಳಲ್ಲಿಯೂ ಯಾವ ರೀತಿ ಸಂಚರಿಸಿ ಕಾರ್ಯಮಾಡುವುವೋ ಅದೇ ಪ್ರಕಾರ ಸಪ್ತಮಾತೃಕಾರೂಪವಾದ ಈ ಏಳು ಶಕ್ತಿಗಳೂ ಒಂದಕ್ಕೊಂದು ಮಿಳಿತವಾಗಿ ಈ ಲಕ್ಷಣಗಳ ತತ್ವಗಳಲ್ಲಿ ಸಂಚರಿಸಿ ನಾದಬ್ರಹ್ಮದ ಕಾರ್ಯವಾದ ಪ್ರಪಂಚರೂಪವಾಗಿರುವುವು.

ಅಲ್ಲದೆ ಸ್ವರಗಳಿಂದಲೇ ರಾಗಗಳು ಉತ್ಪತ್ತಿಯಾಗುವುವಷ್ಟೆ! ಸಪ್ತಮಾತೃಕಾ ಶಕ್ತಿಯಲ್ಲಿ 'ಬ್ರಾಹ್ಮೀ' ಹೊರತು ಉಳಿದ ಆರು ಶಕ್ತಿಗಳಲ್ಲಿ ಪ್ರತಿಯೊಂದು ಶಕ್ತಿಯೂ ಇತರ ಐದು ಶಕ್ತಿಗಳ ಭಾಗಗಳನ್ನು ತನ್ನಲ್ಲಿ ಅಂತರ್ಭೂತವಾಗಿ ಒಳಗೊಂಡಿದೆ. ಅಂದರೆ ಪ್ರತಿಯೊಂದು ಶಕ್ತಿಯೂ ತಾನು ಪ್ರಧಾನತ್ವೇನ ಇದ್ದರೂ ಇತರ ಶಕ್ತಿಗಳ ಅಲ್ಪಭಾಗಗಳನ್ನು ತಾನು ಹೊಂದಿರುವುದು. ಆದುದರಿಂದ ಆರು ಶಕ್ತಿಗಳಲ್ಲಿ ಪ್ರತಿಯೊಂದು ಶಕ್ತಿಯೂ ಆರು ಆರು ಭಾಗಗಳುಳ್ಳದ್ದಾಗಿದೆ. ಅಂದರೆ ಆರು ಶಕ್ತಿಗೂ ಮೂವತ್ತಾರು ಭಾಗಗಳಾಗುವುವು. ಈ ಮೂವತ್ತಾರು ಅಂತರ್ವಿಭಾಗಗಳ ಶಕ್ತಿಗಳ ತತ್ವವನ್ನನುಸರಿಸಿ ಪ್ರಧಾನಗಳಾದ 'ಶುದ್ಧಮಧ್ಯಮ'ರಾಗಗಳೆಂದು ಕರೆಯಲ್ಪಡುವ ೩೬ ರಾಗಗಳಿರುವುವು. ದೇವತೆಗಳಿಗೆ ರಾಕ್ಷಸರು ಪ್ರತಿಕಕ್ಷಿಗಳಾಗಿರುವಂತೆಯೂ, ಶುದ್ಧಸತ್ವಮಾಯೆಗೆ ಮಲಿನಮಾಯೆಯು ಪ್ರತಿಕಕ್ಷಿಯಾಗಿರುವಂತೆಯೂ, ಶುದ್ಧಮಧ್ಯಮ ೩೬ ರಾಗಗಳಿಗೆ ಪ್ರತಿಕಕ್ಷಿಯಾಗಿ 'ಪ್ರತಿಮಧ್ಯಮ' ರಾಗಗಳು ೩೬ ಇವೆ. ಸಪ್ತಮಾತೃಕಾ ಶಕ್ತಿಗಳಲ್ಲಿರುವ ಅಂತರ್ವಿಭಾಗಗಳಲ್ಲೂ ಅಂತರಾಂತರ, ಅಂತರಾಂತರಕ್ಕೂ ಸೂಕ್ಷ್ಮವಿಭಾಗಗಳಾಗಿ ಕೋಟ್ಯಾಂತರ ವಿಭಾಗಗಳ ತತ್ವಗಳುಂಟಾಗುವುದರಿಂದ ರಾಗಗಳು ಅನಂತವಾಗಿವೆ. ಸಪ್ತಮಾತೃಕಾಂಗಭೂತವಾದ ಶಕ್ತಿವಿಭಾಗಗಳ ತತ್ವಗಳನ್ನೂ ರಾಗಗಳ ತತ್ವಗಳನ್ನೂ ಅನ್ವಯಿಸಿ ಅವುಗಳಲ್ಲಿರುವ ಮಹತ್ವವನ್ನು ಹೊರಸೂಸಬಹುದು. ಮುಖ್ಯವಾಗಿ ರಾಗಗಳ ತತ್ವಗಳೂ ಜಗಜ್ಜನನಿಯಾದ ಸಪ್ತಮಾತೃಕಾಂಬಾ ಮಹಿಮೆಗೊಳಪಟ್ಟಿರುವುವು.

ಸಪ್ತಸ್ವರಗಳೂ ಇವಕ್ಕೆ ಮೂಲರೂಪವಾದ ಸಪ್ತಮಾತೃಕಾಶಕ್ತಿಯೂ

ಪರಾತ್ಪರವಸ್ತುವೆಂದು ಮೇಲೆ ತಿಳಿಸಿತಷ್ಟೆ! ಈ ಮಾತೃಕಾಶಕ್ತಿಯೇ ಕಳಾಸ್ವರೂಪವಾಗಿಯೂ, ನಾದಸ್ವರೂಪವಾಗಿಯೂ ಇರುವಂತೆ ಬಿಂದು ಸ್ವರೂಪವಾಗಿಯೂ ಇರುವುದು. ಈ ಏಳು ಶಕ್ತಿಗಳ ಏಳು ಬಿಂದುಗಳೂ ಸೇರಿ ಮಂತ್ರಶಾಸ್ತ್ರದಲ್ಲಿ 'ಬಿಂದುವ್ಯೂಹ' ವೆಂದು ಕರೆಯಲ್ಪಡುವುದು. ಅಂದರೆ ಈ ಏಳು ಶಕ್ತಿಗಳೂ ನಾದ, ಬಿಂದು, ಕಳಾಸ್ವರೂಪಗಳಾಗಿಯೂ, ಇವುಗಳಿಗೆ ಅತೀತವಾದ ಪರಬ್ರಹ್ಮ ಸ್ವರೂಪವಾಗಿಯೂ ಇವೆ. ಈ ಸಪ್ತ ಶಕ್ತಿಗಳ ಮಹಿಮೆಯು ಇನ್ನೂ ಅನೇಕ ವಿಧವಾಗಿದೆ.

**ತೈತ್ತಿರೀಯಶ್ರುತಿಯಲ್ಲಿ :—**

ಸಪ್ತಪ್ರಾಣಾಃ ಪ್ರಭವನ್ತಿ ತಸ್ಮಾತ್ಸ ಪ್ತಾರ್ಚಿಷ ಸ್ಸಮಿಧ ಸಪ್ತಜಿಹ್ವಾಃ |
ಸಪ್ತ ಇಮೇಲೋಕಾ ಯೇಷುಚರನ್ತಿ ಪ್ರಾಣಾ ಗುಹಾಶ್ರಯಾಂ ನಿಹಿತಾ ಸ್ಸಪ್ತ ಸ್ಸಪ್ತ ||

ಎಂಬದಾಗಿ ಹೇಳಿದೆ. ಶ್ರೀಶಾರದಾದೇವಿಯ ಹಸ್ತದಲ್ಲಿ ವೀಣೆಯು ಇರುವಂತೆ ಶ್ರೀದಕ್ಷಿಣಾಮೂರ್ತಿಯ ಹಸ್ತದಲ್ಲಿ ವೀಣೆಯೂ, ಡಮರುಗವೂ ಇರುವುವು. ಶ್ರೀಕೃಷ್ಣಪರಮಾತ್ಮನು ಕೊಳಲನ್ನು ಧರಿಸಿರುವನು. ಕೊಳಲಲ್ಲಿ ಸಪ್ತಸ್ವರಗಳಿಗನುಸಾರವಾಗಿ ಸಪ್ತ ರಂಧ್ರಗಳಿರುವುವು. ಎಲ್ಲಾ ದೇವತಾಶಕ್ತಿಗಳ ಮಹಿಮೆಗಳೂ ನಾದಬ್ರಹ್ಮದ ಏಕ ತತ್ವಾರ್ಥ ಪ್ರತಿಪಾದಕವಾಗಿಯೂ ಒಂದಾದ ಪರಾತ್ಪರವಸ್ತುವಾದ ಪರಬ್ರಹ್ಮವಾಗಿಯೂ ಇರುವುವು. ಸಪ್ತಸ್ವರವೂ ಸಪ್ತಸ್ವರಕ್ಕೆ ಮೂಲಶಕ್ತಿಯಾದ ಸಪ್ತಮಾತೃಕೆಯೂ ಸಾಕ್ಷಾತ್ಪರಾತ್ಪರವಸ್ತುವೆಂಬುದನ್ನು ಈ ಕೆಳಗಿನ ಆಧಾರವಾಕ್ಯಗಳು ಪ್ರಮಾಣೀಕರಿಸುವುವು.

**ಶ್ಯಾಮಲಾಕವಚದಲ್ಲಿ :—**

ಅವರ್ಗಸಂಭವಾ ಬ್ರಾಹ್ಮೀ ಮುಖಂ ರಕ್ಷತು ಸರ್ವದಾ |
ಕವರ್ಗಸ್ಥಾತು ಮಾಹೇಶೀ ಪಾತು ದಕ್ಷಭುಜಂ ತಥಾ ||
ಚವರ್ಗಸ್ಥಾತು ಕೌಮಾರೀ ಪಾಯಾನ್ಮೇ ವಾಮಕಂಭುಜಂ |
ದಕ್ಷಪಾದಂ ಸಮಾಶ್ರಿತ್ಯ ಟವರ್ಗಂ ಪಾತು ವೈಷ್ಣವೀ ||
ತವರ್ಗಜನ್ಮಾ ವಾರಾಹೀ ಪಾಯಾನ್ಮೇ ವಾಮಪಾದಕಂ |
ತಥಾ ಪವರ್ಗ ಚೇಂದ್ರಾಣೀ ಪಾರ್ಶ್ವಾದೀೞ ಪಾತು ಸರ್ವದಾ ||
ಯವರ್ಗಸ್ಥಾತು ಚಾಮುಂಡಾ ಹೃದ್ದೋರ್ಮ್ಮೋಲೀಚ ಮೇ ತಥಾ |

**ತ್ರಿಪುರತಾಪನ್ಯುಪನಿಷತ್ತಿನಲ್ಲಿ :—**

ಮಾತೃಕಾ ಪಂಚಾಶದ್ವರ್ಣವಿಗ್ರಹೇಣಾ ಕಾರಾದಿ ಕ್ಷಕಾರಾಂತೇನ ವ್ಯಾಪ್ತಾನಿ ಭುವನಾನಿ ಶಾಸ್ತ್ರಾಣಿ ಛಂದಾಂಸೀತ್ಯೇವಂ ಭಗವತೀ ಸರ್ವಂ ವ್ಯಾಪ್ನೋತೀತ್ಯೇವ ತಸ್ಯೈಸ್ಯೈ ನಮೋನಮಃ ||

ಸಪ್ತಸ್ವರಗಳ ಮಹಿಮೆಯನ್ನು ಈ ಪ್ರಕರಣದಲ್ಲಿ ಪ್ರತಿಪಾದಿಸಿದೆ. ಅಲ್ಲದೆ ಈ ಗ್ರಂಥದ ಉಪೋದ್ಘಾತದಲ್ಲಿಯೂ, ಶ್ರೀಮದ್ರಾಮಾಯಣದ ಅಂತರಾರ್ಥ ಗ್ರಂಥದಲ್ಲಿಯೂ ನಾನು ಜನ್ಮಾಂತರದಲ್ಲಿ ಪಾಳೆಯಗಾರನಾಗಿದ್ದ ಹಾಗಲವಾಡಿ ಸಂಸ್ಥಾನಕ್ಕೆ ಸೇರಿದ ಸ್ಥಳದಲ್ಲಿ ಶ್ರೀರಾಮೇಶ್ವರ ಮತ್ತು ಶ್ರೀಸಪ್ತಮಾತೃಕಾಂಬಾ ದೇವಸ್ಥಾನಗಳಿವೆಯೆಂದು ತಿಳಿಸಿದೆಯಷ್ಟೆ! ಈ ಸಪ್ತಮಾತೃಕಾಂಬಾ ಕರುಣಾಕಟಾಕ್ಷ ದಿಂದ ಆ ಮಾತೆಯ ಮಹಿಮೆಯೇ ನನಗೆ ಸ್ಫುರಣೆಯಾಗಿ ಈ ಲೇಖನವನ್ನು ಬರೆದಿರುವುದರಿಂದ ಈ ಸ್ಥಳದಲ್ಲಿ ಆ ಜಗದಂಬೆಗೆ ಪ್ರಣಾಮಮಾಡುತ್ತಲೂ, ಪರಾತ್ಪರವಸ್ತುವೇ ಅವಳೆಂಬ ಮಹಿಮೆಯನ್ನು ಪ್ರತಿಪಾದಿಸುವ ಮಾರ್ಕಂಡೇಯ ಪುರಾಣದಲ್ಲಿ ಸಪ್ತವ್ಯಾಖ್ಯಾನಗಳುಳ್ಳ 'ದೇವೀಸಪ್ತಶತಿ'ಯಲ್ಲಿರುವ ಸ್ತೋತ್ರದ ಮೂಲಕ ಆ ಮಾತೆಯನ್ನು ಸ್ತುತಿಸುತ್ತಾ ಈ ಉಪಪ್ರಕರಣವನ್ನು ಪೂರ್ಣಗೊಳಿಸುವೆನು.

ಹಂಸಯುಕ್ತ ವಿಮಾನಸ್ಥೇ ಬ್ರಹ್ಮಾಣೀ ರೂಪಧಾರಿಣೀ |
ಕೌಶಾಂಭಃ ಕ್ಷರಿಕೇದೇವಿ ನಾರಾಯಣಿ ನಮೋಽಸ್ತುತೇ || ೧ ||

ತ್ರಿಶೂಲ ಚನ್ದ್ರಾಹಿಧರೇ ಮಹಾವೃಷಭವಾಹಿನೀ |
ಮಾಹೇಶ್ವರೀ ಸ್ವರೂಪೇಣ ನಾರಾಯಣಿ ನಮೋಽಸ್ತುತೇ || ೨ ||

ಮಯೂರ ಕುಕ್ಕುಟವೃತೇ ಮಹಾಶಕ್ತಿ ಧರೇಽನಘೇ |
ಕೌಮಾರೀ ರೂಪಸಂಸ್ಥಾನೇ ನಾರಾಯಣಿ ನಮೋಽಸ್ತುತೇ || ೩ ||

ಶಂಖಚಕ್ರಗದಾಶಾರ್ಙ್ಗ ಗೃಹೀತ ಪರಮಾಯುಧೇ |
ಪ್ರಸೀದ ವೈಷ್ಣವೀರೂಪೇ ನಾರಾಯಣಿ ನಮೋಽಸ್ತುತೇ || ೪ ||

ಗೃಹೀತೋಗ್ರ ಮಹಾಚಕ್ರೇ ದಂಷ್ಟ್ರಾಧೃತ ವಸುನ್ಧರೇ |
ವಾರಾಹ ರೂಪಿಣಿ ಶಿವೇ ನಾರಾಯಣಿ ನಮೋಸ್ತುತೇ || ೫ ||

ಕಿರೀಟಿನಿ ಮಹಾವಜ್ರೇ ಸಹಸ್ರನಯನೋಜ್ವಲೇ |
ವೃತ್ರಪ್ರಾಣ ಹರೇಚೈಂದ್ರಿ ನಾರಾಯಣಿ ನಮೋಽಸ್ತುತೇ || ೬ ||

ದಂಷ್ಟ್ರಾಕರಾಳ ವದನೇ ಶಿರೋಮಾಲಾ ವಿಭೂಷಣೇ |
ಚಾಮುಂಡೇ ಮುಂಡಮಥನೇ ನಾರಾಯಣಿ ನಮೋಽಸ್ತುತೇ || ೭ ||



## ೩ ವೀಣೆಗೂ ಮನುಷ್ಯದೇಹಕ್ಕೂ ಸಮನ್ವಯ

ಶ್ರೀಶಾರದಾದೇವಿಯ ಹಸ್ತದಲ್ಲಿರುವ ವೀಣೆಯನ್ನು ಗಾಯತ್ರೀಮಂತ್ರ ಮತ್ತು ವೇದಗಳ ತತ್ವಪ್ರತಿಪಾದಕವಾದ ಬ್ರಹ್ಮಾಂಡಕ್ಕೆ ಅನ್ವಯಿಸಿ ಹಿಂದೆ ಬರೆದಿದೆಯಷ್ಟೆ! ಬ್ರಹ್ಮಾಂಡದಲ್ಲಿರುವ ಸಕಲ ತತ್ವಗಳೂ ಪಿಂಡಾಂಡವೆನಿಸುವ ಮನುಷ್ಯದೇಹದಲ್ಲಿರುವುದರಿಂದ ವೀಣೆಯ ತತ್ವಗಳು ಮನುಷ್ಯದೇಹದಲ್ಲಿಯೂ ಇರುವುವು. ಹೀಗಿರುವ ಸ್ವರೂಪವನ್ನೂ, ವೀಣೆಯ ಕಾರ್ಯಕ್ರಮವನ್ನೂ ತಕ್ಕಮಟ್ಟಿಗೆ ವಿವರಿಸೋಣ.

ಮನುಷ್ಯನ ದೇಹದ ಬೆನ್ನಿನ ಹುರಿ ಇರುವ ಸ್ಥಳದಲ್ಲಿ ಗುದದ ಕಡೆಯಿಂದ ಪ್ರಾರಂಭವಾಗಿ ಶಿರಸ್ಸಿನ ಪರ್ಯಂತರ ದೇಹವನ್ನು ಧರಿಸಿರುವ ಉದ್ದವಾದ ಮೂಳೆಯು ಇರುವುದು. ಈ ಮೂಳೆಯು ವೀಣಾದಂಡದಂತಿದೆ. ವೀಣೆಯಲ್ಲಿ ೨೪ ಮನೆಗಳಿರುವಂತೆ ಈ ಮೂಳೆಯೂ ೨೪ ಭಾಗಗಳಾಗಿರುವ ವಿಧದಲ್ಲಿಯೇ ಇರುವುದು. ವೀಣಾದಂಡವೆಂದು ಕರೆಯಲ್ಪಡುವಂತೆ ಈ ಮೂಳೆಯು ಶರೀರದ ಕಂಭವೆಂದು ಕರೆಯಲ್ಪಡುವುದು. ವೀಣೆಯಲ್ಲಿರುವ ೨೪ ಮನೆಗಳ ಭಾಗಗಳಿಗನುಸಾರವಾಗಿ ಬೆನ್ನಿನ ಮೂಳೆಯು ೨೪ ಭಾಗಗಳಾಗಿವೆಯೆಂದು ಆಧುನಿಕ ಶರೀರ ಶಾಸ್ತ್ರ (ಅನಾಟಮಿ) ದಲ್ಲಿ ಸರ್ವಿಕಲ್ ೭ ಡಾರ್ಸಲ್ ೧೨ ಲಂಬರ್ ೫ ಎಂಬದಾಗಿ ಮೂಳೆಯ ೨೪ ಭಾಗಗಳಿಗೂ ಹೆಸರುಗಳಿರುವುವು. ವೀಣೆಯಲ್ಲಿ ಮಂದ್ರಸ್ಥಾಯಿಯ ಪ್ರಾರಂಭದಲ್ಲಿರುವ ಮನೆಗಳು ವಿಶಾಲವಾಗಿದ್ದು ತಾರಸ್ಥಾಯಿಯ ಕಡೆಗೆ ಹೋಗುತ್ತ ಹೋಗುತ್ತ ಮನೆಗಳ ವಿಶಾಲತ್ವವು ತಗ್ಗಿ ತಾರಸ್ಥಾಯಿಯ ಅಂತ್ಯಕ್ಕೆ ಬಹು ಸಣ್ಣ ಮನೆಗಳಿರುವುವು. ಅಂದರೆ ವೀಣೆಯಲ್ಲಿ ಸಿಂಹದ ಮುಖದ ಕಡೆ ಮನೆಗಳು ವಿಶಾಲವಾಗಿದ್ದು ಶಿರೋಭಾಗದ ಬುರುಡೆಯ ಕಡೆಗೆ ಹೋಗುತ್ತ ಹೋಗುತ್ತ ಬಹು ಸಣ್ಣ ಮನೆಗಳಿರುವುವು. ಇದರಂತೆಯೇ ನಮ್ಮ ದೇಹದಲ್ಲಿರುವ ಬೆನ್ನಿನ ಮೂಳೆಯು ಸೊಂಟಪ್ರದೇಶದಲ್ಲಿ ದಪ್ಪವಾಗಿಯೂ, ಅಗಲವಾದ ಭಾಗಗಳುಳ್ಳದ್ದಾಗಿಯೂ, ಸೊಂಟದಿಂದ ಮೇಲಕ್ಕೆ ಕ್ರಮೇಣ ಅಗಲವೂ ದಪ್ಪವೂ ತಗ್ಗುತ್ತಾ ಶಿರಸ್ಸಿನ ಪ್ರದೇಶಕ್ಕೆ ಬಹು ಸಣ್ಣದಾಗಿರುವುದು.

ಮೇಲಿನ ತತ್ವವನ್ನು ದೃಢಪಡಿಸಲು ಬೆನ್ನಿನ ಮೂಳೆಯು ಇರುವಿಕೆಯ ಚಿತ್ರವನ್ನು ಇಲ್ಲಿ ಕೊಟ್ಟಿರುವುದು. ಆದುದರಿಂದ ಬೆನ್ನಿನ ಮೂಳೆಯು ವೀಣಾದಂಡದಂತೆ ಇರುವುದೆಂಬುದನ್ನು ಸರ್ವರೂ ನೋಡಬಹುದು. ಬೆನ್ನಿನ ಮೂಳೆಯು ವೀಣಾದಂಡವೆಂದು ಶ್ರುತಿಯೂ ತಿಳಿಸುವುದು. ಬೆನ್ನಿನ ಮೂಳೆಯು

ಕೆಳಭಾಗವು ವೀಣೆಯ ಸಿಂಹದ ಮುಖಭಾಗವೆಂದು ತಿಳಿಸಿತಷ್ಟೆ! ಈ ತತ್ವಕ್ಕೆ ಬೆನ್ನಿನ ಕೆಳಭಾಗದಲ್ಲಿರುವ ಮೂಳೆಯೂ ಕೂಡ ಸಿಂಹದ ಮುಖಕ್ಕೆ ಹೋಲಿಕೆ ಯಾಗಿಯೇ ಇರುವುದು. ಇದನ್ನು ಚಿತ್ರಪಠದಲ್ಲಿ ನೋಡಬಹುದು.

ಬೆನ್ನಿನ ಮೂಳೆಯನ್ನಾಶ್ರಯಿಸಿ ಸುಷುಮ್ನಾನಾಡಿ (ಬ್ರಹ್ಮರಂಧ್ರನಾಡಿ) ಯು ಇರುವುದು. ವೀಣೆಯು ತಂತಿಗಳನ್ನು ಹೊಂದಿರುವಂತೆ ಬೆನ್ನಿನ ಮೂಳೆಯ ನ್ನಾಶ್ರಯಿಸಿರುವ ಬ್ರಹ್ಮರಂಧ್ರನಾಡಿಯು ನಾದಬ್ರಹ್ಮಸ್ವರೂಪವಾದ ಪರಾಶಕ್ತಿ ಯನ್ನು ಹೊಂದಿರುವುದು. ಈ ಬ್ರಹ್ಮರಂಧ್ರನಾಡಿಯಲ್ಲಿ ಗಾಯತ್ರೀಮಂತ್ರದ ೨೪ ಬೀಜಾಕ್ಷರಗಳ ತತ್ವಗಳೂ ಇರುವುವು. ಗಾಯತ್ರೀ ಬೀಜಾಕ್ಷರಗಳ ತತ್ವ ವನ್ನನುಸರಿಸಿಯೇ ಬೆನ್ನಿನ ಮೂಳೆಯೂ ೨೪ ಭಾಗಗಳಾಗಿವೆ. ಅಂದರೆ ಬ್ರಹ್ಮಾಂಡ ಪಿಂಡಾಂಡಗಳೆರಡೂ ಗಾಯತ್ರೀಮಹಾತಾಯಿಯ ಮಹಿಮೆಯಿಂದಲೇ ನಿಂತಿವೆ.

ಕಂಭದ ಹಾಗೆ ಇರುವ ಬೆನ್ನಿನ ಮೂಳೆಯ ನಡುವೆ ಇರುವ ನಾಳವೆಂದರೆ ಕೊಳವಿಯಲ್ಲಿ ಮೆದುಳುಬಳ್ಳಿ ಇರುವುದೆಂದು ಶರೀರಶಾಸ್ತ್ರದಲ್ಲಿ ಹೇಳಿದೆ. ಮೆದುಳುಬಳ್ಳಿಯು ಸ್ಥೂಲರೂಪವಾದುದು. ಇದೇ ಬ್ರಹ್ಮರಂಧ್ರನಾಡಿಯಲ್ಲ. ಸ್ಥೂಲವಾದ ಮೆದುಳುಬಳ್ಳಿಯಲ್ಲಿ ಶಕ್ತಿರೂಪದಲ್ಲಿ ಬ್ರಹ್ಮರಂಧ್ರನಾಡಿಯು ಇರುವುದು. ಈ ನಾಡಿಯು ನಮ್ಮ ಚರ್ಮಚಕ್ಷುಸ್ಸಿಗೆ ಗೋಚರವಾಗುವುದಿಲ್ಲ. ಎಕ್ಸ್ರೇ ಮುಂತಾದ ಯಾವ ಯಂತ್ರಗಳಿಂದಲೂ ನೋಡಲಸಾಧ್ಯ. ನಮ್ಮ ಅಂಗಗಳು ಅಳ್ಳಾಡುವುದನ್ನು ನೋಡಬಲ್ಲವೇ ಹೊರತು ಅಳ್ಳಾಡುವುದಕ್ಕೆ ಕಾರಣವಾದ ಒಳಗಿನ ಶಕ್ತಿಯನ್ನು ನೋಡಲಾರೆವು. ಸ್ಥೂಲದೇಹದ ಪಂಜರವು ಹೇಗಿದೆಯೋ ಹಾಗೆಯೆ ಸ್ಥೂಲದೇಹದೊಳಗೆ ಶಕ್ತಿಪಂಜರವಿಲ್ಲದ ಭಾಗದಲ್ಲಿ ದೇಹವು ಶವವೆನಿಸುವುದು. ಆದುದರಿಂದ ದೇಹದಲ್ಲಿರುವ ಬ್ರಹ್ಮರಂಧ್ರನಾಡಿ, ಸೂರ್ಯನಾಡಿ, ಚಂದ್ರನಾಡಿ, ಕುಂಡಲಿನೀ, ಷಟ್ಚಕ್ರ ಮುಂತಾದುವುಗಳೆಲ್ಲಾ ಶಕ್ತಿರೂಪದಲ್ಲಿರುವುವು. ಇದಕ್ಕನುಸಾರವಾಗಿ 'ಸ್ಥಾನಾ ನ್ಯೇತಾನಿದೇಹೇಽಸ್ಮಿನ್ ಶಕ್ತಿರೂಪಂ ಪ್ರಕಾಶತೇ' ಎಂಬ ಶ್ರುತ್ಯಾಧಾರವೂ ಇರುವುದು. ಆದುದರಿಂದ ಬ್ರಹ್ಮರಂಧ್ರ ನಾಡಿಯು ಶಕ್ತಿರೂಪದಲ್ಲಿರುವುದು. ಇಂತಹ ಬ್ರಹ್ಮರಂಧ್ರದಲ್ಲಿರುವ ಓಂಕಾರವೆನಿಸುವ ಅನಾಹತ ನಾದದ ಪ್ರಕಾಶದಿಂದ ನಾವು ಉಚ್ಚರಿಸುವ ಸರ್ವ ಅಕ್ಷರಗಳ ನಾದವೂ ಉತ್ಪತ್ತಿ ಯಾಗುವುದು. ವೀಣಾದಂಡದಂತಿರುವ ನಮ್ಮ ಬೆನ್ನಿನ ಮೂಳೆಯೊಳಗಿನ ನಾಳದಲ್ಲಿ ಶಕ್ತಿರೂಪದಲ್ಲಿ ಬ್ರಹ್ಮರಂಧ್ರನಾಡಿಯು ಇರುವುದೆಂಬುದಕ್ಕೆ ಶ್ರುತಿ ಪ್ರಮಾಣವೇ ಇರುವುದು.

**ದರ್ಶನೋಪನಿಷತ್ತಿನಲ್ಲಿ :—**

ಪೃಷ್ಠಮಧ್ಯಸ್ಥಿತೇ ನಾಸ್ಥ್ನಾ ವೀಣಾದಂಡೇನ ಸುವ್ರತ |
ಸಹ ಮಸ್ತಕ ಪರ್ಯಂತಂ ಸುಷುಮ್ನಾ ಸಂಪ್ರತಿಷ್ಠಿತಾ ||

ತಾ|| ಎಲೈ ಪಂಡಿತನೇ! ಪೃಷ್ಠಮಧ್ಯೆ ವೀಣಾದಂಡದಂತೆ ಇರುವ ಮೂಳೆಯು ಶಿರಸ್ಸಿನ ವರೆಗೂ ಹೋಗಿರುವುದು. ಅದರಲ್ಲಿ ಸುಷುಮ್ನಾ (ಬ್ರಹ್ಮರಂಧ್ರ) ನಾಡಿಯು ಬಹು ಚೆನ್ನಾಗಿ ನೆಲೆಸಿರುವುದು ಎಂದು ಹೇಳಿರುವುದು.

**ಶಾಂಡಿಲ್ಯೋಪನಿಷತ್ತಿನಲ್ಲಿ :—**

ಗುದಸ್ಯ ಪೃಷ್ಠಭಾಗೇಽಸ್ಮಿನ್ ವೀಣಾದಂಡ ಸ್ಸದೇಹಭೃತ್ |
ದೀರ್ಘಾಸ್ಥಿ ದೇಹಪರ್ಯಂತಂ ಬ್ರಹ್ಮನಾಡೀತಿ ಕಥ್ಯತೇ |
ಉಚ್ಚಾರಯೇ ತ್ಪರಾಂಶಕ್ತಿಂ ಬ್ರಹ್ಮರಂಧ್ರ ನಿವಾಸಿನೀಂ |

ತಾ|| ಗುದದ ಹಿಂದೆ ದೇಹವನ್ನು ಹೊತ್ತಿರುವ ವೀಣಾದಂಡದಂತೆ ದೀರ್ಘವಾದ ಮೂಳೆಯು ಶಿರಸ್ಸಿನವರೆಗೂ ಇರುವುದು. ಇದರಲ್ಲಿ ಬ್ರಹ್ಮರಂಧ್ರ (ಸುಷುಮ್ನಾ) ನಾಡಿಯು ಇರುವುದು. ಈ ನಾಡಿಯಲ್ಲಿರುವ ಪರಾಶಕ್ತಿಯನ್ನು ಉಚ್ಚರಿಸಬೇಕು. ಅಂದರೆ ನಾದಬ್ರಹ್ಮವಾದ ಓಂಕಾರವನ್ನು ಉಚ್ಚರಿಸಬೇಕು. ಎಂದು ಹೇಳಿರುವುದು.

**ಧ್ಯಾನಬಿಂದೂಪನಿಷತ್ತಿನಲ್ಲಿ :—**

ಮೂಲಾಧಾರಾ ತ್ಸುಷುಮ್ನಾಚ ಪದ್ಮತಂತು ನಿಭಾ ಶುಭಾ |
ಅಮೂರ್ತೋ ವರ್ತತೇ ನಾದೋ ವೀಣಾದಂಡ ಸಮುತ್ಥಿತಃ ||

ತಾ|| ಮೂಲಾಧಾರದಿಂದ ಹೊರಟಿರುವ ಸುಷುಮ್ನೆಯು ಕಮಲದ ತಂತು ವಿನಂತಿರುವುದಾಗಿಯೂ ಮಂಗಳರೂಪವಾದದ್ದಾಗಿಯೂ ಇದೆ. ಈ ಸುಷುಮ್ನಾ ನಾಡಿಯಲ್ಲಿ ವೀಣೆಯಿಂದುತ್ಪನ್ನವಾಗುವ ನಾದದಂತೆ ಅವ್ಯಕ್ತನಾದವಿದೆ. ಎಂದು ಹೇಳಿದೆ.

ಮೇಲೆ ವಿವರಿಸಿರುವಂತೆ ಬ್ರಹ್ಮರಂಧ್ರನಾಡಿಯಲ್ಲಿ ಓಂಕಾರಸ್ವರೂಪವಾದ ಅನಾಹತನಾದದ ತತ್ವದಲ್ಲಿ ಶ್ರೀಶಾರದಾದೇವಿಯು ಧರಿಸಿರುವ ವೀಣೆಯ ಮಹತ್ವಗಳಿರುವುವು. ಬ್ರಹ್ಮರಂಧ್ರನಾಡಿಯ ಹೊರಪ್ರಾಕಾರದಲ್ಲಿ ದೇವತಾತ್ಮಕವಾದ ಅನಾಹತಶಬ್ದದಿಂದ ಪ್ರಕಾಶಿಸಲ್ಪಟ್ಟ ನಾವು ನುಡಿಸುವ ವೀಣೆಯ ಮತ್ತು ಗಾನರೂಪವಾದ ಆಹತನಾದಶಕ್ತಿಗಳು ಇರುವುವು. ಅಂದರೆ ದೈವಿಕವಾದ ವೀಣೆಯು ಬ್ರಹ್ಮರಂಧ್ರದೊಳಗೂ, ಮನುಷ್ಯವರ್ಗದ ವೀಣೆಯು ಬ್ರಹ್ಮರಂಧ್ರದ ಹೊರಪ್ರಾಕಾರದಲ್ಲಿಯೂ ಇರುವುವು. ದೈವಿಕ ಮತ್ತು ಮಾನುಷ ವಿದ್ಯೆಯ

ಶಕ್ತಿಗಳಿಗೆ ಮಧ್ಯೆ ಕೊಳವಿಯ ರೂಪವಾದ ಅಥವಾ ದೀಪಕ್ಕಿರುವ ಗಾಜಿನ ಕೊಳವಿಯಂತೆ ಆವರಣವಿರುವುದರಿಂದ ಬ್ರಹ್ಮರಂಧ್ರನಾಡಿಯೊಳಗೆ ದೈವಿಕವಾದ ಗಾನಶಕ್ತಿಯೂ ಬ್ರಹ್ಮರಂಧ್ರದ ಹೊರಪ್ರಾಕಾರದಲ್ಲಿ ಮನುಷ್ಯವರ್ಗದ ಗಾನಶಕ್ತಿಯೂ ಇರುವುದು ಬ್ರಹ್ಮರಂಧ್ರದಲ್ಲಿ ದೈವಿಕವಾದ ವೀಣೆಯು ಇರತಕ್ಕ ಕ್ರಮವನ್ನು ವಿವರಿಸೋಣ.

ವೀಣೆಯಲ್ಲಿನ ಸಿಂಹದಮುಖದ ಕಡೆಯು ಮನುಷ್ಯನ ಸೊಂಟದ ಕೆಳಭಾಗದಲ್ಲಿ ಇರುವುದು. ವೀಣೆಯ ಶಿರಸ್ಸಿನ ಭಾಗವು ಮನುಷ್ಯನ ಶಿರಸ್ಸಿನ ಕಡೆ ಇರುವುದು. ವೀಣೆಯಲ್ಲಿ ಸಿಂಹದ ಮುಖದಕಡೆಯಿಂದ ಮಂದ್ರಸ್ಥಾಯಿಯು ಪ್ರಾರಂಭವಾಗುವುದು. ಇದರಂತೆ ಮನುಷ್ಯನ ಬೆನ್ನಿನ ಮೂಳೆಯಲ್ಲಿಯೂ ಸೊಂಟದ ಕೆಳಭಾಗದಿಂದ ಮಂದ್ರಸ್ಥಾಯಿಯು ಪ್ರಾರಂಭವಾಗುವುದು. ಹೀಗೆ ಮೂಳೆಯನ್ನನುಸರಿಸಿ ಶಿರಸ್ಸಿನವರೆಗೂ ಮಂದ್ರ, ಮಧ್ಯಮ, ತಾರಸ್ಥಾಯಿಗಳಿರುವುವು. ವೀಣೆಯಲ್ಲಿನ ೨೪ ಮನೆಗಳಲ್ಲಿ ಮಂದ್ರ, ಮಧ್ಯಮ, ತಾರಸ್ಥಾಯಿಗಳಿಗೆ ಕ್ರಮವಾಗಿ ಎಂಟೆಂಟು ಮನೆಗಳಿರುವಂತೆ ಬೆನ್ನಿನ ಮೂಳೆಯಲ್ಲಿಯೂ ಕೆಳಗಿನಿಂದ ಮೇಲಿನವರೆಗೂ ಎಂಟೆಂಟು ಮೂಳೆಗಳ ಪ್ರದೇಶವೇ ಮಂದ್ರ, ಮಧ್ಯಮ, ತಾರಸ್ಥಾಯಿಗಳ ಎಂಟೆಂಟು ಮನೆಗಳ ಪ್ರದೇಶವಾಗಿದೆ. ವೀಣಾ ತಂತಿಗಳ ಶಕ್ತಿಗಳೆಂದರೆ ಚತುರ್ವೇದಗಳ ಶಕ್ತಿಯೂ ಬ್ರಹ್ಮರಂಧ್ರನಾಡಿಯಲ್ಲಿ 'ಅನಾಹತನಾದ' ಸ್ವರೂಪದಲ್ಲಿರುವುದು. ಸಪ್ತಸ್ವರಶಕ್ತಿಗಳೂ ಬ್ರಹ್ಮರಂಧ್ರನಾಡಿಯಲ್ಲಿ ಒಂದೊಂದು ಪ್ರಧಾನಸ್ಥಳವನ್ನು ಹೊಂದಿರುವುವು. ಈ ಪ್ರಧಾನ ಸ್ಥಳಗಳೇ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ, ಸಹಸ್ರಾರ ಚಕ್ರಗಳೆನಿಸುವುವು. ಈ ಸ್ಥಳಗಳನ್ನೂ ಅದಕ್ಕನುಸಾರವಾದ ಸ್ವರಶಕ್ತಿಗಳನ್ನೂ ಇಲ್ಲಿ ಕೊಟ್ಟಿರುವ ಮನುಷ್ಯನ ಚಿತ್ರಪಟದಲ್ಲಿ ಬರೆದಿರುವುದು. ಅಲ್ಲದೆ ವೀಣೆಯ ಚಿತ್ರದಲ್ಲಿಯೂ ಗುರ್ತಿಸಿರುವುದು. ಸಪ್ತಸ್ವರಶಕ್ತಿಗಳು ತಮ್ಮತಮ್ಮ ಪ್ರಧಾನಸ್ಥಳವನ್ನು ಹೊಂದಿದ್ದರೂ ಕಾರ್ಯದಲ್ಲಿ ಮಿಳಿತವಾಗಿ ಓಂಕಾರ ಅಥವಾ ಅನಾಹತನಾದಶಕ್ತಿಯಾಗಿ ಬ್ರಹ್ಮರಂಧ್ರವನ್ನೆಲ್ಲಾ ವ್ಯಾಪಿಸಿರುವುವು.

ಸಪ್ತಸ್ವರದಲ್ಲಿರುವ ಷಡ್ಜ, ಮಧ್ಯಮ, ಗಾಂಧಾರಗಳೆಂಬ ಗ್ರಾಮತ್ರಯವು ಬ್ರಹ್ಮ, ವಿಷ್ಣು, ರುದ್ರರ ತತ್ವವೆಂದು ಹಿಂದೆ ತಿಳಿಸಿತಷ್ಟೆ! ಈ ಬ್ರಹ್ಮ, ವಿಷ್ಣು, ರುದ್ರರ ತತ್ವವೇ ಓಂಕಾರದಲ್ಲಿನ ಅ, ಉ, ಮ, ಗಳಾಗಿವೆ. ಏಳು ಸ್ವರಗಳೂ ಮೂರು ಮುಖ್ಯಭಾಗಗಳಾಗಿ ಗ್ರಾಮತ್ರಯವಾಗಿರುವ ತತ್ವದಂತೆ ಓಂಕಾರದ ಭಾಗಗಳಾದ ಅ, ಉ, ಮ, ಅಕ್ಷರಗಳ ತತ್ವವಾದ ಬ್ರಹ್ಮ, ವಿಷ್ಣು, ರುದ್ರರ ಶಕ್ತಿಗಳು ನಮ್ಮ ಮೂಲಾಧಾರ, ಅನಾಹತ, ಆಜ್ಞಾ ಚಕ್ರಗಳಲ್ಲಿವೆ.




ಶರೀರದಲ್ಲಿರುವ ವೀಣೆಯ ಚಿತ್ರ.

| | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ | ೧೬ | ೧೭ | ೧೮ | ೧೯ | ೨೦ | ೨೧ | ೨೨ | ೨೩ | ೨೪ |
| ರಿ | ರಿ | ರಿ | ಗ | ಮ | ಮ | ಪ | ಧ | ಧ | ಧ | ನಿ | ಸ | ರಿ | ರಿ | ರಿ | ಗ | ಮ | ಮ | ಪ | ಧ | ಧ | ಧ | ನಿ | ಸ |
| | ಗ | ಗ | ಅಂ | | ಪ್ರ | | | ನಿ | ನಿ | ಕಾಕಲಿ | | | ಗ | ಗ | ಅಂ | | ಪ್ರ | | | ನಿ | ನಿ | ಕಾಕಲಿ | |



| | | | | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಸ | ವಿ | ತುಃ | ವ | ರೇ | ಣಿ | ಯಂ | ಭ | ರ್ಗಃ | ದೇ | ವ | ಸ್ಯ | ಧೀ | ಮ | ಹಿ | ಧಿ | ಯೋ | ಯೋ | ನಃ | ಪ್ರ | ಚೋ | ದ | ಯಾತ್ | ತತ್ |

| | | |
|---|---|---|
| ಸೃಷ್ಟಿ | ವ್ಯಾಪಾರ | ಮೋಕ್ಷಕ್ಕೆ ಹತ್ತುವುದು (ಲಯ) |
| ಮಂದ್ರ | ಮಧ್ಯಮ | ತಾರ |
| ಅವರೋಹಣ. | | ಆರೋಹಣ. |

ಶರೀರದಲ್ಲಿರುವ ವೀಣೆಯ ವಿವರಣ ಚಿತ್ರ.

ಈ ತತ್ವಕ್ಕೆ ಶ್ರುತ್ಯಾಧಾರವೂ ಇರುವುದು.

ಬ್ರಹ್ಮಗ್ರಂಥಿ ರಕಾರೇಚ ವಿಷ್ಣುಗ್ರಂಥಿ ಹೃದಿಸ್ಥಿತಃ |
ರುದ್ರಗ್ರಂಥಿ ಭ್ರೂರ್ವೋರ್ಮಧ್ಯೆ ಭಿದ್ಯತೆ ಕ್ಷರವಾಯುನಾ ||
ಅಕಾರೇ ಸಂಸ್ಥಿತೋ ಬ್ರಹ್ಮಾ ಉಕಾರೇ ವಿಷ್ಣುರಾಸ್ಥಿತಃ |
ಮಕಾರೇ ಸಂಸ್ಥಿತೋ ರುದ್ರ ಸ್ತತೋಽಸ್ಯಾಂ ತತ್ಪರಾತ್ಪರಃ ||

ಈ ಆಧಾರವಾಕ್ಯವು **ಬ್ರಹ್ಮವಿದ್ಯಾ, ಯೋಗಚೂಡಾಮಣಿ, ಯೋಗ ಕುಂಡಿಲಿನಿ ಯೋಗಶಿಖೋಪನಿಷತ್ತು**ಗಳಲ್ಲಿಯೂ ಇರುವುದು. ಮುಖ್ಯವಾಗಿ ಓಂಕಾರದಲ್ಲಿನ ಅಕಾರವಾದ ಬ್ರಹ್ಮಶಕ್ತಿಯು ಸೃಷ್ಟಿಶಕ್ತಿಯಾಗಿ ಮೂಲಾಧಾರ ಚಕ್ರದಲ್ಲಿಯೂ, ಉಕಾರವಾದ ವಿಷ್ಣುಶಕ್ತಿಯು ಪಾಲನಾಶಕ್ತಿಯಾಗಿ ಎದೆಯ ಸ್ಥಳವಾದ ಅನಾಹತಚಕ್ರದಲ್ಲಿಯೂ, ಮಕಾರವಾದ ರುದ್ರಶಕ್ತಿಯು ಮೋಕ್ಷ ಕೊಡತಕ್ಕ ಶಕ್ತಿಯಾಗಿ ಭ್ರೂಮಧ್ಯವಾದ ಆಜ್ಞಾಚಕ್ರದಲ್ಲಿಯೂ, ಇದರ ಮೇಲಿರುವ ಸಹಸ್ರಾರಕಮಲದಲ್ಲಿ ಪರಾತ್ಪರವಾದ ಪರಬ್ರಹ್ಮವೂ ನಮ್ಮಲ್ಲಿ ಬ್ರಹ್ಮರಂಧ್ರನಾಡಿಯಲ್ಲಿ ಇರುವುದೆಂಬುದನ್ನು ಈ ಶ್ರುತ್ಯಾಧಾರವು ಪ್ರತಿಪಾದಿಸುವುದು. ಇದೇ ಸಂಗೀತಶಾಸ್ತ್ರದಲ್ಲಿನ ಗ್ರಾಮತ್ರಯದ ತತ್ವವು ಬ್ರಹ್ಮರಂಧ್ರ ನಾಡಿಯಲ್ಲಿರುವ ಸ್ವರೂಪವಾಗಿದೆ

ವೀಣೆಯ ಚಿತ್ರದಲ್ಲಿ ಗಾಯತ್ರೀಮಂತ್ರವನ್ನನುಸರಿಸಿ ಸೃಷ್ಟಿ, ವ್ಯಾಪಾರ, ಲಯ (ಮೋಕ್ಷ) ಎಂಬಿವುಗಳನ್ನು ೨೪ ಮನೆಗಳಿಗೂ ವಿಭಾಗಮಾಡಿ ಬರೆದಿರುವುದಷ್ಟೆ! ಈ ತತ್ವಗಳನ್ನು ಬ್ರಹ್ಮರಂಧ್ರನಾಡಿಗೆ ಅನ್ವಯಿಸೋಣ. ವೀಣೆಯ ಚಿತ್ರದಲ್ಲಿ 'ಸೃಷ್ಟಿ' ಎಂಬ ಪದವನ್ನು ಬರೆದಿರುವ ಸ್ಥಳಕ್ಕೆ ಸರಿಯಾಗಿ ಮನುಷ್ಯನಲ್ಲಿ ಮೂಲಾಧಾರಚಕ್ರಪ್ರದೇಶವಾಗಿ ಬ್ರಹ್ಮಗ್ರಂಥಿಯು ಇರುವ ಸ್ಥಳವಾಗಿದೆ. ಈ ಸ್ಥಳವೇ ಸೃಷ್ಟಿಕಾರ್ಯಕ್ಕೆ ಪ್ರಧಾನಸ್ಥಳ. ಸ್ತ್ರೀಪುರುಷರಲ್ಲಿ ಸೊಂಟದ ಕೆಳಭಾಗವೇ ಸೃಷ್ಟಿಕಾರ್ಯಕ್ಕೆ ಪ್ರಧಾನಸ್ಥಳವೆಂಬುದು ಸರ್ವರಿಗೂ ತಿಳಿದ ವಿಚಾರವಾಗಿದೆ. ವೀಣೆಯಲ್ಲಿಯೂ ಈ ಸ್ಥಳದಲ್ಲಿರುವ ಋಷಭ ಗಾಂಧಾರಸ್ವರಗಳ ಮತ್ತು ಶ್ರುತಿಗಳ ತತ್ವಗಳು ಸೃಷ್ಟಿಕಾರ್ಯದ ವಿಚಾರವಾಗಿರುವುದೆಂದು ಎರಡನೆಯ ಪ್ರಕರಣದಲ್ಲೇ ತಿಳಿಸಿರುತ್ತೆ. ಅಲ್ಲದೆ ಓಂಕಾರದ ಅಕಾರವು ಸೃಷ್ಟಿಶಕ್ತಿಯಾಗಿ ಈ ಮೂಲಾಧಾರಚಕ್ರಪ್ರದೇಶದಲ್ಲಿರುವುದಕ್ಕೆ 'ಸೃಷ್ಟಿರಾಧಾರ ಮಾಧಾರ' ಎಂಬ 'ಆಧಾರಾಜ್ಜಾಯತೇ ವಿಶ್ವಂ' ಎಂಬ ಶ್ರುತಿಪ್ರಮಾಣವಿರುವುದು.

ವೀಣೆಯಲ್ಲಿ ಗಾಯತ್ರೀಮಂತ್ರಕ್ಕನುಸಾರವಾಗಿ ವ್ಯಾಪಾರವೆಂದು ಬರೆದಿರುವ ಸ್ಥಳದ ವಿಚಾರವನ್ನು ತೆಗೆದುಕೊಳ್ಳೋಣ. ಸೃಷ್ಟಿಯಾದುದು ವ್ಯಾಪಾರಕ್ಕೆ

ಬರುವುದು ಸ್ವಾಭಾವಿಕವಾಗಿರುವಂತೆ, ಮೂಲಾಧಾರಚಕ್ರದಿಂದ ಎದೆಯಸ್ಥಳವಾದ ಅನಾಹತಚಕ್ರದವರೆಗೆ ಬ್ರಹ್ಮರಂಧ್ರ ನಾಡಿಯೊಳಗೆ ವ್ಯಾಪಾರದ ಸಕಲ ಶಕ್ತಿಗಳೂ ಇವೆ ಇದಕ್ಕನುಸಾರವಾಗಿ ವೀಣೆಯ ಅನ್ವಯದಲ್ಲಿಯೂ ಮಧ್ಯಮ, ಪಂಚಮ ಧೈವತಸ್ವರಗಳ ತತ್ವಗಳು ವ್ಯಾಪಾರದ ವಿಚಾರಗಳನ್ನು ಪ್ರತಿಪಾದಿಸುತ್ತವೆ. ಈ ತತ್ವಸಮರ್ಥನೆಗೆ ಅನುಸಾರವಾಗಿ ಎದೆಯ ಸ್ಥಳವಾದ ಅನಾಹತ ಚಕ್ರದಲ್ಲಿ ಓಂಕಾರದ 'ಉ' ಕಾರಶಕ್ತಿಯಾದ ವಿಷ್ಣುಗ್ರಂಥಿಯು ಇರುವುದು. ಮೂಲಾಧಾರದಲ್ಲಿರುವ ಬ್ರಹ್ಮಶಕ್ತಿಯು ಹೇಗೆ ಸೃಷ್ಟಿಶಕ್ತಿಯಾಗಿರುವುದೋ ಹಾಗೆಯೇ ಎದೆಯ ಸ್ಥಳವಾದ ಅನಾಹತಚಕ್ರದಲ್ಲಿರುವ ವಿಷ್ಣುಶಕ್ತಿಯು ಪಾಲನಾಶಕ್ತಿಯಾಗಿರುವುದು.

ಸೃಷ್ಟಿಯಾಗಿ ವ್ಯಾಪಾರಕ್ಕೆ ಬಂದ ಅನಂತರ ಲಯದಮಾರ್ಗವನ್ನು ಅನುಸರಿಸುವವರೆಗೆ ವ್ಯಾಪಾರದಲ್ಲಿಯೇ ನಿಂತಿರಬೇಕಾಗಿರುವುದು. ಅಲ್ಲದೆ ಲಯದ ಮಾರ್ಗವನ್ನನುಸರಿಸುವುದೆಂದರೆ ಸೃಷ್ಟಿ ಮತ್ತು ವ್ಯಾಪಾರಗಳೆರಡೂ ಲಯಕ್ರಮವನ್ನನುಸರಿಸಬೇಕು. ಆದುದರಿಂದ ವೀಣೆಯಲ್ಲಿ ಗಾಯತ್ರೀ ಮಂತ್ರಕ್ಕನುಸಾರವಾಗಿ ಲಯ (ಮೋಕ್ಷಕ್ಕೆ ಹತ್ತುವುದು) ಎಂದು ಬರೆದಿರುವ ತತ್ವಗಳು ಮನುಷ್ಯನಲ್ಲಿ ಅನಾಹತಚಕ್ರದಿಂದ ಪ್ರಾರಂಭವಾಗಿ ಶಿರಸ್ಸಿನಲ್ಲಿರುವ ಸಹಸ್ರಾರಕಮಲದವರೆಗೂ ಇದ್ದು ಅಲ್ಲಿ ಅಂತ್ಯವಾಗುವುವು. ಸೃಷ್ಟಿ, ವ್ಯಾಪಾರಗಳು ಲಯಮಾರ್ಗವನ್ನು ಅನುಸರಿಸಿದರೇ ಲಯವೆಂದು ಹೇಳಲ್ಪಡುವುದಕ್ಕೆ ಅನುಸಾರವಾಗಿ ವೀಣೆಯಲ್ಲಿಯೂ ಮೊದಲನೆಯ ೧೨ ಮನೆಗಳಲ್ಲಿರುವ ಸ್ವರಗಳು ಲಯಕ್ರಮವನ್ನನುರಿಸಿ ಪುನಃ ಮುಂದಿನ ೧೨ ಮನೆಗಳಲ್ಲಿ ಬಂದೇ ಇರುವುವು. ಇದರ ತತ್ವವನ್ನು ಎರಡನೆಯ ಪ್ರಕರಣದಲ್ಲಿಯೇ ವಿವರಿಸಿದೆ. ಲಯಮಾರ್ಗದ ತತ್ವಕ್ಕನುಸಾರವಾಗಿ ಓಂಕಾರದಲ್ಲಿನ 'ಅ'ಕಾರ 'ಉ'ಕಾರಗಳೆರಡೂ 'ಮ'ಕಾರದಲ್ಲಿ ಸೇರಿ ಬೆಳೆಸಲ್ಪಡುವುದರಿಂದಲೇ 'ಓಂ'ಕಾರವಾಗುವುದು. ಅಕಾರ ಉಕಾರಗಳೆರಡೂ ಮಕಾರವನ್ನು ಸೇರದಿದ್ದರೆ ಅಕಾರ ಉಕಾರಗಳೆರಡೂ ಸೇರಿರುವ ಓಕಾರವೆನಿಸುವುದು. ಅಂದರೆ ವ್ಯಾಪಾರಸ್ಥಿತಿಯಲ್ಲಿಯೇ ನಿಂತಿರುವುದು. ಮಕಾರವು ನಮ್ಮ ಭ್ರೂಮಧ್ಯವೆನಿಸುವ ಆಜ್ಞಾಚಕ್ರದಲ್ಲಿ ರುದ್ರಗ್ರಂಥಿಯ ರೂಪದಲ್ಲಿದೆ. ಬ್ರಹ್ಮನು ಹೇಗೆ ಸೃಷ್ಟಿಶಕ್ತಿಯೋ, ವಿಷ್ಣುವು ಹೇಗೆ ಪಾಲನಾಶಕ್ತಿಯೋ, ಹಾಗೆಯೇ ರುದ್ರನು ಲಯವೆಂದರೆ ಮೋಕ್ಷಕೊಡತಕ್ಕ ಶಕ್ತಿಯಾಗಿರುತ್ತಾನೆ. ಆದುದರಿಂದ ಬ್ರಹ್ಮರಂಧ್ರನಾಡಿಯಲ್ಲಿ ಎದೆಯ ಸ್ಥಳವಾದ ಅನಾಹತಚಕ್ರದಿಂದ ಸಹಸ್ರಾರಕಮಲದವರೆಗೂ ಅಂದರೆ ವೀಣೆಯ ೧೩ನೇ ಮನೆಯಿಂದ ೨೪ನೇ ಮನೆಯವರೆಗೂ ಲಯದ ತತ್ವಗಳಿರುವುವು.

ವೀಣೆಯ ೨೪ ಮನೆಗಳನ್ನು ಮಂದ್ರ, ಮಧ್ಯಮ, ತಾರಗಳಾದ ಮೂರು

ಸ್ಥಾಯಿಗಳಿಗೂ ವಿಭಾಗಿಸಿ ವೀಣೆಯ ಚಿತ್ರದಲ್ಲಿ ಗುರ್ತಿಸಿದೆಯಷ್ಟೆ! ಬ್ರಹ್ಮರಂಧ್ರ ನಾಡಿಯಲ್ಲಿ ಇವುಗಳ ತತ್ವಗಳೇನೆಂಬುದನ್ನು ವಿವರಿಸೋಣ. ಓಂಕಾರವು ಅಕಾರ, ಉಕಾರ, ಮಕಾರಗಳ ತತ್ವವಾದ ಸೃಷ್ಟಿ, ವ್ಯಾಪಾರ, ಮೋಕ್ಷಗಳಾದ ಮೂರರ ತತ್ವವಾಗಿರುವುದಷ್ಟೆ! ಸೃಷ್ಟಿಯು ಮಂದ್ರದತತ್ವ. ವ್ಯಾಪಾರವು ಮಧ್ಯಮದತತ್ವ. ಮೋಕ್ಷವು ತಾರದತತ್ವ ಬ್ರಹ್ಮರಂಧ್ರದಲ್ಲಿರುವ ಅನಾಹತವೆನಿಸುವ ಓಂಕಾರನಾದವು ಕೂಡ ಉಪಾಸಕನಿಗೆ ಪ್ರಥಮದಲ್ಲೆಂದರೆ ಮಂದ್ರಸ್ಥಿತಿಯಲ್ಲಿ ಅರಿಯಲು ಕಷ್ಟವಾಗಿರುವುದು. ಅನಂತರ ಮಧ್ಯಮದ ಸ್ಥಿತಿಯಲ್ಲಿ ನಾದವನ್ನು ಅನುಸಂಧಾನ ಮಾಡಬಲ್ಲನು ತಾರಸ್ಥಿತಿಯಲ್ಲಿ ನಾದವು ಬಹು ಸೂಕ್ಷ್ಮವಾಗುತ್ತಾ ಕಳಾಸ್ವರೂಪವನ್ನು ಹೊಂದಿ ಬ್ರಹ್ಮರಂಧ್ರನಾಡಿಯ ಮೇಲ್ಭಾಗವಾದ ಸಹಸ್ರಾರಕಮಲದಲ್ಲಿ ನಿಶ್ಚಲತ್ವವನ್ನು ಪಡೆದು 'ನಿಶ್ಶಬ್ದಂ ಬ್ರಹ್ಮಉಚ್ಯತೆ' ಎಂಬ ಶ್ರುತ್ಯಾಧಾರದಂತೆ ಓಂಕಾರಸ್ವರೂಪವಾದ ಪರಬ್ರಹ್ಮವಾಗುವುದು. ತಾರವೆನ್ನುವ ಶಬ್ದಕ್ಕೂ ದಾಟುವುದೆಂದರ್ಥವಾಗಿ ಸೃಷ್ಟಿವ್ಯಾಪಾರಗಳನ್ನು ದಾಟುವುದೆಂಬ ತತ್ವವಾಗಿರುವುದು. ಮಂದ್ರ ಮಧ್ಯಮ ತಾರಸ್ಥಾಯಿಗಳಿಗೆ ಓಂಕಾರೋಚ್ಚಾರಣೆಯೇ ಮೂಲರೂಪವಾಗಿ, ಗಾನಮಾಡುವ ಸ್ಥಾಯಿಗಳು ಓಂಕಾರೋಚ್ಚಾರಣೆಯ ಆಧಾರದ ಮೇಲೆಯೇ ನಿಂತಿರುವುವು.

**ವರಾಹೋಪನಿಷತ್ತಿನಲ್ಲಿ**

ಹ್ರಸ್ವೋ ದಹತಿ ಪಾಪಾನಿ ದೀರ್ಘೋಽವ್ಯೆ ಮೋಕ್ಷದಾಯಕಃ |
ಆಪ್ಯಾಯನಃ ಪ್ಲುತೋವಾಪಿ ತ್ರಿವಿಧೋ ಚ್ಚಾರಣೇನತು |
ತೈಲಧಾರಾಮಿವಾ ಚ್ಛಿನ್ನಂ ದೀರ್ಘಘಂಟಾನಿನಾದವತ್ |
ಅವಾಚ್ಯಂ ಪ್ರಣವಸ್ಯಾಗ್ರಂ ಯಸ್ತಂ ವೇದ ಸವೇದವಿತ್ |
ಹ್ರಸ್ವಂಬಿಂದು ಗತಂ ದೈರ್ಘ್ಯಂ ಬ್ರಹ್ಮರಂಧ್ರಗತಂ ಪ್ಲುತಂ |

ಎಂಬದಾಗಿ ಹೇಳಿರುವುದರಿಂದ ಓಂಕಾರೋಚ್ಚಾರಣೆಯ ಪ್ರಥಮಸ್ಥಿತಿಯೇ ಹ್ರಸ್ವಸ್ಥಿತಿ. ಈ ಹ್ರಸ್ವಸ್ಥಿತಿಯೇ ಮಂದ್ರಸ್ಥಾಯಿ. ಇದೇ ಬಿಂದುನಾದ ಕಳೆಗಳಲ್ಲಿ ಬಿಂದುಸೋಪಾನವು. ಎರಡನೆಯ ಸ್ಥಿತಿಯೇ ದೀರ್ಘದ ಸ್ಥಿತಿ. ಇದೇ ಮಧ್ಯಮಸ್ಥಾಯಿ. ಬಿಂದು ನಾದ ಕಳೆಗಳಲ್ಲಿ ನಾದದಸೋಪಾನ. ಓಂಕಾರೋಚ್ಚಾರಣೆಯ ಮೂರನೆಯ ಸ್ಥಿತಿಯೇ ಪ್ಲುತ. ಇದೇ ತಾರಸ್ಥಾಯಿ. ಬಿಂದು ನಾದ ಕಳೆಗಳಲ್ಲಿ ಕಳಾಸೋಪಾನ. ಕಳಾಸ್ಥಿತಿಯನ್ನೂ ಮೀರಿ ಏಕಾಕಾರವಾಗಿ ಪ್ರವಹಿಸುತ್ತಿರುವ ಓಂಕಾರೋಚ್ಚಾರಣೆಯೇ ಪ್ರಣವವೆನಿಸಿ ನಿಷ್ಕಲಾರೂಪವಾದ ಪರಬ್ರಹ್ಮವಾಗುವುದು. ಇದನ್ನು ತಿಳಿದವನೇ ವಿದ್ವಾಂಸನೆನಿಸಿಕೊಳ್ಳುವನು. ಅಲ್ಲದೆ ವೀಣೆಯ ಚಿತ್ರದಲ್ಲಿ ಗುರ್ತುಮಾಡಿರುವ ಮಧ್ಯಮಸ್ಥಾಯಿಯ ಮಧ್ಯ

ಪ್ರದೇಶಕ್ಕೆ ಸರಿಯಾಗಿ ಅನಾಹತಚಕ್ರವು ಇರುವುದು. ಅನಾಹತಚಕ್ರವೇ ಅನಾಹತನಾದಕ್ಕೆ ಪ್ರಧಾನಸ್ಥಳವಾಗಿದೆ. ಅನಾಹತನಾದದ ಪ್ರಧಾನತ್ವದಿಂದಲೇ ಇದಕ್ಕೆ ಅನಾಹತಚಕ್ರವೆಂದು ಹೆಸರುಬಂದಿರುವುದು. ಇದರ ವಿಚಾರವು ಬಹು ಗಹನವಾದುದು. ಆದರೂ ಮೇಲಿನ ವಿಚಾರದ ಮಹತ್ತನ್ನು ಪ್ರತಿಪಾದಿಸುವ ಈ ಕೆಳಗಿನ ಶ್ರುತಿಪ್ರಮಾಣವೊಂದನ್ನು ಕೊಟ್ಟಿರುವುದು

**ಬ್ರಹ್ಮವಿದ್ಯೋಪನಿಷತ್ತಿನಲ್ಲಿ**

ಅನಾಹತ ಧ್ವನಿಯುತಂ ಹಂಸಂ ಯೋ ವೇದಹೃದ್ಗತಂ |
ಸ್ವಪ್ರಕಾಶಂ ಚಿದಾನಂದಂ ಸಹಂಸ ಇತಿ ಗೀಯತೇ ||

ತಾ|| ಅನಾಹತಚಕ್ರದಲ್ಲಿ ಉತ್ಪನ್ನವಾಗುವ ನಾದದ ಅಂತರ್ಗತನಾಗಿಯೂ ಹಂಸಸ್ವರೂಪನಾದ ಆದಿತ್ಯನ ಅಂತರ್ಗತನಾಗಿಯೂ ಚಿದಾನಂದನಾಗಿಯೂ ಇರುವ ಪರಬ್ರಹ್ಮವನ್ನು ಯಾವನು ತಿಳಿಯುವನೋ ಅವನೇ ಪರಮಾತ್ಮ ಸ್ವರೂಪನು ಎಂದು ಹೇಳಿರುವುದು.

ಮಂದ್ರ, ಮಧ್ಯಮ, ತಾರಸ್ಥಾಯಿಗಳು ಗುಣತ್ರಯಗಳಿಗೂ ಸಂಬಂಧಪಟ್ಟ ತತ್ವಗಳುಳ್ಳದ್ದಾಗಿರುವುವು. ಮಂದ್ರಸ್ಥಾಯಿಯಲ್ಲಿ ತಮೋಗುಣಕ್ಕೆ ಪ್ರಾಶಸ್ತ್ಯ. ಮಧ್ಯಮಸ್ಥಾಯಿಯಲ್ಲಿ ರಜೋಗುಣಕ್ಕೆ ಪ್ರಾಶಸ್ತ್ಯ. ತಾರಸ್ಥಾಯಿಯಲ್ಲಿ ಸತ್ವಗುಣಕ್ಕೆ ಪ್ರಾಶಸ್ತ್ಯ. ಅಂದರೆ ಸೃಷ್ಟಿಕಾರ್ಯದಲ್ಲಿ ತಮೋಗುಣಕ್ಕೂ, ವ್ಯಾಪಾರದಲ್ಲಿ ರಜೋಗುಣಕ್ಕೂ, ಮೋಕ್ಷಕ್ರಮದಲ್ಲಿ ಸತ್ವಗುಣಕ್ಕೂ ಪ್ರಧಾನತ್ವಗಳಿರುವುವು. ಮೋಕ್ಷದ ದಾರಿಯಾದ ಬ್ರಹ್ಮರಂಧ್ರನಾಡಿಯಲ್ಲಿ ಪ್ರಥಮದಲ್ಲಿ ತಮೋಗುಣವು ಉಪಸಂಹಾರವಾಗುವ ತತ್ವವೇ ಮಂದ್ರಸ್ಥಾಯಿಯಾಗಿಯೂ, ಅನಂತರ ರಜೋಗುಣವು ಉಪಸಂಹಾರವಾಗುವ ತತ್ವವೇ ಮಧ್ಯಮಸ್ಥಾಯಿಯಾಗಿಯೂ, ತದನಂತರ ಸತ್ವಗುಣವು ಉಪಸಂಹಾರವಾಗುವ ತತ್ವವೇ ತಾರಸ್ಥಾಯಿಯಾಗಿಯೂ, ತಾರಸ್ಥಾಯಿಯನ್ನೂ ದಾಟುವ ತತ್ವವಾದ ಶಿರಸ್ಸಿನಲ್ಲಿರುವ ಸಹಸ್ರಾರಕಮಲ (ಓಂ) ಸ್ಥಾನವೇ ನಿರ್ಗುಣಸ್ಥಿತಿಯಾಗಿಯೂ ಇರುವುದು.

ಇದುವರೆಗೂ ಬ್ರಹ್ಮರಂಧ್ರನಾಡಿಯಲ್ಲಿರುವ ಅನಾಹತನಾದವೂ ದೇವತಾತ್ಮಕವೂ ಆದ ಓಂಕಾರದ ವಿಚಾರವನ್ನು ವೀಣೆಗೆ ಅನ್ವಯಿಸಿ ತಿಳಿಸಿತು. ಬ್ರಹ್ಮರಂಧ್ರನಾಡಿಯ ಹೊರಗಿನಪ್ರಾಕಾರದಲ್ಲಿ ಉಂಟಾಗುವ ನಾವು ಉಚ್ಚರಿಸುವ ಆಹತಸ್ವರೂಪವಾದ ನಾದದ ವಿಚಾರವನ್ನು ವಿವರಿಸೋಣ. ಆಹತನಾದವು ಪಂಚಭೂತಗಳಲ್ಲಿ ಒಂದಕ್ಕೊಂದು ಸಂಯೋಗದಿಂದುಂಟಾಗುವುದೆಂದು ಹಿಂದೆಯೇ ತಿಳಿಸಿದೆ. ಹೊರಗೆ ನಾವು ಕೇಳುವ ಶಬ್ದವು ಪದಾರ್ಥಗಳ ಸಂಯೋಗದಿಂದ ಉತ್ಪನ್ನವಾಗುವುದನ್ನು ಯಾವ ಪ್ರಕಾರವಾಗಿ ತಿಳಿದಿರುತ್ತೇ

ವೆಯೋ ಅದೇ ಪ್ರಕಾರವಾಗಿ ದೇಹದೊಳಗೂ ಪೃಥ್ವಿ, ಅಗ್ನಿ, ವಾಯು, ಪ್ರಾಣ ಶಕ್ತಿಗಳ ಸಂಯೋಗದಿಂದ ನಮ್ಮ ಧ್ವನ್ಯಾತ್ಮಕವಾದ ನಾದವು ಉತ್ಪತ್ತಿಯಾಗುವುದು. ಈ ತಾತ್ಪರ್ಯಕ್ಕೆ 'ಗಾನರಹಸ್ಯಪ್ರಕಾಶಿನೀ' ಮುಂತಾದ ಸಂಗೀತ ಗ್ರಂಥಗಳಲ್ಲಿ

ಆತ್ಮಾ ವಿವಕ್ಷಮಾಣೋಽಯಂ ಮನಃ ಪ್ರೇರಯತೇ ಮನಃ |
ನಾಭಿಸ್ಥ ವಹ್ನಿಮಾಹಂತಿ ಸಪ್ರೇರಯತಿ ಮಾರುತಮ್ ||
ಬ್ರಹ್ಮಗ್ರಂಥಿ ಸ್ಥಿತೋನಾದಃ ಕ್ರಮಾದೂರ್ಧ್ವ ಪಥೇಚರನ್ |
ನಾಭಿ ಹೃತ್ಕಂಠ ಮೂರ್ಧಾ ಸ್ಯೇಷಾವಿರ್ಭವತಿ ಸಧ್ವನಿಃ ||

ತಾ|| ಜೀವನು ವಚನಾಪೇಕ್ಷೆಯುಳ್ಳವನಾಗಿ ಮನಸ್ಸನ್ನು ಉದ್ಬೋಧೆ ಮಾಡುತ್ತಾನೆ. ಆ ಮನಸ್ಸು ನಾಭಿಯಲ್ಲಿರುವ ಅಗ್ನಿಯನ್ನು ಹೊಡೆಯುತ್ತದೆ ಆ ಅಗ್ನಿಯು ವಾಯುವನ್ನು ಪ್ರೇರೇಪಿಸುತ್ತದೆ ಆದುದರಿಂದ ವರ್ಣಾತ್ಮಕ ಅಥವಾ ಧ್ವನ್ಯಾತ್ಮಕವಾದ ನಾದವು ಹುಟ್ಟುವುದು ಬ್ರಹ್ಮಗ್ರಂಥಿಯಲ್ಲಿರುವ ಆ ನಾದವು ಊರ್ಧ್ವಮುಖವಾಗಿ ಹೊರಟು ನಾಭಿ, ಹೃದಯ, ಕಂಠ, ಶಿರಸ್ಸು, ಬಾಯಿ ಇವುಗಳಲ್ಲಿ ಆವಿರ್ಭಾವವಾಗಿ ಹೊರಹೊರಡುತ್ತದೆ. ಎಂಬದಾಗಿ ಹೇಳಿರುವುದು.

ನಾವು ಹೊರಗೆ ಕೇಳುವ ಆಹತಶಬ್ದಗಳೆಲ್ಲಾ ಆಕಾಶಗತವಾದ ಅನಾಹತ ನಾದದ ಪ್ರತಿಧ್ವನಿಯಾಗಿರುವಂತೆ ನಾವು ಉಚ್ಚರಿಸುವ ಧ್ವನಿರೂಪವಾದ ನಾದವೂಕೂಡ ನಮ್ಮ ಬ್ರಹ್ಮರಂಧ್ರನಾಡಿಯಲ್ಲಿರುವ ಅನಾಹತನಾದ(ಓಂಕಾರ)ದ ಪ್ರಕಾಶದಿಂದಲೂ ಜೀವಾತ್ಮನ ಪ್ರೇರಣೆಯಿಂದಲೂ ಉತ್ಪತ್ತಿಯಾಗುವುದು. ನಮ್ಮ ದೇಹದಲ್ಲಿ ಪ್ರಾಣಾಗ್ನಿ ಸಂಯೋಗದಿಂದ ವಚನಾತ್ಮಕವಾದ ನಾದೋತ್ಪತ್ತಿಯಾಗುವುದಕ್ಕೆ ಮೇಲಿನ ಶ್ಲೋಕದಲ್ಲಿ ಹೇಳಿರುವಂತೆ ಜೀವಾತ್ಮನ ಪ್ರೇರಣೆಯೂ ಅವಶ್ಯಕ ಅಂತಃಕರಣ ಚತುಷ್ಟಯಾತ್ಮಕನಾದ ಜೀವಚೈತನ್ಯನೇ ಚತುರ್ವೇದ ಸ್ವರೂಪನಾಗಿರುವನು. ಅಂದರೆ ನಮ್ಮ ವಚನರೂಪವಾದ ಆಹತನಾದದಲ್ಲಿಯೂ ವೇದತತ್ವವು ಇದ್ದೇಇರುವುದು. ಈ ವಿಚಾರದ ವಿವರಣೆಯನ್ನು ರಾಮಾಯಣ ದಲ್ಲಿರುವ ವೇದತತ್ವಪ್ರತಿಪಾದನೆ ಮಾಡಿರುವ ನಾಲ್ಕನೆಯ ಪ್ರಕರಣದಲ್ಲಿ ಬರೆದಿರುವುದು. ಅದನ್ನು ಇಲ್ಲಿಗೆ ಅನ್ವಯಿಸಿಕೊಳ್ಳಬೇಕು. ಪ್ರಾಣಾಗ್ನಿಸಂಯೋಗದಿಂದ ನಮ್ಮ ದೇಹದಲ್ಲಿ ಆಹತನಾದವು ಉತ್ಪನ್ನವಾದರೂ, ಮೇಲಿನ ಶ್ಲೋಕದಲ್ಲಿ ಹೇಳಿರುವಂತೆ ಬ್ರಹ್ಮಗ್ರಂಥಿಯಾದ ಮೂಲಾಧಾರದಿಂದಲೇ ನಾದವು ಊರ್ಧ್ವಮುಖವಾಗಿ ಹೊರಟು ಬ್ರಹ್ಮರಂಧ್ರನಾಡಿಯ ಹೊರಪ್ರಾಕಾರವನ್ನು ಅನುಸರಿಸಿ ಕೊಂಡೇ ಮೇಲಕ್ಕೆ ಹತ್ತಿ ಕಂಠ, ಬಾಯಿಗಳ ಮೂಲಕ ಹೊರಗೆ ಬರುವುದು.

ಮೂಲಾಧಾರಚಕ್ರದಿಂದ ಪ್ರಾರಂಭವಾದ ನಾದವು ಮೇಲಕ್ಕೆ ಬರುವಾಗ ಬ್ರಹ್ಮರಂಧ್ರದಲ್ಲಿರುವ ಇತರ ಚಕ್ರಗಳಾದ ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ ಚಕ್ರಗಳ ಹೊರಪ್ರಾಕಾರದಲ್ಲಿಯೇ ಮೇಲಕ್ಕೆ ಬರುವುದೆಂಬು ದನ್ನು ಪ್ರತಿಪಾದಿಸುವಿಕೆಯೇ ನಾಭಿ, ಹೃದಯ, ಕಂಠ, ಮೂರ್ಧ್ನಾ, ಆಸ್ಯ ಮುಂತಾದವುಗಳ ಮೂಲಕ ಧ್ವನಿಯು ಹೊರಹೊರಡುವುದೆಂದು ಮೇಲಿನ ಶ್ಲೋಕವು ತಿಳಿಸುವುದಾಗಿದೆ.

ಅಲ್ಲದೆ ನಾವು ಉಚ್ಚರಿಸುವ ಐವತ್ತು ಅಕ್ಷರ (ವರ್ಣ) ಶಕ್ತಿಗಳೆಲ್ಲಾ ಅಕಾರ ದಿಂದ ಕ್ಷಕಾರದವರೆಗೆ ಕ್ರಮವಾಗಿ ಮೂಲಾಧಾರ ಮೊದಲುಗೊಂಡು ಆರು ಚಕ್ರ ಗಳಲ್ಲಿರುವುವು ಮುಂದಿನಪುಟದ ವ್ಯಾಹೃತಿ ಚಿತ್ರದಲ್ಲಿ ತೋರಿಸಿರುವ ಮೂಲಾಧಾರಾದಿ ಆರು ಚಕ್ರಗಳಲ್ಲಿರುವ ದಳಗಳೇ ಕ್ರಮವಾಗಿ ೫೦ ಅಕ್ಷರ ಶಕ್ತಿಗಳ ಸ್ಥಾನಗಳಾಗಿವೆ ನಮ್ಮ ಧ್ವನ್ಯಾತ್ಮಕವಾದ ನಾದವು ಪ್ರಾಣಾಗ್ನಿಸಂಯೋಗದಿಂದ ಉತ್ಪನ್ನವಾಗುವ ಕಾಲದಲ್ಲಿ ಆಯಾಯ ಚಕ್ರಗಳಲ್ಲಿರುವ ವರ್ಣಶಕ್ತಿಯ ಪ್ರಭೆಯನ್ನು ಹೊಂದಿ ವರ್ಣಾತ್ಮಕ ವಾದ ಧ್ವನಿಯೆನಿಸಿ ನಮ್ಮಿಂದ ಹೊರಹೊರಡುವುದು ಅಲ್ಲದೆ ಚಿತ್ರಪಟದಲ್ಲಿ ತೋರಿಸಿರುವಂತೆ ಸ್ವರಶಕ್ತಿಗಳೂ ಚಕ್ರಗಳಲ್ಲಿರುವುದರಿಂದ ಯಾವ ವರ್ಣವಾಗಲಿ ಸ್ವರಸಹಿತವಾಗಿ ಉಚ್ಚರಿಸುವಾಗ ಚಕ್ರಗಳಲ್ಲಿರುವ ಸ್ವರಶಕ್ತಿಯ ಪ್ರಭಾವವನ್ನು ಹೊಂದಿ ನಮ್ಮ ಧ್ವನಿರೂಪದಲ್ಲಿ ಹೊರಹೊರಡುವುದು ಬ್ರಹ್ಮಗ್ರಂಥಿ ಎನಿಸುವ ಮೂಲಾಧಾರಚಕ್ರದಿಂದ ನಾದವು ಪ್ರಾರಂಭವಾಗಿ ಊರ್ಧ್ವಮುಖವಾಗಿ ಬರು ವುದರಿಂದ ಆಹತನಾದಕ್ಕೆ ಪೀಠಸ್ಥಾನವು ಮೂಲಾಧಾರಚಕ್ರವೇ ಆಗಿರುವುದು. ಹೇಗೆಂದರೆ, ಷಡ್ಜಸ್ವರ (ಸ)ವನ್ನು ಚಿತ್ರದಲ್ಲಿ ಮನುಷ್ಯನ ಶಿರಸ್ಸಿನಲ್ಲಿ ಸಹಸ್ರಾರ ಕಮಲದಲ್ಲಿ ಬರೆದಿರುವುದಷ್ಟೆ! ಷಡ್ಜಸ್ವರಕ್ಕೆ ದೇವತೆ ಬ್ರಾಹ್ಮೀಶಕ್ತಿಯೆಂದು ಹಿಂದೆ ತಿಳಿಸಿತಷ್ಟೆ! ವೀಣೆಯಲ್ಲಿನ ತಂತಿಯನಾದವು ಸಿಂಹದಮುಖ ಪರ್ಯಂತರ ವ್ಯಾಪಿಸಿ ನಿಲ್ಲುವಂತೆ ಪರಬ್ರಹ್ಮಸ್ಥಾನವಾದ ಸಹಸ್ರಾರಕಮಲದಿಂದ ಉದಯಿಸಿದ ಅನಾಹತಸ್ವರೂಪವಾದ ಓಂಕಾರನಾದವು ಮೂಲಾಧಾರಚಕ್ರದವರೆಗೂ ವ್ಯಾಪಿಸಿ ಮೂಲಾಧಾರಚಕ್ರಕ್ಕೆ ಅಂತ್ಯವನ್ನು ಪಡೆಯುವುದರಿಂದ ಮೂಲಾಧಾರಚಕ್ರವು ಅನಾಹತನಾದಸ್ವರೂಪವಾದ ಓಂಕಾರನಾದಕ್ಕೆ ಪೀಠಸ್ಥಾನವಾಗಿದೆ ಇದೇ ಸೃಷ್ಟಿ ಕ್ರಮದ ರೀತಿಯು. ಲಯಕ್ರಮವು ಹೇಗೆಂದರೆ - ಓಂಕಾರನಾದವು ಮೂಲಾ ಧಾರದಿಂದ ಪ್ರಾರಂಭವಾಗಿ ಸಹಸ್ರಾರಕಮಲದಲ್ಲಿ ಅಂತ್ಯವಾಗುವುದು. ಅಂದರೆ ವೀಣೆಯ ತಾರಸ್ಥಾಯಿಯ ಅಂತ್ಯದಲ್ಲಿ ನಾದವು ಲಯವನ್ನು ಪಡೆಯುವಂತೆ ಮೂಲಾಧಾರಚಕ್ರವು ಅನಾಹತನಾದಕ್ಕೆ ಪೀಠವಾಗಿರುವ ತತ್ವಕ್ಕೆ ಶ್ರುತಿ ಪ್ರಮಾಣವೇ ಇರುವುದು.




ಶರೀರದಲ್ಲಿ ವ್ಯಾಹೃತಿ (ಸ್ವರಶಕ್ತಿ) ಸ್ಥಾನಗಳ ಚಿತ್ರ

ಶಿವಶಕ್ತಿಮಯಂ ಮಂತ್ರಂ ಮೂಲಾಧಾರ ತ್ಸಮುತ್ಥಿತಂ ।
ಏತತ್ಪೀಠಮಿತಿ ಪ್ರೋಕ್ತಂ ನಾದಲಿಂಗಂ ಚಿದಾತ್ಮಕಂ ॥

ಶಿವಶಕ್ತಿಸ್ವರೂಪವಾದ ಓಂಕಾರಮಂತ್ರವು ಮೂಲಾಧಾರದಿಂದ ಉದಯವಾಗುವುದು. ಮೂಲಾಧಾರದಲ್ಲಿರುವ ಪೀಠವೇ ಚಿದಾತ್ಮಕವಾದ ನಾದಲಿಂಗ ಪೀಠವು. ಪೀಠಸ್ಥಾನವೆಂದರೆ ಸಹಸ್ರಾರದಿಂದ ಪ್ರಾರಂಭವಾಗಿ ಬೆಳೆದುಬಂದ ಅನಾಹತನಾದವು ಮೂಲಾಧಾರದವರೆಗೂ ಬಂದು ಅಲ್ಲಿ ನೆಲೆಸುವುದೆಂದರ್ಥ. ನಮ್ಮ ಧ್ವನ್ಯಾತ್ಮಕವಾದ ಆಹತನಾದವು ಕೂಡ ನಾದಪೀಠವಾದ ಮೂಲಾಧಾರ ದಿಂದಲೇ ಪ್ರಾರಂಭವಾಗಿ ನಾಭಿ ಹೃತ್ಕಂಠಗಳ ಮೂಲಕ ಬಾಯಿಂದ ಹೊರಟು ಆಕಾಶಗತವಾದ ಅನಾಹತನಾದವನ್ನೇ ಸೇರುವುದು. ಅಂದರೆ ದೇಹದಲ್ಲಿ ಅನಾಹತನಾದದ ಪ್ರಕಾಶದಿಂದಲೂ, ಜೀವಾತ್ಮನ ಪ್ರೇರಣೆಯಿಂದಲೂ ಉತ್ಪನ್ನವಾದ ನಮ್ಮ ಧ್ವನ್ಯಾತ್ಮಕವಾದ ಆಹತನಾದವು ಪುನಃ ದೇಹದ ಹೊರಗಿನ ಅನಾಹತನಾದವನ್ನೇ ಸೇರುವುದು ಅಂದರೆ ಎಲ್ಲಿಂದ ಉತ್ಪತ್ತಿಯಾಯಿತೋ ಅಲ್ಲೇ ಲಯವನ್ನು ಪಡೆಯುವುದು. ಹೀಗೆ ಆಹತನಾದವು ಮೂಲಾಧಾರದಿಂದ ಪ್ರಾರಂಭವಾಗಿ ಊರ್ಧ್ವಮುಖವಾಗಿ ಬಾಯಿಂದ ಹೊರಕ್ಕೆ ಬರುವವರೆಗೆ ವೀಣೆಯ ಮನೆಗಳ ಕಾರ್ಯಗಳ ತತ್ವಗಳನ್ನೆಲ್ಲಾ ಒಳಗೊಂಡಿರುವುದು. ಅಂತಃಕರಣ ಚತುಷ್ಟಯಾತ್ಮಕನಾದ ಜೀವಾತ್ಮನೇ ಚತುರ್ವೇದಗಳ ತತ್ವವಾದ ವೀಣಾತಂತ್ರೀಚತುಷ್ಟಯದ ತತ್ವದಲ್ಲಿರುವನು.

ಮೂಲಾಧಾರವಾದ ಬ್ರಹ್ಮಗ್ರಂಥಿಯು ಸೃಷ್ಟಿಶಕ್ತಿಯಾದುದರಿಂದಲೂ, ಬ್ರಹ್ಮಗ್ರಂಥಿಯ ಸ್ಥಳಕ್ಕೆ ಸರಿಯಾಗಿ ವೀಣೆಯಲ್ಲಿರುವ ಸ್ವರಶ್ರುತಿಗಳ ತತ್ವಗಳು ಸೃಷ್ಟಿತತ್ವಗಳನ್ನು ಪ್ರತಿಪಾದಿಸುವುದರಿಂದಲೂ ಆಹತನಾದವು ಪ್ರಥಮದಲ್ಲಿ ಸೃಷ್ಟಿರೂಪವನ್ನು ಹೊಂದುವುದು. ಸೃಷ್ಟಿಯಾದ ಅನಂತರ ವ್ಯಾಪಾರ ವುಂಟಾಗುವಂತೆ ಬ್ರಹ್ಮಗ್ರಂಥಿಯ ಸ್ಥಳದಲ್ಲಿ ಸೃಷ್ಟಿಕ್ರಮವನ್ನು ಪಡೆದ ಆಹತ ನಾದವು ಹೃದಯ ಸ್ಥಳಕ್ಕೆ ಬರುವಾಗ ವ್ಯಾಪಾರದ ತತ್ವವನ್ನು ಹೊಂದುವುದು. ಹೃದಯದ ಮೇಲ್ಭಾಗದಿಂದ ಲಯದ ಕ್ರಮವನ್ನು ಹೊಂದಿ ಕಂಠ, ಆಸ್ಯಗಳಲ್ಲಿ ಕಾರ್ಯಮಾಡಿಕೊಂಡು ಬಾಯಿಂದ ಹೊರಕ್ಕೆ ಬಂದು ಆಕಾಶಗತವಾದ ಅನಾಹತ ನಾದದಲ್ಲಿ ಲಯವನ್ನು ಪಡೆಯುವುದು.

ಬ್ರಹ್ಮಗ್ರಂಥಿಯಸ್ಥಳದಿಂದ ಹೊರಟು ಊರ್ಧ್ವಮುಖವಾಗಿ ಬರುವ ಆಹತನಾದವು ಮಂದ್ರ, ಮಧ್ಯಮ, ತಾರಸ್ಥಾಯಿಗಳ ಸ್ಥಿತಿಯನ್ನೂ ಹೊಂದುವುದು. ಬ್ರಹ್ಮಗ್ರಂಥಿಯಿಂದ ಎದೆಯವರೆಗೂ ಮಂದ್ರಸ್ಥಿತಿ. ಎದೆಯಿಂದ ಕಂಠದವರೆಗೂ ಮಧ್ಯಮಸ್ಥಿತಿ. ಕಂಠದಿಂದ ಮೇಲಕ್ಕೆ ತಾರಸ್ಥಿತಿ. ಈ ಮೂರು ಸ್ಥಿತಿಗಳೂ

ಸೃಷ್ಟಿ, ಸ್ಥಿತಿ, ಲಯಕ್ರಮದ ತತ್ವಕ್ಕನುಸಾರವಾಗಿಯೇ ಇರುವುವು. ಮಂದ್ರ ಸ್ಥಿತಿಯು ಸೃಷ್ಟಿತತ್ವದಲ್ಲಿರುವುದರಿಂದ, ಸೃಷ್ಟಿಯನ್ನು ನಾವು ತಿಳಿಯಲು ಕಷ್ಟ ವಾದುದರಿಂದ, ಮಂದ್ರದಲ್ಲಿ ಕೆಳಕೆಳಗಿನ ಸ್ಥಾಯಿಯಲ್ಲಿ ಹಾಡುವುದು ಕಷ್ಟ ಮಧ್ಯಮ ಸ್ಥಿತಿಯು ವ್ಯಾಪಾರದ ತತ್ವವಾದುದರಿಂದ ಮಧ್ಯಮ ಸ್ಥಿತಿಯಲ್ಲಿ ಹಾಡುವುದೇ ಅಧಿಕ ತಾರಸ್ಥಾಯಿಯು ಲಯಕ್ರಮದ ತತ್ವವಾಗಿ ಆಹತನಾದವು ಆಕಾಶಗತವಾದ ಅನಾಹತದಲ್ಲಿ ಲಯವನ್ನು ಪಡೆಯುವ ಸ್ಥಿತಿಯಾದುದರಿಂದ ತಾರಸ್ಥಾಯಿಯಲ್ಲಿ ಹಾಡುವುದು ಕಷ್ಟ. ಅದರಲ್ಲಿಯೂ ತಾರಸ್ಥಾಯಿಯ ಕೊನೆಯ ಭಾಗವಾಗಿ ಅನಾಹತನಾದಕ್ಕೆ ಸಂಬಂಧವಾಗುವ ಸ್ಥಿತಿಯ ಸೋಪಾನ ದಲ್ಲಿ ಮನುಷ್ಯನು ಹಾಡಲಾರನು. ಕಾರಣವೇನೆಂದರೆ, ತಾರಸ್ಥಾಯಿಯನ್ನೂ ಮೀರಿರುವ ಸ್ಥಿತಿಯಲ್ಲಿ ಅನಾಹತನಾದದ ಸಂಬಂಧವಾಗಿ ಸರ್ವವ್ಯಾಪಕಸ್ಥಿತಿ ಯಲ್ಲಿ ನೆಲಸಬೇಕಾಗುವುದರಿಂದಲೇ ತಾರಸ್ಥಾಯಿಯ ಅಂತ್ಯಭಾಗದಲ್ಲಿ ಹಾಡಲು ಸಾಧ್ಯವಿಲ್ಲ ವೀಣೆಯ ಪಕ್ಕದತಂತಿಗಳ ಕಾರ್ಯವಾದ ಕಾಲ, ಕ್ರಿಯಾ, ಪರಿಮಾಣಗಳುಳ್ಳ ತಾಳದ ತತ್ವವು ರಜಸ್ತಮೋ ಮಲಿನಸತ್ವಗುಣಗಳನ್ನು ಅನು ಸರಿಸಿ ಧ್ವನಿಯಲ್ಲಿಯೂ ಇರುವುದು ಮತ್ತು ಆಹತನಾದರೂಪವಾದ ಹಾಡು ಗಾರಿಕೆಯಲ್ಲಿಯೂ ಇಷ್ಟೇ ಇರುವುದು. ವೀಣೆಯತತ್ವವನ್ನು ಬ್ರಹ್ಮರಂಧ್ರ ನಾಡಿಯಲ್ಲಿರುವ ದೇವತಾತ್ಮಕವಾದ ಅನಾಹತನಾದಕ್ಕೂ, ಬ್ರಹ್ಮರಂಧ್ರದ ಹೊರಪ್ರಾಕಾರದಲ್ಲಿರುವ ನಾವು ಉಚ್ಚರಿಸುವ ಆಹತನಾದಕ್ಕೂ ಅನ್ವಯಿಸಿ ಬಹು ಸೂಕ್ಷ್ಮವಾಗಿ ತತ್ವಗಳನ್ನು ಕ್ರೋಢೀಕರಿಸಿ ಬರೆದಿರುವುದು.

ವಿಶ್ವದ ರಚನೆಯು ಮತ್ತು ಪಿಂಡಾಂಡವೆನಿಸುವ ಮನುಷ್ಯರಚನೆಯು ಶ್ರೇಷ್ಠತೆಯ ಆಧಾರವನ್ನೇ ವೀಣೆಯು ಹೊಂದಿರುವುದು ಮನುಷ್ಯರಚನೆಯು ಮನುಷ್ಯಕೃತವಲ್ಲವಾದುದರಿಂದ ಮನುಷ್ಯಶರೀರವು ದೈವಿಕ ವೀಣೆಯ ತತ್ವವಾದದ್ದು. ಮನುಷ್ಯರು ನುಡಿಸುವ ವೀಣೆಯೂ ಈ ದೈವಿಕ ವೀಣೆಗನು ಸಾರವಾಗಿಯೇ ಇರುವುದು ಹೀಗಿರುವುದಕ್ಕೆ ಶ್ರುತಿಪ್ರಮಾಣವೇ ಇರುವುದು. **ಐತರೇಯಾರಣ್ಯಕ** ದ್ವಿತೀಯಾಧ್ಯಾಯ ಪಂಚಮಖಂಡದಲ್ಲಿ .—

ಅಥ ಖಲ್ವಿಯಂ ದೈವೀ ವೀಣಾಭವತಿ ।
ತದನುಕೃತಿರಸೌ ಮಾನುಷೀ ವೀಣಾಭವತಿ ॥

ಅಂದರೆ ದೈವಿಕ ವೀಣೆಯು ಮನುಷ್ಯ ಶರೀರವಾಗಿರುವುದು ಮನುಷ್ಯರು ನುಡಿಸುವ ವೀಣೆಯು ದೈವಿಕ ವೀಣೆಗನುಸಾರವಾಗಿರುವುದು ಎಂದು ಹೇಳಿದೆ ವೀಣೆಯಲ್ಲಿರುವ ಸಕಲ ತತ್ವಗಳನ್ನೂ ವಿವರಿಸಿ ದೇಹಕ್ಕೆ ಅನ್ವಯಿಸಿ ಆಧಾರ ವಾಕ್ಯಗಳೊಡನೆ ಬರೆಯಬೇಕಾದರೆ ಶತಶಃ ಅಧಿಕವಾಗುವುದು. ಆದರೂ

ಸಾರವನ್ನು ಬಿಡದೆ ಮುಖ್ಯವಾಗಿ ಶ್ರೀನಾರದಾಂಬೆಯ ಅನುಗ್ರಹದಿಂದ ಲಭಿಸಿ ಋಷಿಪಾರಂಪರ್ಯದಿಂದ ಬಂದಿರುವ ವೀಣಾವಾದ್ಯದ ಆಂತರ್ಯವಾದ ಮಹತ್ತು ಎಂತಹುದೆಂಬುದನ್ನು ಸರ್ವರೂ ಸಾವಧಾನದಿಂದ ಯೋಚಿಸತಕ್ಕದ್ದಾಗಿದೆ. ನಮಗೆ ಋಷಿಗಳು ಎಲ್ಲಾ ವಿಧದಲ್ಲಿಯೂ ನಿಧಿಗಳನ್ನು ಕೊಟ್ಟಿದ್ದರೂ ಆ ನಿಧಿಗಳ ಮೇಲೆ ನಾವು ಸಂಚರಿಸುತ್ತಿದ್ದರೂ ಅದರ ಮಹತ್ವವನ್ನು ತಿಳಿದು ಉಪಯೋಗಿಸಿಕೊಂಡು ಕೃತಾರ್ಥರಾಗಲು ಪ್ರಯತ್ನಪಡಬೇಕಾದದ್ದು ನಮ್ಮ ಕರ್ತವ್ಯವಲ್ಲವೆ.? ವೀಣೆಯ ತತ್ವಕ್ಕೆ **ಯಾಜ್ಞವಲ್ಕ್ಯಸ್ಮೃತಿಯಲ್ಲಿ** :—

ವೀಣಾವಾದನ ತತ್ವಜ್ಞಃ ಶ್ರುತಿಜಾತಿ ವಿಶಾರದಃ |
ತಾಳಜ್ಞಶ್ಚಾ ಪ್ರಯಾಸೇನ ಮೋಕ್ಷಮಾರ್ಗಂಹಿ ಗಚ್ಛತಿ |

ಶ್ರುತಿ, ತಾಳ, ವೀಣೆಗಳ ಯಥಾರ್ಥ ರಹಸ್ಯಗಳನ್ನು ತಿಳಿದು ಅನುಸಂಧಾನ ಮಾಡುವವನು ಮೋಕ್ಷಮಾರ್ಗವನ್ನು ಹೊಂದುತ್ತಾನೆಂಬುದೇ ಈ ಮೇಲಿನ ಶ್ಲೋಕದ ತಾತ್ಪರ್ಯ. ಆದುದರಿಂದ ಪ್ರಾಪಂಚಿಕ ಪ್ರಯೋಜನಕ್ಕಿಂತಲೂ ಅಧಿಕವಾಗಿರುವ ತತ್ವವನ್ನು ಅರಿತು ಅದನ್ನು ಅನುಸರಿಸಿ ಧನ್ಯರಾಗಬೇಕು

## ೪. ನಾದೋಪಾಸನೆಯ ವಿಚಾರ.

ಗಾನವಿದ್ಯೆಯು ಮನುಷ್ಯನಿಗೆ ಏತಕ್ಕೋಸ್ಕರ ಪರಮಾತ್ಮನಿಂದ ಲಭಿಸಿರುವುದೆಂಬುದನ್ನು ನಾವು ಯೋಚಿಸಬೇಕು. ಆಹತ, ಅನಾಹತನಾದಗಳೆರಡರಲ್ಲಿಯೂ ಮನುಷ್ಯನು ಪರಮಾತ್ಮನನ್ನು ಉಪಾಸಿಸಿ ಉತ್ತೀರ್ಣನಾಗುವ ಮುಖ್ಯ ಉದ್ದೇಶವೇ ಗಾಂಧರ್ವವಿದ್ಯೆಯೆನಿಸುವ ಗಾನವಿದ್ಯೆಯನ್ನು ಮನುಷ್ಯನು ಹೊಂದಿರುವುದಾಗಿದೆ ಈಶ್ವರಸಂಬಂಧವಲ್ಲದ, ದೇವತಾಭಾವನೆಯೊಡಗೂಡದ, ಅರ್ಥಜ್ಞಾನವಿಲ್ಲದ, ಮನೋರಂಜನೆಯ ಪ್ರಯೋಜನಮಾತ್ರವನ್ನು ಹೊಂದುವುದು ಗಾನವಿದ್ಯೆಯೆನಿಸಿಕೊಳ್ಳುವುದಿಲ್ಲ ದೇವತಾಸ್ತೋತ್ರಸಂಬಂಧವಾದ ಗಾನ ಮತ್ತು ಗಾನಶ್ರವಣಗಳೆರಡೂ ಮನಸ್ಸಿಗೆ ಉಲ್ಲಾಸವನ್ನೂ ದೇಹಕ್ಕೆ ಕಾಂತಿಯನ್ನೂ ಕೊಡುವುವಲ್ಲದೆ ಪರಮಾತ್ಮನ ಉಪಾಸನಾರೂಪವಾಗಿಯೂ ಇರುವುವು ನಾದ ಬ್ರಹ್ಮವನ್ನನುಸರಿಸಿ ಈಶ್ವರೋಪಾಸನೆ ಮಾಡುವ ಮುಖ್ಯ ಉದ್ದೇಶವೇ ಋಷಿಗಳ ಮತವಾಗಿರುವುದು.

ಇಂದ್ರಿಯಗಳ ಮೂಲಕ ಚಾಂಚಲ್ಯವನ್ನು ಹೊಂದಿ ಹರಿದಾಡುವ ಮನಸ್ಸನ್ನು ಇಂತಹ ಇಂಪಾದ ಗಾನವು ಆನಂದಮಯಕೋಶದ ಆನಂದಸ್ವರೂಪದಲ್ಲಿ ಕಟ್ಟುವುದು. ಹೀಗೆ ಆನಂದಸ್ವರೂಪದಲ್ಲಿ ಮನಸ್ಸಿಗೆ ಸಿಲುಗಡೆ

ಯುಂಟಾಗುವ ಅನುಕೂಲವನ್ನು ಮನುಷ್ಯನು ಹೊಂದಿದ ಕಾಲದಲ್ಲಿ, ಮನಸ್ಸನ್ನು ದೇವತಾಭಾವದೊಡನೆ ಏಕೀಕರಣಮಾಡಿ ಉಪಾಸನೆಮಾಡುವುದೇ 'ಆಹತ ನಾದೋಪಾಸನೆ' ಎನಿಸಿಕೊಳ್ಳುವುದು ಇದೇ ಗಾನವಿದ್ಯೆಯ ಸಾರ್ಥಕತೆಯನ್ನು ಮನುಷ್ಯನು ಹೊಂದುವುದಾಗಿದೆ. ದೇವತಾಭಾವದಲ್ಲಿ ಏಕೀಕರಣಮಾಡಿ ಕೊಳ್ಳದ ನಾದಾನಂದದ ಸುಖವನ್ನು ಮಾತ್ರ ಅನುಭವಿಸುವುದು ವಿಷಯಾನಂದ ವೆನಿಸಿ ಪಶುಸಮಾನವೆನಿಸುವುದೆಂದರೆ ಭತ್ತದೊಳಗಿನ ಅಕ್ಕಿಯನ್ನು ಬಿಟ್ಟು ಹೊಟ್ಟನ್ನು ಹೊಂದಿದ ಪ್ರಯೋಜನದಷ್ಟು ಫಲವುಳ್ಳದ್ದಾಗಿದೆ. "ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿ ಗಾನರಸಂ ಫಣಿಃ" ಎಂಬ ವಾಕ್ಯದಂತೆ ಜಿಂಕೆ, ಹಾವು ಮೊದಲಾದ ಪ್ರಾಣಿಗಳೂ ನಾದಾನಂದವನ್ನು ಅನುಭವಿಸುವುವು. ಅಳುತ್ತಿರುವ ಮಕ್ಕಳೂ ಗೀತಾಮೃತದಿಂದ ಅಳುವುದನ್ನು ನಿಲ್ಲಿಸುವುವು ದೇವತಾಭಾವನೆ ಯಿಲ್ಲದ ನಾದಾನಂದವು ಇಷ್ಟೇ ಪ್ರಯೋಜನವುಳ್ಳದ್ದಾಗುವುದು

ಆಹತ ಅನಾಹತ ನಾದೋಪಾಸನೆಗಳಿಗೆ ಇರುವ ಭೇದವೇನೆಂದರೆ, ಆಹತ ನಾದೋಪಾಸನೆಯು ಅಪರ. ಅನಾಹತನಾದೋಪಾಸನೆಯು ಪರ. ನೀರಿರುವ ಕುಂಭದಲ್ಲಿ ಒಳಗಡೆ ಜಲವೇ ಇರುವುದು ಕುಂಭದ ಹೊರಪ್ರಾಕಾರದಲ್ಲಿಯೂ ಜಲದ ಶೈತ್ಯವಿರುವುದು. ಆಹತನಾದೋಪಾಸನೆಯು ಕುಂಭದ ಹೊರಪ್ರಾಕಾರ ದಲ್ಲಿರುವ ಶೈತ್ಯಸಮಾನವಾದುದು. ಅನಾಹತನಾದೋಪಾಸನೆಯು ಕುಂಭದೊಳಗಿರುವ ಜಲಸಮಾನವಾದುದು. ಅಂದರೆ ಅನಾಹತನಾದವು ಬ್ರಹ್ಮರಂಧ್ರನಾಡಿಯೊಳಗೂ, ಆಹತನಾದವು ಬ್ರಹ್ಮರಂಧ್ರದ ಹೊರಪ್ರಾಕಾರ ದಲ್ಲಿಯೂ ಇದ್ದು, ಇವೆರಡಕ್ಕೂ ನಡುವೆ ನಾಡೀಸ್ವರೂಪವಾದ (ಗಡಿಗೆಯ ರೂಪವಾದ) ಆವರಣವಿರುವುದೆಂದು ಹಿಂದೆಯೇ ತಿಳಿಸಿದೆಯಷ್ಟೆ! ಮನುಷ್ಯನಲ್ಲಿ ಆನಂದಮಯಕೋಶವು ಶಿರಸ್ಸಿನಲ್ಲಿ ನಾಡೀಸ್ವರೂಪವಾದ ಮಾಯಾ ಆವರಣದ ಹೊರಪ್ರಾಕಾರದಲ್ಲಿರುವುದು ಈ ಆವರಣವನ್ನು ಮನುಷ್ಯನ ಚಿತ್ರಪಟದಲ್ಲಿ ಶಿರಸ್ಸಿನಲ್ಲಿ ಓಂಕಾರದ ಸುತ್ತಲೂ ಗೆರೆಯರೂಪದಲ್ಲಿ ಗುರ್ತುಮಾಡಿರುವುದು. ಆಹತನಾದದ ಪರವಶತೆಯಕಾಲದಲ್ಲಿ ಇಂದ್ರಿಯಗಳ ಸೆಳತದಿಂದ ಬಿಡಲ್ಪಟ್ಟ ಮನಸ್ಸಿನ ವೃತ್ತಿಯು ಶಿರಸ್ಸಿನಲ್ಲಿ ಆನಂದಮಯಕೋಶವೆನಿಸುವ ಈ ಆವರಣದ ಹೊರಪ್ರಾಕಾರದಲ್ಲಿ ನಿಂತು, ಗಡಿಗೆಯ ಹೊರಪ್ರಾಕಾರದ ಶೈತ್ಯದ ಹೋಲಿಕೆ ಯಾದ, ಬ್ರಹ್ಮಾನಂದದ ಪ್ರಕಾಶವಾದ ವಿಷಯಾನಂದವೆನಿಸುವ ಆನಂದದಲ್ಲಿ ನೆಲೆಸುವುದು. ಈ ಸ್ಥಿತಿಯೇ ಆಹತನಾದವಾದ ಗಾನದಿಂದ ಹೊಂದುವ ಆನಂದದ ಸ್ಥಿತಿ.

ದೇವತಾಸ್ತೋತ್ರ ಸಂಬಂಧವಾದ ಆಹತನಾದೋಪಾಸನೆಯಿಂದ ಐಹಿಕ ಆಮುಷ್ಮಿಕಗಳೆರಡಕ್ಕೂ ಪ್ರಯೋಜನವುಂಟು. ನಾದೋಪಾಸನೆಯ ಕಾಲದಲ್ಲಿ

ಮನೋವೃತ್ತಿಯು ಆನಂದಮಯಕೋಶದಲ್ಲಿ ನಿಲ್ಲುವುದರಿಂದ ಮನುಷ್ಯನಲ್ಲಿ ಆನಂದವು ಸ್ಫುರಣೆಯಾಗಿ ರೋಗಾದಿಗಳು ನಿವೃತ್ತಿಯಾಗಿ ದೇಹಕ್ಕೆ ಕಾಂತಿಯೂ ಬಲವೂ ಬರುವುದು. ಯಾವಯಾವ ರಾಗಗಳು ಯಾವಯಾವ ಕೋಶಗಳಿಗೆ ಬಲಕೊಟ್ಟು ಎಂತೆಂತಹ ರೋಗಗಳನ್ನು ನಿವೃತ್ತಿಮಾಡಬಲ್ಲವೋ ಅವುಗಳನ್ನೂ ಸಹ ಕಂಡುಹಿಡಿಯಬಹುದು. ನಾದಬ್ರಹ್ಮವೆನಿಸುವ ಗಾಂಧರ್ವವೇದಕ್ಕೂ ಆಯುರ್ವೇದಕ್ಕೂ ನಿಕಟ ಸಂಬಂಧವಿದ್ದೇ ಇರುವುದು. ಮಂತ್ರರೂಪವಾದ ಶಬ್ದಶಕ್ತಿಯಿಂದ ರೋಗಾದಿಗಳನ್ನು ಪರಿಹರಿಸುವಂತೆ ಗಾನದಿಂದಲೂ ಪರಿಹರಿಸಬಹುದು. ನಾದಬ್ರಹ್ಮಶಕ್ತಿಯು ಅಂತಹ ಮಹಿಮಾಶಾಲಿಯಾದುದು.

ಅನಾಹತನಾದದಿಂದ ಎಂತಹ ಆನಂದವು ಲಭಿಸುವುದೆಂಬುದನ್ನು ವಿಶದಪಡಿಸೋಣ. ಅನಾಹತನಾದೋಪಾಸನೆಯಿಂದ ಮನಸ್ಸಿನ ಪ್ರವಾಹವು ಮೂಲಾಧಾರ ಚಕ್ರದ ಮೂಲಕ ಬ್ರಹ್ಮರಂಧ್ರನಾಡಿಯಲ್ಲಿ ಪ್ರವೇಶಿಸಿ ಆ ನಾಡಿಯ ಮೇಲ್ಭಾಗವಾದ ಶಿರಸ್ಸಿನಲ್ಲಿರುವ ಸಹಸ್ರಾರಕಮಲ (ಓಂಕಾರ)ವನ್ನು ಹೊಂದುವುದರಿಂದ ಗಡಿಗೆಯೊಳಗಿರುವ ಜಲದಂತೆ ಮೋಕ್ಷಸಾಮ್ರಾಜ್ಯವೆನಿಸುವ ಬ್ರಹ್ಮಾನಂದವೇ ಲಭಿಸುವುದು. ಅನಾಹತ ನಾದೋಪಾಸನೆಯ ಮಹಿಮೆಯ ವಿಚಾರವಾಗಿ **ಮಂಡಲಬ್ರಾಹ್ಮಣೋಪನಿಷತ್, ಯೋಗಚೂಡಾಮಣ್ಯುಪನಿಷತ್, ಶ್ರೀಕೃಷ್ಣಪರಮಾತ್ಮನ ಉತ್ತರಗೀತೆ,** ಇವುಗಳಲ್ಲಿ ಹೇಳಿರುವುದೇನೆಂದರೆ:—

ಅನಾಹತಸ್ಯ ಶಬ್ದಸ್ಯ ತಸ್ಯಶಬ್ದಸ್ಯ ಯೋಧ್ವನಿಃ ।
ಧ್ವನೇರಂತರ್ಗತಂ ಜ್ಯೋತಿಃ ಜ್ಯೋತಿರಂತರ್ಗತಂ ಮನಃ ।
ಯನ್ಮನ ಸ್ತ್ರಿಜಗತ್ಸೃಷ್ಟಿಸ್ಥಿತಿ ವ್ಯಸನ ಕರ್ಮಕೃತ್ ।
ತನ್ಮನೋ ವಿಲಯಂಯಾತಿ ತದ್ವಿಷ್ಣೋಃ ಪರಮಂಪದಂ ॥

ತಾ॥ ಅನಾಹತಚಕ್ರದಲ್ಲಿ ಅನಾಹತನಾದವೂ, ನಾದದೊಳಗಿರುವ ಜ್ಯೋತಿಯೂ, ಈ ತೇಜೋನಾದದೊಳಗೆ ಅನಾಹತನಾದ (ಓಂಕಾರನಾದ)ವನ್ನು ಉಪಾಸನೆಮಾಡುತ್ತಿರುವ ಮನೋವೃತ್ತಿಯೂ ಇರುವುದು. ಈ ಮನಸ್ಸೇ ಜನನ, ಮರಣ, ವ್ಯಾಪಾರರೂಪವಾದ ವ್ಯಸನಕಾರ್ಯದಲ್ಲಿತ್ತು. ಈ ಮನಸ್ಸು ತೇಜೋನಾದದಲ್ಲಿಯೇ ಲಯವಾದರೆ ಅದೇ ಪರಮಪದವೂ, ಸರ್ವವ್ಯಾಪಕವೂ ಆದ ವಿಷ್ಣುಪದವಾಗಿರುವುದು.

ಆದುದರಿಂದ ಬ್ರಹ್ಮರಂಧ್ರನಾಡಿಯಲ್ಲಿ ಅನಾಹತವೆನಿಸುವ ಓಂಕಾರ ನಾದವನ್ನು ಉಪಾಸಿಸುವುದೇ ಸುಖದುಃಖಗಳನ್ನೂ, ಹೃದಯದಲ್ಲಿ ಹೋರಾಡುವ

ವಿರುದ್ಧಭಾವಗಳನ್ನೂ ಹೋಗಲಾಡಿಸಿ ಪರಮಪದವಾದ ಶಾಶ್ವತ ಶಾಂತಿ ಸಮುದ್ರದಲ್ಲಿ ಮುಳುಗಿಸುವ ಅಂತಸ್ಸಂಗೀತವಾಗಿರುವುದು. ಅಂತರ್ಲಕ್ಷ್ಯದಿಂದ ಲಭಿಸುವ ಅನಾಹತನಾದೋಪಾಸನೆಯು ಜ್ಯೋತಿಸ್ವರೂಪವಾಗಿಯೂ ಇರುವುದೆಂದು ಮೇಲಿನ ಶ್ರುತ್ಯಾಧಾರವಲ್ಲದೆ 'ಅನ್ತರ್ಲಕ್ಷ್ಯಂ ಜಲಜ್ಯೋತಿ ಸ್ವರೂಪಂ ಭವತಿ' ಅಂದರೆ ಅನ್ತರ್ಲಕ್ಷ್ಯದ ಉಪಾಸನೆಯು ವಿದ್ಯುಚ್ಛಕ್ತಿಯ ಜ್ಯೋತಿಸ್ವರೂಪವಾಗಿರುವುದೆಂಬ ಶ್ರುತ್ಯಾಧಾರವಿರುವುದು. ಬ್ರಹ್ಮರಂಧ್ರ ನಾಡಿಯೊಳಗೆ ದೈವಿಕವಾದ, ಬ್ರಹ್ಮರಂಧ್ರದ ಹೊರಪ್ರಾಕಾರದಲ್ಲಿ ಮಾನುಷ ವರ್ಗದ ವೀಣೆಯ ತತ್ವಗಳಿರುವುವೆಂದು ಹಿಂದೆ ತಿಳಿಸಿತಷ್ಟೆ! ಈ ದೈವಿಕ ವೀಣೆಯೆಂದರೆ ಅನಾಹತ (ಓಂಕಾರ) ನಾದೋಪಾಸನೆಯು ಸರ್ವಸಿದ್ಧಿಪ್ರದ ವಾದುದೆಂದು ವೇದವೇ ತಿಳಿಸುವುದು

**ಐತರೇಯ ತೃತೀಯಾರಣ್ಯಕ** ದ್ವಿತೀಯಾಧ್ಯಾಯ ಪಂಚಮಖಂಡದಲ್ಲಿ:—

ಸಯೋಹೈತಾಂ ದೈವೀಂ ವೀಣಾಂ ವೇದಶ್ರುತ ವದನೋ ಭವತಿ ।
ಭೂಮಿಪ್ರಾಸ್ಯ ಕೀರ್ತಿರ್ಭವತಿ ಯತ್ರಕ್ವಚಾರ್ಯಾ ವಾಚೋಭಾಷಂತೇ
ವಿದುರೇನಂತತ್ರ ॥

ಅಂದರೆ ಈ ದೈವಿಕ ವೀಣೆಯನ್ನು ಚೆನ್ನಾಗಿ ತಿಳಿದು ಉಪಾಸಿಸಿದವನು ಸರ್ವಸಿದ್ಧಿಯನ್ನೂ ಪ್ರಪಂಚದಲ್ಲಿ ಕೀರ್ತಿಯನ್ನೂ ಹೊಂದುತ್ತಾನೆ ವಿದ್ವಾಂಸರು ಇವನನ್ನು ಪೂಜ್ಯನನ್ನಾಗಿ ತಿಳಿಯುತ್ತಾರೆ. ಎಂದು ಹೇಳಿದೆ.

ಅಂತರ್ಮುಖದಲ್ಲಿ ಲಭಿಸುವ ಪರಮಪವಿತ್ರವಾದ ಈ ಅನಾಹತನಾದೋಪಾಸನೆಯು ಸದ್ಗುರುವಿನ ಅನುಗ್ರಹದಿಂದಲೂ, ಈಶ್ವರೋಪಾಸನೆಯ ಬಲದಿಂದಲೂ ಹೊಂದತಕ್ಕದ್ದಾಗಿದೆ. ಆಹತನಾದದಿಂದ ಅನಾಹತನಾದೋಪಾಸನೆಗೆ ಹೋಗಿ ಪರಮಪದವಾದ ಪರಬ್ರಹ್ಮಸಾಕ್ಷಾತ್ಕಾರವನ್ನು ಹೊಂದಬಹುದು. ಹೇಗೆಂದರೆ - ನಾದದಲ್ಲಿ ಪರಾ, ಪಶ್ಯಂತೀ, ಮಧ್ಯಮಾ, ವೈಖರೀಗಳೆಂಬ ನಾಲ್ಕು ಸೋಪಾನಗಳಿವೆ. ಇವುಗಳಲ್ಲಿ ಒಂದೊಂದು ಸೋಪಾನವಾಗಿ ಹತ್ತಿಹೋಗಬೇಕು. ವೈಖರೀಸ್ವರೂಪವೇ ನಾವು ಉಚ್ಚರಿಸುವುದರಿಂದ ಬಾಯಿಂದ ಹೊರಗೆ ಹೊರಡುವ ನಾದಸ್ವರೂಪವು. ಇದು ಸ್ಥೂಲಶಬ್ದದಿಂದ ಉಪಾಸನೆಮಾಡುವ ಸೋಪಾನವಾಗಿದೆ. ತುಟಿಗಳನ್ನು ಮುಚ್ಚಿ ಒಳಗಡೆಯೆ ನಮ್ಮ ಶ್ರೋತ್ರಕ್ಕೆ ಗೊತ್ತಾಗುವಂತೆ ಮಾನಸಿಕವಾಗಿ ಉಚ್ಚರಿಸುವಿಕೆಯೇ ಮಧ್ಯಮವೆನಿಸುವುದು. ವೈಖರೀ ಮಧ್ಯಮಗಳೆರಡೂ ಆಹತನಾದಕ್ಕೆ ಸೇರಿದುದು. ಮನಸ್ಸಿಗೆ ಅರ್ಥಭಾವನೆ ಬರುವ ನಾದಸ್ವರೂಪವೇ ಪಶ್ಯಂತೀ ಸ್ಥಿತಿಯು. ಇದು ಅನಾಹತನಾದೋಪಾಸನೆಯ ಕ್ರಮಕ್ಕೆ ಸೇರಿದುದು. ಪರಾಸ್ಥಿತಿಯೇ ಕಳಾಸ್ವರೂಪ. 'ಅರ್ಧಮಾತ್ರಾಪರಾಜ್ಞೇಯಾ' ಎಂಬ ಶ್ರುತ್ಯಾ

ಧಾರದಂತೆ ಪರವೆಂದರೆ ಶಕ್ತಿಸ್ಥಿತಿ. ಇದೇ ಕಳಾಸ್ಥಿತಿ. ಈ ಪರಾಸ್ಥಿತಿಯು ಅನುಭವದ ಸ್ವರೂಪವಾದುದೇ ಹೊರತು ಹೀಗಿದೆಯೆಂದು ವರ್ಣಿಸಲು ಸಾಧ್ಯವಿಲ್ಲ. ಆದುದರಿಂದ ಪಶ್ಯಂತೀ ಪರಾಗಳೆರಡೂ ಅನಾಹತನಾದೋಪಾಸನೆಯ ಸ್ಥಿತಿಯಾಗಿ ಸುಕೃತವಿಶೇಷದಿಂದಲೇ ಲಭಿಸಬೇಕಾಗಿದೆ.

ಪಿಂಡಾಂಡವಾದ ಮನುಷ್ಯದೇಹದಲ್ಲಿಯೂ ಬ್ರಹ್ಮಾಂಡದಲ್ಲಿರುವಂತೆ ಸೂರ್ಯ, ಚಂದ್ರ, ಇಂದ್ರಾದಿ ಸಕಲ ದೇವತಾಶಕ್ತಿಗಳು ಓಂಕಾರವಿರುವ ಬ್ರಹ್ಮರಂಧ್ರನಾಡಿಯಲ್ಲಿರುತ್ತವೆ. ಹೀಗಿರುವುದೆಂದು "ಸುಷುಮ್ನಾಂತರ್ಗತಂ ವಿಶ್ವಂ ತಸ್ಮಿನ್ಸರ್ವಂ ಪ್ರತಿಷ್ಠಿತಂ" ಎಂಬ ಶ್ರುತ್ಯಾಧಾರವಿರುವುದು. ಬ್ರಹ್ಮರಂಧ್ರನಾಡಿಯ ಹೊರಪ್ರಾಕಾರದ ಕಾರ್ಯವಾದ ನಾವು ಮಾತನಾಡುವ ಮತ್ತು ಹಾಡುವ ಕಾರ್ಯಗಳಲ್ಲಿ ಬ್ರಹ್ಮರಂಧ್ರನಾಡಿಯೊಳಗಿರುವ ದೇವತಾಶಕ್ತಿಗಳಿಗೆ ಸಂಬಂಧವಾಗುವುದಿಲ್ಲ. ಅಂದರೆ ಬ್ರಹ್ಮರಂಧ್ರನಾಡಿಯೊಳಗಿರುವ ದೇವತಾತ್ಮಕವಾದ ಶಕ್ತಿಗಳ ಪ್ರಭೆಯಿಂದ ನಮ್ಮ ಮಾತು ಮತ್ತು ಹಾಡುವ ಕಾರ್ಯಗಳು ನಡೆದರೂ ನಮ್ಮ ವಾಕ್ಕು ಮತ್ತು ಹಾಡುಗಾರಿಕೆಯು ಆ ದೇವತಾಶಕ್ತಿಗಳೊಡನೆ ಸಂಬಂಧವನ್ನು ಪಡೆಯಲಾರವು. ಇವು ಹೀಗೆ ಸಂಬಂಧ ಪಡೆಯದಿದ್ದರೆ ಮತ್ತಾವುದು ದೇವತಾಶಕ್ತಿಗಳೊಡನೆ ಸಂಬಂಧಪಡುವುದೆಂದರೆ:— ವೇದಾಧ್ಯಯನ ರೂಪವಾದ ಗಾನವೊಂದೇ. ವೇದಮಂತ್ರವನ್ನು ಯಾವ ಯಾವ ಸ್ವರಗಳಿಂದ ಹೇಗೆ ಹೇಗೆ ಅಧ್ಯಯನಮಾಡಬೇಕೆಂದು ಇರುವುದೋ ಹಾಗೆ ಮಾಡಿದರೇನೇ ಬ್ರಹ್ಮರಂಧ್ರನಾಡಿಯಲ್ಲಿರುವ ವಿಶ್ವದ ದೇವತಾಶಕ್ತಿಗಳಿಗೆ ಸುಪ್ರೀತಿಯಾಗಿ ವೇದಗಾನವೆನಿಸಿಕೊಳ್ಳುವುದು. ವೇದಮಂತ್ರವನ್ನು ಸಂಗೀತದಂತಾಗಲೀ ಮಾತನಾಡುವಂತಾಗಲೀ ಉಚ್ಚರಿಸಿದರೆ ಅದು ವೇದವೆನಿಸಿಕೊಳ್ಳುವುದಿಲ್ಲವೆಂದರೆ ವೇದಮಂತ್ರವೆನಿಸಿಕೊಳ್ಳುವುದಿಲ್ಲ. ಸಂಗೀತವನ್ನು ಸುಸ್ವರದಿಂದ ಹಾಡಿದರೆ ಹೇಗೆ ಸಂಗೀತವೆನಿಸಿಕೊಳ್ಳುವುದೋ ಹಾಗೆಯೇ ವೇದಗಾನವೂ ತನ್ನದೊಂದು ಮಹಿಮಾಶಕ್ತಿಯನ್ನು ಹೊಂದಿರುವುದು. ವೇದಮಂತ್ರವು ತನ್ನ ಸ್ವರಶಕ್ತಿಯ ಕಟ್ಟಳೆಯಂತೆ ಗಾನಮಾಡಲ್ಪಟ್ಟಾಗ ಸುಷುಮ್ನಾ (ಬ್ರಹ್ಮರಂಧ್ರ) ನಾಡಿಯೊಳಗಿರುವ ಕಳಾರೂಪವಾದ ದೇವತಾಶಕ್ತಿಗಳೊಡನೆ ಸಂಬಂಧವನ್ನು ಪಡೆದು ಅನಂತರ ಆಕಾಶಗತವಾದ ವಿದ್ಯುಚ್ಛಕ್ತಿಯಮೂಲಕ ಅದೃಶ್ಯಪ್ರಪಂಚದಲ್ಲಿರುವ ಪ್ರಧಾನವಾದ ದೇವತಾಶಕ್ತಿಗಳೊಡನೆ ಸಂಬಂಧಿಸುವುದು ಸುಷುಮ್ನಾ (ಬ್ರಹ್ಮರಂಧ್ರ) ನಾಡಿಯಲ್ಲಿ ವಿಶ್ವದ ದೇವತಾಶಕ್ತಿಗಳಿರುವುದಕ್ಕೆ

(೧) ಸುಷುಮ್ನಾಯಾಂ ಸ್ಥಿತಾಸ್ಸರ್ವೇ ಸೂತ್ರೇ ಮಣಿಗಣಾಇವ,
(೨) ಸುಷುಮ್ನಾ ವಿಶ್ವರೂಪಿಣೀ (೩) ಸುಷುಮ್ನಾ ಸೂರ್ಯಾಭಾ
(೪) ಸುಷುಮ್ನಾ ಶಾಂಭವೀಶಕ್ತಿಃ (೫) ಸುಷುಮ್ನಾಂತರ್ಗತಂ ವಿಶ್ವಂ

ಮುಂತಾದ ಅನೇಕ ಶ್ರುತಿಪ್ರಮಾಣಗಳಿವೆ. ಅಲ್ಲದೆ ಬ್ರಹ್ಮರಂಧ್ರ ನಾಡಿಯು ಓಂಕಾರಕ್ಕೆ ಸ್ಥಾನವಾದುದರಿಂದ ಸಕಲದೇವತಾಶಕ್ತಿಗಳೂ ಅಲ್ಲಿ ಪ್ರತಿಷ್ಠಿತವಾಗಿರುವುವು ಆದುದರಿಂದ ವೇದಗಾನವು ಕಟ್ಟಳೆಯಂತೆ ಅಧ್ಯಯನ ಮಾಡಲ್ಪಟ್ಟಾಗ ಸುಷುಮ್ನಾಂತರ್ಗತವಾದ ದೇವತಾಶಕ್ತಿಗಳೊಡನೆ ಸಂಬಂಧವನ್ನು ಪಡೆಯುವುದು. ಹೀಗೆ ದೇವತಾಶಕ್ತಿಗಳ ಸಂಬಂಧಪಡೆಯುವುದಾದುದರಿಂದಲೇ ವೇದಭಾಷೆಗೆ ದೇವಭಾಷೆಯೆಂದು ಹೆಸರುಬಂದಿರುವುದು. ವೇದಗಾನವು ಬ್ರಹ್ಮ ರಂಧ್ರದಲ್ಲಿರುವ ದೇವತಾಶಕ್ತಿಗಳೊಡನೆ ಸಂಬಂಧಪಡೆಯುವ ವಿಚಾರವು ಮುಂದಿನ ಪ್ರಕರಣದಲ್ಲಿ ವೇದಕ್ಕೂ ಕಾವ್ಯಕ್ಕೂ ಇರುವ ತಾರತಮ್ಯದಲ್ಲೂ ವಿವರಿಸಿರುವುದು. ಯಜ್ಞದಲ್ಲಿ ಬರುವ ದೇವತಾವರ್ಣನೆ, ದೇವತಾಹೋಮ, ದೇವತಾ ಪ್ರಾರ್ಥನೆಗಳಿರುವ ಚತುರ್ವೇದಗಳ ಒಂದು ಸಣ್ಣ ಮಂತ್ರದ ಗಾನಸತ್ವವನ್ನು ತಿಳಿದರೆ ಮೇಲೆ ಬರೆದಿರುವ ತತ್ವಗಳು ಯಥಾರ್ಥವಾದವುಗಳೆಂದು ಯಾರೂ ಒಪ್ಪದೇ ಇರಲಾರರು. ವೇದಗಾನವು ಯಾವಪ್ರಕಾರವಾಗಿ ತನ್ನದೊಂದು ಮಹಿಮಾಶಕ್ತಿಯ ಕಟ್ಟಳೆಯನ್ನು ಹೊಂದಿರುವುದೋ ಅದೇಪ್ರಕಾರವಾಗಿ ವೇದಾಧ್ಯಯನದ ಅಧಿಕಾರವೂ ಕೂಡಾ ಅಂತಹ ರಕ್ತಕಣದ ಸ್ವಭಾವದಿಂದ ಜನ್ಮ, ಶಾಸ್ತ್ರವಿಧಿಯಂತೆ ಸಂಸ್ಕಾರ, ವೇದಮಾತೆಯಾದ ಗಾಯತ್ರೀ ಉಪದೇಶ ಮುಂತಾದ ಅನೇಕ ನಿಯತವಾದ ಕಟ್ಟಳೆಯನ್ನೇ ಹೊಂದಿರುವುದೆಂಬುದಕ್ಕೆ ಯಾವ ವಿಧವಾದ ಸಂಶಯವೂ ಇಲ್ಲ. ಈ ಕಟ್ಟಳೆಗಳಂತೆ ಇದ್ದರೇನೇ ಅದು ವೇದಮಂತ್ರವೆನಿಸಿಕೊಳ್ಳುವುದು.

ಸಂಗೀತಕ್ಕಿಂತ ವೇದಗಾನವು ಒಂದು ವಿಲಕ್ಷಣವಾದ ಮಹತ್ವನ್ನು ಹೊಂದಿದ್ದರೂ ಸಂಗೀತವನ್ನೂ ಸಾಮಾನ್ಯವಾದುದೆಂದು ತಿಳಿಯಬಾರದು. ಭಾರತದ ಸಂಗೀತಶಾಸ್ತ್ರಕ್ಕೆ ವೇದವೇ ಪೀಠಿಕೆಯಾಗಿ ಅದನ್ನೇ ಅನುಸರಿಸಿದೆ. ಸಂಗೀತವು ಗಂಧರ್ವಶಾಸ್ತ್ರವಾದುದರಿಂದ ಉಪವೇದವೇ ಆಗಿರುವುದು. ಸ್ವರ, ರಾಗ, ತಾಳ ಮುಂತಾದವುಗಳಿಗೂ ಅಭಿಮಾನಿದೇವತೆಗಳಿರುವರು. ಸಂಗೀತವು ವೇದಗಾನದಂತೆ ಸಾಕ್ಷಾತ್ತಾಗಿ ದೇವತಾಶಕ್ತಿಗಳೊಡನೆ ಸಂಬಂಧಪಡೆಯದೇ ಇದ್ದರೂ ಪರಂಪರೆಯಾಗಿ ಸಂಬಂಧವನ್ನು ಹೊಂದಿಯೇ ಇರುವುದು. ಈ ದೇವತಾಶಕ್ತಿಗಳೆಲ್ಲಾ ಸುಪ್ರೀತವಾಗುವಂತೆ ಸದಾಚಾರ ಮತ್ತು ನಿಯಮಗಳಿಂದ ಸಂಗೀತಾಭ್ಯಾಸಮಾಡಬೇಕು. ಹಾಗಿಲ್ಲವಾದರೆ ಪಾಪಸಂಘಟನೆಯಾಗುವುದು ನಾದೋಪಾಸನೆಯು ಮುಖ್ಯ ಉದ್ದೇಶಕ್ಕೋಸ್ಕರವೇ ಗಾನವಿದ್ಯೆಯು ಇರುವುದಲ್ಲದೆ ಉದರಪೋಷಣೆಯ ವ್ಯಾಪಾರಕ್ಕಲ್ಲ.

ಭಾರತದ ಸಂಗೀತಶಾಸ್ತ್ರವು ವೇದವನ್ನು ಅನುಸರಿಸಿರುವುದರಿಂದ ವಿಶ್ವದ ರಚನೆಯ ಆಧಾರದ ಶಾಸ್ತ್ರದ ಮೇಲೆಯೇ ನಿಂತಿರುವುದು. ಭಾರತದ

ಸಂಗೀತಶಾಸ್ತ್ರವು ಮೊದಲು ಧ್ವನಿಗಳಂತೆ ಮಾತ್ರ ಇದ್ದು ಅವು ಕೊನೆಗೆ ಸ್ವರಗಳಾಗಿ ಹಾಗೆಯೇ ಒಂದು ಶಾಸ್ತ್ರರೂಪವಾಗಿ ಕಲ್ಪಿಸಲ್ಪಟ್ಟಿದ್ದಲ್ಲ. ಮಹರ್ಷಿಗಳ ದಿವ್ಯಜ್ಞಾನದಿಂದ ವೇದವನ್ನನುಸರಿಸಿ ದೇವತಾಸ್ತುತಿಯ ಮೂಲಕ ಹೊರಪಟ್ಟ ಶಾಸ್ತ್ರವಾಗಿರುವುದು ಭಾರತೀಯ ಸಂಗೀತಗಾರರು ಮನೋರಂಜನೆಯ ಪ್ರಧಾನದ ದೃಷ್ಟಿಯಿಂದ ಸಂಗೀತಶಾಸ್ತ್ರವನ್ನು ಉತ್ತಮತೆಗೆ ತರುತ್ತೇವೆಂಬ ಭರದಲ್ಲಿ ರಾಗ, ತಾಳ, ಸ್ವರಗಳ ಅಸ್ತಿಭಾರ ವನ್ನೇ ಕಳೆದುಕೊಂಡು ಕಳಾಹೀನರಾಗಬಾರದು. ಅಲ್ಲದೆ ಶಾಸ್ತ್ರಮರ್ಯಾದೆ ಯನ್ನರಿಯದೆ ಮನಸ್ಸಿ ಕಲ್ಪಿಸಬಾರದು. ವೀಣೆಯ ೨೪ ಮನೆಗಳಲ್ಲಿ ೨೨ ಮನೆಗಳು ೨೨ ಶ್ರುತಿಗಳಿಗೆ ಸೇರಿದವುಗಳೆಂದೂ, ಉಳಿದ ೨ ಮನೆಯು ಅತಿತಾರವೆಂದೂ ಆಧುನಿಕ ವೈಣಿಕ ವಿದ್ವಾಂಸರು ಕಲ್ಪಿಸಿರುತ್ತಾರೆ. ಇದು ಸಮಂಜಸವಾದುದಲ್ಲ ೨೨ ಶ್ರುತಿಗಳೂ ಸಪ್ತಸ್ವರಗಳಿಗೆ ಸೇರಿವೆ. ಅಲ್ಲದೆ ಸ್ವರಗಳನ್ನು ಬಿಟ್ಟು ಶ್ರುತಿಗಳಿಗೆ ಪ್ರತ್ಯೇಕ ಸಾನ್ನಿಧ್ಯವೇ ಇಲ್ಲ. ವೀಣೆಯು ಪ್ರಥಮ ೧೨ ಮನೆಗಳಲ್ಲಿಯೇ ಸಪ್ತಸ್ವರಗಳಿರುವುದು ಪ್ರತ್ಯಕ್ಷವಾಗಿರುವುದರಿಂದ ವೀಣೆಯ ಪ್ರಥಮ ೧೨ ಮನೆಗಳಲ್ಲೇ ೨೨ ಶ್ರುತಿಗಳಿವೆ ವೀಣೆಯ ದ್ವಿತೀಯಾರ್ಧದ ೧೨ ಮನೆಗಳಲ್ಲೂ ಸ್ವರಗಳನ್ನನುಸರಿಸಿ ೨೨ ಶ್ರುತಿಗಳಿವೆ. ಹೀಗಿರುವುದರಿಂದ ವೀಣೆಯ ೨೪ ಮನೆಗಳು ೨೨ ಶ್ರುತಿಗಳ ೨ ಅತಿತಾರದ ಮನೆಗಳೆಂದು ಕಲ್ಪಿಸಿರುವುದು ಸರಿಯಲ್ಲ ವೀಣೆಯ ೨೪ ಮನೆಗಳೂ ಗಾಯತ್ರೀ ದೇವಿಯ ಮಂತ್ರದ ೨೪ ಬೀಜಾಕ್ಷರಗಳ ತತ್ವಗಳುಳ್ಳದ್ದಾಗಿಯೂ, ಸಪ್ತಸ್ವರಗಳ ಮತ್ತು ಅವುಗಳ ಶ್ರುತಿಗಳ ಅವರೋಹಣ ಆರೋಹಣಗಳ ತತ್ವಗಳುಳ್ಳದ್ದಾಗಿಯೂ, ಗಾಯತ್ರೀಮಂತ್ರದ ಮೂರು ಪಾದಗಳಿಗನುಸಾರವಾಗಿ ವೀಣೆಯಪ್ರತಿಯೊಂದು ಎಂಟೆಂಟು ಮನೆಗಳೂ ಮಂದ್ರ, ಮಧ್ಯಮ, ತಾರಸ್ಥಾಯಿಗಳ ತತ್ವಗಳುಳ್ಳದ್ದಾ ಗಿಯೂ ಇವೆ ಆದುದರಿಂದ ವೇದಶಾಸ್ತ್ರಗಳ ಮರ್ಯಾದೆಯಲ್ಲಿ ಮುಳುಗಿ ಅದರಲ್ಲಿರುವ ಇನ್ನೂ ಅಮೋಘವಾದ ರತ್ನಗಳನ್ನು ಹೊರಕ್ಕೆ ತರುವ ಪ್ರಯತ್ನಮಾಡಬೇಕು. ಈ ಅಧಿಕಾರವು ದೇವತಾನುಗ್ರಹದಿಂದಲೇ ಲಭ್ಯವಾಗಬೇಕು. ಆದುದರಿಂದ ಈಗಿನ ಕಾಲದಲ್ಲೂ ಪ್ರಖ್ಯಾತರಾದ ತ್ಯಾಗಯ್ಯ ಮುಂತಾದ ಮಹನೀಯರು ಪಡೆದಂತೆ ಪ್ರಥಮದಲ್ಲಿ ದೇವತಾನುಗ್ರಹವನ್ನು ಹೊಂದಲು ಪ್ರಯತ್ನಿಸಬೇಕು.

ಗಾನವಿದ್ಯೆಯು ನಾಲ್ಕುವೇದಗಳ ಆಧಾರದ ಮೇಲಿದ್ದರೂ ಗಾನಕ್ಕೆ ಸಾಮ ವೇದವೇ ಮುಖ್ಯವಾದುದೆಂದು ಹೇಳಿರುವುದಕ್ಕೆ ಕಾರಣವನ್ನು ವಿವರಿಸೋಣ. ಸಂದರ್ಭಾನುಸಾರ ಪ್ರತಿವೇದಕ್ಕೂ ಪ್ರಾಶಸ್ತ್ಯವನ್ನು ಕೊಟ್ಟಿದ್ದರೂ ಒಂದು ಶ್ರೇಷ್ಠ ಮತ್ತೊಂದು ಕನಿಷ್ಠವೆಂಬುದು ಎಂದಿಗೂ ಇಲ್ಲ. ಸಾಮವೇದದ ಮಂತ್ರಗಳು ಮೂಲತಃ ಋಗ್ವೇದದ್ದು. ಸಾಮವೇದಕ್ಕೆ ಋಗ್ವೇದವು ಆಧಾರವೆಂದು

ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದೆ (೧. ೧ ೨). "ವೇದಾನಾಂ ಸಾಮ ವೇದೋಽಸ್ಮಿ" ಎಂಬ ಶ್ರೀಕೃಷ್ಣಪರಮಾತ್ಮನ ಗೀತಾವಾಕ್ಯವಿದೆ. ಮಹಾಭಾರತದ ಅನುಶಾಸನಿಕ ಪರ್ವದಲ್ಲಿಯೂ 'ಸಾಮವೇದಾಶ್ಚ ವೇದಾನಾಂ' ಎಂಬ ವಾಕ್ಯವಿದೆ. 'ಏತತ್ಸಾಮಗಾಯನ್ನಾಸ್ತೇ' ಎಂಬ ಶ್ರುತಿವಾಕ್ಯವೂ ಇರುವುದು. ಸಾಮವೇದ ದಂತೆಯೆ ಯಜುರ್ವೇದದ ಪ್ರಾಶಸ್ತ್ಯವನ್ನೂ ಅನೇಕ ಕಡೆಗಳಲ್ಲಿ ಹೇಳಿದೆ. ಅಲ್ಲದೆ ಅಥರ್ವಣವೇದಕ್ಕೆ ಬ್ರಹ್ಮವೆಂದು ಹೇಳಿದೆ. ಹೀಗೆ ಪರಸ್ಪರ ವಿರುದ್ಧವಾಗಿರುವು ದೆಂಬ ವಿಧಾನಗಳನ್ನು ಇಟ್ಟುಕೊಂಡು ಅನೇಕರು ವಿಧವಿಧವಾದ ಕಲ್ಪನಾಸ್ತೋಮ ವನ್ನು ನಡೆಸುತ್ತಿರುವರು ವೇದಗಳ ಯಥಾರ್ಥವಾದ ತತ್ವಗಳನ್ನು ತಿಳಿದರೆ ವೇದಗಳಲ್ಲಿನ ಶ್ರೇಷ್ಠ ಕನಿಷ್ಠಗಳೆಂಬ ಕಲ್ಪನಾಭೇದಭಾವನೆಯು ದೂರವಾಗುವುದು. ವೀಣೆಯ ಅನ್ವಯದ ತತ್ವಗಳಲ್ಲಿಯೆ ಈ ವಿಚಾರಗಳೆಲ್ಲಾ ಬಂದಿರುವುವು. ಗಾನಕ್ಕೆ ಸಾಮವೇದದ ಪ್ರಧಾನತ್ವವನ್ನು ಕೊಟ್ಟಿರುವುದರಿಂದ ಇದರ ತತ್ವವೇನೆಂ ಬುದನ್ನು ತಿಳಿಯೋಣ

ಋಗ್ವೇದವು ದೇವತಾಗುಣವರ್ಣನೆಯನ್ನೂ, ಯಜುರ್ವೇದವು ದೇವತಾ ಕರ್ಮದ ವಿವರಣೆಯನ್ನೂ, ಸಾಮವೇದವು ಉಪಾಸನಾತತ್ವವನ್ನೂ ನಿರೂಪಿ ಸುವುದೆಂದು ಹಿಂದೆ ತಿಳಿಸಿರುವುದಷ್ಟೆ! ದೇವತಾಗುಣಪ್ರಕಾಶವನ್ನು ಪ್ರಥಮದಲ್ಲಿ ಅರಿಯುವುದರಿಂದ ದೇವತಾಜ್ಞಾನದಲ್ಲಿ ಪ್ರಥಮದಲ್ಲಿ ಪ್ರವೃತ್ತಿಯುಂಟಾಗುವುದು. ಅನಂತರ ದೇವತಾಪ್ರೀತ್ಯರ್ಥವಾಗಿ ಆರಾಧನಾರೂಪವಾದ ಕರ್ಮಮಾಡಬೇಕು. ಆರಾಧನೆಯಿಂದ ದೇವತಾಶಕ್ತಿಗಳನ್ನು ಪ್ರೀತಿಸಿದ ಅನಂತರವೇ ಅವರು ನಮ್ಮಲ್ಲಿ ವಿಶ್ವಾಸವುಳ್ಳವರಾಗುವರು. ಯಾವಾಗ ಆರಾಧನೆಯಿಂದ ದೇವರನ್ನು ಪ್ರೀತಿಸು ತ್ತೇವೆಯೋ ಆಗ ನಾವೂ ದೇವರ ಅಂತರಂಗದ ವಿಶ್ವಾಸಕ್ಕೆ ಸೇರಲು ಅರ್ಹ ರಾಗುತ್ತೇವೆ ದೇವರ ಅಂತರಂಗವನ್ನೇ ನಾವು ಹೊಂದುವ ವಿಧಾನವೆಂದರೆ- ಉಪಾಸನಾಕ್ರಮವನ್ನೇ ಸಾಮವೇದವು ನಿರೂಪಿಸುವುದು ಹೇಗೆಂದರೆ - ಅಗ್ನಿ ರೂಪವೇ ಋಗ್ವೇದ. ಸೂರ್ಯರೂಪವೇ ಸಾಮವೇದ. ಸೂರ್ಯನ ಕಿರಣಗಳು ಲಂಬಿಸಿರುವುದರಿಂದ ಗೀತರೂಪ. ದೇವತಾವಿಚಾರಜ್ಞಾನ ಪ್ರಥಮದಲ್ಲಾ ಗುವುದು. ಈ ವಿಚಾರಜ್ಞಾನವು ಇತರ ವಿಷಯಾದಿಗಳ ಜ್ಞಾನವನ್ನು ಬಿಟ್ಟು ದೇವತಾಭಾವವನ್ನು ಧರಿಸಿಕೊಳ್ಳಲು ಹೋಗಿ ಏಕಾಕಾರದ ರೀತಿಯನ್ನು ಹೊಂದುವ ಸ್ವಭಾವವೇ ಜ್ಞಾನದ ಗೀತಾರೂಪವಾಗಿ ಸಾಮವೇದದ ತತ್ವನಾಗಿ ಉಪಾಸನೆಯೆಂದು ಕರೆಸಿಕೊಳ್ಳುವುದು. ಇದರಂತೆಯೆ ಉಚ್ಚಾರಣಾಶಬ್ದವು ಉಪಾಸನಾ ನಿಯಮವನ್ನನುಸರಿಸಿ ಗೀತಾರೂಪವಾಗಿ ಲಂಬಿಸಿರುವುದೇ ಸಂಗೀತಕ್ಕೆ ಸಾಮವೇದವು ಪ್ರಧಾನವಾದುದಾಗಿದೆ. ಹೀಗೆ ಸಾಮವೇದವು ಪ್ರಧಾನವಾಗಿದ್ದರೂ ಸಂಗೀತವು ಚತುರ್ವೇದಗಳ ಆಧಾರದ ಮೇಲೆಯೆ ನಿಂತಿದೆ.

ದೇವತಾಭಾವವನ್ನು ಧರಿಸುತ್ತಾ ದೇವರನಾಮುವನ್ನು ಆವರ್ತಿಮಾಡುತ್ತಿರುವಿಕೆಯೂ, ದೇವತಾಭಾವದೊಡನೆ ಮಂತ್ರಜಪಮಾಡುತ್ತಿರುವಿಕೆಯೂ, ದೇವತಾಸ್ತೋತ್ರರೂಪವಾದ ಗಾನಮಾಡುವ ಕಾಲದಲ್ಲಿ ದೇವತಾಭಾವದಲ್ಲಿ ಮನಸ್ಸಿಡುತ್ತಿರುವಿಕೆಯೂ, ಅನಾಹತನಾದಾನುಸಂಧಾನವೂ, ಇವುಗಳೆಲ್ಲಾ ದೇವತೋಪಾಸನೆಯೆನಿಸುವುದು. ಇಂತಹ ಉಪಾಸನೆಯು ಸಾಮವೇದದ ತತ್ವವನ್ನು ಅನುಸರಿಸಿರಬೇಕು. ಸಾಮಶಬ್ದಾರ್ಥವು ಪ್ರೀತಿಪೂರ್ವಕವಾದ ನಮ್ರತೆ ಮತ್ತು ಗಂಭೀರದೊಡನೆ ಪ್ರಾರ್ಥಿಸಿ ಉಪಾಸನಾದೇವತೆಯೊಡನೆ ಏಕೀಕರಣದ ತತ್ವವನ್ನು ನಿರೂಪಿಸುವುದು. ಹೇಗೆಂದರೆ :— ಉಪಾಸನೆ ಮಾಡತಕ್ಕ ಕಾಲದಲ್ಲಿ ವಿರಕ್ತಿಯೊಡನೆಯೂ, ರಕ್ತ, ಮಾಂಸ, ಮೂಳೆಗಳ ಸ್ವರೂಪವಾದ ದೇಹವು ನಾನಲ್ಲವೆಂದೂ, ಉಪಾಸ್ಯದೇವತಾಭಾವದಲ್ಲಿ 'ನಾನು' ಎಂಬುದು ಕರಗಿಹೋಗುವ ವಿಧಾನವಾದ ಪ್ರೇಮಪ್ರವಾಹವು ಅಥವಾ ಅತ್ಯುತ್ತಮವಾದ ಭಕ್ತಿಪ್ರವಾಹವೇ ಸಾಮವೇದದ ತತ್ವವಾಗಿರುವುದು. ಹೀಗೆ ಉಪಾಸನೆ ಮಾಡುವುದರಿಂದ ಹೊಂದುವ ಫಲವೇ ಅಥರ್ವಣವೆಂದರೆ ಮಂಗಳ. ಅಂದರೆ ಪರಮಾತ್ಮಸಾಕ್ಷಾತ್ಕಾರವೇ ಆಗಿದೆ

ದೇಹನಾನಲ್ಲವೆಂಬ ಭಾವನೆಯಿಂದಲೂ, ದೇವತಾಭಾವನೆಯಲ್ಲಿಯೇ ಕರಗಿಹೋಗುವೆನೆಂಬ ಪ್ರೇಮಪ್ರವಾಹದಿಂದಲೂ, ದೇವತಾಶಕ್ತಿಯೊಡನೆ ಏಕೀಕರಣವನ್ನುಂಟುಮಾಡುವುದರಿಂದ ಸಾಮವೇದಕ್ಕೊಂದು ಮಹಿಮೆಯು ಬಂದಿರುವುದು. ಉಪಾಸನೆಯು ದೇವತಾಜ್ಞಾನ ಕರ್ಮಗಳ ಆಧಾರದಮೇಲೆ ನಿಂತಿರುವುದರಿಂದ ಋಗ್ಯಜುರ್ವೇದಗಳ ಕಾರ್ಯವನ್ನು ಕೆಳಗಿಳಿಸುವಂತಿಲ್ಲ. ಇಂತಹ ಉಪಾಸನಾಸೋಪಾನಕ್ಕೆ ಮನುಷ್ಯನು ಹತ್ತಲೆಂಬ ಕರುಣೆಯಿಂದಲೇ ಸಾಮವೇದಕ್ಕೊಂದು ಪ್ರಾಶಸ್ತ್ಯವನ್ನು ವೇದವೂ ಶ್ರೀಕೃಷ್ಣಪರಮಾತ್ಮನೂ, ಕೊಟ್ಟಿರುವುದು. ಅಲ್ಲದೆ ಈಶ್ವರನಿಗೇ ಇಂತಹ ಉಪಾಸಕರಮೇಲೆ ಬಹು ಪ್ರೀತಿಯೆಂಬುದನ್ನು ಸೂಚಿಸುವ ತಾತ್ಪರ್ಯವನ್ನು ಅನುಸರಿಸಿ 'ಸಾಮಗಾನಪ್ರಿಯಾಯೈ ನಮಃ' ಎಂಬ ವಾಕ್ಯವಿರುವುದು. ಸಾಮವೇದದ ಧ್ವನಿಯೂ ನಮ್ರತೆ ಮತ್ತು ದೀನತೆಯು ಸ್ವಭಾವವಾಗಿ ಮನಮರುಗುವಂತಿರುವುದು. ಇಂಪಾದಗಾನದಿಂದ ಇಂದ್ರಿಯಗಳ ಸೆಳೆತದಿಂದ ಬಿಡಲ್ಪಟ್ಟ ಮನೋವೃತ್ತಿಯು ಆನಂದಮಯ ಕೋಶದಲ್ಲಿ ನೆಲೆಸುವುದು. ಈ ಕಾಲದಲ್ಲಿ ದೇವತಾಭಾವವನ್ನು ಧರಿಸಲು ಬಹು ಸೌಕರ್ಯವಾದ ಕಾಲವೆಂದು ಹಿಂದೆ ತಿಳಿಸಿದೆಯಷ್ಟೆ! ಇಂತಹ ಕಾಲದಲ್ಲಿ ದೇವತಾಭಾವನೆಯಲ್ಲಿಯೇ ನಾನು ಕರಗಿಹೋಗುವೆನೆಂಬ ಪ್ರೇಮಪ್ರವಾಹವನ್ನು ಹೊಂದಿ ಉಪಾಸನೆಮಾಡುವುದರಿಂದಲೇ ಗಾನಕ್ಕೆ ಸಾಮವೇದವೇ ಪ್ರಧಾನವೆಂದು ತಿಳಿಸಿರುವುದಾಗಿದೆ. ಇಂತಹ ಪ್ರೇಮಪ್ರವಾಹದ ಭಾವನೆಯಿಲ್ಲದ ಗಾನವೂ,

ಮಂತ್ರಜಪವೂ ನಿರರ್ಥಕವಾದುದು ಗಾನಸ್ವರೂಪವು ಪರಾ, ಪಶ್ಯಂತೀ, ಮಧ್ಯಮಾ, ವೈಖರೀರೂಪಗಳಲ್ಲೆಲ್ಲಾ ಇರುವುದರಿಂದ ವೈಖರೀರೂಪವಾದ ಸ್ಥೂಲದಿಂದ ಸೂಕ್ಷ್ಮವಾದ ಅನಾಹತನಾದದವರೆಗೂ ಸಾಮವೇದದ ತತ್ವವು ಇರುವುದು.

---

# ೪. ನೆಯ ಪ್ರಕರಣ

ವೀಣೆಯ ಅಂತರಾರ್ಥವನ್ನನುಸರಿಸಿ (೧) ವೇದದ ಕಾಲ (೨) ವೇದಾವಿರ್ಭಾವಕ್ರಮ (೩) ವೇದ ವಿಭಾಗ (೪) ವೇದಕ್ಕೂ ಕಾವ್ಯಕ್ಕೂ ಇರುವ ತಾರತಮ್ಯ (೫) ವೇದಕ್ಕೂ ಪುರಾಣಕ್ಕೂ ಇರುವ ಸಂಬಂಧ (೬) ಶ್ರೀಮದ್ರಾಮಾಯಣದ ಅಂತರಾರ್ಥವನ್ನನುಸರಿಸಿ ಮನುಷ್ಯ ಶರೀರದಲ್ಲಿರುವ ವೇದತತ್ವಪ್ರತಿಪಾದನೆ. (೭) ವೇದಾರ್ಥ ವಿಚಾರ (೮) ವೇದಾಧಿಕಾರದ ವಿಚಾರ.

---

## ೧ ವೇದದ ಕಾಲ.

ವೇದವೆಂಬುದು ಪರಬ್ರಹ್ಮನಿಂದ ಹೊರಟ ಓಂಕಾರ ಸ್ವರದಿಂದ ಉದಯಿಸಿ ಇಚ್ಛಾ ಜ್ಞಾನ ಕ್ರಿಯಾ ಶಕ್ತಿಗಳ ಸ್ವರೂಪವಾಗಿ ಋಗ್ಯಜುಸ್ಸಾಮಾಥರ್ವಣಗಳೆಂಬ ವಿಭಾಗವಾಗಿರುವುದನ್ನು ವೀಣೆಯ ತಂತಿಗಳಿಗೆ ಅನ್ವಯಮಾಡಿ ಪ್ರಥಮ ಪ್ರಕರಣದಲ್ಲಿ ತಿಳಿಸಿದೆ. ಅಲ್ಲದೆ ಎರಡನೆಯ ಪ್ರಕರಣದಲ್ಲಿ ಗಾಯತ್ರೀಮಂತ್ರದ 'ಸವಿತುಃ' ಪದವಿರುವ ವೀಣೆಯ ಮನೆಯಲ್ಲಿನ ಸ್ವರ ಮತ್ತು ಶ್ರುತಿಗಳಿಗೆ ಅನ್ವಯಿಸಿ ಬರೆದಿರುವ 'ಛಂದೋವತೀ' ಶ್ರುತಿಯ ತತ್ವಾರ್ಥದಲ್ಲಿಯೂ ವೇದವೆಂಬುದು ಅವ್ಯಕ್ತವಾಗಿದ್ದಾಗ ಪರಬ್ರಹ್ಮವಾಗಿದ್ದು ಸೃಷ್ಟಿಕಾಲದಲ್ಲಿ ವ್ಯಕ್ತಸ್ಥಿತಿಯನ್ನು ಪಡೆಯುವುದೆಂದೂ ತಿಳಿಸಿರುವುದು. ಜಗತ್ಸೃಷ್ಟಿಕಾಲದಲ್ಲಿಯೇ ವೇದವು ಉದಯಿಸಿತೆಂಬ ಈ ಮೇಲಿನ ತತ್ವಸಮರ್ಥನೆಗೆ 'ಯೋವೇದಾದೌ ಸ್ವರಃ ಪ್ರೋಕ್ತೋ ವೇದಾಂತೇಚ ಪ್ರತಿಷ್ಠಿತಃ' ಮತ್ತು 'ಯಸ್ಯ ನಿಶ್ವಸಿತಂ ವೇದಾಯೋವೇದೇಭ್ಯೋಖಿಲಂ ಜಗತ್' ಮುಂತಾಗಿ ಅನೇಕ ಆಧಾರ ವಾಕ್ಯಗಳನ್ನು ಹಿಂದಿನ ಪ್ರಕರಣಗಳಲ್ಲಿ ಕೊಟ್ಟು ವಿವರಿಸಿರುವುದು. ಆದುದರಿಂದ ಜಗದುತ್ಪತ್ತಿ ಕಾಲದಲ್ಲಿಯೇ ವೇದವು ಆವಿರ್ಭವಿಸಿತೆಂಬುದು ವೀಣೆಯ ಅಂತರಾರ್ಥದಿಂದಲೂ ದೃಢೀಕರಿಸಲ್ಪಟ್ಟ ವಿಚಾರವಾಗಿದೆ.

ಹಾಗಾದರೆ ಈಗ ಪ್ರಚುರವಾಗಿರುವ ಮಂತ್ರಗಳು ವೇದಸ್ವರೂಪವಲ್ಲವೇ ? ಈ ಮಂತ್ರಗಳು ಯಾವ ಕಾಲದಲ್ಲಿ ಪ್ರಚಾರಕ್ಕೆ ಬಂದುವೆಂಬ ವಿಚಾರವನ್ನು ತೆಗೆದುಕೊಳ್ಳೋಣ. ವೇದಮಂತ್ರಗಳು ವೇದವೇ ಆಗಿರುವುವು. ವೇದಮಂತ್ರಗಳೆಲ್ಲವೂ ಮಂತ್ರಕ್ಕೆ ಮೂಲವಾದ ಇಚ್ಛಾ, ಜ್ಞಾನ, ಕ್ರಿಯಾಶಕ್ತಿಗಳ ಸ್ವರೂಪವಾದ ಅವ್ಯಕ್ತನಾದದ ವ್ಯಕ್ತಾಕ್ಷರಗಳು ಜಗತ್ಕರ್ತನಾದ ಈಶ್ವರನ ಜ್ಞಾನಭಂಡಾರದ ವ್ಯಕ್ತಸ್ವರೂಪವು. ಕಾರಣವಾದ ಪರಬ್ರಹ್ಮನಿಂದ ಕಾರ್ಯರೂಪವಾದ ಪ್ರಪಂಚವು ಉಂಟಾಗಿರುವಂತೆ ಕಾರಣವಾದ ಮೂಲಜ್ಞಾನ ಭಂಡಾರದ ಕಾರ್ಯರೂಪವೇ ಮಂತ್ರಗಳು. ಆದುದರಿಂದ ವೇದಮಂತ್ರಗಳು ವೇದಶಕ್ತಿಗಿಂತ ಭಿನ್ನವಲ್ಲ. ವೇದಶಕ್ತಿಯು ಜಗನ್ಮಯವಾಗಿರುವ ನಿಯಮದಂತೆ ವೇದಮಂತ್ರಗಳೂ ಜಗತ್ಸೃಷ್ಟಿಕಾಲದಲ್ಲಿ ಮಾನವರ ಉದ್ಧಾರಕ್ಕೋಸ್ಕರ ಈಶ್ವರನ ಕಟ್ಟಳೆಯಂತೆ ಪ್ರಾಪ್ತವಾದವು.

ಈ ವೇದಮಂತ್ರಗಳ ಕಾಲದ ವಿಚಾರದಲ್ಲಿ ಆಧುನಿಕ ಗ್ರಂಥಗಳಲ್ಲಿ ಭಿನ್ನಾಭಿಪ್ರಾಯಗಳಿವೆ. ಮ್ಯಾಕ್ಸ್‌ಮುಲ್ಲರ್ ಎಂಬ ಪಾಶ್ಚಾತ್ಯನು ಕ್ರಿಸ್ತಪೂರ್ವ ೧೨೦೦ರಲ್ಲಿ ಎಂದರೆ ಈಗ್ಯೆ ಸುಮಾರು ೩೦೦೦ ವರ್ಷಗಳಲ್ಲಿಯೂ, ಹ್ಯಾಂಗ್ ಎಂಬಾತನು ಕ್ರಿಸ್ತಪೂರ್ವ ೨೪೦೦ರಲ್ಲೆಂದರ, ಈಗ್ಯೆ ಸುಮಾರು ೪೩೦೦ ವರ್ಷಗಳಲ್ಲಿಯೂ, ಬಾಲಗಂಗಾಧರ ತಿಲಕರು ಕ್ರಿಸ್ತಪೂರ್ವ ೪೦೦೦ದಲ್ಲೆಂದರೆ ಈಗ್ಯೆ ೬೦೦೦ ವರ್ಷಗಳ ಸುಮಾರಿನಲ್ಲಿಯೂ ಋಗ್ವೇದವು ರಚನೆಯಾಯಿತೆಂದು ಹೇಳಿರುವರು.*

ಜಗತ್ಸೃಷ್ಟ್ಯಾದಿಯಿಂದ ಈ ಆಧುನಿಕರ ಅಭಿಪ್ರಾಯದ ಕಾಲದವರೆಗೂ ವೇದಮಂತ್ರವು ಇರಲಿಲ್ಲವೆಂದೇ ಆಯಿತು. ಇದು ಸಮಂಜಸವಾಗಿ ಕಂಡುಬರುವುದಿಲ್ಲ ಜಗತ್ಸೃಷ್ಟಿಯು ಯಾವ ಕಟ್ಟಳೆಯಿಂದ ಉಂಟಾಗಿರುವುದೋ ಅದೇ ಕಟ್ಟಳೆಯಂತೆ ವೇದಮಂತ್ರವೂ ಸೃಷ್ಟಿಕಾಲದಲ್ಲಿಯೇ ಪ್ರಚುರಕ್ಕೆ ಬರುವುದು. ಜಗತ್ತು ಯಾವ ಕಟ್ಟಳೆಯಿಂದ ಪರಬ್ರಹ್ಮನಲ್ಲಿ ಲಯವನ್ನು ಹೊಂದುವುದೋ ಆ ಕಾಲದಲ್ಲಿಯೇ ವೇದಮಂತ್ರಗಳೂ ಲಯದ ನಿಯಮವನ್ನನುಸರಿಸಿ ಪರಬ್ರಹ್ಮನಲ್ಲಿ ಅಡಗುವುವು. ಆದುದರಿಂದ ಜಗತ್ಸೃಷ್ಟಿಕಾಲದಿಂದ ಆಧುನಿಕರ ವೇದನಿರ್ಣಯ ಕಾಲವೆನಿಸುವವರೆಗೂ ವೇದಮಂತ್ರಗಳು ಪ್ರಚಾರದಲ್ಲಿ ಇದ್ದೇ ಇದ್ದುವು.

ಜಗತ್ಸೃಷ್ಟಿಕಾಲವೂ ಶಬ್ದಬ್ರಹ್ಮಸ್ವರೂಪವಾದ ವೇದಮಂತ್ರಗಳ ಕಾಲವೂ ಒಂದೇಯೆಂದು ತಿಳಿಸಿತಷ್ಟೆ! ಕಾಲದ ಸ್ವರೂಪವೇನು ಮತ್ತು

*ಪ್ರೊಫೆಸರ್ ಹೆಚ್. ಎನ್. ರಾಘವೇಂದ್ರಾಚಾರ್ಯರ "ಭಾರತೀಯ ತತ್ವಶಾಸ್ತ್ರಸಂಗ್ರಹ"

ಕಾಲವೆಂಬುದು ಏತರಿಂದುಂಟಾಗುವುದು ಎಂಬುದನ್ನು ಪ್ರಥಮದಲ್ಲಿ ಅರಿತರೆ ವೇದಕಾಲವು ಬಹು ಸುಲಭವಾಗಿ ಗೊತ್ತಾಗುವುದು ಕಾಲಕ್ಕೆ ಪ್ರತ್ಯೇಕವಾದ ಸ್ವರೂಪವಿಲ್ಲ. ಕ್ರಿಯಾಪರಿಮಾಣಗಳ ಲೆಕ್ಕವಿಡುವುದಕ್ಕೆ 'ಕಾಲ' ವೆಂದು ಹೆಸರು. ಸೃಷ್ಟಿಕಾಲವೆಂದರೆ:—ಸೃಷ್ಟಿಕ್ರಿಯೆ ಮತ್ತು ಸೃಷ್ಟಿಯ ಸ್ಥೂಲಪರಿಮಾಣಗಳನ್ನು ಗೊತ್ತುಮಾಡಿ ಲೆಕ್ಕವಿಡುವುದು 'ಕಾಲ' ಎಂದೆನಿಸುವುದು. ಇದರಂತೆ ಬಾಲ್ಯ, ಯೌವನ, ವಾರ್ಧಿಕ್ಯಗಳೆಂಬ ಅವಸ್ಥೆಗಳ ಕ್ರಿಯಾಮಾನಗಳ ಲೆಕ್ಕವೇ ಕಾಲವೆನ್ನಲ್ಪಡುವುದು ಸಂಗೀತಶಾಸ್ತ್ರದಲ್ಲಿ ತಾಳದ ಘಾತ ಮತ್ತು ಕ್ರಿಯೆಗಳನ್ನು ನಿರ್ಣಯಿಸುವುದಕ್ಕೆ ಕಾಲವೆಂದು ಹೆಸರು. ಆದುದರಿಂದ ಕ್ರಿಯಾಪರಿಮಾಣಗಳನ್ನು ಲೆಕ್ಕವಿಡುವುದಕ್ಕೆ ಕಾಲವೆಂದು ಹೆಸರು. ನಮಗೆ ಒಂದು ಹಗಲು ಮತ್ತು ರಾತ್ರಿಯಾದರ ಒಂದು ದಿನದ ಕಾಲವೆಂದು ಕರೆಯಲ್ಪಡುವುದು. ಸೂರ್ಯನ ಪ್ರಕಾಶವನ್ನನುಸರಿಸಿ ನಮಗೆ ಹಗಲುರಾತ್ರಿಗಳಾಗುವುವು. ಹಗಲು ರಾತ್ರಿಗಳಾಗುವ ಕಾರ್ಯವು ಯಾವ ಆಧಾರದಮೇಲೆ ನಿಂತಿರುವುದೆಂಬುದನ್ನು ಯೋಚಿಸಬೇಕು ಸಾಕ್ಷಾತ್ ದೇವ ಮತ್ತು ದೇವಜನನಿಯಾದ ಗಾಯತ್ರೀದೇವಿಯ ಆಧಾರದ ಮೇಲೆಯೇ ಸೂರ್ಯನ ಉದಯಾಸ್ತಗಳುಂಟಾಗಿ ಅಹೋರಾತ್ರಿಗಳೆಂದು ಕರೆಯಲ್ಪಡುವುವು ಹೇಗೆಂದರೆ – ಮಧ್ಯರಾತ್ರಿಯಿಂದ ಮರುದಿನ ಮಧ್ಯರಾತ್ರಿಯವರೆಗಿರುವ ಕಾಲಚಕ್ರವು ಗಾಯತ್ರೀ ೨೪ ಅಕ್ಷರಗಳ ತತ್ವದ ಮೇಲೆಯೇ ನಿಂತಿರುವುದು

೧. ಮಧ್ಯರಾತ್ರಿಯಿಂದ ಮಧ್ಯಾಹ್ನದವರೆಗ ದೈನಂದಿನ ಕಾಲಚಕ್ರದ ಅಭಿವೃದ್ಧಿ.

| **ಮಧ್ಯರಾತ್ರಿ** | **ಪ್ರಾತಃಕಾಲ** | **ಮಧ್ಯಾಹ್ನ** |
|---|---|---|
| ತತ್ ೧ | ಸ ವಿ ತುಃ ವ ರೇ ಣಿ<br>೨ ೩ ೪ ೫ ೬ ೭ | ಯಂ ಭ ರ್ಗಃ ದೇ ವ ಸ್ಯ<br>೮ ೯ ೧೦ ೧೧ ೧೨ ೧೩ |
| ಸೃಷ್ಟಿಪೂರ್ಣ | | ವ್ಯಾಪಾರಾಭಿವೃದ್ಧಿ |

೨. ಮಧ್ಯಾಹ್ನದಿಂದ ಮಧ್ಯರಾತ್ರಿಯವರೆಗೆ ದೈನಂದಿನ ಕಾಲಚಕ್ರದ ಕ್ಷೀಣತೆ.

| | **ಸಾಯಂಕಾಲ** | **ಮಧ್ಯರಾತ್ರಿಗೆ** —> |
|---|---|---|
| ಧೀ ಮ ಹಿ ಧಿ ಯೋ ಯೋ<br>೧೪ ೧೫ ೧೬ ೧೭ ೧೮ ೧೯ | | ನಃ ಪ್ರ ಚೋ ದ ಯಾತ್<br>೨೦ ೨೧ ೨೨ ೨೩ ೨೪ |
| ವ್ಯಾಪಾರ ಲಯ | | ಸೃಷ್ಟಿಯೂ ಲಯ |

ಅಂದರೆ ಮಧ್ಯರಾತ್ರಿಯ ಕಾಲವೇ ಗಾಯತ್ರೀಮಂತ್ರದಲ್ಲಿನ 'ತತ್' ಪ್ರತಿಪಾದ್ಯವಾದ ಸ್ವಯಂಪ್ರಕಾಶವಾದ ಪರಬ್ರಹ್ಮ ಒಂದೇ ಇರುವ ಸ್ಥಿತಿಯ ತತ್ವವಾಗಿದೆ. ಮಧ್ಯರಾತ್ರಿಯಿಂದ ಮುಂದಕ್ಕೆ ಕ್ರಮೇಣ ಸೃಷ್ಟಿಗೆ ಪ್ರಾರಂಭವಾಗಿ ಪ್ರಾತಃಕಾಲದವರೆಗೆ ಸೃಷ್ಟಿಕಾರ್ಯವೂ ಪೂರ್ಣವಾಗುವುದು. ಪ್ರಾತಃಕಾಲದಿಂದ ವ್ಯಾಪಾರಪ್ರಾರಂಭವಾಗಿ ಮಧ್ಯಾಹ್ನಕ್ಕೆ ವ್ಯಾಪಾರದ ಉನ್ನತಸ್ಥಿತಿಯುಂಟಾಗುವುದು. ಮಧ್ಯಾಹ್ನದಿಂದ ಸಾಯಂಕಾಲದವರೆಗೆ ವ್ಯಾಪಾರದ ಲಯ. ಸಾಯಂಕಾಲದಿಂದ ಮಧ್ಯರಾತ್ರಿಯವರೆಗೆ ಸೃಷ್ಟಿಯೂ ಲಯವಾಗುವುದು. ಈ ತತ್ವಗಳನ್ನನುಸರಿಸಿ ಹಗಲುರಾತ್ರಿಗಳಾಗಿ ದೈನಂದಿನ ಕಾಲಚಕ್ರವು ನಡೆಯುತ್ತಿದೆ.

ಈ ತತ್ವದ ವಿವರಣೆಯು ಇನ್ನೂ ಹೇಗೆಂದರೆ:— ಸ್ವಯಂಪ್ರಕಾಶನಾದ 'ತತ್' ಪ್ರತಿಪಾದ್ಯನಾದ ಪರಬ್ರಹ್ಮನಿಂದ ಅಗ್ನಿರೂಪವು ಪ್ರಥಮದಲ್ಲಿ ಉದಯಿಸುವುದು ಇದೇ ಋಗ್ವೇದ, ಜ್ಞಾನಶಕ್ತಿ. ಅಗ್ನಿಯು ಸ್ಫುಟವಾಗಲು ವಾಯುವಿನ ಸಹಾಯವಿರುವುದು ಇದೇ ಯಜುರ್ವೇದ, ಕ್ರಿಯಾಶಕ್ತಿ. ಅಗ್ನಿಯು ಸ್ಫುಟವಾಗುತ್ತ ಜ್ವಾಲೆಗೆ ಪ್ರಾರಂಭವಾಗಿ ಉನ್ನತಸ್ಥಿತಿಯನ್ನು ಪಡೆಯುವುದು. ಇದೇ ಸೂರ್ಯರೂಪ, ಸಾಮವೇದ, ಇಚ್ಛಾಶಕ್ತಿ. ಅಂದರೆ ಸೂರ್ಯನ ಪ್ರಥಮರೂಪವಾದ ಅಗ್ನಿಯು ಸ್ವಯಂಪ್ರಕಾಶವಾದ ಪರಬ್ರಹ್ಮನಿಂದ ಉದಯಿಸಿ ಸ್ಫುಟವಾಗುತ್ತಾ ಸೂರ್ಯೋದಯಕಾಲದ ತತ್ವಕ್ಕೆ ಬರುವುದು. ಸೂರ್ಯೋದಯಾನಂತರ ಜ್ವಾಲೆಯು (ಕಿರಣವು) ಪ್ರಾರಂಭವಾಗಿ ಉನ್ನತಸ್ಥಿತಿಯನ್ನು ಪಡೆಯುವುದು. ಮಧ್ಯಾಹ್ನದಿಂದ ಜ್ವಾಲೆಯು ತಗ್ಗುತ್ತಾ ಸಾಯಂಕಾಲಕ್ಕೆ ಪುನಃ ಅಗ್ನಿರೂಪವನ್ನು ಹೊಂದಿ, ಅನಂತರ ಅಗ್ನಿರೂಪವೂ ಕ್ಷಯಿಸುತ್ತಾ ಮಧ್ಯರಾತ್ರಿಗೆ ಸ್ವಯಂಪ್ರಕಾಶವಾದ ಪರಬ್ರಹ್ಮ ಒಂದೇ ಇರುವ ಸ್ಥಿತಿಯ ತತ್ವವಾಗಿರುವುದು ಜಗತ್ಸೃಷ್ಟಿಸ್ಥಿತಿಲಯಗಳಲ್ಲಿ ಉಂಟಾಗುವ ಈ ನಿಯಮವನ್ನನುಸರಿಸಿ ಸೂರ್ಯನ ದೈನಂದಿನ ಪರಿಸ್ಪಂದವೂ ಉಂಟಾಗುವುದು. ಆದುದರಿಂದ ದೈನಂದಿನ ಕಾಲಚಕ್ರದ ತತ್ವವೂ ಗಾಯತ್ರೀ ಆಧಾರದಮೇಲೆಯೇ ನಿಂತಿರುವುದು. ಮೇಲೆ ಬರೆದಿರುವ ಗಾಯತ್ರೀ ಮಂತ್ರದಲ್ಲಿರುವ ಸೃಷ್ಟಿ ಸ್ಥಿತಿ ಲಯ ಪ್ರತಿಪಾದಕವಾದ ಅರ್ಥಗಳ ವಿವರಣೆಗಳು ೨ ನೆಯ ಪ್ರಕರಣದಲ್ಲಿಯೂ, ಸಂಧ್ಯಾವಂದನೆಯ ತತ್ವದಲ್ಲಿಯೂ, ರಾಮಾಯಣದ ಅಂತರಾರ್ಥಗ್ರಂಥದಲ್ಲಿಯೂ, ವಿವರವಾಗಿ ಬಂದಿರುವುವು

ಮಧ್ಯರಾತ್ರಿಯಿಂದ ಮರುದಿನ ಮಧ್ಯರಾತ್ರಿಯವರೆಗೆ ಇರುವ ಕಾಲವು (ಒಂದು ದಿನ) ಗಾಯತ್ರೀ ೨೪ ಅಕ್ಷರಗಳ ಮೇಲಿರುವುದೆಂದು ತಿಳಿಸಿತು. ಗಾಯತ್ರೀ ೨೪ ಅಕ್ಷರಗಳಿಗೆ ೨೪ ಘಂಟೆಗಳ ಕಾಲನಿರ್ಣಯವಾಗಿರುವುದೆಂದು ಏತಕ್ಕೆ ಭಾವಿಸ

ಬಾರದೆಂದರೆ-ವ್ಯಾಹೃತಿ ಇಲ್ಲದೆ ಗಾಯತ್ರೀ ಇಲ್ಲ. ವ್ಯಾಹೃತಿಯ ತತ್ವವೂ ಗಾಯತ್ರಿಯೊಡನೆ ಇದ್ದೇ ಇರಬೇಕು. ವ್ಯಾಹೃತಿಯ ಶಕ್ತಿಗಳನ್ನನುಸರಿಸಿರುವುದೇ ಸ್ವರಗಳು. ಗಾಯತ್ರೀಮಂತ್ರ ಮತ್ತು ಸ್ವರಗಳನ್ನು ಕೊಟ್ಟು ಕಾಲಚಕ್ರದ ಸ್ವರೂಪವನ್ನು ಕೆಳಗೆ ವಿವರಿಸಿರುವುದು. ಈ ವಿವರಣವು ವೀಣೆಯಚಿತ್ರದಲ್ಲಿ ತೋರಿಸಿರುವುದಕ್ಕೆ ಸರಿಯಾಗಿ ಅನ್ವಯವಾಗುವುದು. ಇದರಿಂದ ಶಾಸ್ತ್ರದಲ್ಲಿ ತಿಳಿಸುವ ಮುಹೂರ್ತ, ಘಳಿಗೆ, ಮುಂತಾದವುಗಳೇ ಕಾಲಕ್ಕೆ ಪ್ರಮಾಣಗಳಾಗಿವೆ.



ಆದುದರಿಂದ ಗಾಯತ್ರೀ ೨೪ ಅಕ್ಷರಗಳನ್ನು ಅನುಸರಿಸಿ ೨೪ ಘಂಟೆಗಳೆಂಬುದು ಹುಟ್ಟಿಲ್ಲ. ಒಂದು ದಿನವನ್ನು ೩೦ ಮುಹೂರ್ತ (೬೦ ಘಳಿಗೆ) ಗಳಾಗಿ ಶಾಸ್ತ್ರದಲ್ಲಿ ವಿಂಗಡಿಸಿದೆ. ದೈನಂದಿನ ಕಾಲಚಕ್ರವು ಸರಪಣಿಯಂತೆ ಕೂಡಿಕೊಂಡು ವಾರ, ಪಕ್ಷ, ಮಾಸ, ಋತು, ಸಂವತ್ಸರಗಳಾಗುವುವು. ಇವುಗಳೂ ಈ ಕೆಳಗೆ ಕೊಟ್ಟಿರುವ ವಿವರದಂತೆ ಗಾಯತ್ರೀ ಮತ್ತು ವೇದಗಳ ಆಧಾರದ ಮೇಲೆಯೇ ನಿಂತಿರುವುವು.

**೧ ನೆಯದು:—** ಮಧ್ಯರಾತ್ರಿಯಿಂದ ಮಧ್ಯಾಹ್ನದವರೆಗೆ ಆಗುವ ೧೫ **ಮುಹೂರ್ತಕ್ಕೂ, ಶುಕ್ಲ**ಪಕ್ಷದ ೧೫ ದಿನಗಳಿಗೂ, ಪ್ರತಿ ಋತುವಿನ ಪ್ರಥಮಾರ್ಧಕ್ಕೂ ಅನ್ವಯವು. ಈ **ಕಾಲವು** ಆರೋಹಣ ಕ್ರಮವೆಂದರೆ **ಕಳಾಭಿವೃದ್ಧಿಯು**

| ಮಧ್ಯರಾತ್ರಿಯಿಂದ ಮಧ್ಯಾಹ್ನದ ವರೆಗೆ ಇರುವ ೧೫ ಮುಹೂರ್ತ | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ |
|---|---|---|---|---|---|---|---|---|---|---|---|---|---|---|---|
| ಶುಕ್ಲಪಕ್ಷದ ತಿಥಿಗಳು | ಪಾಡ್ಯ. | ಬಿ | ತ | ಚೌ | ಪಂ | ಷ | ಸ | ಅ | ನ | ದ | ಏ | ದ್ವಾ | ತ್ರ | ಚ | ಪೂರ್ಣಿಮ |
| ಸ್ವರಗಳು | ರಿ | ರಿ | ರಿ | ಗ | ಗ | ಗ | ಮ | ಮ | ಪ | ಧ | ಧ | ಧ | ನಿ | ನಿ | ನಿ |
| ಋತುಗಳು | ವಸಂತ | | | ಗ್ರೀಷ್ಮ | | | | ವರ್ಷ | ಶರತ್ | ಹೇಮಂತ | | | ಶಿಶಿರ | | |
| ಗಾಯತ್ರೀಮಂತ್ರ | ಸವಿತುಃ | | | | | | ವರೇ | ಣಿಯಂ | | ಭರ್ಗಃ | | | ದೇವಸ್ಯ | | |

**೨ ನೆಯದು :—** ಮಧ್ಯಾಹ್ನದಿಂದ ಮಧ್ಯರಾತ್ರಿಯವರೆಗೆ ಆಗುವ ೧೫ ಮುಹೂರ್ತಕ್ಕೂ, ಕೃಷ್ಣಪಕ್ಷದ ೧೫ ದಿನಗಳಿಗೂ, ಪ್ರತಿ ಋತುವಿನ ದ್ವಿತೀಯಾರ್ಧಕ್ಕೂ ಅನ್ವಯವು. ಈ **ಕಾಲವು** ಅವರೋಹಣ ಕ್ರಮವೆಂದರೆ **ಕಳಾಕ್ಷೀಣತೆಯು.**

| ಮಧ್ಯಾಹ್ನದಿಂದ ಮಧ್ಯ ರಾತ್ರಿವರೆಗೆ ಇರುವ ೧೫ ಮುಹೂರ್ತ | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ |
|---|---|---|---|---|---|---|---|---|---|---|---|---|---|---|---|
| ಕೃಷ್ಣಪಕ್ಷದ ತಿಥಿಗಳು | ಪಾಡ್ಯ | ಬಿ | ತ | ಚೌ | ಪಂ | ಷ | ಸ | ಅ | ನ | ದ | ಏ | ದ್ವಾ | ತ್ರ | ಚ | ಅಮಾವಾಸ್ಯಾ |
| ಸ್ವರಗಳು | ರಿ | ರಿ | ರಿ | ಗ | ಗ | ಗ | ಮ | ಮ | ಪ | ಧ | ಧ | ಧ | ನಿ | ನಿ | ನಿ |
| ಋತುಗಳು | ವಸಂತ | | | ಗ್ರೀಷ್ಮ | | | | ವರ್ಷ | ಶರತ್ | ಹೇಮಂತ | | | ಶಿಶಿರ | | |
| ಗಾಯತ್ರೀಮಂತ್ರ | ಧೀಮಹಿ | | | | | | ಧಿಯೋ | ಯೋನಃ | | ಪ್ರಚೋದಯಾತ್ | | | | | |

ಒಂದು ಋತು ಧರ್ಮವು ಪ್ರಾರಂಭವಾಗಿ ಪ್ರಥಮ ಮಾಸದಲ್ಲಿ ಕಳಾಭಿವೃದ್ಧಿಯಾಗುತ್ತಾ ದ್ವಿತೀಯ ಮಾಸದಲ್ಲಿ ಕಳಾಕ್ಷೀಣತೆಯನ್ನು ಹೊಂದುತ್ತಾ ಅನಂತರ ಋತುಧರ್ಮವೇ ಲಯವಾಗುವುದು. ಇದರಂತೆಯೆ ದಿನ, ಮಾಸ, ಸಂವತ್ಸರ, ಯುಗ, ಕೊನೆಗೆ ಪ್ರಪಂಚದ ಉತ್ಪತ್ತಿಲಯ (ಆರೋಹಣ ಅವರೋಹಣ) ಕ್ರಮಗಳ ತತ್ವಗಳನ್ನೆಲ್ಲಾ ಮೇಲೆ ಕೊಟ್ಟಿರುವ ಪಟ್ಟಿಯು ಒಳಗೊಂಡಿದೆ.

ಅಮಾವಾಸ್ಯೆ ಶುಕ್ಲಪಕ್ಷದ ವಾದ್ಯಗಳೂ, ಪೂರ್ಣಿಮಾ ಕೃಷ್ಣಪಕ್ಷದ ವಾದ್ಯಗಳೂ ಸರಪಣಿಯಂತೆ ಸೇರಿಕೊಂಡು ಕಾಲಚಕ್ರರೂಪವಾಗಿ ತಿರುಗುತ್ತಲೇ ಇವೆ 'ಷಡ್ಜ'ಸ್ವರವು ಇತರ ಎಲ್ಲಾ ಸ್ವರಗಳಿಗೂ ಆಶ್ರಯವಾಗಿಯೂ ಆಧಾರವಾಗಿ ತಳಪಾಯದಂತೆಯೂ ಇರುವುದರಿಂದ ಎಲ್ಲಾ ಸ್ವರಗಳಲ್ಲಿಯೂ ಅಂತರ್ಭೂತವಾಗಿದೆ. ದಿನಕ್ಕೆ ಅಹೋರಾತ್ರಿ, ಮಾಸಕ್ಕೆ ಶುಕ್ಲಕೃಷ್ಣಪಕ್ಷಗಳು, ಹೇಗಿರುವುವೋ ಹಾಗೆ ಸಂವತ್ಸರಕ್ಕೆ ಉತ್ತರಾಯಣ ದಕ್ಷಿಣಾಯನಗಳೆರಡಿರುವುವು. ಉತ್ತರಾಯಣವು ಹಗಲಿನ ತತ್ವದಲ್ಲಿಯೂ, ದಕ್ಷಿಣಾಯನವು ರಾತ್ರಿಯ ತತ್ವದಲ್ಲಿಯೂ ಇರುವುವು ದಿನ, ಪಕ್ಷ, ಮಾಸ, ಸಂವತ್ಸರಗಳು ಹೇಗೆ ಗಾಯತ್ರೀಮಂತ್ರ ಮತ್ತು ಗಾಯತ್ರೀ ಅಂಗಭೂತವಾದ ವ್ಯಾಹೃತಿಗಳ ತತ್ವವಾದ ಸಪ್ತಸ್ವರಗಳ ಆಧಾರದಮೇಲೆ ಇರುವುವೋ ಹಾಗೆಯೇ ವಾರಗಳ ಶಕ್ತಿಯೂ ಸಪ್ತಮಾತೃಕಾಶಕ್ತಿಯ ತತ್ವದಮೇಲೆಯೇ ನಿಂತಿರುವುದು ಬ್ರಾಹ್ಮೀ - ಭಾನುವಾರ, ಮಾಹೇಶ್ವರೀ - ಸೋಮವಾರ, ಕೌಮಾರೀ - ಮಂಗಳವಾರ, ವೈಷ್ಣವೀ - ಬುಧವಾರ, ವಾರಾಹೀ - ಗುರುವಾರ, ಇಂದ್ರಾಣೀ - ಶುಕ್ರವಾರ, ಚಾಮುಂಡಾ - ಶನಿವಾರ. ಮುಖ್ಯವಾಗಿ ಸರ್ವ ಕಾಲಚಕ್ರವೂ ಗಾಯತ್ರೀ ಆಧಾರದಮೇಲೆಯೇ ನಿಂತಿದೆ.

ಅಲ್ಲದೆ ಮನುಷ್ಯನ ಒಂದು ದಿವಸವನ್ನೊಂದರೆ ೩೦ ಮುಹೂರ್ತಗಳನ್ನು ಕ್ಷಣ, ಕಲಾ, ಕಾಷ್ಠೆಗಳ ಅಂತರ್ವಿಭಾಗಗಳನ್ನಾಗಿ ಮಾಡಿದೆ ಅಂದರೆ ಒಂದು ದಿನಕ್ಕೆ ೫೮,೩೨,೦೦೦ ಕಾಷ್ಠೆಗಳಾಗುವುವು. ಮುಖ್ಯವಾಗಿ 'ಅಣೋರಣೀಯಾನ್ ಮಹತೋಮಹೀಯಾನ್' ಎಂಬಂತೆ ಅಣುವಿಗೆ ಅಣುವಾದ ಕಾಲಚಕ್ರವೂ ದಿನ, ಮಾಸ, ಸಂವತ್ಸರ ಮೊದಲುಗೊಂಡು ಬಹುದೊಡ್ಡ ಕಾಲವೆನಿಸುವ ಮಹಾಪ್ರಳಯ ರೂಪವಾದ ಕಾಲಚಕ್ರವೂ ಜಗಜ್ಜನನಿಯಾದ ಗಾಯತ್ರೀತತ್ವದ ಮೇಲೆಯೇ ನಿಂತಿವೆ.

ದಿನ, ಪಕ್ಷ, ಮಾಸ, ಸಂವತ್ಸರಗಳು ಯಾವ ಆಧಾರದ ಮೇಲೆ ನಿಂತಿವೆ ಯೆಂಬುದನ್ನು ಇದುವರೆಗೂ ವಿವರಿಸಲ್ಪಟ್ಟಿತು ಗಾಯತ್ರೀತತ್ವದ ಕಾಲಸಂಖ್ಯೆಯನ್ನನುಸರಿಸಿ ಸೂರ್ಯನು ಕಾಲಚಕ್ರದಲ್ಲಿ ಸಂಚರಿಸುವುದರಿಂದ ಮನುಷ್ಯ

ಮಾನಪ ೩೬೦ ದಿವಸಗಳು ಒಂದು ಸಂವತ್ಸರವಾಗುವ ತತ್ವವಾಗಿರುವುದು. ಮನುಷ್ಯಮಾನದಿಂದ ದೇವತೆಗಳಮಾನಕ್ಕೆ ಹೋಗೋಣ ಮನುಷ್ಯನ ಒಂದು ಸಂವತ್ಸರವು ದೇವತೆಗಳಿಗೆ ಅಹೋರಾತ್ರಿಯೆಂದರೆ ಒಂದು ದಿನ. ದೇವತೆಗಳ ಒಂದುಸಂವತ್ಸರಕ್ಕೆ ಮನುಷ್ಯರದು ೩೬೦ ಸಂವತ್ಸರಗಳು. ೧೨೦೦ ದೇವಸಂವತ್ಸರಗಳಾದರೆ ದೇವತೆಗಳಿಗೆ ಒಂದು ಯುಗವು. ಅಂದರೆ ಮನುಷ್ಯನ ೪,೩೨,೦೦೦ ಸಂವತ್ಸರಗಳು. ಇದೇ ಕಲಿಯುಗದ ಮಾನ. ದ್ವಾಪರ ೮,೬೪,೦೦೦, ತ್ರೇತಾ ೧೨,೯೬,೦೦೦, ಕೃತಯುಗ ೧೭,೨೮,೦೦೦ ಮನುಷ್ಯಸಂವತ್ಸರಗಳು. ಚತುರ್ಯುಗಗಳ ಕಾಲಚಕ್ರವೂ ಚತುರ್ವೇದಗಳ ಆಧಾರದ ಮೇಲೆಯೇ ನಿಂತಿರುವುದು. ಚತುರ್ಯುಗಗಳಿಗಿರುವ ಕಾಲದ ತಾರತಮ್ಯಗಳು ಚತುರ್ವೇದಶಕ್ತಿಗಳ ತಾರತಮ್ಯವನ್ನೇ ಅನುಸರಿಸಿರುವುವು. ಚತುರ್ಯುಗಗಳು ಒಂದಾವರ್ತಿಯಾದರೆ (೪೩,೨೦,೦೦೦ ಮನುಷ್ಯಸಂವತ್ಸರಗಳಾದರೆ) ಮಹಾಯುಗವೆನಿಸಿಕೊಳ್ಳುವುದು. ಇಂತಹ ಮಹಾಯುಗಗಳು ೧೦೦೦ ವಾದರೆ ಚತುರ್ಮುಖಬ್ರಹ್ಮನಿಗೆ ಒಂದು ಹಗಲು. ಇದೇ ಉದಯಕಲ್ಪ ಪುನಃ ಅಷ್ಟೇ ಆದರೆ ಬ್ರಹ್ಮನಿಗೆ ಒಂದುರಾತ್ರಿ. ಇದೇ ಅಸ್ತಕಲ್ಪ. ಆದುದರಿಂದ ಚತುರ್ಮುಖಬ್ರಹ್ಮನ ಉದಯಾಸ್ತಗಳಾಗುವ ೮,೬೪೦,೦೦೦,೦೦೦ ಮನುಷ್ಯಮಾನದ ಸಂವತ್ಸರಗಳು ಬ್ರಹ್ಮಾಂಡದ ಸೃಷ್ಟಿಸ್ಥಿತಿಲಯಗಳ ಕಾಲಪರಿಮಾಣಗಳಾಗಿವೆ

ಮನುಷ್ಯಮಾನದ ಪ್ರತಿ ದಿವಸದ ಹಗಲು ರಾತ್ರಿಗಳ ಕಾಲಚಕ್ರವು ಹಿಂದೆ ತಿಳಿಸಿದಂತೆ ಹೇಗೆ ಗಾಯತ್ರೀ ಆಧಾರದಮೇಲೆ ಇರುವುದೋ ಹಾಗೆಯೆ ಮನುಷ್ಯರಿಗಿಂತ ಹೆಚ್ಚಿನದಾದ ದೇವತೆಗಳ, ದೇವತೆಗಳಿಗಿಂತ ಹೆಚ್ಚಿನದಾದ ಚತುರ್ಮುಖಬ್ರಹ್ಮನ ಕಾಲಚಕ್ರಮಾನಗಳೂ ಗಾಯತ್ರೀ ಆಧಾರದಮೇಲೆಯೇ ನಿಂತಿರುವುವು ಎಂಬುದಕ್ಕೆ

ವಿಶ್ವಮಸಿ ವಿಶ್ವಾಯುಃ | ಸರ್ವಮಸಿ ಸರ್ವಾಯುಃ |

ಎಂಬ ಗಾಯತ್ರೀಮಹಿಮಾವರ್ಣನೆಯ ತೈತ್ತರೀಯ ಶ್ರುತಿವಾಕ್ಯಗಳೇ ಪ್ರಮಾಣವಾಗಿ ಇರುವುವು. ಚತುರ್ಮುಖಬ್ರಹ್ಮನೆಂದರೆ ಸೃಷ್ಟಿಕಾರ್ಯಕರ್ತ. ಬ್ರಹ್ಮಾಂಡವು ಸೃಷ್ಟಿಯಾಗಿ ಸ್ಥಿತಿಗೆ ಬಂದು ಮಹಾಪ್ರಳಯವಾಗಿ ಪರಬ್ರಹ್ಮ ಒಂದೇ ಇರುವ ಸ್ಥಿತಿಯಾಗಲು ೮,೬೪೦,೦೦೦,೦೦೦ ಸಂವತ್ಸರಗಳಾಗುವುವು. ಅಂದರೆ ಅವ್ಯಕ್ತವಾಗಿ ಪರಬ್ರಹ್ಮವಾಗಿದ್ದ ಜಗತ್ತು ಹೊರಹೊಮ್ಮಿ ಸ್ಥಿತಿಯಲ್ಲಿದ್ದು ಪುನಃ ಅವ್ಯಕ್ತಸ್ಥಿತಿಯನ್ನು ಪಡೆಯಲು ೮೬೪ ಕೋಟಿ ಸಂವತ್ಸರಗಳಾಗುವುವು. ಈ ಕಲ್ಪದಲ್ಲಿ ೭ನೆದಾದ ವೈವಸ್ವತ ಮನ್ವಂತರವು ನಡೆಯುತ್ತಿರುವುದರಿಂದ ಜಗತ್ಸೃಷ್ಟಿಯಾಗಿ ಈಗಿನವರೆಗೆ ೧೯,೬೦೮,೫೩೦,೩೬ ಸಂವತ್ಸರಗಳಾಗಿವೆ. ಆದುದರಿಂದ ಪರಬ್ರಹ್ಮದಿಂದ ಜಗತ್ಸೃಷ್ಟಿಯು ಹೊರಹೊಮ್ಮುವುದೆಂದರೆ

ಉದಯವೆಂದೇ ಅರ್ಥ. ಯಾವಾಗ ಜಗತ್ಸೃಷ್ಟಿಯಾಯಿತೋ ಅವ್ಯಕ್ತಜ್ಞಾನ ಭಂಡಾರದ ವ್ಯಕ್ತರೂಪವಾದ ವೇದಮಂತ್ರಗಳೂ ಸೃಷ್ಟಿ ಕಟ್ಟಳೆಯಂತೆ ಜಗದಾದಿಯಲ್ಲೇ ಹೊರಕ್ಕೆ ಪ್ರಚುರಕ್ಕೆ ಬರುವುವು

ಆತ್ಯಂತಿಕಪ್ರಳಯವೆನಿಸುವ ಕಲ್ಪದಲ್ಲಿಯೇ ಜಗತ್ತೆಲ್ಲವೂ ಲಯವಾಗಿ ಪರಬ್ರಹ್ಮನಲ್ಲಡಗುವುದಲ್ಲದೆ ಯುಗಗಳ ಬದಲಾವಣೆಗಳಲ್ಲಿ ಅನೇಕ ಅನಾಹುತಗಳುಂಟಾಗಿ ಭೂಭಾಗದ ಕೆಲವು ಭಾಗಗಳು ಜಲದಲ್ಲಿ ಮುಳುಗುವಿಕೆ, ಜಲದೊಳಗಿದ್ದ ಕೆಲವು ಭೂಭಾಗಗಳು ಮೇಲಕ್ಕೇರುವಿಕೆ, ಬಹುಪ್ರಜಾ ಮತ್ತು ಪ್ರಾಣಿಗಳು ಲಯವಾಗಿ ಅತ್ಯಲ್ಪ ಪ್ರಜಾಸಂಖ್ಯೆಗಳು ಉಳಿದುಕೊಳ್ಳುವಿಕೆ, ಹೀಗೆ ಉಳಿದುಕೊಂಡ ಅಲ್ಪಪ್ರಜೆಗಳ ಸ್ವಭಾವ ಮತ್ತು ನಡೆವಳಿಕೆಗಳ ವ್ಯತ್ಯಾಸಗಳುಂಟಾಗುವಿಕೆ ಮುಂತಾದ ಅಲ್ಲೋಲ ಕಲ್ಲೋಲವಾಗುವಂತಹ ಬದಲಾವಣೆಗಳು ಪ್ರಾಪ್ತವಾಗುವುವು.

ಆದುದರಿಂದ ನಾದಬ್ರಹ್ಮರೂಪವಾದ ವೇದಮಂತ್ರಗಳು ಜಗತ್ಸೃಷ್ಟಿಯಾದಾಗಿನಿಂದ ಆತ್ಯಂತಿಕ ಪ್ರಳಯದವರಗೂ ಲಯವಾಗದೆ ಯುಗಗಳು ಮಾರ್ಪಡುವ ಕಾಲದಲ್ಲಿಯೂ ಚಿರಜೀವಿಗಳಾಗಿದ್ದುಕೊಂಡು 'ಶ್ರುತಿ' ಎಂಬ ನಾಮದ ಸಾರ್ಥಕ್ಯವನ್ನು ವ್ಯಕ್ತಪಡಿಸುವ ಸೂಚನೆಯನ್ನನುಸರಿಸಿ ಜಗತ್ಸೃಷ್ಟ್ಯಾದಿಯಿಂದ ಪರಂಪರೆಯಾಗಿ ಶ್ರವಣಾಧ್ಯಯನದ ಮೂಲಕ ಬಂದು ನಿಂತಿರುವುವು. 'ಶ್ರುತಿ' ಎಂಬ ಶಬ್ದಕ್ಕೆ ವೇದಭಾಷ್ಯದಲ್ಲಿ ಕೊಟ್ಟಿರುವ ವ್ಯುತ್ಪತ್ತಿಕ್ರಮ ಹೇಗೆಂದರೆ "ಆದಿ ಸೃಷ್ಟಿಮಾರಭ್ಯಾದ್ಯಪರ್ಯಂತಂ ಬ್ರಹ್ಮಾದಿಭಿಃ ಸರ್ವಾಃ ಸತ್ಯವಿದ್ಯಾಃ ಶ್ರೂಯನ್ತೇ ಅನಯಾ ಸಾ ಶ್ರುತಿಃ" ಸೃಷ್ಟಿಯ ಆರಂಭದಿಂದ ಇದುವರೆಗೂ ಬ್ರಹ್ಮಮೊದಲುಗೊಂಡು ಸಕಲರೂ ಸರ್ವಸತ್ಯವಿದ್ಯೆಗಳನ್ನೂ ಯಾವುದರಿಂದ ಶ್ರವಣಮಾಡುತ್ತಿರುವರೋ ಅದರಿಂದಲೇ ವೇದಗಳು ಶ್ರುತಿಗಳೆನ್ನಲ್ಪಡುವುವು. ಆದುದರಿಂದ ವೇದಮಂತ್ರಗಳು ಜಗದಾದಿಯಲ್ಲಿಯೇ ಪ್ರಾಪ್ತವಾದುವೆಂಬುದು ನಿಸ್ಸಂಶಯವಾದ ವಿಚಾರ. ವೇದದ ಕಾಲವನ್ನು ನಿರ್ಧರಿಸಲು ಪ್ರಯತ್ನಮಾಡಿದ ಆಧುನಿಕರು ಜಗತ್ಸೃಷ್ಟಿಕಾಲವನ್ನೂ, ಜಗತ್ಸೃಷ್ಟಿಸ್ಥಿತಿ ಲಯದ ಶಕ್ತಿಸ್ವರೂಪವನ್ನೂ, ವೇದಶಕ್ತಿಸ್ವರೂಪವನ್ನೂ ಅರಿತು ನಿರ್ಧರಿಸಲು ಪ್ರಯತ್ನಪಟ್ಟಿದ್ದರೆ ವೇದಕಾಲದ ವಿಚಾರವು ಭಾಸವಾಗುತ್ತಲೇ ಇತ್ತು.

ಇದುವರೆಗೂ ತಿಳಿಸಿದ ಕಾಲಗಣನೆಯ ವಿಚಾರದಲ್ಲಿ ಅನೇಕ ಆಧಾರವಾಕ್ಯಗಳಿರುವುವು. ಶ್ರೀಕೃಷ್ಣಪರಮಾತ್ಮನು ಗೀತೆಯಲ್ಲಿ ಯುಗಗಳು ಸಾವಿರ ಸಲವಾದರೆ ಬ್ರಹ್ಮನಿಗೆ ಒಂದು ಹಗಲೆಂದೂ, ಅಷ್ಟೇ ಪುನಃ ಆದರೆ ಒಂದು ರಾತ್ರಿಯೆಂದೂ

ಸಹಸ್ರಯುಗ ಪರ್ಯನ್ತ ಮಹರ್ಯದ್ಬ್ರಹ್ಮಣೋವಿದುಃ ।
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋಜನಾಃ ॥

ಎಂದು ಅಪ್ಪಣೆಕೊಡಿಸಿರುವನು. ಅಲ್ಲದೆ ಪ್ರತಿಯುಗದಲ್ಲಿಯೂ ಧರ್ಮಸಂಸ್ಥಾಪನೆ ಮಾಡಲು ಅವತಾರವೆತ್ತುತ್ತೇನೆಂದು "ಯುಗೇಯುಗೇ" ಎಂದು ಅಪ್ಪಣೆಕೊಡಿಸಿರುವನು. ನಮಗೂ, ದೇವತೆಗಳಿಗೂ, ಚತುರ್ಮುಖಬ್ರಹ್ಮನಿಗೂ ಅಹೋರಾತ್ರಿಗಳಿರುವುವಷ್ಟೆ? ಈ ಅಹೋರಾತ್ರಿಗಳ ತತ್ವಗಳನ್ನು ತಿಳಿದರೆ ಕಾಲಚಕ್ರದ ವಿಚಾರವೂ ಗೊತ್ತಾಗುವುದಲ್ಲದೆ ಸುಜ್ಞಾನವೂ ಉಂಟಾಗುವುದು. ಈ ಅಹೋರಾತ್ರಿಗಳ ತತ್ವಕ್ಕೆ ಶ್ರುತಿಯಲ್ಲಿ

ಯೋಹವಾ ಅಹೋರಾತ್ರಾಣಾಂ ನಾಮಧೇಯಾನಿವೇದ । ನಾ ಹೋರಾತ್ರೇಷ್ವಾರ್ತಿ ಮಾರ್ಛತಿ । ಸಂಜ್ಞಾನಂ ವಿಜ್ಞಾನಂದರ್ಶಾ ದೃಷ್ಟೇತಿ । ಏತಾವನುವಾಕೌ ಪೂರ್ವಪಕ್ಷಸ್ಯಾ ಹೋರಾತ್ರಾಣಾಂ ನಾಮಧೇಯಾನಿ । ಪ್ರಸ್ತುತಂ ವಿಷ್ಟುತಂ ಸುತಾಸುನ್ವತೀತಿ । ಏತಾವನುವಾಕಾವಪರಪಕ್ಷಸ್ಯಾ ಹೋರಾತ್ರಾಣಾಂ ನಾಮಧೇಯಾನಿ । ನಾ ಹೋರಾತ್ರೇಷ್ವಾರ್ತಿ ಮಾರ್ಛತಿ । ಯ ಏವಂವೇದಾ ॥

ಅಲ್ಲದೆ ಋಗ್ವೇದ ಮಂ. ೧೦. ಸೂಕ್ತ ೧೯೦ ರಲ್ಲಿ —

ಋತಂಚ ಸತ್ಯಂಚಾ ಭೀದ್ಧಾತ್ತಪಸೋಧ್ಯ ಜಾಯತ । ತತೋರಾತ್ರ್ಯಜಾಯತ ತತಸಮುದ್ರೋ ಅರ್ಣವಃ।ಸಮುದ್ರಾದರ್ಣವಾದಧಿ ಸಂವತ್ಸರೋ ಅಜಾಯತ । ಅಹೋರಾತ್ರಾಣಿ ವಿವಿಧದ್ವಿಶ್ವಸ್ಯ ಮಿಷತೋವಶೀ । ಸೂರ್ಯಾಚಂದ್ರಮಸೌ ಧಾತಾಯಧಾ ಪೂರ್ವಮಕಲ್ಪಯತ್ । ದಿವಂಚ ಪೃಥವೀಂಚಾನ್ತರಿಕ್ಷ ಮಧೋಸುವಃ ॥

ಎಂಬದಾಗಿ ಹೇಳಿದೆ. ರಾತ್ರಿ, ಹಗಲು, ಸಂವತ್ಸರ ಮುಂತಾದ ಕಾಲಗಣನೆಯ ವಿಚಾರ, ಆತ್ಯಂತಿಕಪ್ರಳಯದಲ್ಲಿ ಜಗತ್ತೆಲ್ಲಾ ಅವ್ಯಕ್ತಸ್ಥಿತಿಯಾಗಿ ಪರಬ್ರಹ್ಮನಲ್ಲಡಗಿ ಪುನಃ ಸೃಷ್ಟಿಕಾಲದಲ್ಲಿ ವ್ಯಕ್ತಸ್ಥಿತಿಯನ್ನು ಪಡೆದು ಪೂರ್ವಕಲ್ಪದಲ್ಲಿದ್ದಂತೆಯೆ ಆಗುವುದೆಂಬ ವಿಚಾರಗಳ ತತ್ವಗಳನ್ನು ಮೇಲಿನ ಋಗ್ವೇದ ಮಂತ್ರವೂ ವ್ಯಕ್ತಪಡಿಸುವುದು. ಇಂತಹ ಸೃಷ್ಟಿ ಸ್ಥಿತಿ ಲಯಗಳು ಎಷ್ಟೋ ಆಗಿ ಹೋಗಿರುವುವು. ಸೃಷ್ಟಿಸ್ಥಿತಿಗಳಿಲ್ಲದ ಪರಬ್ರಹ್ಮವೊಂದೇ ಇರುವ ಸ್ಥಿತಿಯ ತತ್ವವೇ ಗಾಯತ್ರೀಮಂತ್ರದಲ್ಲಿನ 'ತತ್' ಪದ ಒಂದೇ ಇರುವ ಕಾಲವಾಗಿದೆ. 'ತತ್' ಪದದಿಂದ ಮುಂದಿನ ಪದಗಳು ಉಂಟಾದಾಗಲೇ ವೇದಗಳ ಉದಯ

ಮತ್ತು ಕಾಲಗಣನೆಯೂ ಉಂಟಾಗುವುದು. ಮಂತ್ರದಲ್ಲಿನ ಎಲ್ಲಾ ಪದಗಳ ತತ್ವಗಳೂ ಯಾವಾಗ ಪುನಃ 'ತತ್' ಪದದಲ್ಲಿ ಅಡಗಿ 'ತತ್' ಪದ ಒಂದೇ ಉಳಿಯುವುದೋ ಆಗ ವೇದಗಳಿಗೂ ವ್ಯಕ್ತಸ್ಥಿತಿಯಿಲ್ಲದೆ ಪರಬ್ರಹ್ಮ ಒಂದೇ ಇರುವ ಸ್ಥಿತಿಯಾಗಿರುವುದು. ಈ ತತ್ವದಿಂದಲೂ ಗಾಯತ್ರೀ ಆಧಾರದ ಮೇಲೆಯೇ ಕಾಲಚಕ್ರವಿರುವುದು ಮತ್ತು ಸೃಷ್ಟಿಯಾದಿಯಲ್ಲೇ ವೇದಮಂತ್ರಗಳು ಪ್ರಚುರಕ್ಕೆ ಬಂದಿರುವುದಾಗಿದೆ. ಮುಹೂರ್ತ, ಅಹೋರಾತ್ರಿ, ದಿನ, ಪಕ್ಷ, ಮಾಸ, ಸಂವತ್ಸರ, ದೇವತೆಗಳ ಸಂವತ್ಸರ, ಯುಗಗಳು, ಬ್ರಹ್ಮನ ಅಹೋರಾತ್ರಿ ಮತ್ತು ಮಹಾಪ್ರಳಯಗಳ ಕಾಲನಿರ್ಣಯ ವಿಚಾರವು ಬಹು ಗಹನವಾದದ್ದಾಗಿದೆ. ಈ ಕಾಲನಿರ್ಣಯವು ಕಾಲವ್ಯೂಹವೆಂದೂ, ಈ ವ್ಯೂಹಗಳು ( ಸಮುದಾಯಗಳು ) ಸಪ್ತಮಾತೃಕಾದೇವಿಯ ಆರು ಮಾತೃಕಾಶಕ್ತಿಗಳಿಗಿರುವ ೩೬೦ ಕಲೆಗಳಿಂದುಟಾಗುವುವೆಂದು ಶ್ರೀ ಶಂಕರಾಚಾರ್ಯರವರು ' ಸೌಂದರ್ಯಲಹರಿ ' ಮತ್ತು ' ಪ್ರಪಂಚಸಾರ' ಗ್ರಂಥಗಳಲ್ಲಿ ಹೇಳಿರುವ ತತ್ವಗಳೊಡನೆಯೂ, ಸಂಗೀತಶಾಸ್ತ್ರದ ಸ್ವರ ಮತ್ತು ರಾಗಗಳ ಅನ್ವಯಗಳಿಂದಲೂ, ಅಹೋರಾತ್ರಿ, ದಿನ, ಪಕ್ಷ, ಮಾಸ ಮುಂತಾದುವುಗಳ ಅಭಿಮಾನಿದೇವತಾಶಕ್ತಿಗಳ ಮಹಿಮಾತತ್ವಗಳಿಂದಲೂ, ಜ್ಯೋತಿಶ್ಶಾಸ್ತ್ರದ ನಿರ್ಣಯದಿಂದಲೂ ವಿವರಿಸಿಬರೆದರೆ ಬಹು ದೊಡ್ಡ ಗ್ರಂಥವೇ ಆಗುವುದು

ಮುಖ್ಯವಾಗಿ ವೇದಕಾಲವೆಂದರೆ ಜಗತ್ತಿನ ಕಾಲವೇ ಆಗಿರುವುದು ಇಂತಹ ಅದ್ಭುತವಾದ ಮತ್ತು ಮಹತ್ತಾದ ವೇದಕಾಲನಿರ್ಣಯವನ್ನು ಅಲ್ಪಜ್ಞನಾದ ಮನುಷ್ಯನಿಂದ ನಿರ್ಣಯಿಸಲು ಖಂಡಿತವಾಗಿಯೂ ಅಸಾಧ್ಯ. ವೇದಮಾತೆಯಾದ ಗಾಯತ್ರೀದೇವಿಯೇ ಇದನ್ನು ಜಗದಾದಿಯಲ್ಲಿ ಮಹರ್ಷಿಗಳಿಗೆ ಅನುಗ್ರಹಿಸಿ ಹೊರಪಡಿಸಿರುವಳು. ಇಂತಹ ಮಹತ್ವದ ವಿಚಾರಗಳ ಯಥಾರ್ಥವನ್ನರಿಯಲು ಪುಣ್ಯಪರಿಪಾಕವೇ ಬೇಕು. ಆಧುನಿಕರು ವೇದಕಾಲದ ವಿಚಾರದಲ್ಲಿ ಹೇಳಿರುವ ವಾಕ್ಯಗಳಿಗೆ ಯಾವ ಆಧಾರವೂ ಕಂಡುಬರುವುದಿಲ್ಲ. ಆದುದರಿಂದ ಮೇಲೆ ಬರೆದಿರುವ ಶ್ರುತ್ಯಾದಿ ವಾಕ್ಯಗಳಿಂದಲೂ, ಗಾಯತ್ರೀಮಹಿಮಾರೂಪವಾದ ತತ್ವಗಳಿಂದಲೂ, ಋಷಿಪಾರಂಪರ್ಯವಾಗಿ ವೇದವು ಅನಾದಿಯೆಂದು ಮಹಾತ್ಮರು ಏಕಕಂಠದಿಂದ ಸಾರುತ್ತಿರುವ ವಚನಗಳಿಂದಲೂ ವೇದಕಾಲವು ಅನಾದಿಯೆಂದು ನಿಸ್ಸಂದೇಹವಾಗಿ ನಂಬತಕ್ಕದ್ದಾಗಿದೆ.



## ೨. ವೇದಾವಿರ್ಭಾವಕ್ರಮ.

ಆಧುನಿಕರು ವೇದದ ಕಾಲವನ್ನು ಯಾವ ರೀತಿಯಲ್ಲಿ ನಿರ್ಣಯಿಸುವರೋ ಅದೇರೀತಿಯಲ್ಲಿ ವೇದಮಂತ್ರವು ಮನುಷ್ಯರಿಂದ ರಚಿಸಲ್ಪಟ್ಟದ್ದೆಂದು ಹೇಳುವರು. ಹೀಗೆ ಹೇಳುವವರಲ್ಲಿ ಎರಡು ಪಕ್ಷವಿದೆ.

ಒಂದನೆಯದು:-ಕಾಲಕ್ರಮದಲ್ಲಿ ಜನರು ಸೃಷ್ಟಿಯ ಅದ್ಭುತಸ್ವಭಾವವನ್ನು ನೋಡಿ ನೋಡಿ ಪ್ರಕೃತಿಸೌಂದರ್ಯದ ಅನುಭವದಿಂದ ಆನಂದಭರಿತರಾಗಿ ಅಗ್ನಿ, ವಾಯು, ಜಲ, ಪರ್ವತ ಮುಂತಾದವುಗಳಲ್ಲಿ ಪೂಜ್ಯಭಾವನೆಯನ್ನು ಹೊಂದಿ ಅವುಗಳನ್ನು ಕವಿತಾಚಾತುರ್ಯದಿಂದ ಸ್ತೋತ್ರಮಾಡಿದರು. ಹೀಗೆ ಪ್ರಕೃತಿ ಸೌಂದರ್ಯವರ್ಣನಾತ್ಮಕಗಳಾದ ಸ್ತೋತ್ರಸಮುದಾಯಗಳೇ ವೇದಗಳಾದುವೆಂದು ಕೆಲವು ಆಧುನಿಕರ ಅಭಿಪ್ರಾಯ.

ಎರಡನೆಯದು :— ಋಷಿಗಳು ಭೌತಿಕವಸ್ತುಗಳಲ್ಲಿನ ಸ್ವಭಾವ ಶಕ್ತಿಗಳು ಯಾವುವೋ ದೇವತಾಶಕ್ತಿಗಳಿಂದ ಉಂಟಾದುವುಗಳೆಂದು ವಿಚಾರದಿಂದ ಕಂಡು ಹಿಡಿದುದಲ್ಲದೆ ಹೀಗೆ ಅನೇಕ ದೇವತಾಶಕ್ತಿಗಳಿಗೂ ಪ್ರಧಾನವಾದ ದೇವತಾ ಶಕ್ತಿಯು ಇರುವುದೆಂಬುದನ್ನೂ ಕಂಡುಹಿಡಿದು ವಿಧವಿಧವಾಗಿ ಸ್ತೋತ್ರಮಾಡಿ ರಚಿಸಿದವುಗಳೇ ವೇದಮಂತ್ರಗಳಾಗಿವೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ.

ಮೇಲಿನ ಆಧುನಿಕರ ಅಭಿಪ್ರಾಯಗಳಂತೆ ವೇದಮಂತ್ರಗಳು ಜನರ ಕವಿತಾಶಕ್ತಿಯಿಂದ ರಚನೆಯಾದುದಲ್ಲ. ಓಂಕಾರದಿಂದುದಯಿಸಿ ಜಗನ್ಮಯ ವಾಗಿರುವ ಅನಾಹತನಾದವಾದ ವೇದವು ಹೇಗೆ ಪರಬ್ರಹ್ಮನಿಂದ ಉತ್ಪನ್ನ ವಾಯಿತೋ ಹಾಗೆಯೇ ವೇದಮಂತ್ರವೂ ಕೂಡ ಈ ಕೆಳಗಿನ ವೇದಾಧಾರದಂತೆ ಪರಬ್ರಹ್ಮನಿಂದಲೇ ಉತ್ಪನ್ನವಾಯಿತು.

ತಸ್ಮಾದ್ಯಜ್ಞಾ ತ್ಸರ್ವಹುತಃ ಋಚಸ್ಸಾಮಾನಿ ಜಜ್ಞಿರೇ ।
ಛಂದಾಗ್‌ಂಸಿ ಜಜ್ಞಿರೇ ತಸ್ಮಾ ದ್ಯಜುಸ್ತಸ್ಮಾದಜಾಯತ ॥
॥ ಯಜುಃ । ಅ ೩೧. ಮಂ ೭ ॥

ಎಂದೆಂದಿಗೂ ನಾಶರಹಿತನಾದ ಸದಾ ಸುಖಸ್ವರೂಪನಾದ ಜಗತ್ಪೂರ್ಣ ಪುರುಷನಾದ ಪರಬ್ರಹ್ಮನಿಂದಲೇ ಋಗ್ಯಜುಸ್ಸಾಮಾಥರ್ವಣವೇದಗಳು ಉತ್ಪನ್ನ ವಾದವು ಎಂದರ್ಥ.

**ವೇದದ ಮಹಿಮೆಯು ಎಂತಹುದೆಂದರೆ**:— ಮಾನವನ ಸ್ವಾಭಾವಿಕ ಜ್ಞಾನಕ್ಕೂ ಸಿಲುಕದೆ ಇರುವುದಾಗಿಯೂ, ಮಾನವನ ಜ್ಞಾನಕ್ರಿಯೆಗಳನ್ನು ಒಂದು ನಿಯಮದಲ್ಲಿಡುವ ಆಜ್ಞಾರೂಪವಾದ ಮಹತ್ವವುಳ್ಳದ್ದಾಗಿಯೂ, ಜಗತ್ತಿನ ಸೃಷ್ಟಿ ಸ್ಥಿತಿ ಲಯ ಮತ್ತು ಪರಬ್ರಹ್ಮವಿಚಾರಗಳ ವಿವರಣೆಯನ್ನು ಪ್ರತಿಪಾದಿಸುವುದಾಗಿಯೂ, ರಾಕ್ಷಸಸ್ವರೂಪವಾದ ರಜಸ್ತಮೋಗುಣಗಳಿಗಿಂತಲೂ ಸತ್ವಗುಣ ಪ್ರಧಾನರಾದ ಇಂದ್ರಾಗ್ನಿ ಮುಂತಾದ ದೇವತೆಗಳಿಗೆ ಪ್ರಾಶಸ್ತ್ಯವಿರುವುದನ್ನು ನಿರೂಪಿಸುವುದಾಗಿಯೂ, ದೇವತೆಗಳಿಗೂ ಮನುಷ್ಯರಿಗೂ ಇರುವ ಸಂಬಂಧವನ್ನು ತೋರಿಸಿಕೊಡುವುದಾಗಿಯೂ, ರಜಸ್ತಮೋಗುಣಾಧಿಕ್ಯವೆನಿಸುವ ಅಜ್ಞಾನದಿಂದ ಸ್ವಭಾವಿಕವಾಗಿ ಬಂಧಿತರಾದ ಮನುಷ್ಯರ ಉದ್ಧಾರಕ್ಕಾಗಿ ಧರ್ಮಾರ್ಥಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳ ಸ್ವರೂಪವನ್ನು ಬೋಧಿಸತಕ್ಕವುಗಳಾಗಿಯೂ, ಜ್ಞಾನಕರ್ಮ ಉಪಾಸನಾಕಾಂಡಗಳ ವಿವರಣೆಗಳನ್ನೊಳಗೊಂಡಿರುವುದಾಗಿಯೂ, ನಾದಬ್ರಹ್ಮೋಪಾಸನಾಸ್ವರೂಪವಾಗಿಯೂ, ನಾದಬ್ರಹ್ಮ ಶಕ್ತಿಯ ನಾಲ್ಕು ಪ್ರಧಾನ ಭೇದಗಳಿಂದ ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ಭಾಗಗಳುಳ್ಳದ್ದಾಗಿಯೂ, ಜಗತ್ತಿನ ಸರ್ವ ವಿದ್ಯಾಮಯಗಳಾಗಿಯೂ, ಭೂತಭವಿಷ್ಯದ್ವರ್ತಮಾನಾರ್ಥಗಳಿಂದ ಗರ್ಭಿತವಾಗಿಯೂ, ಈಶ್ವರನು ತಾನು ಸೃಷ್ಟಿಸಿದ ಜಗತ್ತೆಂಬ ರಾಜ್ಯಾಡಳಿತದ ನಿಬಂಧನೆಗಳ ಸ್ವರೂಪವಾಗಿಯೂ ಇರುವುದೇ ವೇದವು

ಆದುದರಿಂದ ವೇದವೆಂಬುದು ಪ್ರಕೃತಿಸೌಂದರ್ಯವರ್ಣನಾತ್ಮಕವಾದ ಸ್ತೋತ್ರವಲ್ಲ ಮತ್ತು ಋಷಿಗಳು ವಿಚಾರಶಕ್ತಿಯಿಂದಲೂ ಕಂಡುಹಿಡಿದುದಲ್ಲ. ಹೃದಯದಲ್ಲುಂಟಾಗುವ ರಸಭಾವಗಳ ಆವೇಶಕ್ಕೆ ವಿಚಾರಶಕ್ತಿಯು ಬಹು ಕೆಳಗಿನ ಅಂತಸ್ತಿಗೆ ಸೇರಿದುದು. ಆ ಈಶ್ವರನಿಂದ ಸೃಷ್ಟಿಸಲ್ಪಟ್ಟ ಪ್ರಪಂಚದ ಆಡಳಿತದ ನಿಬಂಧನೆಗಳ ವಿವರಗಳನ್ನು ಈಶ್ವರನೇ ಮಾಡಬೇಕಲ್ಲದೆ ಸತ್ಯವಿದ್ಯೆಯಾದ ಈಶ್ವರನ ನಿಬಂಧನೆಗಳೆನಿಸುವ ವೇದವನ್ನು ಋಷಿಗಳು ವಿಚಾರಶಕ್ತಿಯಿಂದ ರಚಿಸಿದುದಲ್ಲ. ಕಲ್ಪನೆ ಅಥವಾ ರಚನೆಯು ಅವುಗಳಿಗೂ ಮೂಲರೂಪವಾಗಿರುವುದರ ಜ್ಞಾನವನ್ನು ಅಪೇಕ್ಷಿಸುವುದು ಮೂಲರೂಪವಾಗಿರುವ ಜ್ಞಾನವು ಸ್ವಾಭಾವಿಕವಾದುದು. ಇಂತಹ ಮೂಲಜ್ಞಾನಸ್ವರೂಪವಾದುದೇ ವೇದವು. ಕಲ್ಪನೆ ಅಥವಾ ರಚನೆಯು ಮೂಲರೂಪವನ್ನು ಹೇಗೆ ಅನುಸರಿಸುವುದೋ ಹಾಗೆಯೆ ಸರ್ವ ಕಲ್ಪನೆ ಅಥವಾ ರಚನೆಗಳು ವೇದವನ್ನೇ ಅನುಸರಿಸಬೇಕಾಗಿರುವುದರಿಂದಲೇ ವೇದ (ವಿತ್-ಜ್ಞಾನ) ಎಂಬ ಹೆಸರು ಬಂದಿರುವುದು ಮತ್ತು ವೇದವು ನಿತ್ಯವಾದುದೆಂದು ಮಹರ್ಷಿಗಳು ಸಾರುತ್ತಿರುವುದಾಗಿದೆ. ವೀಣೆಯ ಒಂದೊಂದು ಮನೆಯಲ್ಲಿರುವ ತತ್ವಗಳೂ ಅಮಾನುಷ ವಿದ್ಯೆಯಾಗಿ ಒಟ್ಟಿನಲ್ಲಿ ಬ್ರಹ್ಮಾಂಡದ

ಸಕಲ ತತ್ವಗಳನ್ನೂ ಒಳಗೊಂಡು 'ಈಶ್ವರೀವಿದ್ಯೆ'ಯಾಗಿ ವೇದವೆನಿಸಿರುವುದು ಪ್ರಮಾಣೀಕರಿಸಲ್ಪಟ್ಟಂತಿದೆ. ಆದುದರಿಂದ ವೇದವು ಮನುಷ್ಯನ ಸಕಲ ರಚನೆ ಅಥವಾ ಕಲ್ಪನೆಗೂ ಆಧಾರವಾದುದಾಗಿ ಸೃಷ್ಟಿ ಸ್ಥಿತಿ ಲಯಗಳು ಈಶ್ವರನ ಕಟ್ಟಳೆಯಿಂದ ಹೇಗೆ ನಡೆಯುವುವೋ ಹಾಗೆಯೆ ವೇದಮಂತ್ರವೂ ಸ್ವಾಭಾವಿಕವಾಗಿಯೆ ಸೃಷ್ಟಿಕಾಲದಲ್ಲಿ ಈಶ್ವರನ ನಿಯಮಾನುಸಾರ ಅಧಿಕಾರಯುತರಾದ ಮನುಷ್ಯರಿಗೆ ಬೋಧಿಸಲ್ಪಟ್ಟು ಬಂದಿರುವುದು. ಅಂದರೆ ಜಗತ್ತಿನಲ್ಲಿ ತಾಯಿತಂದೆಗಳು ಎಲ್ಲಾ ವಿಧದಲ್ಲಿಯೂ ತಮ್ಮ ಮಕ್ಕಳು ಸುಖವಾಗಿರಲೆಂದು ಕರುಣೆಯನ್ನು ಸದಾ ವಹಿಸಿರುವ ಕಟ್ಟಳೆಯಂತೆಯೂ, ಈಶ್ವರನು ತಾನು ಸೃಷ್ಟಿಸಿದ ಈ ಜಗತ್ತಿನಲ್ಲಿ ಆಹಾರ ಮುಂತಾದ ಅನಂತಾನಂತ ಪ್ರಯೋಜನಗಳನ್ನು ಒದಗಿಸಿಕೊಡುತ್ತಾ ಇರುವ ಕಟ್ಟಳೆಯಂತೆಯೂ, ಈಶ್ವರನೇ ಮನುಷ್ಯರ ಉದ್ಧಾರಕ್ಕೋಸ್ಕರ ಮನುಷ್ಯರ ಮೇಲೆ ಅಮೋಘ ಕೃಪೆಯನ್ನಿಟ್ಟು ಸತ್ಯವಿದ್ಯೆಯಾದ ವೇದ ಮಂತ್ರವನ್ನು ಜಗದಾದಿಕಾಲದಲ್ಲಿ ಹೊರಗೆಡವಿದುದು ಅವನ ಸ್ವಾಭಾವಿಕವಾದ ಕಟ್ಟಳೆಯೇ ಆಗಿರುವುದು.

ಈಶ್ವರನು ವೇದಮಂತ್ರಗಳನ್ನು ಪ್ರಪಂಚಕ್ಕೆ ಯಾವ ವಿಧದಿಂದ ಹೊರಗೆಡುಹುವ ಸ್ವಭಾವವುಳ್ಳವನೆಂಬುದನ್ನು ತಿಳಿದುಕೊಳ್ಳೋಣ.

"ಅಗ್ನೇರ್ ಋಗ್ವೇದೋ ವಾಯೋರ್ಯಜುರ್ವೇದಃ ಸೂರ್ಯಾತ್ಸಾಮವೇದಃ
ಅಥರ್ವಾಂಗಿರಸೋಮುಖಂ"

ಎಂಬ ವೇದಪ್ರಮಾಣದಂತೆ ಅಗ್ನಿ, ವಾಯು, ಸೂರ್ಯ, ಆಂಗೀರಸರಿಂದ ಕ್ರಮವಾಗಿ ಋಗ್ಯಜುಸ್ಸಾಮಾಥರ್ವಣ ವೇದಗಳು ಪ್ರಕಟವಾದವು ಅಂದರೆ ಜಗದಾದಿಯಲ್ಲಿ ಅಗ್ನಿ ವಾಯು ಸೂರ್ಯರ ಅಂಶದಿಂದ ಈಶ್ವರಾಂಶಸಂಭೂತರಾದ ನಾಲ್ವರು ಅವತಾರಪುರುಷರು ವೇದಗಳನ್ನು ಮಾನವರ ಉದ್ಧಾರಕ್ಕಾಗಿ ಪ್ರಕಟಮಾಡುವುದು ಈಶ್ವರನ ಕಟ್ಟಳೆಯೇ ಆಗಿರುವುದು. ಹೇಗೆಂದರೆ-ಇಚ್ಛಾ ಜ್ಞಾನಕ್ರಿಯಾಶಕ್ತಿ ಸ್ವರೂಪಳಾದ ಪರಾಶಕ್ತಿಯೇ ವೇದಶಕ್ತಿಸ್ವರೂಪಳಾಗಿರುವಳೆಂದು ವೀಣೆಯ ಸಮನ್ವಯದಲ್ಲಿ ತಿಳಿಸಿರುತ್ತಷ್ಟೆ! ಈ ಶಕ್ತಿಗಳು ಪ್ರಪಂಚದಲ್ಲಿ ಅಭಿವ್ಯಕ್ತವಾಗುವ ಪ್ರಧಾನಸ್ಥಳ ಬೇಕಲ್ಲವೆ! ಜ್ಞಾನ ಕ್ರಿಯಾ ಇಚ್ಛಾಶಕ್ತಿಗಳು ಕ್ರಮವಾಗಿ ಅಗ್ನಿ, ವಾಯು, ಸೂರ್ಯರಲ್ಲಿ ತಮ್ಮ ಮಹಿಮೆಯನ್ನು ಪ್ರದರ್ಶಿಸುವುವು ಅಗ್ನಿಯು ಪರತರಜ್ಯೋತಿ, ವಿದ್ಯುಜ್ಯೋತಿ, ಜ್ಞಾನಾಗ್ನಿ ಮುಂತಾದ ನಾಮಗಳನ್ನು ಪಡೆದು ತೇಜಸ್ಸ್ವರೂಪವಾಗಿರುವುದರಿಂದ ಜ್ಞಾನ ಶಕ್ತಿಯ ಅಭಿವ್ಯಕ್ತತೆಗೆ ಪ್ರಧಾನಸ್ಥಳ. ವಾಯುವು ಚಲನರೂಪವಾದುದರಿಂದ ಕ್ರಿಯಾಶಕ್ತಿಯ ಅಭಿವ್ಯಕ್ತತೆಗೆ ಪ್ರಧಾನಸ್ಥಳ. ಇದರಂತೆ ಇಚ್ಛಾಶಕ್ತಿಯ ಅಭಿವ್ಯಕ್ತತೆಗೆ ಸೂರ್ಯನು ಪ್ರಧಾನಸ್ಥಳ. ಅಂದರೆ ಈ ಮೂವರಿಗೆ ತನ್ನ ವೇದ

ಪ್ರಭಾವದ ಶಕ್ತಿಗಳನ್ನು ಕೊಟ್ಟಿರುವ ವೇದಜನನಿಯಾದ ಗಾಯತ್ರೀದೇವಿಯು 'ವೇದಜನನೀ' ಎಂಬ ನಾಮದ ಸಾರ್ಥಕತೆಯನ್ನು ಪ್ರತಿಪಾದಿಸಿ ತೋರಿಸಲು ಅಗ್ನಿ, ವಾಯು, ಸೂರ್ಯರ ಅಂಶದ ಅವತಾರಪುರುಷರುಗಳಿಂದ ಋಗ್ಯಜುಸ್ಸಾಮ ವೇದಮಂತ್ರಗಳನ್ನೂ, ದೇವಗುರುವಾದ ಆಂಗೀರಸ (ಬೃಹಸ್ಪತಿ) ರಿಂದ ಅಥರ್ವಣ ವೇದವನ್ನೂ ಹೊರಗೆಡವಿದಳು ಚತುರ್ಮುಖಬ್ರಹ್ಮನೂ ಇದನ್ನು ಪರಿಗ್ರಹಿಸಿ ಭರದ್ವಾಜಮಹರ್ಷಿಗಳಿಗೂ ಉಪದೇಶಮಾಡಿದನೆಂದು ಶ್ರುತಿಯು ತಿಳಿಸುವುದು. ಆದುದರಿಂದ ವೇದಜನನಿಯಾದ ಗಾಯತ್ರೀದೇವಿಯ ಮತ್ತು ಈಶ್ವರನ ಅದ್ಭುತವಾದ ಜ್ಞಾನಶಕ್ತಿಯನ್ನು ಪಡೆದ ಈ ನಾಲ್ಕು ಅವತಾರಪುರುಷರಿಂದ ವೇದವು ಪ್ರಕಾಶಕ್ಕೆ ಬರುವುದು ಈಶ್ವರನ ಸೃಷ್ಟಿ ಸ್ಥಿತಿ ಲಯ ಕಾರ್ಯಗಳ ಸ್ವಭಾವ ದಂತೆಯೆ ಸ್ವಾಭಾವಿಕವಾದುದು. ಶ್ರೀಶಾರದಾಂಬೆಯ ಹಸ್ತದಲ್ಲಿರುವ ಪುಸ್ತಕವೇ ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಲಯಗಳ ವಿವರಣೆಗಳನ್ನೆಲ್ಲಾ ಒಳಗೊಂಡಿರುವ ಜ್ಞಾನಭಂಡಾರವೆಂದು ೨ನೆಯ ಪ್ರಕರಣದಲ್ಲಿ ತಿಳಿಸಿರುತ್ತಷ್ಟೆ! ಈ ಮೂಲಜ್ಞಾನ ಭಂಡಾರದಲ್ಲಿ ಅವ್ಯಕ್ತಸ್ಥಿತಿಯಲ್ಲಿದ್ದ ವೇದಮಂತ್ರಗಳು ಅವತಾರಪುರುಷರುಗಳಿಂದ ವ್ಯಕ್ತಸ್ವರೂಪವನ್ನು ಪಡೆಯುವುವು ಆದುದರಿಂದ ವೇದಮಂತ್ರವು ವೇದವೇ ಆಗಿ ಪರಬ್ರಹ್ಮನಂತೆ ನಿತ್ಯವಾದುದು. ಅವ್ಯಕ್ತಸ್ಥಿತಿಯಲ್ಲಿ ಪರಬ್ರಹ್ಮವಾಗಿದ್ದು ವ್ಯಕ್ತಸ್ಥಿತಿಯಲ್ಲಿ ಅವತಾರಪುರುಷರಿಂದ ಮಂತ್ರರೂಪವಾಗಿ ಹೊರಗೆ ಉದಯಿ ಸಿರುವುದರಿಂದ ವೇದಮಂತ್ರವು ಮನುಷ್ಯನಿರ್ಮಾಣವೆಂದು ಹೇಳಲು ಸಾಧ್ಯವಿಲ್ಲ.

ಅಗ್ನಿ, ವಾಯು, ಸೂರ್ಯರ ಅಂಶಗಳಿಂದ ಅವತಾರಮಾಡಿದ ಮಹಾ ಪುರುಷರು ನಾಲ್ಕು ವೇದಗಳನ್ನು ಹೊರಗೆಡವಿದರೆಂದು ಮೇಲೆ ತಿಳಿಸಿತಷ್ಟೆ! ಈ ಅವತಾರಪುರುಷರಿಂದಲೇ ವೇದವಾದ ಸಂಹಿತೆ, ಬ್ರಾಹ್ಮಣ, ಉಪನಿಷತ್ತು ಗಳೆಲ್ಲವೂ ಹೊರಕ್ಕೆ ಬಂದಿರಬಹುದೇ ಎಂಬ ಅನುಮಾನ ಕೆಲವರಿಗೆ ಬರಬಹುದು. ಉಪನಿಷತ್ತೇ ಅಂತ್ಯವಾಗುಳ್ಳ ಕೆಲವು ಭಾಗಗಳು ಮಹರ್ಷಿಗಳಿಂದಲೂ ಹೊರಕ್ಕೆ ಬಂದವು ಇವುಗಳನ್ನು ಹೊರಗೆಡವಿದ ಆ ಮಹರ್ಷಿಗಳು ಕೂಡ ಈಶ್ವರನ ರಾಜ್ಯಾಧಿಕಾರವರ್ಗಕ್ಕೆ ಸೇರಿದವರಲ್ಲದೆ ಸಾಧಾರಣ ಮಾನುಷವರ್ಗಕ್ಕೆ ಸೇರಿ ದವರೆಂದು ಹೋಲಿಸಲಾಗದು ಜಗತ್ಸೃಷ್ಟಿಯ ಕಟ್ಟಳೆಯಲ್ಲಿಯೇ ಈಶ್ವರನ ರಾಜ್ಯಾಧಿಕಾರವರ್ಗದವರಾದ ಮಹರ್ಷಿಗಳು ಸೃಷ್ಟಿಸಲ್ಪಟ್ಟು ತಮ್ಮ ನಿಯಮದ ಕರ್ತವ್ಯವನ್ನು ಮಾಡುವರು. ನಿತ್ಯರೆನಿಸುವ ಮಹಾಜ್ಞಾನಿಗಳಾದ ಈ ಋಷಿಗಳ ಉತ್ಪತ್ತಿಯು ಲೋಕವಿಲಕ್ಷಣವಾದುದರಿಂದ ಸಾಧಾರಣ ಮನುಷ್ಯರ ಜನ್ಮಕ್ಕೆ ಹೋಲಿಸಬಾರದು. ಋಷಿಗಳು ಈಶ್ವರನ ರಾಜ್ಯಾಧಿಕಾರವರ್ಗದವರಾಗಿ ನಿತ್ಯ ರಲ್ಲದಿದ್ದರೆ ಪೂಜೆ ಮತ್ತು ತರ್ಪಣಾದಿಗಳಿಂದ ಇವರನ್ನು ನಿತ್ಯವೂ ಆರಾಧಿಸುತ್ತಿರ ಲಿಲ್ಲ. ಈ ಋಷಿಗಳು ಕಾಲಸ್ಥಿತಿಯನ್ನನುಸರಿಸಿ ಮಾನುಷದೇಹಗಳನ್ನು ಧರಿಸಿ

ವೇದಪ್ರತಿಪಾದಕವಾದ ಜಗದುದ್ಧರಣದ ಕಾರ್ಯಗಳನ್ನು ಮಾಡುತ್ತಿರುವರು. ಆದುದರಿಂದ ಇಂತಹ ಮಹರ್ಷಿಗಳು ಉಪನಿಷತ್ತುಗಳೇ ಅಂತ್ಯವಾಗುಳ್ಳ ವೇದ ವನ್ನು ಲೋಕೋದ್ಧಾರಕ್ಕೋಸ್ಕರಲೇ ಹೊರಗೆಡವಿದರು.

ಅವತಾರಪುರುಷರೂ ಮಹರ್ಷಿಗಳೂ ವೇದಗಳನ್ನು ಅಲ್ಪಜ್ಞರಾದ ಸಾಧಾ ರಣ ಮನುಷ್ಯರು ರಚಿಸುವಂತೆ ರಚಿಸಿದರೆ ಅಥವಾ ಮತ್ಯಾವ ವಿಧದಿಂದ ಹೊರ ಗೆಡವಿದರೆಂಬ ವಿಚಾರವನ್ನು ತಿಳಿದುಕೊಳ್ಳೋಣ. ಈ ಮಹರ್ಷಿಗಳು ಪೂರ್ಣತಪ ಶ್ಶಕ್ತಿಯುತರಾಗಿಯೂ, ಸಕಲವಿದ್ಯೆಗಳಿಂದ ಕೂಡಿದ ಮಹಾಯೋಗಶಕ್ತಿಯುಳ್ಳವ ರಾಗಿಯೂ, ಬ್ರಹ್ಮಾನಂದರಸಪಾನದಿಂದ ಮತ್ತರಾಗಿಯೂ ಇರುವ ಕಾಲದಲ್ಲಿ ಈಶ್ವರಕೃಪೆಯಿಂದ ಆಯಾಯ ಮಂತ್ರಗಳ ಭಾವೋದಯವಾಗಿ ಆನಂದಮಗ್ನ ರಾಗಿದ್ದ ಕಾಲದಲ್ಲಿಯೇ ಉದ್ಗಾನಮಾಡಿ ಮಂತ್ರಗಳನ್ನು ಪ್ರಕಾಶಪಡಿಸಿದರು. ವೇದವು ಶುದ್ಧಸತ್ವವೆಂದರೆ ಕಳಾಸ್ವರೂಪದಲ್ಲಿ ಭಂಡಾರದಂತೆ ಇರುವುದೆಂದು ತಿಳಿಸಿದುದಲ್ಲದೆ ಸೃಷ್ಟಿಸ್ಥಿತಿಲಯಗಳ ವಿಚಾರ, ದೇವತೆಗಳ ಪ್ರಾಶಸ್ತ್ಯವಿಚಾರ, ಪರಮಾತ್ಮವಿಚಾರಗಳೇ ವೇದಸ್ವರೂಪವಾಗಿರುವುದೆಂದೂ ಮೇಲೆಯೇ ತಿಳಿಸಿತಷ್ಟೆ! ಅಂತರಂಗದ ಆನಂದದ ಸ್ಥಿತಿಯಾದ ಉನ್ಮನೀಸ್ವರೂಪದಲ್ಲಿರುವ ಮಹಾತ್ಮರಾದ ಋಷಿಗಳು ಈ ವಿಚಾರಸಂಬಂಧವಾದ ಗಾನವನ್ನು ಮಾಡುವರಲ್ಲದೆ ವಿಷಯೋಪ ಭೋಗಪ್ರಧಾನ ವಿಚಾರಸಂಬಂಧವಾದ ಗಾನವನ್ನೆಂದಿಗೂ ಮಾಡುವುದಿಲ್ಲ. ಇಹಲೋಕವನ್ನೇ ಮರೆತವರಾಗಿ ಈಶ್ವರಸ್ವರೂಪದಲ್ಲಿ ಮಗ್ನರಾಗಿರುವ ಆ ಮಹಾತ್ಮರ ಗಾನವು ಈಶ್ವರೀವಿದ್ಯೆಯ ಸಂಬಂಧವಾದುದಾಗಿಯೇ ಇದ್ದು ಈಶ್ವರಾ ನುಗ್ರಹದಿಂದಲೇ ವರ್ಣ, ಸ್ವರ, ಲೋಪಗಳಿಲ್ಲದೆ ಇರುವುದಾಗಿಯೂ, ಆಯಾಯ ವೇದಗಳಿಗನುಸಾರವಾದ ಶಕ್ತಿಭೇದವುಳ್ಳದ್ದಾಗಿಯೂ, ಮಂತ್ರಾಭಿಮಾನಿದೇವತೆ ಗಳ ನಿಕಟಸಂಬಂಧವಾದ ತೇಜಸ್ಸಿನಿಂದ ತುಂಬಿತುಳುಕುತ್ತಿರುವುದಾಗಿಯೂ ಇರುವುದು. ಈ ಮಹಾತ್ಮರ ಗಾನವನ್ನು ಶ್ರವಣಮಾಡಿ ಉಪದೇಶದ್ವಾರ ಶಿಷ್ಯ ಪರಂಪರಾಪ್ರಾಪ್ತವಾಗಿ ಅಧ್ಯಯನರೂಪವಾಗಿ ಬರುತ್ತಿರುವುದರಿಂದಲೇ ಮಂತ್ರ ಗಳು ಶ್ರುತಿಯೆಂದು ಕರೆಯಲ್ಪಡುವುವು. ಭಿನ್ನ ಭಿನ್ನ ಮಂತ್ರಗಳಲ್ಲಿ ದೇವತೆಗಳ ವರ್ಣನೆಯೂ, ದೇವತೆಗಳ ಆರಾಧನಾಕ್ರಮವಾದ ಯಜ್ಞಾದಿಗಳ ವಿಚಾರವೂ, ಪರಮಾತ್ಮ ವರ್ಣನೆಯೂ, ಚತುರ್ವಿಧಪುರುಷಾರ್ಥದ ವಿಚಾರವೂ, ಸೃಷ್ಟಿಸ್ಥಿತಿ ಲಯ ಮುಂತಾದ ಅನೇಕ ತತ್ವವಿಚಾರಗಳೂ, ಕೆಲವು ಮಂತ್ರಗಳಲ್ಲಿ ಮೇಲಿನ ವಿಚಾರಗಳ ಸಕಲಾರ್ಥಗಳೂ ಗರ್ಭಿತವಾಗಿರುವಂತೆಯೂ, ಶಬ್ದಗಳ ಅಸಾಧಾರಣವಾದ ಅನೇಕ ರಹಸ್ಯಾರ್ಥಗಳನ್ನೊಳಗೊಂಡು ಅನಂತವಿದ್ಯಾಮಯ ಗಳಾಗಿರುವಂತೆಯೂ ಪ್ರವಾಹರೂಪವಾಗಿ ಮನೋನ್ಮನೀ ಭಾವದಲ್ಲಿ ಈ ಮಹಾತ್ಮರು ಗಾನಮಾಡಿ ಹೊರಹೊರಟವುಗಳೇ ವೇದಮಂತ್ರಗಳಾಗಿರುವುವು.

ಈ ಸ್ವಭಾವವು ಪ್ರಪಂಚವ್ಯವಹಾರದಲ್ಲಿರುವವರ ಸ್ವಭಾವದಂತಿಲ್ಲವಾದುದರಿಂದ ವೇದಮಂತ್ರಗಳು 'ಅಶರೀರವಾಕ್ಕೆ'ನಿಸಿ ಅಪೌರುಷೇಯವಾಗಿದೆ.

ಮನೋನ್ಮನೀ ಭಾವದಲ್ಲಿರುವ ಈ ಮಹಾಜ್ಞಾನಿಗಳು ಶರೀರವನ್ನು ಧರಿಸಿದ್ದರೂ ಬ್ರಹ್ಮಾಮೃತಪಾನದಲ್ಲಿ ಮಗ್ನರಾಗಿರುತ್ತಾರಾದ್ದರಿಂದ ಅಶರೀರಿಗಳಾಗಿರುತ್ತಾರೆ. ಮಹಾಜ್ಞಾನಿಗಳಾದ ಋಷಿಗಳೂ ಅವತಾರಪುರುಷರೂ ಮಾನುಷ ಶರೀರಧಾರಿಗಳಾಗಿದ್ದರೂ ದೇಹವಿಲ್ಲದವರಂತೆ ಇರುತ್ತಾರೆಂದು ಶ್ರುತಿಯು ಸಾರುತ್ತಲಿದೆ ಅಲ್ಲದೆ ಶ್ರೀಕೃಷ್ಣಪರಮಾತ್ಮನು "ಅವಜಾನಂತಿ ಮಾಂ ಮೂಢಾಃ" ಮುಂತಾದ ಗೀತಾಶ್ಲೋಕಗಳಲ್ಲಿ ಅಪ್ಪಣೆ ಕೊಡಿಸಿರುವನು. ಅಲ್ಲದೆ

**ಪೈಂಗಲೋಪನಿಷತ್ತಿನಲ್ಲಿ**

ಯದಾಯತ್ಯುನ್ಮನೀ ಭಾವಸ್ತದಾ ತತ್ಪರಮಂ ಪದಮ್

**ಶ್ರೀಶಂಕರಾಚಾರ್ಯರವರು ವಿವೇಕಚೂಡಾಮಣಿಯಲ್ಲಿ**

ಬ್ರಹ್ಮಾಕಾರತಯಾ ಸದಾಸ್ಥಿತತಯಾ ನಿರ್ಮುಕ್ತ ಬಾಹ್ಯಾರ್ಥಧೀ ।

ಎಂದು ಹೇಳಿರುವ ವಾಕ್ಯಗಳೂ ಇವೆ. ಪ್ರಪಂಚವ್ಯವಹಾರದಲ್ಲಿಯೇ ಬುದ್ಧಿವಿಕಸಿತದ ವಿಚಾರದಲ್ಲಿ ಎಷ್ಟೋ ತಾರತಮ್ಯಗಳಿರುವುದನ್ನು ನಾವು ಪ್ರತ್ಯಕ್ಷವಾಗಿ ನೋಡುತ್ತಿಧೇವೆ. ವೇದವನ್ನು ಹೊರಸೂಸಿದ ಮಹಾತ್ಮರಾದ ಋಷಿಗಳ ಮತ್ತು ಅವತಾರಪುರುಷರ ಬುದ್ಧಿವಿಕಸಿತದ ಸ್ಥಿತಿಯನ್ನು ಸಾಧಾರಣ ಮನುಷ್ಯರು ಅರಿಯಲಾರರು ಮತ್ತು ಊಹಿಸುವುದಕ್ಕೂ ಕಷ್ಟವಾದುದು ಆದುವರಿಂದ ಅವತಾರಪುರುಷರು ಮತ್ತು ಮಹಾತ್ಮರಾದ ಋಷಿಗಳಿಂದ ಹೊರಟ ವಾಕ್ಕುಗಳು ಅಶರೀರವಾಕ್ಕಾಗಿರುವುದರಿಂದ ವೇದಮಂತ್ರಗಳು ಅಪೌರುಷೇಯವಾದವುಗಳು

ಈ ಮೇಲಿನ ತಾತ್ಪರ್ಯಸಮರ್ಥನೆಗೆ ವೇದಗಳು ಪೂರ್ಣಸಿದ್ಧಿಯನ್ನು ಪಡೆದ ಮಹಾತ್ಮರ ಪ್ರತಿಭಾಭಂಡಾರಗಳೆಂದು ತೈತ್ತರೀಯಾರಣ್ಯಕ ೧. ೨. ರಲ್ಲಿ ಹೇಳಿದೆ. ಇಂತಹ ಮಹಾತ್ಮರೇ ಈಶ್ವರಮುಖದಿಂದ ಸೃಷ್ಟಿಸಲ್ಪಟ್ಟ ವೇದದ್ರಷ್ಟ್ರುಗಳಾದ ಮಹರ್ಷಿಗಳು. ಯಾವ ಈಶ್ವರನು ಜಗತ್ತನ್ನು ಸೃಷ್ಟಿಮಾಡಿದನೋ ಅವನೇ ಪ್ರಜೆಗಳ ಉದ್ಧಾರಕ್ಕೋಸ್ಕರ ಇಂತಹ ಮಹರ್ಷಿಗಳನ್ನು ನಿಮಿತ್ತಮಾಡಿಕೊಂಡು ಸಂಹಿತೆ, ಬ್ರಾಹ್ಮಣ, ಉಪನಿಷತ್ತುಗಳ ರೂಪವಾದ ವೇದವನ್ನು ಹೊರಹೊರಡಿಸಿದನು. ಈ ವಿಧವಾದ ಕಾರ್ಯವು ಸಾಮಾನ್ಯರಾದ ಮನುಷ್ಯರಿಂದ ಸಾಧ್ಯವಾಗಲಾರದು. ಹೀಗೆ ಹೊರಹೊರಟ ವೇದಮಂತ್ರಗಳನ್ನು ಯಾರು ಯಾರು ಪ್ರಥಮದಲ್ಲಿ ಪುನಶ್ಚರಿಸಿ ಸಿದ್ಧಿಯನ್ನು ಪಡೆದರೋ ಅವರನ್ನೇ ಮಂತ್ರಗಳಿಗೆ ಋಷಿಗಳೆಂದು ತಿಳಿಸಲಾಗಿದೆ.

# ೩. ವೇದವಿಭಾಗ

ವೇದವಿಭಾಗ ವಿಷಯವನ್ನು ವೀಣೆಯ ಸಮನ್ವಯದ ವಿಚಾರಗಳನ್ನಿಟ್ಟು ಕೊಂಡು ವಿಮರ್ಶಿಸೋಣ. ವೀಣೆಯೆಂಬ ಸಾಧಾರಣ ನಾಮದಿಂದ ಸಮಷ್ಟಿಯಲ್ಲಿ ವೀಣೆಯು ಒಂದು ವಾದ್ಯವೆನಿಸಿಕೊಳ್ಳುವುದು. ಈ ವೀಣೆಯಲ್ಲಿ ಅಂತರ ಮತ್ತು ಅಂತರಾಂತರ ವಿಭಾಗಗಳು ಅನೇಕವಾಗಿವೆ. ಇದರಂತೆ ವೇದವೆಂಬ ನಾಮದಿಂದ ವೇದವು ಒಂದೇ ರಾಶಿಯಂತೆ ತೋರುವುದು. ಅಂತರ ವಿಭಾಗಗಳಿಂದ ವೇದವು ಋಗ್ಯಜುಸ್ಸಾಮಾಥರ್ವಣಗಳೆಂಬ ನಾಲ್ಕು ಭಾಗವಾಗಿದೆ. ಈ ನಾಲ್ಕು ವೇದಗಳಲ್ಲಿಯೂ ಅಂತರಾಂತರ ವಿಭಾಗಗಳಿವೆ. ವೀಣೆಯಲ್ಲಿ ಸಾರಣೀ ಪಂಚಮಾ ಮತ್ತು ಮಂದ್ರದ ತಂತಿಗಳು ಪ್ರಧಾನಗಳಾಗಿಯೂ ಅನುಮಂದ್ರದ ತಂತಿಯು ಪ್ರಧಾನವಾದುದನ್ನು ಅನುಸರಿಸಿರುವುದಾಗಿಯೂ ಇವೆ. ಇದರಂತೆ ವೇದದಲ್ಲಿ ಋಗ್ಯಜುಸ್ಸಾಮಗಳಾದ ಮೂರು ವೇದಗಳು ಪ್ರಧಾನವಾದವು. ಅಥರ್ವಣವೇದವು ಅನುಮಂದ್ರದ ತಂತಿಯಂತೆ ಮೂರುವೇದಗಳನ್ನೂ ಅನುಸರಿಸಿ ಶೇಷಾಂಶವನ್ನು ಪೂರ್ಣಮಾಡುವುದರ ಮೂಲಕ ಮಂಗಳವನ್ನುಂಟು ಮಾಡುವುದಾಗಿದೆ.

ವೀಣೆಯಲ್ಲಿನ ಪ್ರಧಾನವಾದ ಸಾರಣೀ, ಪಂಚಮಾ, ಮಂದ್ರದ ತಂತಿಗಳಲ್ಲಿ ಪ್ರತಿಯೊಂದು ತಂತಿಯೂ ತನ್ನ ನಾದದಿಂದ ಪ್ರಧಾನತ್ವೇನ ಇದ್ದರೂ ಇತರ ತಂತಿಗಳ ನಾದವನ್ನು ಸ್ವಲ್ಪಮಟ್ಟಿಗೆ ಅಂತರ್ಭೂತವಾಗಿ ಒಳಗೊಂಡಿರುವುದು. ಆದುದರಿಂದ ತಂತಿಯ ನಾದದಲ್ಲಿಯೂ, ಅಂತರ್ವಿಭಾಗಗಳಿವೆ. ವೀಣೆಯ ನಾಲ್ಕು ತಂತಿಗಳು ಜ್ಞಾನ, ಕ್ರಿಯಾ, ಇಚ್ಛಾಶಕ್ತಿಗಳ ತತ್ವವಾಗಿವೆಯೆಂದು ಪ್ರಥಮ ಪ್ರಕರಣದಲ್ಲಿ ತಿಳಿಸಿತಷ್ಟೆ! ಜ್ಞಾನಶಕ್ತಿಯು ತನ್ನ ಜ್ಞಾನಶಕ್ತಿಪ್ರಧಾನತ್ವೇನ ಇದ್ದರೂ ಕ್ರಿಯಾ ಇಚ್ಛಾಶಕ್ತಿಗಳ ಅಲ್ಪಭಾಗಗಳನ್ನು ಒಳಗೊಂಡೇ ಇರುವುದು. ಕ್ರಿಯಾಶಕ್ತಿಯು ತಾನು ಪ್ರಧಾನತ್ವೇನ ಇದ್ದರೂ, ಜ್ಞಾನ ಇಚ್ಛಾಶಕ್ತಿಗಳ ಅಲ್ಪಭಾಗಗಳನ್ನು ಒಳಗೊಂಡೇ ಇರುವುದು. ಇದರಂತೆಯೆ ಇಚ್ಛಾಶಕ್ತಿಯು ಜ್ಞಾನ ಕ್ರಿಯಾಶಕ್ತಿಗಳ ಕೊಂಚಭಾಗವನ್ನು ಅಂತರ್ಭೂತವಾಗಿ ತನ್ನಲ್ಲಿ ಹೊಂದಿಯೇ ಇದೆ. ಆದುದರಿಂದ ಶಕ್ತಿಗಳಲ್ಲಿಯೂ ಅಂತರ್ವಿಭಾಗಗಳಾಗಿವೆ. ಇನ್ನೂ ಹೇಗೆಂದರೆ – ಸತ್ವರಜಸ್ತಮೋಗುಣಗಳಲ್ಲಿಯೂ ಸತ್ವಗುಣವು ಸತ್ವಸತ್ವ, ಸತ್ವರಜಸ್ಸು, ಸತ್ವತಮಗಳೆಂಬ ಅಂತರ್ವಿಭಾಗಗಳನ್ನು ಹೊಂದಿರುವುದು. ಇದ ರಂತೆಯೆ ರಜಸ್ತಮೋಗುಣಗಳಿಗೂ ಅನ್ವಯವು.

ಮೇಲಿನ ವಿಭಾಗಗಳ ತತ್ವದಂತೆ ಋಗ್ಯಜುಸ್ಸಾಮಗಳಾದ ಮೂರು ವೇದಗಳಲ್ಲಿ ಪ್ರತಿಯೊಂದು ವೇದವೂ ತಾನು ಪ್ರಧಾನತ್ವೇನ ಇದ್ದರೂ ಇತರ ಎರಡು ವೇದಗಳ ಸಾರವನ್ನು ಅಂತರ್ಭೂತವಾಗಿ ಒಳಗೊಂಡಿರುವುದು. ಪ್ರತಿ ವೇದದ ಅಂತರ್ವಿಭಾಗಗಳೇ ಸಂಹಿತೆ, ಬ್ರಾಹ್ಮಣ, ಉಪನಿಷತ್ತುಗಳು ಸಂಹಿತೆಯು ದೇವತಾ ಗುಣವರ್ಣನವನ್ನೂ, ಬ್ರಾಹ್ಮಣವು ಕರ್ಮವಿವರಣವನ್ನೂ, ಉಪನಿಷತ್ತು ಉಪಾಸನಾ ವಿಚಾರಗಳನ್ನೂ ಪ್ರಧಾನತ್ವೇನ ನಿರೂಪಿಸುವುವು. ಋಗ್ವೇದವು ದೇವತಾ ಗುಣವರ್ಣನೆಯ ಪ್ರಧಾನತ್ವವನ್ನು ಹೊಂದಿದ್ದರೂ ಯಜುರ್ವೇದದ ತತ್ವವಾದ ಕರ್ಮ, ಸಾಮವೇದದ ತತ್ವವಾದ ಉಪಾಸನಾ ವಿಚಾರಗಳನ್ನು ಅಂತರ್ಭೂತವಾಗಿ ಒಳಗೊಂಡೇ ಇರುವುದು. ಇದರಂತೆ ಯಜುರ್ವೇದವು ಕರ್ಮಪ್ರಧಾನತ್ವವನ್ನು ಹೊಂದಿದ್ದರೂ ಋಗ್ವೇದದ ತತ್ವವಾದ ದೇವತಾಗುಣವರ್ಣನೆ, ಸಾಮವೇದದ ತತ್ವವಾದ ಉಪಾಸನಾವಿಚಾರವನ್ನು ಅಂತರ್ಭೂತವಾಗಿ ಒಳಗೊಂಡೇ ಇರುವುದು ಸಾಮವೇದವು ಕೂಡ ಉಪಾಸನಾಪ್ರಧಾನತ್ವವಾದದ್ದಾದರೂ ಅಂತರ್ಭೂತವಾಗಿ ದೇವತಾವರ್ಣನೆಯು ಜ್ಞಾನ ಮತ್ತು ಕರ್ಮಶಕ್ತಿಯನ್ನು ಅಂತರ್ಭೂತವಾಗಿ ಒಳಗೊಂಡೇ ಇರುವುದು. ಈ ತತ್ವಗಳಿಂದ ಋಗ್ಯಜುಸ್ಸಾಮಗಳಾದ ಮೂರು ವೇದಗಳಲ್ಲಿ ಪ್ರತಿಯೊಂದು ವೇದವೂ ಸಂಹಿತೆ, ಬ್ರಾಹ್ಮಣ, ಉಪನಿಷತ್ತುಗಳೆಂಬ ಮೂರು ಮೂರು ಅಂತರ್ವಿಭಾಗಗಳುಳ್ಳದ್ದಾಗಿದೆ. ಆರಣ್ಯಕ ಉಪನಿಷತ್ತುಗಳೆರಡೂ ಒಂದೇ ಈ ಅಂತರ್ವಿಭಾಗಗಳು ವೀಣೆಯ ಅನ್ವಯಕ್ಕೆ ಹೊಂದಿಕೆಯಾಗಿರುವುವು. ಪ್ರತಿ ವೇದದಲ್ಲಿಯೂ ಮೂರು ಮೂರು ಭಾಗಗಳು ಇರುವುದಕ್ಕೆ ಅನುಸಾರವಾಗಿ ಶ್ರೀ ವಿದ್ಯಾರಣ್ಯಸ್ವಾಮಿಗಳವರು ಶಂಕರವಿಜಯದ ಪ್ರಥಮಸರ್ಗದಲ್ಲಿ ವೇದವು ಕರ್ಮ, ಜ್ಞಾನ, ಯೋಗ (ಉಪಾಸನಾ)ಗಳೆಂಬ ಮೂರು ಪಂಗಡಗಳಾಗಿರುವು ದೆಂದು 'ಕಾಂಡತ್ರಯಾತ್ಮಕೇವೇದೆ' ಎಂದು ಹೇಳಿರುವರು. ಸಂಹಿತೆ, ಬ್ರಾಹ್ಮಣ, ಉಪನಿಷತ್ತುಗಳೆಂಬ ವೇದವು ಒಂದೇ ರಾಶಿಯು. ಈ ರಾಶಿಯೊಳಗೆ ಕರ್ಮ, ಜ್ಞಾನ, ಉಪಾಸನಾ ಬೋಧಕಗಳಾದ ಮಂತ್ರಗಳು ಎಲ್ಲಿದ್ದರೂ ಅವುಗಳನ್ನು ಅನುಸರಿಸಿ ಮೂರು ಕಾಂಡಗಳಾಗಿವೆ.

ವೇದವು ಮಂತ್ರ, ಬ್ರಾಹ್ಮಣಗಳೆಂಬೆರಡು ನಾಮಗಳಿಂದಲೂ ಕರೆಯಲ್ಪಡು ವುದು. "ಮಂತ್ರಬ್ರಾಹ್ಮಣಯೋಃ ವೇದನಾಮಧೇಯಂ" ಎಂಬದಾಗಿ ಕಾತ್ಯಾ ಯನ ಸೂತ್ರದಲ್ಲಿಯೂ ಹೇಳಿದೆ. ಮಂತ್ರ, ಬ್ರಾಹ್ಮಣಗಳೆಂಬೆರಡು ಹೆಸರಿನಿಂದ ವೇದವನ್ನು ಕರೆಯುವ ತತ್ವವೇನೆಂದರೆ - ಮಂತ್ರವೆಂದರೆ "ಮನನಾತ್, ತ್ರಾಣನಾತ್, ಮಂತ್ರಃ (ಮನ - ಅವಬೋಧನೇ, ತ್ರಪು - ರಕ್ಷಣೆ)" ತಿಳಿಯುವುದರ ದೆಸೆಯಿಂದಲೂ ರಕ್ಷಿಸುವುದರ ದೆಸೆಯಿಂದಲೂ 'ಮಂತ್ರ' ವೆಂದು

ಹೆಸರು ಬ್ರಾಹ್ಮಣವೆಂದರೆ :- ಬ್ರಹ್ಮಾಣಾಂ ಆತ್ಮಾನಂ ಇತರಾಂಶ್ಚ ನಯತೀತಿ-ಬ್ರಾಹ್ಮಣಃ'' ಮತ್ತು ''ಬ್ರಹ್ಮ ವೇದಃ ತದರ್ಥಂ ಯಜ್ಞಾದ್ಯೌಪಯೋಗಿಕಂ ನಯತೀತಿ-ಬ್ರಾಹ್ಮಣಃ (ನಿಜ್‌ಪ್ರಾಪಣೆ)'' ಬ್ರಹ್ಮನನ್ನು ಉಪಾಸಕನನ್ನು ಹೊಂದಿಸುವುದು ಬ್ರಾಹ್ಮಣ ಮತ್ತು ವೇದವನ್ನು ಯಜ್ಞವೇ ಮುಂತಾದ ಕರ್ಮಕ್ಕೆ ಅನುಕೂಲವಾದ ಅರ್ಥವನ್ನು ಬೋಧಿಸುವುದು 'ಬ್ರಾಹ್ಮಣ' ಎಂದರ್ಥ. ಕರ್ಮ, ಜ್ಞಾನ, ಉಪಾಸನಾ ಮಾರ್ಗದಲ್ಲಿನ ದೇವತಾ ವಿಚಾರಜ್ಞಾನವು ಪ್ರಥಮದಲ್ಲಿ ಅವಶ್ಯಕವಾಗಿ ಬೇಕು. ವೇದದಲ್ಲಿ ಈ ಗುಣಜ್ಞಾನವಿದ್ಯೆಗಳನ್ನು ಬೋಧಿಸುವುವುಗಳಿಗೆ ಮಂತ್ರಗಳೆಂದು ಹೆಸರು. ದೇವತಾಶಕ್ತಿಯನ್ನೊಳಗೊಂಡು ಉಪಾಸಕರನ್ನು ರಕ್ಷಿಸುವುದಾದುದರಿಂದಲೂ ಮಂತ್ರವೆನ್ನಲ್ಪಡುವುದು. ವಿಚಾರಜ್ಞಾನದ ಅನಂತರ ಕರ್ತನ ಕಾರ್ಯಪ್ರವರ್ತನೆಯು ಯಥಾವತ್ ಉಂಟಾಗುವುದು. ದೇವತಾಕರ್ಮದ ಮತ್ತು ಉಪಾಸನೆಯ ವಿವರವನ್ನು ಬೋಧಿಸುವುವುಗಳಿಗೆ ಬ್ರಾಹ್ಮಣಗಳೆಂಬ ನಾಮಧೇಯವು. ದೇವತಾಗುಣವರ್ಣನೆಯು ಸಂಹಿತೆ, ಬ್ರಾಹ್ಮಣ, ಉಪನಿಷತ್ತುಗಳಾದ ವೇದರಾಶಿಯಲ್ಲಿ ಎಲ್ಲಿದ್ದರೂ ಮಂತ್ರವೆನಿಸುವುದು. ದೇವತಾ ಕರ್ಮೋಪಾಸನೆಯ ಕಾರ್ಯಬೋಧಕವಾದವುಗಳು ಸಂಹಿತೆ, ಬ್ರಾಹ್ಮಣ, ಉಪನಿಷತ್ತುಗಳಾದ ವೇದರಾಶಿಯಲ್ಲಿ ಎಲ್ಲಿದ್ದರೂ ಬ್ರಾಹ್ಮಣವೆನಿಸುವುವು

ಹೀಗೆ ವೇದವೆಂಬ ರಾಶಿಯನ್ನು ಎರಡುಭಾಗದ ನಾಮಧೇಯಗಳೆಂದರೆ ಕರ್ಮ ಮತ್ತು ಜ್ಞಾನಕಾಂಡಗಳೆಂಬ ಎರಡು ಪಂಗಡಗಳಲ್ಲಿಯೇ ಅಡಕಮಾಡಿ ಕರೆಯುವ ತತ್ವವೇ ವೇದವನ್ನು ಮಂತ್ರ, ಬ್ರಾಹ್ಮಣಗಳೆಂಬ ಎರಡು ನಾಮಗಳಿಂದ ಹೇಳಿರುವುದಾಗಿದೆ ವೀಣೆಯಲ್ಲಿನ ತತ್ವಕ್ಕೂ ಇದು ಸಮನ್ವಯವಾಗುವುದು. ಸಾರಣೀ, ಪಂಚಮಾ, ಮಂದ್ರದ, ಅನುಮಂದ್ರದ ತಂತಿಗಳಲ್ಲಿ ಕಾರ್ಯಕ್ಕೆ ಪ್ರಧಾನವಾಗಿರುವುದು ಸಾರಣೀ ಮತ್ತು ಪಂಚಮಾ ಅಂದರೆ ಈ ತಂತಿಗಳ ತತ್ವಗಳಾದ ಜ್ಞಾನ ಕ್ರಿಯಾಶಕ್ತಿಗಳೆರಡೇ ಪ್ರಧಾನವಾದವುಗಳು. ಸಾಮವೇದದ ಮಂತ್ರವು ಹೇಗ ಮೂಲತಃ ಋಗ್ವೇದದ್ದೋ ಹಾಗೆಯೇ ಮಂದ್ರತಂತಿಯ ತತ್ವವಾದ ಇಚ್ಛಾಶಕ್ತಿಯು ಜ್ಞಾನಶಕ್ತಿಯ ಪ್ರಧಾನತ್ವವನ್ನು ಹೊಂದಿರುವುದರಿಂದ ಕಾರ್ಯದಲ್ಲಿ ಕ್ರಿಯಾ, ಜ್ಞಾನಶಕ್ತಿಗಳೇ ಪ್ರಧಾನಗಳೆಂದೆನಿಸಿಕೊಂಡಿವೆ. ಈ ತತ್ವದಮೇಲೆಯೇ ವೇದವನ್ನು ಮಂತ್ರ, ಬ್ರಾಹ್ಮಣಗಳೆಂಬ ಅಥವಾ ಪೂರ್ವ, ಉತ್ತರಕಾಂಡಗಳೆಂಬ ಎರಡು ಹೆಸರಿನಿಂದಲೇ ಕರೆಯುವುದಾಗಿದೆ. ಮುಖ್ಯವಾಗಿ, ವೇದವನ್ನು ಕಾಂಡತ್ರಯವೆಂದು ಮತ್ತು ಮಂತ್ರಬ್ರಾಹ್ಮಣಗಳೆಂದು ಕರೆಯಲ್ಪಡುವವುಗಳೆರಡೂ ಏಕತತ್ವಾರ್ಥಗಳುಳ್ಳವುಗಳು.

ಮೇಲಿನ ವಿಭಾಗದಲ್ಲಿ ಅಥರ್ವಣವೇದದ ವಿಚಾರವು ಬರಲಿಲ್ಲ ಅಥರ್ವಣ

ವೇದವು "ಕಾರ್ಯಸಿದ್ಧ್ಯೇನ ಚತುರ್ಥಾ ಪರಿಕೀರ್ತಿತಾ । ಅಥರ್ವಾಂಗಿರಸಂ ರೂಪಂ ಸಾಮಋಗ್ಯಜುರಾತ್ಮಕಂ । " ಎಂಬ ಶ್ರುತ್ಯಾಧಾರದಂತೆ ಋಗ್ಯಜುಸ್ಸಾಮಗಳಾದ ಮೂರು ವೇದಗಳನ್ನೂ ಅನುಸರಿಸಿ ಶೇಷಾಂಶವನ್ನು ಪೂರ್ತಿಮಾಡಿ ರಕ್ಷಣೆ (ಮಂಗಳ)ಯ ಸ್ವರೂಪವಾದುದೆಂದು ವೀಣೆಯ ಅನುಮಂದ್ರದ ತಂತಿಗೆ ಅನ್ವಯಿಸಿ ಪ್ರಥಮಪ್ರಕರಣದಲ್ಲಿಯೇ ತಿಳಿಸಿದೆಯಷ್ಟೆ! ಅಥರ್ವಣವೇದವು ಋಗ್ಯಜುಸ್ಸಾಮ ವೇದಗಳ ಶೇಷಭಾಗಗಳನ್ನು ಪೂರ್ತಿಮಾಡುವುದರಿಂದ ಮೂರು ವೇದಗಳನ್ನೂ ಅನುಸರಿಸಿ, ಮೂರುವೇದಗಳಿಗೂ ಸಂಬಂಧಪಟ್ಟ ಶೇಷಾಂಶವನ್ನು ಪೂರ್ತಿ ಮಾಡುವಂತಹ ಮತ್ತು ಸರ್ವಸಂಶಯಗಳನ್ನೂ ಪರಿಹರಿಸುವಂತಹ ಮಂತ್ರ ಗಳನ್ನು ಒಳಗೊಂಡಿರುವುದು ರಕ್ಷಣೆಯ ಸ್ವರೂಪವಾದುದೆಂದರೆ ಜ್ಞಾನಮಾರ್ಗ ದಲ್ಲಿ ಸರ್ವ ಅಜ್ಞಾನಶಕ್ತಿಗಳನ್ನೂ ನಿಗ್ರಹಿಸಿ ಆತ್ಮಸಾಕ್ಷಾತ್ಕಾರ ಸ್ವರೂಪವಾದ ಮಂಗಳವನ್ನುಂಟುಮಾಡುವುದನ್ನು ನಿರೂಪಿಸುವುದು. ಕರ್ಮಮಾರ್ಗದಲ್ಲಿ ಕರ್ಮಕ್ಕೆ ವ್ಯತಿರಿಕ್ತವಾದ ದೋಷಗಳನ್ನೆಲ್ಲಾ ಪರಿಹರಿಸಿ ಕರ್ಮಪೂರ್ಣಮಾಡುವ ಶಕ್ತಿಯನ್ನು ನಿರೂಪಿಸುವುದು ಹೇಗೆಂದರೆ - ಯಜ್ಞ ಮುಂತಾದ ಕರ್ಮಗಳಲ್ಲಿ ಬ್ರಹ್ಮತ್ವದ ಸ್ಥಳದ ಪ್ರಾಶಸ್ತ್ಯವಿರುವಂತೆ. ಅಲ್ಲದೆ ಅಥರ್ವಣವೇದಶಕ್ತಿಯು ಭೂತಪ್ರೇತ ಪಿಶಾಚಾದಿಗಳನ್ನು ತನ್ನ ಶಕ್ತಿಯಿಂದ ಉಚ್ಚಾಟನೆಮಾಡಿ ಜನಗಳನ್ನು ರಕ್ಷಿಸುವುದು. ದುಷ್ಟರಾದ ಶತ್ರುಗಳನ್ನು ಮೂಲೋತ್ಪಾಟನೆಮಾಡಿ ಧರ್ಮೋದ್ಧಾರ ವನ್ನು ಮಾಡುವುದು. ಅಥರ್ವಣ ಮಂತ್ರದಿಂದ ಅಭಿಮಂತ್ರಿತವಾದ ಅಸ್ತ್ರಗಳೇ ಸಕಲ ದೇವತಾ ಮಂತ್ರಾಸ್ತ್ರಗಳೆನಿಸುವುವು. 'ಅಥರ್ವಾಂಗಿರಸಂ ಪುಚ್ಛಂಪ್ರತಿಷ್ಠಾ' ಎಂಬ ಶ್ರುತ್ಯಾಧಾರದಂತೆ ಮೂರು ವೇದಗಳನ್ನು ಅನುಸರಿಸಿ ಮೂರುವೇದಕ್ಕೂ ಅಂತ್ಯದಲ್ಲಿ ವೇದಪೂರ್ಣತೆಯನ್ನುಂಟುಮಾಡುವ ನಾಲ್ಕನೇ ವೇದವೆನಿಸಿಕೊಂಡು "ಅಥರ್ವಃ ಶಿವಃ, ಅಥರ್ವಃ ಬ್ರಹ್ಮಃ" ಎಂಬ ಆಧಾರದಂತೆ ನಿರತಿಶಯಾ ನಂದವಾದ ಜ್ಞಾನವನ್ನುಂಟುಮಾಡುವ ಶಕ್ತಿಯುಳ್ಳದ್ದು ಅಥರ್ವಣವೇದವು.

## ೪. ವೇದಕ್ಕೂ ಕಾವ್ಯಕ್ಕೂ ಇರುವ ತಾರತಮ್ಯ.

ಕಾವ್ಯವು ಲೌಕಿಕಭಾಷೆಯೆಂದರೆ ಲೋಕವ್ಯವಹಾರದ ಭಾಷೆ. ಮಂತ್ರವು ವೇದಭಾಷೆಯೆಂದರೆ ದೇವಭಾಷೆ. ಲೌಕಿಕಭಾಷೆಯೆನಿಸುವಕಾವ್ಯವು ಹೇಗೆ ಹೊರಪಟ್ಟಿತೆಂಬ ವಿಚಾರವನ್ನು ತೆಗೆದುಕೊಳ್ಳೋಣ. ಕಾವ್ಯಕ್ಕೆ ಆದಿ ಎನಿಸುವುದೇ ಶ್ರೀಮದ್ರಾಮಾಯಣವು 'ಆದಿಕಾವ್ಯಮಿದಂ ತ್ವಾರ್ಷಂ ಪುರಾವಾಲ್ಮೀಕಿನಾಕೃತಂ' ಎಂದು ಯುದ್ಧಕಾಂಡದ ೧೩೧ ನೇ ಸರ್ಗದಲ್ಲಿಯೂ "ಕಾವ್ಯಂ ರಾಮಾಯಣಂ ಕೃತ್ಸ್ನಂ ಸೀತಾಯಾಶ್ಚರಿತಂ ಮಹತ್" ಎಂದು ಬಾಲಕಾಂಡದ ೪ ನೇ ಸರ್ಗ ದಲ್ಲಿಯೂ ಹೇಳಿದೆ. ಆದುದರಿಂದ ಶ್ರೀಮದ್ರಾಮಾಯಣವು ಹೇಗೆ ಆದಿಕಾವ್ಯ

ವೆನಿಸಿತೆಂಬ ವಿಚಾರವನ್ನು ವಿವರಿಸಿ ಕಾವ್ಯಕ್ಕೂ ವೇದಕ್ಕೂ ಇರುವ ತಾರತಮ್ಯ ವನ್ನು ತಿಳಿಯೋಣ.

ಋಗ್ವೇದದಲ್ಲಿರುವ ಶ್ರೀಮದ್ರಾಮಾಯಣ ಮಹಾಮಂತ್ರವನ್ನು ನಾರದ ಮಹರ್ಷಿಗಳು ವಾಲ್ಮೀಕಿಮಹರ್ಷಿಗಳಿಗೆ ಉಪದೇಶಿಸಿದರು. ವಾಲ್ಮೀಕರು ಆ ಶ್ರೀರಾಮಕಥಾ ತತ್ವವನ್ನೇ ಮನನಮಾಡುತ್ತ ತಮಸಾನದಿಗೆ ಸ್ನಾನಕ್ಕಾಗಿ ಹೋದಾಗ ಆಧಿವ್ಯಾಧಿ ರಹಿತವಾದ, ಮನೋಹರವಾದ ಧ್ವನಿಗಳುಳ್ಳ, ರತಿಕ್ರೀಡೆ ಯಲ್ಲಿ ಸುಖವನ್ನು ಅನುಭವಿಸುತ್ತಿದ್ದ ಕ್ರೌಂಚಪಕ್ಷಿಯುಗ್ಮವನ್ನು ನದೀತೀರದಲ್ಲಿ ಕಂಡರು. ಈ ಸಮಯಕ್ಕೆ ಸರಿಯಾಗಿ ಒಬ್ಬ ನಿಷಾದನು ಬಂದು ಕಾಮೋದ್ರೇಕ ದಿಂದ ಯುಗ್ಮರೂಪದಲ್ಲಿ ಸುಖಪಡುತ್ತಿದ್ದ ಗಂಡು ಮತ್ತು ಹೆಣ್ಣು ಹಕ್ಕಿಗಳಲ್ಲಿ ಗಂಡುಪಕ್ಷಿಯನ್ನು ಹೊಡೆದನು. ವಾಲ್ಮೀಕಿಋಷಿಗಳು ಗಂಡುಪಕ್ಷಿಯ ಮರಣ ಕ್ಕೋಸ್ಕರ ಶೋಕಪಟ್ಟು ಪಕ್ಷಿಯನ್ನು ಕೊಂದ ವ್ಯಾಧನಿಗೆ ಅನೇಕಕಾಲ ಸ್ಥಿತಿ ಯನ್ನು ಹೊಂದಬೇಡವೆಂದು ಶಪಿಸಿದರು ಅಲ್ಲದೆ ಪಕ್ಷಿಯ ಮರಣಕ್ಕೋಸ್ಕರ ತನ್ನಿಂದ ಎಂತಹ ಮಾತು ಹೊರಟಿತೆಂದು ಪಶ್ಚಾತ್ತಾಪಪಡುತ್ತಾ ಶಿಷ್ಯನಾದ ಭರದ್ವಾಜನನ್ನು ಕುರಿತು ಕ್ರೌಂಚಸ್ತ್ರೀಪಕ್ಷಿಯ ವಿಷಯವಾಗಿ ಶೋಕಪೀಡಿತನಾದ ನನ್ನ ಮುಖದಿಂದ ಹೊರಟ ಶೋಕರೂಪವಾದ ಈ ವಾಕ್ಯವು ನಾಲ್ಕು ಪಾದ ಗಳಿಂದ ಯುಕ್ತವಾಗಿಯೂ, ಛಂದೋಬದ್ಧವಾಗಿಯೂ, ತಾಳಗಳೊಡಗೂಡಿ ವೀಣೆಯಿಂದ ಬಾರಿಸುವುದಕ್ಕೆ ಯೋಗ್ಯವಾಗಿಯೂ ಇರುವಕಾರಣ ಶೋಕದಿಂದ ಹೊರಟ ವಾಕ್ಯಗಳೇ ಮಂಗಳರೂಪವಾದ ಶ್ಲೋಕವೇ ಆಗಲಿ ಪ್ರಾಕಾರಾಂತರವಾಗಿ ಆಗಬೇಡವೆಂದು ಹೇಳಿದರು ಶಿಷ್ಯನಾದ ಭರದ್ವಾಜನು ಗುರುವಾದ ವಾಲ್ಮೀಕಿ ಮಹರ್ಷಿಗಳ ಸರ್ವೋತ್ತಮವಾದ ವಚನವನ್ನು ಪ್ರತಿಗ್ರಹಿಸಿದನು. ಶಿಷ್ಯನು ಪರಿಗ್ರಹಿಸಿದ್ದಕ್ಕೆ ವಾಲ್ಮೀಕರು ಸಂತೋಷಗೊಂಡರು.

ಈ ಮೇಲಿನ ರಾಮಾಯಣಕಥಾ ತತ್ವದಲ್ಲಿ ಕಾವ್ಯವು ಹೊರಹೊಮ್ಮಿದ, ಕಾವ್ಯಕ್ಕೂ ವೇದಕ್ಕೂ ಇರುವ ತಾರತಮ್ಯದ, ಕಾವ್ಯವು ಹೊಂದಿರುವ ಪ್ರಾಶಸ್ತ್ಯದ ವಿಚಾರಗಳ ರಹಸ್ಯಾರ್ಥಗಳು ಇರುವುವು ಇವನ್ನು ವಿವರಿಸೋಣ ವಾಲ್ಮೀಕರು ಶ್ರೀರಾಮಕಥಾಮೃತವನ್ನು ನಾರದಮಹರ್ಷಿಗಳಿಂದ ಉಪದೇಶಹೊಂದಿ ಅನಂತರ ತಮಸಾನದೀತೀರದಲ್ಲಿ ರತಿಕ್ರೀಡೆಯಲ್ಲಿ ಯುಗ್ಮಸ್ಥಿತಿಯಲ್ಲಿದ್ದ ಪುರುಷ ಮತ್ತು ಸ್ತ್ರೀ ಕ್ರೌಂಚಪಕ್ಷಿಗಳನ್ನು ನೋಡುತ್ತಿದ್ದರೆಂಬುದರ ತತ್ವಾರ್ಥವು - ತಮಗೆ ಉಪದೇಶಿಸಲ್ಪಟ್ಟ ಶ್ರೀರಾಮಕಥಾಮೃತವನ್ನು ವೇದಗಾನದಿಂದಲೇ ವಿಸ್ತರಿಸ ಬೇಕೆಂಬುದರ ಮತ್ತು ವೇದಗಾನದ ಮಹಿಮಾಸ್ವರೂಪದ ರಹಸ್ಯಾರ್ಥವನ್ನು ಪ್ರತಿಪಾದಿಸುವುದು.

ವಾಲ್ಮೀಕರು ಕ್ರೌಂಚಪಕ್ಷಿಗಳನ್ನೇ ಕಂಡರಷ್ಟೆ! ಕ್ರೌಂಚವೆಂದರೆ:— "ಕ್ರುಂಚತಿ ಪಂಜ್ತಿರೂಪೇಣ ಗಚ್ಛತೀತಿ ಕ್ರುಙ್ಙಃ ಚ-ಪು-ಕ್ರೌಂಚಶ್ಚ ಕ್ರುಂಚ= ಗತಿಕೌಟಿಲ್ಯಾಲ್ಪೀ ಭಾವಯೋಃ" ಪಂಜ್ತಿರೂಪವಾಗಿಯೂ ಕುಟಿಲರೂಪ ವಾಗಿಯೂ ಹೋಗುವುದು ಕ್ರೌಂಚಪಕ್ಷಿ. ಅಂದರೆ ವೇದಗಾನವು ವರ್ಣ-ಸ್ವರ ಗಳಿಂದ ಕೂಡಿ ಏಕ ಸರಣಿಯಾಗಿರುವಿಕೆಯೂ, ಉದಾತ್ತಾನುದಾತ್ತ ಸ್ವರಿತ ಪ್ರಚಯಗಳೆಂಬ ಸ್ವರಗಳ ಸ್ವರೂಪವಾದ ವಕ್ರಗತಿಯಲ್ಲಿ ಸಂಚರಿಸು ವುದಾಗಿಯೂ ಇರುವ ತತ್ವಪ್ರತಿಪಾದನೆಯೇ ಕ್ರೌಂಚಪಕ್ಷಿಗಳು ಏಕಸರಣಿ ಯಿಂದಲೂ, ಕುಟಿಲಗತಿಯಿಂದಲೂ ಸಂಚರಿಸುವುದಾಗಿದೆ ಕ್ರೌಂಚಪಕ್ಷಿಗಳು ರತಿಕ್ರೀಡೆಯಲ್ಲಿ ಯುಗ್ಮರೂಪದಲ್ಲಿರುವ ಸ್ಥಿತಿಯು ತತ್ವವೇ ಪ್ರಕೃತಿರೂಪವಾದ ವರ್ಣವು (ಹೆಣ್ಣುಹಕ್ಕಿ) ವೇದಗಾನಸ್ವರದಿಂದ ಕಳಾಸ್ವರೂಪದಲ್ಲಿರುವ .ವೇದ ಪುರುಷ (ಗಂಡುಹಕ್ಕಿ) ನೊಡನೆ ಕಲೆತಿರುವ ತತ್ವವನ್ನು ಪ್ರತಿಪಾದಿಸುವುದು.

ವಾಲ್ಮೀಕರು ಯುಗ್ಮರೂಪದಲ್ಲಿದ್ದ ದಂಪತಿಪಕ್ಷಿಗಳನ್ನು ನೋಡುತ್ತಿದ್ದುದೇ ಶ್ರೀರಾಮಕಥಾಮೃತವನ್ನು ವೇದಗಾನದಿಂದಲೇ ವಿಸ್ತರಿಸಬೇಕೆಂದಿದ್ದ ವಾಲ್ಮೀಕರ ಅಂತರ್ಯದ ಆಶಯದ ತತ್ವವನ್ನು ಪ್ರತಿಪಾದಿಸುವುದು ವಾಲ್ಮೀಕರು ಯುಗ್ಮ ರೂಪದಲ್ಲಿದ್ದ ಪಕ್ಷಿಗಳನ್ನು ನೋಡುತ್ತಿರುವ ಸಮಯಕ್ಕೆ ಸರಿಯಾಗಿ ಬೇಡನು ಬಂದು ಗಂಡುಪಕ್ಷಿಯನ್ನು ಹೊಡೆದುದೇ ವರ್ಣಗಳು ಕಾವ್ಯರೂಪವನ್ನೂ, ಗದ್ಯರೂಪವನ್ನೂ ಹೊಂದಲು ವೇದಪುರುಷನಿಗೂ ವರ್ಣ-ಸ್ವರಶಕ್ತಿಗೂ ಸಂಬಂಧ ತಪ್ಪಿಸಿದ ರೀತಿಯ ತತ್ವವನ್ನು ಪ್ರತಿಪಾದಿಸುವುದು ಪಕ್ಷಿಗಳೆರಡೂ ರತಿಕ್ರೀಡೆಯಲ್ಲಿ ಸೇರಿ ಅನುಭವಿಸುತ್ತಿದ್ದ ಆನಂದಸ್ವರೂಪವೇ ವರ್ಣಶಕ್ತಿಯು ವೇದಪುರುಷನ ಸಂಬಂಧವನ್ನು ಹೊಂದುವುದರಿಂದ ವೇದಗಾನವು ಆನಂದ ಸ್ವರೂಪವಾಗಿರುವು ದೆಂಬುದನ್ನು ಪ್ರತಿಪಾದಿಸುವುದು. ಹೆಣ್ಣುಪಕ್ಷಿಯನ್ನು ವಿಧವೆಯನ್ನಾಗಿ ಮಾಡಿದ ಬೇಡನ ತತ್ವವೇ ಸೃಷ್ಟಿ ಸ್ಥಿತಿ ಕ್ರಮಗಳಲ್ಲಿನ ಒಂದು ನಿಯತಿಯ ಸ್ವರೂಪವು ಅಂದರೆ ಲೋಕವ್ಯವಹಾರದ ಭಾಷೆಯೆನಿಸುವ ಕಾವ್ಯವು ಸಹ ಈಶ್ವರನ ಕಟ್ಟಳೆ ಯಿಂದಲೇ ಆವಿರ್ಭವಿಸಿತೆಂಬ ತತ್ವಪ್ರತಿಪಾದಕವಾಗಿರುವುದು. ಪುರುಷ ಪಕ್ಷಿಯನ್ನು ವಧಿಸಿದ ವ್ಯಾಧನಿಗೆ ಬಹುಕಾಲ ಪ್ರತಿಷ್ಠಿತನಾಗಿರಬೇಡವೆಂದು ಋಷಿಗಳು ನುಡಿದ ವಚನದ ತತ್ವವೇನೆಂದರೆ:— ಲೋಕವ್ಯವಹಾರದ ಭಾಷೆಯನ್ನುಂಟುಮಾಡಿದ ಕಟ್ಟಳೆಯು ಲೋಕವ್ಯಾಪಾರ ನಡೆಯುವ ಉದ್ದೇಶ ಕ್ಕೋಸ್ಕರ ಬಂದದ್ದಾದರೂ ಆ ಕಟ್ಟಳೆಯು ಅಶಾಶ್ವತವಾದದ್ದಾಗಲೆಂಬ ತತ್ವವಾಗಿರುವುದು. ಅಂದರೆ ಕಾವ್ಯಾದಿ ಸಕಲ ಭಾಷೆಗಳೂ ನಾಶವನ್ನು ಹೊಂದತಕ್ಕ ಸ್ವಭಾವವುಳ್ಳವುಗಳಾದುದರಿಂದ ವೇದವು ನಿತ್ಯವಾದುದೆಂಬುದನ್ನು ಪ್ರತಿಪಾದಿಸುವುದು.

ಹೆಣ್ಣುಪಕ್ಷಿಯ ವಿಷಯದಲ್ಲಿ ವ್ಯಸನಾಕ್ರಾಂತನಾದ ನನ್ನಿಂದ ಹೊರಟ ಮಾತು ನಾಲ್ಕು ಪಾದಗಳುಳ್ಳದ್ದಾಗಿಯೂ, ತಾಳ ಲಯಗಳಿಂದಕೂಡಿ ವೀಣೆಯಿಂದ ನುಡಿಸುವುದಕ್ಕೆ ಯೋಗ್ಯವಾದದ್ದಾಗಿಯೂ ಇರುವ ಶ್ಲೋಕವೇ ಆಗಲಿ ಅನ್ಯಥಾ ಆಗದೇ ಇರಲೆಂದು ವಾಲ್ಮೀಕರು ಹೇಳಿದುದರ ತತ್ವವೇನೆಂದರೆ- ಮಹರ್ಷಿಗಳಿಂದ ಹೊರಟ ಕಾವ್ಯವೆನಿಸುವ ಈ ವಾಗ್ರೂಪವೂ ನಾದಬ್ರಹ್ಮವಾದ ನಾಲ್ಕುವೇದಗಳ ಸಾರವನ್ನೊಳಗೊಂಡು, ವೇದಗಾನಪ್ರಭಾವದಂತೆ ಸ್ವರ ತಾಳ ಛಂದೋಬದ್ಧವಾಗಿ ವೀಣೆಯಿಂದ ಬಾರಿಸುವುದಕ್ಕೂ ಯೋಗ್ಯವಾದದ್ದಾಗಿ, ಶ್ಲೋಕರೂಪವಾದದ್ದರಿಂದರೆ ಶ್ಲಾಘನೀಯವಾದದ್ದೇ ಹೊರತು ಅನ್ಯಥಾ ಇಲ್ಲವೆಂಬುದನ್ನು ಪ್ರತಿಪಾದಿಸುವುದು.

ಮುಖ್ಯತಾತ್ಪರ್ಯವೇನೆಂದರೆ ವರ್ಣವು ವೇದಗಾನದ ಸ್ಥಿತಿಯಲ್ಲಿ ಕಳಾ ರೂಪದಲ್ಲಿರುವ ವೇದಪುರುಷನೊಡನೆ ಸಂಬಂಧವನ್ನು ಹೊಂದುವುದು. ವೇದ ಪುರುಷನೊಡನೆ ವರ್ಣಕ್ಕೆ ಸಂಬಂಧವನ್ನು ತಪ್ಪಿಸಿದ ಸ್ಥಿತಿಯೇ ಕಾವ್ಯ ಮತ್ತು ಗದ್ಯರೂಪವಾಗಿರುವುದು ಕಾವ್ಯವೆನಿಸುವ ಶ್ಲೋಕಗಳ ಗಾನವು ವೇದಗಾನ ದಂತೆ ಕಳಾರೂಪಕ್ಕೆ ಸಾಕ್ಷಾತ್ ಸಂಬಂಧವುಂಟಾಗದಿದ್ದರೂ ಪರಂಪರಾ ಸಂಬಂಧವಿರುವುದರಿಂದ ವೇದದಂತೆಯೆ ಶ್ರೇಷ್ಠತೆಯನ್ನು ಹೊಂದಿ ಶ್ಲಾಘನೀಯ ವಾಗಿರುವುದೆಂಬುದನ್ನು ಪ್ರತಿಪಾದಿಸುವುದು ಪ್ರಪಂಚದಲ್ಲಿರುವ ಸಕಲ ಭಾಷೆ ಗಳೂ ಈ ಕಾವ್ಯರೂಪದಲ್ಲಿ ಅಡಗಿವೆ. ಅಲ್ಲದೆ ಸಂಗೀತಶಾಸ್ತ್ರವೂ ಇದಕ್ಕೆ ಸಂಬಂಧಪಟ್ಟಿರುವುದಾಗಿದೆ.

ಬೇಡನು ಕ್ರೌಂಚಪಕ್ಷಿಯನ್ನು ಕೊಂದುದು ಮತ್ತು ಪಕ್ಷಿಯ ಮರಣಕ್ಕೆ ಶೋಕಪಟ್ಟ ವಾಲ್ಮೀಕರಿಂದ ಹೊರಟ ಶ್ಲೋಕವೂ ತಮಸಾನದೀತೀರದಲ್ಲಿ ನಡೆಯಿತಷ್ಟೆ! ಇದರ ತತ್ವವೇನೆಂದರೆ — ತಮಸಾನದಿಯ ತತ್ವವೇ ಮಾಯಾ ಆವರಣ. ಈ ತತ್ವವು ಹೇಗೆಂಬುದನ್ನು ಬಹು ವಿವರಿಸಬೇಕಾಗುವುದು.

[ತಮಸಾನದಿಯ ತತ್ವವು ಮಾಯಾಆವರಣವೆಂಬುದಕ್ಕೆ ಶ್ರೀಮದ್ರಾಮಾಯಣದ ಅಂತರಾರ್ಥ ಗ್ರಂಥದಲ್ಲಿ ಶ್ರೀರಾಮಚಂದ್ರನು ವನವಾಸಕ್ಕೋಸ್ಕರ ಹೊರಟು ತಮಸಾನದೀತೀರಕ್ಕೆ ಬಂದ ಸಂದರ್ಭದಲ್ಲಿ ಬರೆದಿರುವುದು.]

ಮುಖ್ಯವಾಗಿ ಬೇಡನಿಂದ ಪಕ್ಷಿಯ ವಧೆಯೂ, ವಾಲ್ಮೀಕರ ಶೋಕ ಸೂಚಕವಾದ ವಾಕ್ಯಗಳೂ ತಮಸಾನದೀತೀರದಲ್ಲಿ ನಡೆದುದರ ತತ್ವವೇ ವೇದ ಗಾನಸ್ವರೂಪಕ್ಕೂ, ಗದ್ಯಪದ್ಯಗಳ ಸ್ವರೂಪಕ್ಕೂ ಮಧ್ಯೆ ಮಾಯಾ ಆವರಣ ವಿರುವುದೆಂಬುದನ್ನು ಪ್ರತಿಪಾದಿಸುವುದು ಇದೇ ವೇದಕ್ಕೂ ಕಾವ್ಯಕ್ಕೂ ಇರುವ ತಾರತಮ್ಯ.

ಚತುರ್ಮುಖಬ್ರಹ್ಮನು ವಾಲ್ಮೀಕರಿಗೆ ಹೇಳಿದ ವಾಕ್ಯಗಳೂ ಮೇಲಿನ ತತ್ವ ಗಳನ್ನು ದೃಢೀಕರಿಸುವುವು. ವಾಲ್ಮೀಕರು ತಮಸಾನದಿಯಿಂದ ಹೊರಟು ತಮ್ಮ

ಆಶ್ರಮಕ್ಕೆ ಸೇರಿದ ಕೂಡಲೆ ಚತುರ್ಮುಖಬ್ರಹ್ಮನು ತಾನಾಗಿಯೆ ಅವರ ಆಶ್ರಮಕ್ಕೆ ಬಂದು ಹೇಳಿದುದೇನೆಂದರೆ.—

ತಮುವಾಚ ತತೋಬ್ರಹ್ಮಾ ಪ್ರಹಸನ್ಮುನಿಪುಂಗವಂ ।
ಶ್ಲೋಕಏವ ತ್ವಯಾ ಬದ್ಧೋ ನಾತ್ರಕಾರ್ಯಾ ವಿಚಾರಣಾ ॥
ಮಚ್ಛಂದಾ ದೇವತೇ ಬ್ರಹ್ಮನ್ ಪ್ರವೃತ್ತೇಯಂ ಸರಸ್ವತೀ ।
ರಾಮಸ್ಯ ಚರಿತಂ ಸರ್ವಂ ಕುರುತ್ವ ಮೃಷಿಸತ್ತಮ ॥

ತಾತ್ಪರ್ಯ॥ ಎಲೈ ಋಷಿಶ್ರೇಷ್ಠನೇ! ಶ್ಲೋಕವನ್ನು ರಚಿಸಿದುದಕ್ಕೆ ಅನ್ಯಥಾ ತಿಳಿಯಬೇಡ, ನನ್ನ ಇಷ್ಟಾನುಸಾರವಾಗಿಯೇ ಈ ಸರಸ್ವತೀ ದೇವಿಯು ನಿನ್ನಲ್ಲಿ ಅನುಗ್ರಹಿಸಿ ಕಾವ್ಯರೂಪವಾಗಿ ಪ್ರವರ್ತಿಸುವಂತೆ ಮಾಡಿದಳು. ಯಾವ ಶ್ರೀ ರಾಮಚಂದ್ರಮೂರ್ತಿಯ ಚರಿತ್ರೆಯು ಗೂಢವಾಗಿಯೂ ಪ್ರಕಾಶವಾಗಿಯೂ ಇರುವುದೋ ಆ ರಹಸ್ಯವೆಲ್ಲಾ ನಿನಗೆ ಹೊಳೆಯುವುದು. ಪುಣ್ಯಸಂಪಾದಕ ವಾಗಿರುವ ಶ್ರೀರಾಮಚರಿತ್ರೆಯನ್ನು ಶ್ಲೋಕರೂಪವಾಗಿ ರಚಿಸು ಶ್ಲೋಕ ರೂಪವೇ ಶ್ಲಾಘನೀಯವಾದುದಾಗುವುದು ಎಂದು ಹೇಳಿದರು.

ಚತುರ್ಮುಖಬ್ರಹ್ಮನ ವಾಕ್ಕೆಂದರ ನಿಯಾಮಕ ರೂಪವಾದ ವಾಕ್ಕಲ್ಲದೆ ಸಾಧಾರಣ ವಾಕ್ಕಲ್ಲವೆಂಬ ತತ್ವವಾಗಿರುವುದು ನಾದಬ್ರಹ್ಮಸ್ವರೂಪವಾದ ವೇದ ಗಳಿಗೆ ಅಭಿಮಾನಿದೇವತೆಯಾಗಿರುವ ಸರಸ್ವತೀದೇವಿಯೇ ಶ್ಲೋಕರೂಪವಾದ ಕಾವ್ಯಗಳಿಗೂ ವಾಕ್ಕಿಗೂ ಅಭಿಮಾನಿದೇವತೆಯಾಗಿರುವಳು. ಈ ತತ್ವಸೂಚನೆಯೇ ವಾಲ್ಮೀಕರಿಗೆ ಆ ವಾಗ್ದೇವಿಯು ಅನುಗ್ರಹಿಸಿ ಕಾವ್ಯರೂಪವನ್ನು ಪ್ರಥಮದಲ್ಲಿ ಹೊರಗೆಡವಿದಳು. ಮೇಲಿನ ಶ್ರೀಮದ್ರಾಮಾಯಣದ ವಾಕ್ಕಿಗೆ ಅನುಸಾರವಾಗಿ ಸರಸ್ವತೀದೇವಿಯೆ ವೇದ, ಕಾವ್ಯ, ಭಾಷೆಗಳಿಗೂ ಅಭಿಮಾನಿದೇವತೆಯಾಗಿ ಸರ್ವರ ಬ್ರಹ್ಮರಂಧ್ರದಲ್ಲಿಯೂ ಇರುವಳೆಂಬುದಕ್ಕೆ ಪ್ರತ್ಯಾಧಾರವೂ ಇರುವುದು.

**ಯೋಗಶಿಖೋಪನಿಷತ್ತಿನಲ್ಲಿ**

ಶಾಖಾಪಲ್ಲವ ರೂಪೇಣ ತಾಲ್ವಾದಿ ಸ್ಥಾನ ಘಟ್ಟನಾತ್ ।
ಅಕಾರಾದಿ ಕ್ಷಕಾರಾಂತಾ ನ್ಯಕ್ಷರಾಣಿ ಸಮೀರಯೇತ್ ।
ಅಕ್ಷರೇಭ್ಯಃ ಪದಾನಿಸ್ಯುಃ ಪದೇಭ್ಯೋ ವಾಕ್ಯಸಮ್ಭವಃ ।
ಸರ್ವವಾಕ್ಯಾತ್ಮಕಾ ಮನ್ತ್ರಾ ವೇದಶಾಸ್ತ್ರಾಣಿ ಕೃತ್ಸ್ನಶಃ ।
ಪುರಾಣಾನಿಚ ಕಾವ್ಯಾನಿ ಭಾಷಾಶ್ಚ ವಿವಿಧಾ ಅಪಿ ।
ಸಪ್ತಸ್ವರಾಶ್ಚ ಗಾಥಾಶ್ಚ ಸರ್ವೇನಾದ ಸಮುದ್ಭವಾಃ ।
ಏಷಾ ಸರಸ್ವತೀದೇವೀ ಸರ್ವಭೂತ ಗುಹಾಶ್ರಯಾ ॥

ಎಂದು ಹೇಳಿದೆ ಅಲ್ಲದೆ ಕವಿಯೆನ್ನುವ ಪದವೇ ಪರಬ್ರಹ್ಮನಿಗೆ

ಅನ್ವಯಿಸುವುದರಿಂದ ಕಾವ್ಯರೂಪವೂ ಈಶ್ವರನ ಕಟ್ಟಳೆಯಿಂದಲೇ ಹೊರಪಟ್ಟು ಈಶ್ವರನಿಗೆ ಪ್ರಿಯನಾಗಿರುವುದು. ಆದುದರಿಂದ ವೇದಾರ್ಥಪ್ರತಿಪಾದಕವಾದ ಶ್ಲೋಕರೂಪವಾದ ಮಂತ್ರವು ಕೂಡ ವೇದಬಾಹ್ಯವೆಂದಿಗೂ ಅಲ್ಲ. ಫಲರೂಪದಲ್ಲಿ ವೇದಗಾನದಂತೆಯೇ ಇರುವುದು. ದೇವತಾಶಕ್ತಿಗಳೊಡನೆ ಸಂಬಂಧಿಸುವ ವೇದ ಗಾನದ ಅಧಿಕಾರವು ಎಂತಹ ಪವಿತ್ರತೆಯನ್ನೂ, ನಿಯಮವನ್ನೂ ಶುದ್ಧವಾದ ರಕ್ತ ಕಣದ ಸ್ವಭಾವವನ್ನೂ ಅಪೇಕ್ಷಿಸುವುದೆಂಬುದನ್ನು ವೀಣೆಗೆ ಅನ್ವಯಮಾಡಿರುವ ತತ್ವಗಳಲ್ಲದೆ ಮೇಲಿನ ತತ್ವಗಳೂ ವ್ಯಕ್ತಪಡಿಸುವುವು ಪ್ರಪಂಚದಲ್ಲಿರುವ ವಿವಿಧ ಪ್ರಾಣಿಗಳ ವಾಗ್ರೂಪವನ್ನೂ ವೇದಪುರುಷನಾದ ಈಶ್ವರನೇ ಮಾಡಿರುವನಲ್ಲದೆ ಮನುಷ್ಯಕೃತವಲ್ಲ. ಆದುದರಿಂದ ಆ ಈಶ್ವರನ ನಿಯಮದಂತೆ ವೇದಗಾನಕ್ಕಿರುವ ಪ್ರಾಶಸ್ತ್ಯವನ್ನೂ ಒಪ್ಪಲೇ ಬೇಕಾಗುವುದು. ಗ್ರಾಮೋಫೋನಿನಲ್ಲಿ ಹಾಡ ಲ್ಪಡುವ ವೇದಮಂತ್ರಗಳು ವೇದವೆನಿಸಿಕೊಳ್ಳಲಾರವು. ಮುಖ್ಯವಾಗಿ ಯಾವ ಅಧಿಕಾರವನ್ನು ಪಡೆದರೆ ವೇದಗಾನದಸತ್ತ್ವ (ಜೀವಕಳೆ) ಉಂಟಾಗುವುದೋ ಅದರಿಂದಲೇ ಅದು ಲಭ್ಯವಾಗಬೇಕು.

ವೇದಾರ್ಥ ಪ್ರತಿಪಾದಿತವಾದ ಶ್ಲೋಕಗಳು ವೇದಸಮಾನವೆಂಬ ತತ್ವ ವನ್ನನುಸರಿಸಿಯೇ ವೇದಮಂತ್ರಗಳಿಗೆ ಅಂತ್ಯಪೆನಿಸುವ ಅನೇಕ ಉಪನಿಷತ್ತುಗಳು ಈಶ್ವರನ ಕಟ್ಟಳೆಯಿಂದ ಕಾವ್ಯರೂಪವಾಗಿರುವುವು. ಅಲ್ಲದೆ ವೇದಾಂಗಗಳೂ, ಸೂತ್ರಗಳೂ, ಸ್ಮೃತಿಗಳೂ, ಪುರಾಣಗಳೂ ಕಾವ್ಯರೂಪದಲ್ಲಿಯೇ ಇರುವುವು. ಶ್ಲೋಕರೂಪವೂ ಮಹತ್ವವುಳ್ಳದ್ದಾದುದರಿಂದಲೇ ಅನೇಕ ಮಹರ್ಷಿಗಳೂ, ಶ್ರೀಶಂಕರಾಚಾರ್ಯರೂ, ಕಾಳಿದಾಸಮಹಾಕವಿಯೂ, ವೇದಸಾರವನ್ನು ಪ್ರತಿಪಾದಿಸುವ ಶ್ಲೋಕಗಳಿಂದ ಪರಮಾತ್ಮನನ್ನು ಬಹು ಆನಂದದಿಂದ ಪ್ರಾರ್ಥಿಸಿರುವರು. ಅಲ್ಲದೆ ಕಾವ್ಯಕ್ಕೆ ಸೇರಿದ ಸಂಗೀತಶಾಸ್ತ್ರವಾದ ಗಾನವಿದ್ಯೆ ಯಿಂದ ಭರತ, ನಾರದ ಮುಂತಾದ ಅನೇಕ ಮಹರ್ಷಿಗಳೂ, ತ್ಯಾಗಯ್ಯ ಮುಂತಾದ ಈ ಕಾಲದ ಅನೇಕ ಮಹನೀಯರೂ ನಾದಬ್ರಹ್ಮೋಪಾಸನೆಯನ್ನು ಮಾಡಿರುವರು ಇದು ವೇದಬಾಹ್ಯವೆಂದಿಗೂ ಅಲ್ಲ. ಬ್ರಾಹ್ಮಣನ ಪ್ರತಿಕರ್ಮ ದಲ್ಲಿಯೂ ವೇದಮಂತ್ರಗಳ ಜೊತೆಯಲ್ಲಿ ಶ್ಲೋಕರೂಪವಾದ ಮಂತ್ರವಿದ್ದೇ ಇರುವುದು. ಶ್ಲೋಕರೂಪವಾದ ಮಂತ್ರಗಳು ವೇದಬಾಹ್ಯವಾಗಿದ್ದರೆ ಕರ್ಮದಲ್ಲಿ ಅವುಗಳನ್ನು ಸೇರಿಸುತ್ತಲೇ ಇರಲಿಲ್ಲ. ಶ್ಲೋಕರೂಪವಾದ ಮಂತ್ರಗಳಿಂದ ಕರ್ಮಾನುಷ್ಠಾನಮಾಡಿದರೂ ಕರ್ಮಶಕ್ತಿಯು ಇದ್ದೇ ಇರುವುದು. ಅಲ್ಲದೆ ಅಧ್ಯಾತ್ಮಪ್ರತಿಪಾದಕವಾದ ಶ್ಲೋಕಗಳಿಂದಲೇ ಆತ್ಮವಿಚಾರಮಾಡಿ ಜ್ಞಾನ ವಂತರೂ ಆಗಬಹುದು.

## ೫. ಪುರಾಣಕ್ಕೂ ವೇದಕ್ಕೂ ಇರುವ ಸಂಬಂಧ

ಪುರಾಣಗಳು ಕಟ್ಟುಕಥೆಗಳಲ್ಲ. ಪುರಾಣಗಳ ಸಾರವು ವೇದದಲ್ಲಿದ್ದೇ ಇದೆ. ಹಿಂದೆ ಇದ್ದುದನ್ನು ವಿಶದಪಡಿಸುವುದಾದುದರಿಂದ ಪುರಾಣವೆಂದು ಹೆಸರು. ಹಿಂದಿರುವುದೆಂದರೆ ವೇದದಲ್ಲಿರುವುದೆಂದು ಅರ್ಥ. ವೇದಕ್ಕಿಂತ ಹಿಂದಿನದಾವುದೂ ಇಲ್ಲ. ಪುರಾಣಗಳು ವೇದದಲ್ಲಿರುವ ಸೃಷ್ಟಿ ಸ್ಥಿತಿ ಲಯ ಮುಂತಾದ ಅನೇಕ ರಹಸ್ಯಾರ್ಥಗಳ ಪ್ರತಿಪಾದಕವಾಗಿರುವುವು. ಸೃಷ್ಟಿಸ್ಥಿತಿಲಯಗಳ ತತ್ವಾರ್ಥಗಳ ಪ್ರತಿಪಾದನೆಗಾಗಿಯೇ ಶಿವ, ವಿಷ್ಣು, ದೇವೀ ಅವತಾರಗಳಾಗಿರುವುವು. ಕಾರ್ಯಕಾರಣಗಳಿಲ್ಲದಿದ್ದರೆ ಅವತಾರದ ಅವಶ್ಯಕತೆಯೇ ಇರುವುದಿಲ್ಲ. ಕೆಲವು ಅವತಾರಗಳು ಸೃಷ್ಟಿಕ್ರಮದ ಕಾರ್ಯಗಳಿಗೋಸ್ಕರಲೂ, ಕೆಲವು ಲಯವೆಂದರೆ ಮೋಕ್ಷದ ದಾರಿಯ ನಿಯಮದ ಕಾರ್ಯಗಳಿಗೋಸ್ಕರಲೂ, ಕೆಲವು ಪ್ರಪಂಚಸ್ಥಿತಿಯ ನಿಯಮದ ಕಾರ್ಯಗಳಿಗೋಸ್ಕರಲೂ ಉಂಟಾಗಿರುವುವು. ಸೃಷ್ಟಿಸ್ಥಿತಿಲಯ ಕ್ರಮಗಳಲ್ಲಿ ಎಷ್ಟೋ ಸೋಪಾನ ಭೇದ ಮತ್ತು ಕಾರ್ಯಭೇದಗಳಿರುವುವು. ಈ ಸೋಪಾನ ಮತ್ತು ಕಾರ್ಯಭೇದಗಳೇ ಜಗದೊಡೆಯನಾದ ಈಶ್ವರನಿಗೆ ಉಪಾಧಿ ಭೇದಗಳಾಗಿರುವುವು. ಉಪಾಧಿಭೇದದಿಂದ ಈಶ್ವರ ಚೈತನ್ಯವು ಪ್ರತ್ಯೇಕ ನಾಮಗಳನ್ನು ಪಡೆಯುವುದೇ ಅವತಾರಗಳಾಗಿವೆ

ಆದುದರಿಂದ ಕಾರ್ಯಭೇದದಿಂದಾಗಿರುವ ಅವತಾರಗಳೆಲ್ಲಾ ಸೃಷ್ಟಿ ಸ್ಥಿತಿ ಲಯಗಳ ನಿಯತಿಯಾಗಿ ಈಶ್ವರನ ಲೀಲಾವಿಭೂತಿಗಳಾಗಿರುವುವು. ಹೀಗೆ ಈಶ್ವರನ ಲೀಲಾವಿಭೂತಿಗಳಾಗಿಯೂ, ವೇದಗಳಲ್ಲಿ ಬೀಜರೂಪದಲ್ಲಿರುವವು ಗಳಾಗಿಯೂ, ವೇದಾರ್ಥವನ್ನು ಪ್ರಕಾಶಪಡಿಸತಕ್ಕವುಗಳಾಗಿಯೂ ಇರುವು ದರಿಂದಲೇ ಮಹರ್ಷಿಗಳು ಪುರಾಣಗಳನ್ನು ಹೊರಗೆಡವಿದರಲ್ಲದೆ ಅನ್ಯಥಾ ಇಲ್ಲ. ಇತಿಹಾಸ ಪುರಾಣಗಳು ವೇದಾರ್ಥವನ್ನು ಪ್ರಕಾಶಪಡಿಸುತ್ತದೆಂಬುದಕ್ಕೆ ಶ್ರುತ್ಯಾದಿ ಅನೇಕ ಆಧಾರವಾಕ್ಯಗಳಿರುವುವು. ಆದುದರಿಂದ ಪುರಾಣ ಕಥಾಸಾರವೂ ವೇದಸ್ವರೂಪವೇ ಆಗಿರುವುದು. ಶೋಚನೀಯವಾದುದೇನೆಂದರೆ ಶೈವರು ವೈಷ್ಣವರನ್ನು ದೂಷಿಸುವ, ವೈಷ್ಣವರು ಶೈವರನ್ನು ದೂಷಿಸುವ ಭಾಗಗಳನ್ನೂ, ಅವರವರ ಸ್ಥಿತಿಯನ್ನು ಹೊಗಳಿಕೊಳ್ಳುವವುಗಳನ್ನೂ ಈಚೆಗೆ ಪುರಾಣಗಳಲ್ಲಿ ಸೇರಿಸಿರುವರು. ಮಹರ್ಷಿಗಳು ಇವುಗಳನ್ನು ಹೇಳಿದುದಲ್ಲವೆಂದು ಧೈರ್ಯವಾಗಿ ಹೇಳಬಹುದಾದುದರಿಂದ ಈ ವಿಚಾರಗಳು ಪ್ರಕ್ಷಿಪ್ತಗಳು. ಪುರಾಣ ಕಥಾಸಾರಗಳು ಈಶ್ವರನವಿಭೂತಿ ಮತ್ತು ವೇದಸ್ವರೂಪವಾಗಿರುವುದರಲ್ಲಿ ಯಾವ ಸಂದೇಹವೂ ಇಲ್ಲ. ಅಲ್ಪಜ್ಞರಿಗೆ ಕಥಾರೂಪವಾಗಿಯೂ, ಭಕ್ತಾದಿಗಳಿಗೆ ಈಶ್ವರವಿಭೂತಿಸ್ವರೂಪವಾಗಿಯೂ, ಅನುಷ್ಠಾತೃಗಳಿಗೆ ಧರ್ಮಾರ್ಥಕಾಮ

ಮೋಕ್ಷಸ್ವರೂಪಗಳ ವಿವರಣೆಗಳನ್ನು ಬೋಧಿಸತಕ್ಕವುಗಳಾಗಿಯೂ, ತತ್ವ ವೇತ್ತರಿಗೆ ಸೃಷ್ಟಿ ಸ್ಥಿತಿ ಲಯ ಮುಂತಾದ ವೇದರಹಸ್ಯಾರ್ಥಗಳನ್ನೊಳಗೊಂಡಿರು ವುದಾಗಿಯೂ ಪುರಾಣಗಳು ವಿರಾಜಿಸುತ್ತಿರುವುವು.

ಸರ್ವ ಅವತಾರಗಳ ವಿಚಾರಗಳೂ ವೇದದಲ್ಲಿ ಬಹು ಸೂಕ್ಷ್ಮರೂಪವಾಗಿ ರುವುದರಿಂದ ಅದರ ವಿವರವನ್ನು ತಿಳಿದುಕೊಳ್ಳುವಂತಹ ಸಂಸ್ಕಾರಪಾಂಡಿತ್ಯವು ಮಾನವರಿಗೆ ಅಸಾಧ್ಯವೆಂದು ಜಗತ್ಸೃಷ್ಟಿಕರ್ತನಾದ ಈಶ್ವರನ ನಿಯತಿಯ ಪ್ರಕಾರವೇ ವೇದವ್ಯಾಸಮಹರ್ಷಿಗಳೂ ವಾಲ್ಮೀಕಿಮಹರ್ಷಿಗಳೂ ವೇದದಲ್ಲಿ ಬೀಜಸ್ವರೂಪದಲ್ಲಿದ್ದ ಶಿವ, ವಿಷ್ಣು, ದೇವೀ ಅವತಾರಗಳ ವಿಚಾರವನ್ನು ವಿವರವಾಗಿ ಪುರಾಣರೂಪದಲ್ಲಿ ಹೊರಪಡಿಸಿದರು. ಯುಗ ಮುಂತಾದ ಕಾಲ ವಿಳಂಬಗಳಲ್ಲಿ ಅವತಾರಗಳಾಗುವುವಷ್ಟೆ! ವೇದದಲ್ಲಿ ಮುಂದಾಗುವವಿಚಾರಗಳೂ ಹೇಗೆ ಬರುವುವೆಂದು ಶಂಕಿಸಬಾರದು. ವೇದವು ಭೂತಭವಿಷ್ಯದ್ವರ್ತಮಾನ ಕಾಲೀನಗಳಾದ ವಿಷಯಗಳನ್ನು ತಿಳಿಸುವುದರಿಂದಲೇ ವೇದ (ವೇದ-ತಿಳಿಸುವಿಕೆ) ಎನಿಸಿಕೊಳ್ಳುವುದು. ಅಂದರೆ ವೇದವು ತ್ರಿಕಾಲಜ್ಞಾನರೂಪವಾದ ಜ್ಞಾನ ಭಂಡಾರವು. ಪುರಾಣಗಳಲ್ಲಿರುವ ಅವತಾರ ವಿಚಾರಗಳು ಗೂಢವಾಗಿ ವೇದದಲ್ಲಿ ರುವುದೆಂದು ಮೇಲೆ ತಿಳಿಸಿತಷ್ಟೆ ! ಶ್ರೀರಾಮಾವತಾರದ ಚರಿತ್ರೆಯು ಋಗ್ವೇದದಲ್ಲಿ ಗೂಢವಾಗಿರುವ ಮಂತ್ರವನ್ನು ಈ ಕೆಳಗೆ ಬರೆದಿರುವುದು.

ಋಗ್ವೇ ಅ ೭ | ಅ ೫ | ವ ೨೪ |

ಭದ್ರೋ ಭದ್ರಯಾ ಸ್ಸಚಮಾನ ಆಗಾತ್ಸ್ವಸಾರಂ ಜಾರೋ ಅಭ್ಯೇತಿ ಪಶ್ಚಾತ್ | ಸುಪ್ರಕೇ ತೈರ್ದ್ಯುಭಿರಗ್ನಿ ರ್ವಿತಿಷ್ಠ ನ್ರುಶದ್ಭಿ ರ್ವರ್ಣೈ ರಭಿರಾಮ ಮಸ್ಥಾತ್ ||

|| ನಿರುಕ್ತಂ || ಭದ್ರೋ ರಾಮಭದ್ರೋ ಭದ್ರಯಾ ಮಂಗಳರೂಪಯಾ ಸೀತಯಾ ಸಚಮಾನಃ ಸಂಪದ್ಯಮಾನೋ ಭರದ್ವಾಜಾಶ್ರಮಂ ಗತ್ವಾ ಸುಗ್ರೀವ ಸಂಭಾಷಣ ಮಾಸಮುಂತಾದಾಗಾ ತ್ರಿತ್ಯಯೋಗ ವಶಾರಣ್ಯಾವ ಗಾದಾರಃ ಪರದಾರ ಹರ್ತಾ ರಾವಣಃ ಸ್ವಸಾರಂ ಮಾತೃವತ್ಪೂಜ್ಯಾಂ ಜಗನ್ಮಾತರಂ ಸೀತಾಂ ಪಶ್ಚಾದಭ್ಯೇತ್ಯರಣ್ಯ ಗಮನಾನಂತರಂ ವಸಿಷ್ಠ ವಿಶ್ವಾಮಿತ್ರಃ ಸಮೀಪೇ ಆಗತವಾನನಂತರಂ ಸೇತುಬಂಧನ ಕೃತ್ವಾರಾಮಂ ರಾವಣಹತೇ ಸೀತಾಯಾಂಚಾಗ್ನೌ ಪ್ರವಿಷ್ಟಾಯಾಂ ವಿಶ್ವಾಸಾತ್ವಮಗ್ನಿ ಷ್ಟ್ವಂ ಗೃಹೀತ್ವಾರಾಮಂ ರಾಮಂ ರಘುನಾಥಮುದ್ದ್ಯಾದಿ ಮುಖೇನಾತ್ಮ ಶುದ್ಧೇತ್ಯುಪ ಬಿಭೀನಾಧೇತವಾ ನ್ವಿಭೀಷಣೇನ ಸಾಂಬ್ರಾಜ್ಯ ಸೌಮಿತ್ರಂ ಗತ್ವಾ ವಿಶೇಷೇಣ ಸ್ಥಿತವಾನ್ ತಸ್ಯೇಷಾ ಪರಾಭವತಿ ತಸ್ಯೋತ್ತರಾ ಭೂಯಸೇ ನಿರ್ವಚನಾಯ ||

## ೬. ಶ್ರೀಮದ್ರಾಮಾಯಣದ ಅಂತರಾರ್ಥವನ್ನನುಸರಿಸಿ ಮನುಷ್ಯ ಶರೀರದಲ್ಲಿರುವ ವೇದತತ್ವ ಪ್ರತಿಪಾದನೆ.

ಅವತಾರದ ಚರಿತ್ರೆಯಲ್ಲಿರುವ ವೇದತತ್ವವನ್ನರಿಯಲು ಶ್ರೀರಾಮಚರಿತ್ರೆಯನ್ನು ತೆಗೆದುಕೊಂಡು ವೀಣೆಯ ಸಮನ್ವಯದಂತೆ ತಕ್ಕಮಟ್ಟಿಗೆ ವಿವರಿಸೋಣ. ಅವತಾರದ ಚರಿತ್ರೆಗಳು ಲೋಕೋದ್ಧಾರಕ್ಕೋಸ್ಕರ ಅನೇಕ ಲೀಲಾವಿಭೂತಿಗಳನ್ನೊಳಗೊಂಡಿವೆ. ಯಾರ್ಯಾರಿಗೆ ಎಂತೆಂತಹ ಪ್ರಜ್ಞಾಶಕ್ತಿಯಿರುವುದೋ ಅದರಂತೆ ಅವತಾರ ಚರಿತ್ರೆಯಲ್ಲಿನ ಅಮೃತವನ್ನು ಆಸ್ವಾದನೆಮಾಡುತ್ತಾರೆ. ಶ್ರೀಮದ್ರಾಮಾಯಣವು ವೇದಸಮಾನವೆಂದು "ಪುಣ್ಯಂ ವೇದೈಶ್ಚಸಮ್ಮಿತಂ" ಎಂಬ ನಾರದಮಹರ್ಷಿಗಳ ವಾಕ್ಯವಿರುವುದು. ವೇದಾರ್ಥವನ್ನು ಪ್ರಕಾಶಪಡಿಸುವುದಕ್ಕೋಸ್ಕರವೇ ರಾಮಚರಿತಾಮೃತವನ್ನು ಲವಕುಶರಿಗೆ ಉಪದೇಶಿಸುತ್ತೇನೆಂದು "ವೇದೋಪ ಬೃಹ್ಮಣಾರ್ಥಾಯ" ಎಂಬ, ಗಾಯತ್ರೀಸ್ವರೂಪವೇ ಶ್ರೀಮದ್ರಾಮಾಯಣವೆಂದು "ಗಾಯತ್ರ್ಯಾಶ್ಚಸ್ವರೂಪಂ ತದ್ರಾಮಾಯಣಮನುತ್ತಮಮ್" ಎಂಬ ವಾಲ್ಮೀಕಿಮಹರ್ಷಿಗಳ ವಾಕ್ಯಗಳಿರುವುವು. ಗಾಯತ್ರೀ ಮಂತ್ರವನ್ನು ವೀಣೆಗೆ ಅನ್ವಯಿಸಿರುವಂತೆ ಶ್ರೀಮದ್ರಾಮಾಯಣವನ್ನು ಗಾಯತ್ರೀ ಮಂತ್ರಕ್ಕೆ ಅನ್ವಯಿಸಿಯೂ, ಮಾನವದೇಹಕ್ಕೆ ಹೋಲಿಸಿಯೂ ಶ್ರೀಮದ್ರಾಮಾಯಣದ ಅಂತರಾರ್ಥಗ್ರಂಥವು ರಚಿತವಾಗಿರುವುದು ಈ ಗ್ರಂಥವನ್ನನುಸರಿಸಿ ಮನುಷ್ಯದೇಹದಲ್ಲಿರುವ ವೇದತತ್ವವನ್ನು ಕೆಳಗೆ ವಿವರಿಸಿದೆ.

ಮನುಷ್ಯನ ಶಿರಸ್ಸಿನಲ್ಲಿ ಸೂಕ್ಷ್ಮಶರೀರವೆನಿಸುವ ಅಂತಃಕರಣವು ಇರುವುದು.

[ರಾಮಾಯಣದ ಅಂತರಾರ್ಥ ಗ್ರಂಥದ ಚಿತ್ರದಲ್ಲಿ ಅಂತಃಕರಣವಿರುವ ಸ್ಥಳವನ್ನು ಗುರುತುಮಾಡಿ ತೋರಿಸಿರುವುದು.]

ಶುದ್ಧಸತ್ವಗುಣಭಾಗದಿಂದ ಈ ಅಂತಃಕರಣವು ಸೃಷ್ಟಿಸಲ್ಪಟ್ಟಿರುವುದು. ಅಂತಃಕರಣವು ಒಂದೇ ಆದರೂ ಕಾರ್ಯಭೇದದಿಂದ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳೆಂದು ನಾಲ್ಕು ವಿಧವಾಗಿರುವುದು. ಬುದ್ಧಿಯು ಜ್ಞಾನಶಕ್ತಿಸ್ವರೂಪವಾಗಿಯೂ, ಮನಸ್ಸು ಕ್ರಿಯಾಶಕ್ತಿಸ್ವರೂಪವಾಗಿಯೂ, ಅಹಂಕಾರವು ಇಚ್ಛಾಶಕ್ತಿಸ್ವರೂಪವಾಗಿಯೂ, ಚಿತ್ತವು ಇಚ್ಛಾಶಕ್ತಿಯ ಅನುವರ್ತಿಯಾಗಿಯೂ ಇರುವುವು ರಾಮಾಯಣದ ಅಂತರಾರ್ಥದಂತೆ ಕೌಸಲ್ಯಾ, ಸುಮಿತ್ರಾ, ಕೈಕೇಯೀದೇವಿಯರೇ ಜ್ಞಾನ, ಕ್ರಿಯಾ, ಇಚ್ಛಾಶಕ್ತಿಗಳ ತತ್ವದವರಾಗಿ ಮನುಷ್ಯನಲ್ಲಿರುವ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳ ಶಕ್ತಿಗಳಾಗಿರುವರು. ಪಿಂಡಾಂಡವಾದ ಮನುಷ್ಯನಲ್ಲಿ ಈ ನಾಲ್ಕು ಶಕ್ತಿಗಳೇ ಕ್ರಮವಾಗಿ ನಾಲ್ಕು ವೇದಗಳ ಶಕ್ತಿಗಳಾಗಿವೆ. ಪರಬ್ರಹ್ಮನಾದ ಮಹಾವಿಷ್ಣುವು ಕೌಸಲ್ಯಾ, ಸುಮಿತ್ರಾ, ಕೈಕೇಯಿಯರಲ್ಲಿ ಅವತರಿಸಿ

ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂದು ಹೆಸರುಪಡೆದಂತೆ ಪರಬ್ರಹ್ಮನೇಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳಲ್ಲಿ ಪ್ರತಿಫಲಿಸಿ ಪ್ರತಿಫಲನ ಚೈತನ್ಯನೆನಿಸಿರುವನು. ಈ ಚೈತನ್ಯದಲ್ಲಿ ಶ್ರೀರಾಮತತ್ವವಾದ ಬುದ್ಧಿಪ್ರತಿಫಲಿತ ಚೈತನ್ಯವೇ ಋಗ್ವೇದಪುರುಷ. ಲಕ್ಷ್ಮಣನತತ್ವವಾದ ಮನಸ್ಸಿನ ಪ್ರತಿಫಲಿತ ಚೈತನ್ಯವೇ ಯಜುರ್ವೇದಪುರುಷ ಭರತನತತ್ವವಾದ ಅಹಂಕಾರದ ಪ್ರತಿಫಲಿತ ಚೈತನ್ಯವೇ ಸಾಮವೇದಪುರುಷ. ಶತ್ರುಘ್ನನತತ್ವವಾದ ಚಿತ್ತದ ಪ್ರತಿಫಲಿತ ಚೈತನ್ಯವೇ ಅಥರ್ವಣವೇದಪುರುಷ. ಮುಖ್ಯವಾಗಿ ವೀಣೆಯ ಮೇಲಿನ ನಾಲ್ಕುತಂತಿಗಳ ಪ್ರತಿಪಾದನೆಯಂತೆಯೇ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳ ಸ್ಥಾನಗಳು ನಾಲ್ಕುವೇದಗಳ ತತ್ವವಾಗಿವೆ.

ಜ್ಞಾನಶಕ್ತಿಯಾದ ಬುದ್ಧಿಯಸ್ಥಾನವು ವೀಣೆಯ ಸಾರಣೀ ತಂತಿಯಂತೆ ಪ್ರಧಾನವಾದುದು. ಕ್ರಿಯಾಶಕ್ತಿಯಾದ ಮನಸ್ಸಿನ ಸ್ಥಾನವು ವೀಣೆಯ ಪಂಚಮ ತಂತಿಯಂತೆ ಎರಡನೆಯದಾಗಿಯೂ, ಇತರ ಅಹಂಕಾರ, ಚಿತ್ತದಸ್ಥಾನಗಳು ವೀಣೆಯ ಮಂದ್ರ, ಅನುಮಂದ್ರದ ತಂತಿಗಳಂತೆ ಮೂರು, ನಾಲ್ಕನೆಯವುಗಳಾಗಿರುತ್ತವೆ. ಕಾರಣವೇನೆಂದರೆ— ಮಹಿಮೆಯಲ್ಲಿ ಜ್ಞಾನಶಕ್ತಿಯು ಹೆಚ್ಚಿನದು. ಇದರಂತೆ ಬುದ್ಧಿಯಸ್ಥಾನವೂ ಋಗ್ವೇದವೂ ಪ್ರಧಾನವಾದವು ಈ ತತ್ವದಂತೆಯೇ ಋಗ್ವೇದತತ್ವದಲ್ಲಿರುವ ಶ್ರೀರಾಮಚಂದ್ರನೇ ಜ್ಯೇಷ್ಠನು ಎರಡನೆಯದೇ ಕ್ರಿಯಾಶಕ್ತಿಯಾದ ಮನಸ್ಸಿನ ಸ್ಥಾನ. ಇದೇ ಯಜುರ್ವೇದವು. ಈ ತತ್ವ ಸಮರ್ಥನೆಗೆ ರಾಮಾಯಣದಲ್ಲಿ ಯಜ್ಞೇಶ್ವರನಿಂದ ಕೊಡಲ್ಪಟ್ಟ ಪಾಯಸವನ್ನು ಕೌಸಲ್ಯಾದಿಗಳಿಗೆ ವಿಭಾಗಿಸಿಕೊಟ್ಟ ತತ್ವವು ಬಹು ಮುದ್ದಾಗಿ ಅನ್ವಯವಾಗುವುದು. ಪಾಯಸದ ಅರ್ಧಭಾಗವು (ಋಗ್ವೇದಶಕ್ತಿ) ಕೌಸಲ್ಯೆಗೆ ಕೊಡಲ್ಪಟ್ಟಿತು ಉಳಿದುದರಲ್ಲಿ ಅರ್ಧಭಾಗವೆಂದರೆ ಕಾಲುಭಾಗವು (ಯಜುರ್ವೇದಶಕ್ತಿ) ಸುಮಿತ್ರೆಗೆ ಕೊಡಲ್ಪಟ್ಟಿತು. ಉಳಿದ ಕಾಲುಭಾಗದಲ್ಲಿ ಅರ್ಧಭಾಗವನ್ನೆಂದರೆ ಎಂಟನೆ ಒಂದು ಭಾಗವು (ಸಾಮವೇದಶಕ್ತಿ) ಕೈಕೇಯಿಗೆ ಕೊಡಲ್ಪಟ್ಟಿತು. ಶೇಷಾಂಶವಾದ ಎಂಟನೇ ಒಂದುಭಾಗವು (ಅಥರ್ವಣವೇದಶಕ್ತಿ) ಸುಮಿತ್ರೆಗೆ ಪುನಃ ಕೊಡಲ್ಪಟ್ಟಿತು. ಆದುದರಿಂದ ಜ್ಞಾನಶಕ್ತಿಪ್ರಧಾನವೆಂದರೆ ಬುದ್ಧಿಸ್ಥಾನವು ಪ್ರಧಾನವಾದುದು. ಇದರಂತೆ ಶ್ರೀರಾಮಚಂದ್ರನೇ ಜ್ಯೇಷ್ಠನು. ಅಂದರೆ ಋಗ್ವೇದಕ್ಕೆ ಜ್ಯೇಷ್ಠಸ್ಥಾನ. ಮುಖ್ಯವಾಗಿ ವೀಣೆಯತತ್ವವನ್ನೂ ರಾಮಾಯಣದ ಅಂತರಾರ್ಥವನ್ನೂಅನುಸರಿಸಿ ಮನುಷ್ಯನಲ್ಲಿರುವ ಜೀವಸ್ಥಾನವಾದ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳ ನಾಲ್ಕು ಸ್ಥಾನಗಳೇ ನಾಲ್ಕು ವೇದಗಳ ಸ್ಥಾನಗಳಾಗಿವೆ.

ವೀಣೆಯಲ್ಲಿ ತಂತಿಗಳಿದ್ದಾಕ್ಷಣವೇ ಪ್ರಯೋಜನವೇನಾಯಿತು ? ಆ ತಂತಿಗಳು ಕಾರ್ಯರೂಪವನ್ನು ಹೊಂದಲು ಪ್ರಥಮದಲ್ಲಿ ಬೇಕಾದುದು ಸ್ವರಗಳು.

ಅನಂತರ ತಾಳಗಳು. ಪ್ರಥಮದಲ್ಲಿ ಬೇಕಾದ ಸ್ವರ ಶಕ್ತಿಯ ತತ್ವದವಳೇ ಸಾಕ್ಷಾತ್ ಪರಾಶಕ್ತಿಯಾದ ಸೀತಾದೇವಿಯು. ಸ್ವರಶಕ್ತಿಗಳೆಲ್ಲಾ ಪರಾಶಕ್ತಿಯ ಆವಿರ್ಭಾವದ ಶಕ್ತಿಗಳಾಗಿ ಶುದ್ಧಸತ್ವಗುಣವಾದುವೆಂದು ವೀಣೆಯ ಅನ್ವಯದಲ್ಲಿ ತಿಳಿಸಿದೆಯಷ್ಟೆ! ಇದರಂತೆ ಸೀತಾದೇವಿಯ ತತ್ವವು ಪರಾಶಕ್ತಿಯ ಅವತಾರವಾದ ಶುದ್ಧಸತ್ವಗುಣವಾಗಿ ಮನುಷ್ಯನಲ್ಲಿ ಬುದ್ಧಿಚೈತನ್ಯವನ್ನು ಕೂಡಿರುವುದು. ಅಂದರೆ ಬುದ್ಧಿಚೈತನ್ಯವು ಕಾರ್ಯಕ್ಕೋಸ್ಕರ ಶುದ್ಧಸತ್ವಗುಣವನ್ನು ತನ್ನ ವಶವರ್ತಿಯನ್ನಾಗಿ ಮಾಡಿಕೊಂಡು ಪತಿಯಸ್ಥಾನದಲ್ಲಿರುವುದು. ಒಬ್ಬಳಾದ ಸೀತಾದೇವಿಯ ತತ್ವವು ಸಪ್ತಸ್ವರಗಳ ಸ್ಥಾನಕ್ಕೂ ಹೇಗೆ ಅನ್ವಯವಾಗುವುದೆಂದರೆ— ಷಡ್ಜಸ್ವರವು ಇತರ ಆರು ಸ್ವರಗಳಿಗೂ ಜನಕಸ್ಥಾನವಾಗಿಯೂ, ಆರು ಸ್ವರಗಳನ್ನು ತನ್ನಲ್ಲಿ ಅಂತರ್ಭೂತಮಾಡಿಕೊಳ್ಳುವುದಾಗಿಯೂ ಇರುವುದರಿಂದ ಕಾರ್ಯಭೇದಗಳಿಂದ ಷಡ್ಜಸ್ವರವೇ ಇತರಸ್ವರಗಳ ರೂಪವನ್ನು ತಾಳುವುದರಿಂದ ಒಂದಾದ ಷಡ್ಜಸ್ವರದ ಶಕ್ತಿಯಾದ ಬ್ರಾಹ್ಮೀಶಕ್ತಿ(ಪರಾಶಕ್ತಿ)ಯ ತತ್ವವೇ ಸೀತಾದೇವಿಯು. ಈ ಸೀತಾದೇವಿಯ ತತ್ವವೇ ಬುದ್ಧಿಚೈತನ್ಯದ ಅರ್ಧಾಂಗಿಯೆನಿಸುವ ಶುದ್ಧಸತ್ವಗುಣ (ಶುದ್ಧಸತ್ವಪ್ರಧಾನವಮಾಯೆ) ವಾಗಿ ಮನುಷ್ಯನಲ್ಲಿರುವುದು.

ವೀಣೆಯಲ್ಲಿ ತಂತಿ ಮತ್ತು ಸ್ವರಗಳ ಕಾರ್ಯವು ಗಾಯತ್ರೀಮಂತ್ರ ರೂಪವಾದ ಇಪ್ಪತ್ತುನಾಲ್ಕು ಮನೆಗಳಲ್ಲಿ ನಡೆಯುವುವು ಇದರಂತೆ ಮನುಷ್ಯನಲ್ಲಿರುವ ವೇದಶಕ್ತಿಗಳಾದ ಶುದ್ಧಸತ್ವಗುಣದೊಡಗೂಡಿದ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳ ಕಾರ್ಯಗಳು ಇಪ್ಪತ್ತನಾಲ್ಕು ಬೀಜಾಕ್ಷರಗಳುಳ್ಳ ಗಾಯತ್ರೀಮಂತ್ರಾರ್ಥವಾದ ಸೃಷ್ಟಿ ವ್ಯಾಪಾರ ಲಯ (ಮೋಕ್ಷ) ಗಳ ಸೋಪಾನದ ಕಾರ್ಯರೂಪವನ್ನು ಅನುಸರಿಸಬೇಕು ಸೃಷ್ಟಿ ಸ್ಥಿತಿ ಲಯಗಳು ಬ್ರಹ್ಮಾಂಡದಂತೆ ಪಿಂಡಾಂಡವಾದ ಮನುಷ್ಯನಿಗೂ ಸಮನ್ವಯವಾಗುವುದರಿಂದ ಸೃಷ್ಟಿ ವ್ಯಾಪಾರ ಮೋಕ್ಷಗಳ ಕಾರ್ಯರೂಪವನ್ನು ಇವನೂ ಹೊಂದುವನು. ಗಾಯತ್ರೀಮಂತ್ರದ ಪ್ರಥಮಪದವಾದ 'ತತ್' ಪದ ಪ್ರತಿಪಾದ್ಯವಾದ ಪರಬ್ರಹ್ಮವು ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳಲ್ಲಿ ಪ್ರತಿಫಲನಚೈತನ್ಯವೆನಿಸಿಕೊಂಡು 'ಸವಿತುಃ' ಪದವುಂಟಾಗಿ ಸವಿತುಃ ಪದದ ತತ್ವವು ಅಂತ್ಯವಾಗುವದರೊಳಗೆ ದೇಹಸೃಷ್ಟಿಯು ಪೂರ್ಣವಾಗುವುದು. ಅಂದರೆ ಮಾತೃಗರ್ಭದಲ್ಲಿ ಆರುತಿಂಗಳು ಪೂರ್ಣವಾಗುವವರೆಗಿನ ವಿಚಾರಗಳು 'ಸವಿತುಃ' ಪದದ ತತ್ವದಲ್ಲಡಗಿವೆ. ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳೆಂದರೆ ನಾಲ್ಕು ವೇದಗಳೂ ಸೃಷ್ಟಿಯ ನಿಯಮವನ್ನನುಸರಿಸಿ ಮಾತೃಗರ್ಭದಲ್ಲಿ ಏಳನೇ ತಿಂಗಳವರೆಗೆ ಸೃಷ್ಟಿಕ್ರಮವನ್ನು ಪೂರ್ಣಮಾಡಿಕೊಳ್ಳುವುದು ಅನಂತರ ದೇಹವ್ಯಾಪಾರಕ್ಕೆ ಪ್ರಾರಂಭವಾಗುವುದು. ಸೃಷ್ಟಿವಿಚಾರವು ಶ್ರೀಮದ್ರಾಮಾಯಣದಲ್ಲಿ ಬಾಲಕಾಂಡದ ತತ್ವವಾಗಿರುವುದು. ದೇಹವ್ಯಾಪಾರವಾಗಲು ಶುದ್ಧ

ಸತ್ವಗುಣದೊಡಗೂಡಿದ ಅಂತಃಕರಣಚತುಷ್ಟಯದ ಪ್ರತಿಫಲಿತಚೈತನ್ಯವು ಇಂದ್ರಿಯಗಳನ್ನೆಲ್ಲಾ ದೇಹವ್ಯಾಪಾರದ ಕಾರ್ಯೋನ್ಮುಖವಾಗಿ ಪ್ರೇರಿಸಲು ವೃತ್ತಿ (ಪ್ರವಾಹ)ರೂಪದ ತಾದಾತ್ಮ್ಯವಾಗಿ ಶ್ರೀರಾಮಚಂದ್ರನು ವನವಾಸಹೊರಟ ತತ್ವದಂತೆ ತನ್ನ ಸ್ಥಾನದಿಂದ ಹೊರಡುವುದು ಇದು ಗಾಯತ್ರೀಮಂತ್ರದ 'ವರೇಣಿಯಂ' ಪದದ ತತ್ವವಾಗಿರುವುದು ಮತ್ತು ಶ್ರೀಮದ್ರಾಮಾಯಣದಲ್ಲಿ ಅಯೋಧ್ಯಾಕಾಂಡ ಪ್ರಾರಂಭದಿಂದ ಸೀತಾಪಹರಣದ ಕಥೆಯವರೆಗಿನ ತತ್ವವಾಗಿರುವುದು ಮಾರೀಚರಾವಣರಿಂದ ಸೀತಾಪಹರಣದ ತತ್ವವೇ ಶಿಶುವು ಜನನವಾದ ಅನಂತರ ಹೊರಗಿನ ವಿಷಯವ್ಯಾಪಾರವೇ ಸತ್ಯವೆಂದುಭಾವಿಸಿ ಮುಳುಗುವುದಾಗಿದೆ. ಅಂದರೆ ಬುದ್ಧಿ ಮನಸ್ಸು ಅಹಂಕಾರ ಚಿತ್ತಗಳ ಪ್ರತಿಫಲಿತಚೈತನ್ಯವು ವಿಷಯವ್ಯಾಪಾರಕಾಲದಲ್ಲಿ ರಜಸ್ತಮೋಗುಣ ಮಲಿನಸತ್ವಗುಣಗಳನ್ನು ಅನುಸರಿಸಿದ ವಿಷಯಗಳ ತಾದಾತ್ಮ್ಯವಾಗಬೇಕಾಗುವುದು. ಇಂತಹ ಪ್ರಪಂಚ ವಿಷಯ ವೃತ್ತಿ ಪ್ರಾರಂಭಕಾಲದಲ್ಲಿ ಬುದ್ಧಿಪ್ರತಿಫಲಿತಚೈತನ್ಯದೊಡಗೂಡಿದ್ದ ಶುದ್ಧಸತ್ವ ಗುಣವನ್ನು ರಜಸ್ತಮೋಗುಣಗಳು ಮುಚ್ಚುವುದರಿಂದಲೇ ಪ್ರಪಂಚವಿಷಯವೃತ್ತಿ ಎನಿಸಿಕೊಳ್ಳುವುದು ವಿಷಯ ವೃತ್ತಿಯಲ್ಲಿ ಶುದ್ಧಸತ್ವಗುಣವಿರುವುದೇ ಇಲ್ಲ. ಶುದ್ಧ ಸತ್ವಗುಣವನ್ನು ರಜಸ್ತಮೋಗುಣಗಳು ಮುಚ್ಚಿಕೊಂಡಿರುವುವು. ಇದೇ ರಾವಣನು ಸೀತಾಪಹರಣಮಾಡಿ ಬಂಧನದಲ್ಲಿಟ್ಟ ತತ್ವವಾಗಿರುವುದು. ಅಂದರೆ ಗಾಯತ್ರೀಮಂತ್ರದಲ್ಲಿನ 'ಭರ್ಗಃ' ಪದದ ತತ್ವದಲ್ಲಿ ಬಂದುನಿಂತಂತಾಯಿತು.

ರಾವಣಾದಿಗಳ ತತ್ವಗಳೇನು? ರಾವಣನಿಂದ ಸೀತಾಪಹರಣವಾಗುವ ತತ್ವವೇನೆಂಬುದನ್ನು ವೀಣೆಗೂ ವೇದಕ್ಕೂ ಅನ್ವಯಿಸಿ ತಿಳಿಸೋಣ. ರಾವಣ ರಜೋಗುಣ, ಕುಂಭಕರ್ಣ ತಮೋಗುಣ, ವಿಭೀಷಣ ಮಲಿನಸತ್ವಗುಣಚೈತನ್ಯರಾಗಿರುವರು ಈ ಗುಂಪಿನವರೆಲ್ಲಾ ಒಟ್ಟುಸೇರಿ ಮಲಿನಮಾಯೆ, ಅವಿದ್ಯಾ, ಅಜ್ಞಾನ, ವಿಕೃತಿಗಳೆಂದು ಕರೆಯಲ್ಪಡುವರು ವೀಣೆಯ ಮೇಲಿನ ನಾಲ್ಕು ತಂತಿಗಳೂ, ಸ್ವರಗಳೂ ಶುದ್ಧಸತ್ವಗುಣವಾಗಿ ಚತುರ್ವೇದರೂಪವಾಗಿ ದೇವತಾ ಶಕ್ತಿಗಳಾಗಿವೆಯೆಂದು ತಿಳಿಸಿರುವುದಲ್ಲದೆ ತಾಳರೂಪವಾದ ಪಕ್ಕದತಂತಿಗಳು ರಜಸ್ತಮೊ, ಮಲಿನಸತ್ವಗುಣಗಳ ತತ್ವಗಳದ್ದೆಂದು ವೀಣೆಯ ಅನ್ವಯದಲ್ಲಿಯೇ ತಿಳಿಸಿದೆ. ತಾಳದ ಮೂರು ತಂತಿಗಳ ತತ್ವದವರೇ ರಜಸ್ತಮೊಮಲಿನಸತ್ವಗುಣಗಳ ತತ್ವದವರಾದ ರಾವಣ, ಕುಂಭಕರ್ಣ, ವಿಭೀಷಣರಾಗಿರುವರು. ತಾಳವು ಹೇಗೆ ಕಾಲ, ಕ್ರಿಯಾ, ಪರಿಮಾಣಗಳ ಸ್ವರೂಪವೋ, ಹಾಗೆಯೆ ಮಲಿನಮಾಯಾತತ್ವದವರಾದ ರಾವಣಾದಿಗಳು ಕಾಲ ಕ್ರಿಯಾ ಪರಿಮಾಣಗಳನ್ನುಂಟುಮಾಡುವ ಅಜ್ಞಾನ(ಅವಿದ್ಯಾ)ಸ್ವರೂಪದ ತತ್ವದವರಾಗಿರುವರು. ವೀಣೆಯನ್ನು ನುಡಿಸುವಾಗ ಮತ್ತು ಗಾನಕಾಲಗಳಲ್ಲಿ ಸ್ವರವು ತಾಳನಿಬಂಧನೆಗೊಳಪಡುವುದು. ಇದರಂತೆ

ವೇದವು ಪದ, ಕ್ರಮ, ಘನ, ಜಟೆಗಳೆಂಬ ವಿಕೃತಿಗೊಳಗಾಗುವುದು. ಇದರಂತೆಯೇ ಬುದ್ಧಿ ಮನಸ್ಸು ಅಹಂಕಾರ ಚಿತ್ತಗಳ ಪ್ರತಿಫಲಿತ ಚೈತನ್ಯಕ್ಕೆ ಶುದ್ಧ ಸತ್ವಗುಣದ ಅಗಲಿಕೆಯುಂಟಾಗಿ ವಿಷಯವೇ ಸ್ವರೂಪವಾಗುಳ್ಳ ರಜಸ್ತಮೋ ಮಲಿನಸತ್ವಗುಣಗಳ ವೃತ್ತಿತಾದಾತ್ಮ್ಯದಿಂದ ಇರುವಿಕೆಯನ್ನು ಹೊಂದುವ ತತ್ವವಾಗಿರುವುದು. ಅಂದರೆ "ಅವಿದ್ಯೋ ಪಾಧಿಕೋಜೀವಃ" ಎಂಬ ಶ್ರುತಿ ವಚನದಂತೆ ಪ್ರತಿಫಲಿತಚೈತನ್ಯನಿಗೆ ವಿಷಯಾದಿಗಳ ತಾದಾತ್ಮ್ಯವುಂಟಾಗುವುದರಿಂದ ಅವಿದ್ಯೆಯ ಉಪಾಧಿ ಬಂದಂತಾಗಿ ಜೀವನೆಂದು ಕರೆಯಲ್ಪಡುವನು. ಇದೇ ಸೀತಾದೇವಿಗೆ ರಾವಣನಿಂದುಂಟಾದ ಬಂಧನದ ತತ್ವವಾಗಿದೆ.

ಸ್ವರವು ತಾಳನಿಬಂಧನೆಗೆ ಒಳಗಾಗುವಿಕೆಯೇ ಸೀತಾದೇವಿಗುಂಟಾದ ಬಂಧನದ ತತ್ವವಾಗಿರುವುದು. ತಾಳನಿಬಂಧನೆಗೊಳಗಾಗದ ಆನಂದರೂಪವಾಗಿರುವುದೇ ಅನಿಬದ್ಧ ರಾಗಾಲಾಪನೆಯಷ್ಟೆ! ಇದರಂತೆ ಸೀತಾದೇವಿಗೆ ರಾವಣನ ಬಂಧನದಿಂದ ಬಿಡುಗಡೆಯಾಗುವ ತತ್ವದ ಸೋಪಾನದಲ್ಲಿಯೇ ಬುದ್ಧಿಗೆ ಶುದ್ಧಸತ್ವಗುಣದ ಸೋಪಾನವು ಲಭಿಸುವುದು. ಅಂದರೆ ಭರ್ಗಃ ಎಂಬ ಪದದ ತತ್ವದಲ್ಲಿ ಅಜ್ಞಾನದ ತಾದಾತ್ಮ್ಯವನ್ನು ಹೊಂದಿತೆಂದು (ಸೀತಾಪಹರಣದತತ್ವ) ಮೇಲೆ ತಿಳಿಸಿತಷ್ಟೆ! ವೇದಗಳರೂಪವಾದ ಬುಧ್ಯಾದಿಗಳು 'ಭರ್ಗಃ' ಪದದಿಂದ ಮುಂದಿನ ಪದಗಳ ತತ್ವಗಳಾದ ಸತ್ಕರ್ಮ, ಸದಾಚಾರ, ದೇವತೋಪಾಸನೆ, ನಿತ್ಯಾನಿತ್ಯವಸ್ತುವಿವೇಕ, ವೇದಾಂತಶ್ರವಣ, ಮನನ, ನಿದಿಧ್ಯಾಸ, ಸಮಾಧಿಗಳನ್ನು ಕ್ರಮವಾಗಿ ಹೊಂದಿ ಮಂತ್ರದ ಅಂತ್ಯಪದವಾದ 'ಪ್ರಚೋದಯಾತ್' ಎಂಬುದರ ತತ್ವವಾದ ಜೀವನ್ಮುಕ್ತಿ ಮತ್ತು ವಿದೇಹಮುಕ್ತಿಗಳನ್ನು ಹೊಂದಬೇಕು.

ಇಲ್ಲಿ ಇನ್ನೊಂದು ವಿಚಾರವನ್ನು ತಿಳಿಸಬೇಕಾಗಿದೆ. ವೇದವೆಂಬುದು ಅನಾಹತನಾದ ರೂಪದಲ್ಲಿ ಜಗತ್ತನ್ನೆಲ್ಲಾ ವ್ಯಾಪಿಸಿರುವುದೆಂದು ಹಿಂದೆ ವೀಣೆಯ ಅಂತರಾರ್ಥದಲ್ಲಿ ತಿಳಿಸಿದೆ. ಶರೀರದಲ್ಲಿ ಬುದ್ಧ್ಯಾದಿಗಳ ತತ್ವವು ವೇದವೆಂದು ಈ ಪ್ರಕರಣದಲ್ಲಿ ತಿಳಿಸಿದೆ ಇವೆರಡಕ್ಕೂ ಏನು ತಾರತಮ್ಯವೆಂದು ಯೋಚನೆ ಬರಬಹುದು. ಇದರ ತತ್ವವೇನೆಂದರೆ, ಬುದ್ಧ್ಯಾದಿಗಳು 'ಭರ್ಗಃ' ಪದದ ತತ್ವದಲ್ಲಿ ಬಂದು ನಿಲ್ಲುವಿಕೆಯು ವಿಷಯವ್ಯಾಪಾರದ ಸ್ಥಿತಿಯಷ್ಟೆ! ಈ ಸ್ಥಿತಿಯೆ ಆಹತನಾದಸ್ವರೂಪದ ನಡೆವಳಿಕೆಯಾಗಿರುವುದು. ಈ ಆಹತನಾದ ಸ್ವರೂಪವಾದ ವಾಕ್ಕಿಗೂ ಮತ್ತು ಗಾನಕ್ಕೂ ಬುಧ್ಯಾದಿಗಳ (ಜೀವಾತ್ಮನ) ಪ್ರೇರಣೆಯು ಬೇಕು. ಅಲ್ಲದೆ 'ಭರ್ಗಃ' ಪದದಿಂದ ಮುಂದಿನ ಪದಗಳ ತತ್ವವಾದ ಸಮಾಧಿಯ ಅಭ್ಯಾಸಕಾಲದಲ್ಲಿ ಜಗತ್ತನ್ನೆಲ್ಲಾ ವ್ಯಾಪಿಸಿರುವ ಈಶ್ವರ ಸ್ವರೂಪವಾದ ಬ್ರಹ್ಮರಂಧ್ರನಾಡಿಯಲ್ಲಿರುವ ಅನಾಹತನಾದೋಪಾಸನೆಯನ್ನು

ಅಧಿಕಾರಿಯು ಮಾಡಿ, ಈ ಸೋಪಾನವನ್ನೂ ದಾಟಿ ಪರಬ್ರಹ್ಮಸಾಕ್ಷಾತ್ಕಾರವನ್ನು ಹೊಂದುವನು. ಆದುದರಿಂದ ವೇದವು ಆಹತ ಅನಾಹತನಾದರೂಪಗಳೆರಡ ರಲ್ಲಿಯೂ ಬಿಂಬಪ್ರತಿಬಿಂಬದಂತೆ ಇರುವುದು.

ಮತ್ತೊಂದು ವಿಚಾರವೇನೆಂದರೆ, 'ಭರ್ಗಃ' ಎಂಬ ಪದದ ತತ್ವದಿಂದ ಮುಂದಿನ ಪದಗಳ ತತ್ವಗಳನ್ನು ಹತ್ತಿ ಮುಕ್ತಿಸ್ಥಿತಿಯನ್ನು ಸೇರದೆ ಮರಣವನ್ನು ಹೊಂದಿದವರ ಗತಿಯೇನೆಂದರೆ, ಮರಣವೆಂಬುದು ಸ್ಥೂಲದೇಹಕ್ಕಲ್ಲದೆ ಸೂಕ್ಷ್ಮಶರೀರಕ್ಕಲ್ಲ. ಬುಧ್ಯಾದಿಗಳು ಅಜ್ಞಾನ, ಪಂಚಪ್ರಾಣಗಳು ಸೂಕ್ಷ್ಮ ಶರೀರಕ್ಕೆ ಸೇರಿದವುಗಳು. ಒಂದು ಸ್ಥೂಲದೇಹ ಹೋದರೂ ಮತ್ತೊಂದು ಬರುವುದು. ಹೀಗೆ ಸ್ಥೂಲದೇಹಗಳನ್ನು ಪಡೆಯುತ್ತಾ ಈಶ್ವರಾನುಗ್ರಹದಿಂದಲೂ ತನಗೆ ಲಭ್ಯವಾಗಿರುವ ಪುರುಷಪ್ರಯತ್ನದಿಂದಲೂ, 'ಭರ್ಗಃ' ಪದದಿಂದ ಮುಂದಿನ ಪದಗಳ ತತ್ವಗಳನ್ನು ದಾಟುತ್ತಾ ಗಾಯತ್ರೀಮಂತ್ರದ ಅಂತ್ಯಪದದ ತತ್ವವಾದ ಸೂಕ್ಷ್ಮಶರೀರವೂ ಕರಗಿಹೋಗುವ ಮೋಕ್ಷಸಾಮ್ರಾಜ್ಯವನ್ನು ಬುದ್ಧಿಯು ಪಡೆಯಬೇಕಾಗುವುದು. ಆದುದರಿಂದ ಸೂಕ್ಷ್ಮಶರೀರವು (ಬುದ್ಧ್ಯಾದಿಗಳು) ಮೋಕ್ಷದಲ್ಲಿಯೇ ಕರಗಬೇಕು. ಬುದ್ಧ್ಯಾದಿಗಳು (ವೇದ ಶಕ್ತಿಗಳು) ಯಾವಕಾಲದಲ್ಲಿ ಉದಯವಾಯಿತೋ, ಇದಕ್ಕೆಷ್ಟು ಸ್ಥೂಲದೇಹಗಳು ಹಿಂದೆ ಬಂದಿವೆಯೋ ಹೇಳಲು ಯಾರಿಗೂ ಸಾಧ್ಯವಿಲ್ಲ. ಆದುದರಿಂದಲೇ ಅನಾದಿಯೆಂದು ಕರೆಯಲ್ಪಡುವುದು ಇವರಂತೆ ಬುದ್ಧ್ಯಾದಿಗಳ ತತ್ವದಲ್ಲಿರುವ ವೇದವೂ ಅನಾದಿಯಾಗಿದೆ. ನಮ್ಮನ್ನು ನಾವು ಅರಿತರೆ ವೇದವನ್ನರಿತಂತಾ ಗುವುದು.

ರಾವಣನವಧೆಯಾದ ಅನಂತರ ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕವಾಗಿ ಸೀತಾದೇವಿಯು ಭೂಪ್ರವೇಶಮಾಡುವವರೆಗಿನ ತತ್ವಗಳು ಸ್ವರಗಳು ತಾಳ ನಿಬಂಧನೆಯಿಂದ ಬಿಡಲ್ಪಟ್ಟು ಸ್ವತಂತ್ರವಾಗಿರುವ ಸ್ಥಿತಿ. ಸೀತಾದೇವಿಯು ಭೂಪ್ರವೇಶಮಾಡಿ ಹಿಂತಿರುಗದಿರುವ ತತ್ವವು ಸ್ವರಶಬ್ದವೂ ಕೂಡ ಅಂತ್ಯದಲ್ಲಿ ನಿಶ್ಶಬ್ದತೆಯನ್ನು ಹೊಂದುವುದೆಂದರೆ "ನಿಶ್ಶಬ್ದಂ ಬ್ರಹ್ಮ ಉಚ್ಯತೇ" ಎಂಬಂತೆ ಪರಬ್ರಹ್ಮವಾಗುವುದೆಂಬ ತತ್ವವಾಗಿದೆ. ಇದರಂತೆ ವೇದದಲ್ಲಿರುವ ಸ್ವರಶಕ್ತಿಯು ಪ್ರಥಮದಲ್ಲಿ ತನ್ನ ಮೂಲಕಾರಣವಾದ ಪರಬ್ರಹ್ಮಸ್ಥಿತಿಯಾಗುವುದು. ಸೀತಾದೇವಿಯು ಭೂಪ್ರವೇಶವಾದಮೇಲೆ ಕೌಸಲ್ಯಾದಿಗಳು ಈ ಲೋಕವನ್ನು ಬಿಟ್ಟು ಸ್ವರ್ಗವನ್ನು ಹೊಂದಿದರೆಂದರೆ ಬುದ್ಧ್ಯಾದಿಗಳ ಶಕ್ತಿಗಳೇ ಇಲ್ಲದಂತಾಗಿ ಪರಬ್ರಹ್ಮನಲ್ಲಿ ಅಭೇದದಿಂದ ಅಡಗಿದುವೆಂಬ ತತ್ವವಾಗಿರುವುದು. ಇದರಂತೆ ವೇದದ ಸ್ವರಶಕ್ತಿಯು ಪ್ರಥಮದಲ್ಲಿ ತನ್ನ ಮೂಲಕಾರಣವನ್ನು ಹೊಂದಿದ

ಅನಂತರ ವೇದವಿಭಾಗದಶಕ್ತಿಯೂ ಕೂಡ ತನ್ನ ಮೂಲಕಾರಣವಾದ ಪರಬ್ರಹ್ಮವಾಗುವುದೆಂಬ ತತ್ವವಾಗಿರುವುದು. ಕೌಸಲ್ಯಾದಿಗಳು ಈ ಲೋಕವನ್ನು ಬಿಟ್ಟೊಡನೆಯೆ ಶ್ರೀರಾಮಚಂದ್ರನು ತಮ್ಮಂದಿರೊಡಗೂಡಿ ತನ್ನ ಸ್ವಸ್ಥಾನವನ್ನು ಹೊಂದಿ ಮಹಾವಿಷ್ಣುವಾದನು. ಅಂದರೆ ಪ್ರತಿಫಲನಕ್ಕೆ ಕಾರಣವಾಗಿದ್ದ ಬುದ್ಧ್ಯಾದಿಗಳೇ ಲಯವನ್ನು ಹೊಂದಿದಾಗ ಅದರಿಂದುಂಟಾಗಿದ್ದ ಪ್ರತಿಫಲನವು (ಜೀವಚ್ಛೈತನ್ಯವು) ಬಿಂಬಭೂತವಾದ ಮಹಾವಿಷ್ಣುವಾದ ಪರಬ್ರಹ್ಮವೇ ಆಗುವುದು. ರಾಮಾಯಣದ ಉತ್ತರಕಾಂಡದ ಅಂತರಾರ್ಥಗಳಲ್ಲಿ ಮೇಲಿನ ವಿವರಗಳೆಲ್ಲಾ ಬಂದಿರುವುವು

ಮುಖ್ಯತಾತ್ಪರ್ಯವೇನೆಂದರೆ:— ವೀಣೆಯಲ್ಲಿ ಶಬ್ದವು ಉದಯಿಸಿ ಕಾರ್ಯ ರೂಪವನ್ನು ತಾಳಿ ಪುನಃ ನಿಶ್ಶಬ್ದಸ್ಥಿತಿಗೆ ಹೋಗುವಂತೆ ಪರಬ್ರಹ್ಮನಿಂದ ಉದಯಿಸಿದ ನಾಲ್ಕುವೇದಗಳೇ ಪಿಂಡಾಂಡವಾದ ಮನುಷ್ಯನಲ್ಲಿಯೂ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳ ಶಕ್ತಿಯಾಗಿಯೂ ಅದರಿಂದುಂಟಾಗುವ ಪ್ರತಿಫಲಿತ ಚೈತನ್ಯನೆಂದರ ಜೀವಾತ್ಮರೂಪವಾಗಿಯೂ ಇದ್ದು ಸೃಷ್ಟಿಸ್ಥಿತಿ ಕಾರ್ಯಗಳನ್ನು ಹೊಂದಿ ಅನಂತರ ಮೋಕ್ಷಮಾರ್ಗ (ಲಯ)ವನ್ನನುಸರಿಸಿ ಪುನಃ ಪರಬ್ರಹ್ಮವಾಗುವಿಕೆಯೇ ಮನುಷ್ಯಶರೀರದಲ್ಲಿ ವೇದತತ್ವಪ್ರತಿಪಾದನೆ ಮಾಡುವುದಾಗಿದೆ. ರಾಮಾಯಣವೆಂಬ ಪದದ ಅರ್ಥವೂ ಶ್ರೀರಾಮಚಂದ್ರನ (ಪರಬ್ರಹ್ಮನ) ಮಾರ್ಗವೆಂಬದಾಗಿ ಜೀವಾತ್ಮನು ಸೃಷ್ಟಿ ಸ್ಥಿತಿ ಲಯಗಳ ಮಾರ್ಗಗಳನ್ನು ಹೊಂದುವ ತತ್ವಪ್ರತಿಪಾದಕವಾಗಿಯೇ ಇರುವುದು.

ಮನುಷ್ಯಶರೀರವನ್ನನುಸರಿಸಿ ಶ್ರೀಮದ್ರಾಮಾಯಣದಲ್ಲಿರುವ ವೇದ ತತ್ವವನ್ನು ಬಹುಸೂಕ್ಷ್ಮವಾಗಿ ತಿಳಿಸಿತು ಶ್ರೀಮದ್ರಾಮಾಯಣದ ಅಂತರಾರ್ಥ ಗ್ರಂಥದಲ್ಲಿರುವ ತತ್ವಗಳನ್ನೂ, ವೀಣೆಯ ಅಂತರಾರ್ಥದ ತತ್ವಗಳನ್ನೂ ಅನುಸರಿಸಿ ವೇದವಿಚಾರವನ್ನು ಲಂಬಿಸುತ್ತಾ ಹೋದರೆ ಬಹುದೊಡ್ಡಗ್ರಂಥವಾಗುವುದು. ತಿಳಿಯಲಪೇಕ್ಷೆಯುಳ್ಳವರು ಇವೆರಡರಲ್ಲಿರುವ ತತ್ವಗಳನ್ನು ವಿಮರ್ಶೆಮಾಡಿ ಅರಿತುಕೊಳ್ಳಬಹುದು.

ವೇದಪ್ರಕಾಶಕವಾಗಿರುವ ಶ್ರೀಮದ್ರಾಮಾಯಣವು ಧರ್ಮಾರ್ಥಕಾಮ ಮೋಕ್ಷಗಳ ವಿವರಣೆಗಳನ್ನೊಳಗೊಂಡಿದ್ದರೂ ಶ್ರೀರಾಮಚಂದ್ರನು ಪ್ರಧಾನಪುರುಷನಾಗಿ ಅವನ ತತ್ವವೂ ಜ್ಞಾನಶಕ್ತಿಯಾದ ಬುದ್ಧಿಸ್ಥಾನವಾದುದರಿಂದ ಜ್ಞಾನಕಾಂಡದ ಪ್ರಧಾನತ್ವವನ್ನು ಹೊಂದಿರುವುದು. ಕ್ರಿಯಾಶಕ್ತಿಯಾದ ಮನಸ್ಸಿನ ತತ್ವದಲ್ಲಿರುವ ಲಕ್ಷ್ಮಣನು ಶ್ರೀರಾಮನನ್ನು ಅನುಸರಿಸಿದ್ದನೆಂದರೆ ಕರ್ಮಕಾಂಡವು ಜ್ಞಾನಕಾಂಡಕ್ಕೆ ಸಹಾಯವಾಗಿ ಅನುವರ್ತಿಸಿಕೊಂಡಿತ್ತೆಂಬ ತತ್ವವಾಗಿರುವುದು.

ಶ್ರೀರಾಮಚರಿತ್ರೆಯನ್ನು ಮನುಷ್ಯಶರೀರಕ್ಕೆ ಅನ್ವಯಿಸಿರುವಂತೆ ಶ್ರೀಕೃಷ್ಣಾವತಾರದ ವಿವರವಾದ ಭಾಗವತ ಭಾರತಗಳೆರಡನ್ನು ಮನುಷ್ಯಶರೀರಕ್ಕೆ ಅನ್ವಯಿಸಿ ತತ್ವವನ್ನು ತಿಳಿದುಕೊಳ್ಳಬಹುದು. ಬಲರಾಮನು ಬುದ್ಧಿತತ್ವಕ್ಕೆಂದರೆ ಋಗ್ವೇದಕ್ಕೂ, ಶ್ರೀಕೃಷ್ಣನು ಮನಸ್ಸಿನ ತತ್ವಕ್ಕೆಂದರೆ ಯಜುರ್ವೇದಕ್ಕೂ ಅನ್ವಯವಾಗುವುದು ಭಾರತ ಭಾಗವತಗಳಲ್ಲಿ ಶ್ರೀಕೃಷ್ಣನೇ ಪ್ರಧಾನಪುರುಷನಷ್ಟೆ! ಅಂದರೆ ಶ್ರೀಕೃಷ್ಣಾವತಾರದ ಚರಿತ್ರೆಯು ಮನಸ್ತತ್ವಕ್ಕೆ ಅನ್ವಯವಾಗಿಯೂ, ಯಜುರ್ವೇದಸ್ಥಾನವಾಗಿಯೂ ಇರುವುದರಿಂದ ಶ್ರೀಕೃಷ್ಣನ ಲೀಲಾವಿಭೂತಿಯು ಸ್ಥೂಲ ರಹಸ್ಯಾರ್ಥಗಳೆರಡರಲ್ಲಿಯೂ ಕರ್ಮಪ್ರಧಾನವಾಗಿ ಕರ್ಮಕಾಂಡದ ಉದ್ಧಾರದ ತತ್ವವನ್ನೇ ಪ್ರತಿಪಾದಿಸುವುದು. ಬಲರಾಮನು ಶ್ರೀಕೃಷ್ಣನನ್ನೇ ಅನುಸರಿಸಿದ್ದಂತೆ ಜ್ಞಾನಕಾಂಡವು ಕರ್ಮಕಾಂಡವನ್ನನುಸರಿಸಿತ್ತೆಂಬ ತತ್ವವು. ಮನುಷ್ಯನಿಗೆ ಬುದ್ಧಿಮನಸ್ಸುಗಳೆರಡೂ ಹೇಗೆ ಪ್ರಧಾನಗಳೋ, ವೀಣೆಯಲ್ಲಿ ಸಾರಣೀ ಪಂಚಮಾ ತಂತಿಗಳು ಹೇಗೆ ಪ್ರಧಾನಗಳೋ, ವೇದಗಳಲ್ಲಿ ಋಗ್ಯಜುರ್ವೇದಗಳೆರಡೂ ಹೇಗೆ ಪ್ರಧಾನಗಳೋ ಹಾಗೆಯೆ ಮನುಷ್ಯನ ಸಕಲವಿಧವಾದ ಕಲ್ಯಾಣಕ್ಕೂ ಶ್ರೀರಾಮ ಕೃಷ್ಣಾವತಾರಗಳ ತತ್ವಗಳೆರಡೂ ಅತ್ಯುತ್ತಮವಾದದ್ದಾಗಿವೆ ಮತ್ತು ಬಹು ಆಳದವರೆಗೂ ಮುಳುಗಿ ತರಬಹುದಾದ ವೇದತತ್ವಗಳೆಂಬ ರತ್ನಗಳನ್ನೊಳಗೊಂಡಿರುವ ಸಮುದ್ರಗಳಾಗಿವೆ ಶ್ರೀರಾಮಾವತಾರವು ಹೇಗೆ ಗಾಯತ್ರೀ ಸ್ವರೂಪವೊ ಹಾಗೆಯೇ ಶ್ರೀಕೃಷ್ಣಾವತಾರವೂ ಗಾಯತ್ರೀ ಸ್ವರೂಪವಾಗಿಯೇ ಇವೆ. ದೇವೀ ಅವತಾರದ ಚರಿತ್ರೆಯಾದ ದೇವೀಭಾಗವತವೂ ಕೂಡ ಗಾಯತ್ರೀಸ್ವರೂಪವಾಗಿಯೇ ಇವೆ ಸಕಲ ಅವತಾರಗಳೂ ವೇದ ಜನನಿಯಾದ ಗಾಯತ್ರೀ ಆಧಾರದಮೇಲೆಯೇ ಆಗಿರುವುವು.

ರಾಮಾಯಣದ ಅಂತರಾರ್ಥವನ್ನನುಸರಿಸಿ ವೇದತತ್ವವನ್ನು ಮನುಷ್ಯಶರೀರಕ್ಕೆ ಸಮನ್ವಯಮಾಡಿರುವುದರಲ್ಲಿ ಚತುರ್ವೇದಗಳ ತತ್ವಗಳು ಅಂತಃಕರಣ ಚತುಷ್ಟಯಾತ್ಮಕವಾದ ಜೀವಾತ್ಮನಿಗೆ ಅನ್ವಯವಾಗಿ ಜೀವಾತ್ಮನು ವೇದಪುರುಷನಾಗಿರುವನೆಂಬುದನ್ನು ಹೊರಸೂಸಿತು. ವೇದವನ್ನು ನಾದತ್ವೇನ ತೆಗೆದುಕೊಂಡರೆ ವಿಶ್ವವ್ಯಾಪಿಯಾದ ಓಂಕಾರನಾದರೂಪವಾಗಿಯೂ, ಜ್ಞಾನತ್ವೇನ ತೆಗೆದುಕೊಂಡರೆ ಪರಬ್ರಹ್ಮಮೊದಲುಗೊಂಡು ಬ್ರಹ್ಮಾಂಡದ ಸಕಲವಿಚಾರಗಳ ವಿವರಣೆಗಳನ್ನೊಳಗೊಂಡ ಜ್ಞಾನಭಂಡಾರವಾಗಿಯೂ, ಶಕ್ತಿತ್ವೇನ ತೆಗೆದುಕೊಂಡರೆ ಪರಬ್ರಹ್ಮವಾಗಿಯೂ ಮತ್ತು ,ಶುದ್ಧಸತ್ವಗುಣಶಕ್ತಿಯಾಗಿಯೂ, ಚೈತನ್ಯತ್ವೇನ ತೆಗೆದುಕೊಂಡರೆ ಪರಬ್ರಹ್ಮ ಮತ್ತು ಜೀವಾತ್ಮರಾಗಿಯೂ ಇರುವುದು. ವೇದವು ಇಂತಹ ಮಹತ್ವವುಳ್ಳದ್ದು. ವೇದಮಂತ್ರವೂ ಇಂತಹ ಮಹತ್ತಿನ ವ್ಯಕ್ತಸ್ವರೂಪವು

ಅಂತಃಕರಣಚತುಷ್ಟಯಾತ್ಮಕನಾದ ಜೀವಾತ್ಮನೇ ಸರ್ವಪ್ರಾಣಿಗಳಲ್ಲಿಯೂ ಚತುರ್ವೇದಪುರುಷನಾಗಿರುವುದರಿಂದ ಆತ್ಮನು ಹೇಗೆ ಅನಾದಿಯೋ ಹಾಗೆಯೆ ವೇದವೂ ಅನಾದಿಯಾದುದು. ಜೀವನ ಆದಿಯನ್ನರಿಯಲು ಹೇಗೆ ಅಸಾಧ್ಯವೊ ಹಾಗೆಯೆ ವೇದಕಾಲವನ್ನು ನಿರ್ಣಯಿಸುವುದೂ ಸಾಧ್ಯವಲ್ಲ. ಆದುದರಿಂದ ಆಧುನಿಕರು ವೇದದಕಾಲವು ೪-೫ ಸಾವಿರ ವರ್ಷಗಳೆಂದು ಭೂಗರ್ಭಶೋಧನಾ ಮೊದಲಾದ ಕಾರಣಾಂತರಗಳಿಂದ ಊಹಿಸಿರುವುದು ವೇದವಿಚಾರವನ್ನು ಪೂರ್ಣವಾಗಿ ತಿಳಿಯಲು ಪ್ರಯತ್ನಪಡದಿದ್ದವರ ಮಾತಾಗಿರುವುದೆಂದು ಧೈರ್ಯವಾಗಿ ಹೇಳಬಹುದು. ಮನುಷ್ಯನ ಸೃಷ್ಟಿಸ್ಥಿತಿಲಯದ ವಿಚಾರಗಳನ್ನು ಮನುಷ್ಯನೇ ನಿರ್ಮಾಣಮಾಡಿದುದಲ್ಲ. ಬ್ರಹ್ಮಾಂಡದ ಇತರ ಜೀವರಾಶಿಗಳಂತೆ ಮನುಷ್ಯನ ಸೃಷ್ಟಿಸ್ಥಿತಿಲಯವೂ ಈಶ್ವರಾಧೀನವಾದುದು. ಇದರಂತೆಯೇ **ಜೀವಾತ್ಮನ ತತ್ವದಲ್ಲಿರುವ ವೇದವು ಮನುಷ್ಯರಿಂದ ರಚಿತವಾದುದಲ್ಲ**. ದೈವಿಕವಾದುದರಿಂದ ಅಪೌರುಷೇಯವಾದುದೇ ಆಗಿರುವುದು. ಎಲ್ಲಾ ಪ್ರಾಣಿಗಳಿಗಿಂತಲೂ ಅತಿಶಯವಾದ ಅಧ್ಯಾತ್ಮಜ್ಞಾನದ ಬುದ್ಧಿಶಕ್ತಿಯನ್ನು ಮನುಷ್ಯನಿಗೆ ಅನುಗ್ರಹಿಸಿರುವುದೇ ಈಶ್ವರನು. ಆತನ ಕಟ್ಟಳೆಯಾದ ಧರ್ಮಾರ್ಥಕಾಮಮೋಕ್ಷ ಪ್ರತಿಪಾದಕವಾದ ವೇದವನ್ನನುಸರಿಸಿಯೇ ಜೀವರು ಕೃತಕೃತ್ಯರಾಗಬೇಕು

ವೇದವನ್ನು ಕಾಂಡತ್ರಯ (ಕರ್ಮ, ಜ್ಞಾನ, ಯೋಗ) ವೆಂದು ಹಿಂದೆ ಹೇಳಿರುವ ವಿಭಾಗಕ್ಕೆ ಸರಿಯಾಗಿ ಅಂತಃಕರಣದಲ್ಲಿಯೂ ಬುದ್ಧಿ, ಮನಸ್ಸು, ಅಹಂಕಾರಗಳ ಕಾರ್ಯಗಳೇ ಪ್ರಧಾನವಾದವುಗಳು. ಚಿತ್ತವು ಈ ಮೂರನ್ನೂ ಅನುಸರಿಸತಕ್ಕದ್ದಾಗಿದೆ. ರಾಮಾಯಣದಲ್ಲಿಯೂ ಶ್ರೀರಾಮ, ಲಕ್ಷ್ಮಣ, ಭರತರೇ ಮುಖ್ಯರು. ಶತ್ರುಘ್ನನು ಇವರನ್ನು ಅನುಸರಿಸತಕ್ಕವನು. ವೇದವನ್ನು ಒಟ್ಟಿನಲ್ಲಿ ಮಂತ್ರ, ಬ್ರಾಹ್ಮಣಗಳೆಂದೆರಡು ನಾಮದಿಂದ ಕರೆಯುವ ತತ್ವವೂ ಅನ್ವಯವಾಗುವುದು. ಅಂತಃಕರಣದಲ್ಲಿ ಜ್ಞಾನಕ್ರಿಯಾಶಕ್ತಿಗಳ ಸ್ಥಾನವಾದ ಬುದ್ಧಿ, ಮನಸ್ಸುಗಳೆರಡೇ ಪ್ರಧಾನವಾದವುಗಳು. ಇದರಂತೆ ಶ್ರೀರಾಮಲಕ್ಷ್ಮಣರಿಬ್ಬರೇ ಬಹು ಮುಖ್ಯರು. ವೇದವನ್ನು (ವಿದ್-ಜ್ಞಾನೇ) ಜ್ಞಾನಭಂಡಾರವೆಂಬ ಒಂದೇ ರಾಶಿಯನ್ನಾಗಿಯೂ ಹೇಳಬಹುದು. ಹೇಗೆಂದರೆ, ರಾಮಾಯಣವೆಂದರೆ ರಾಮ, ಲಕ್ಷ್ಮಣ, ಭರತ, ಶತ್ರುಘ್ನರಾದಿಯಾಗಿ ಸಕಲರ ಚರಿತ್ರೆಯೂ ಅಡಗಿ ಶ್ರೀರಾಮಚರಿತ್ರೆಯೆಂದು ಕರೆಯಲ್ಪಡುವಂತೆ ವೇದಕ್ಕೂ "ಜ್ಞಾನರಾಶಿ" ಎಂದು ಹೆಸರಿರುವುದು.

ವೀಣೆಯನ್ನು ಮನುಷ್ಯಶರೀರಕ್ಕೆ ಅನ್ವಯಿಸಿರುವುದರಲ್ಲಿ ಅನಾಹತ ಮತ್ತು ಆಹತಗಳೆರಡರಲ್ಲಿಯೂ ಮನುಷ್ಯನಲ್ಲಿ ವೇದತತ್ವವಿರುವುದೆಂದು ತಿಳಿಸಿದೆ. ಆಹತನಾದಕ್ಕೂ ಆತ್ಮನ ಪ್ರೇರಣೆಯು ಆವಶ್ಯಕವೆನ್ನುವುದಕ್ಕೆ 'ಆತ್ಮಾವಿವಕ್ಷ

ಪ್ರಾಣೋಯಂ' ಎಂಬ ಶ್ಲೋಕವನ್ನು ಹಿಂದೆ ಕೊಟ್ಟಿದೆ. ಅಂದರೆ ದೇಹದ ಸಕಲ ವ್ಯಾಪಾರಕ್ಕೂ ಜೀವನ ಪ್ರೇರಣೆ ಬೇಕು. ಇದರಂತೆ ನಮ್ಮ ಧ್ವನ್ಯಾತ್ಮಕವಾದ ಆಹತನಾದಕ್ಕೂ ಚತುರ್ವೇದಗಳ ತತ್ವವಾದ ಅಂತಃಕರಣ ಚತುಷ್ಟಯಾತ್ಮಕನಾದ ಜೀವಾತ್ಮನ ಪ್ರೇರಣೆಯು ಇದ್ದೇ ಇದೆ. ನಮ್ಮ ಧ್ವನಿಯ ಸೃಷ್ಟಿ ಸ್ಥಿತಿ ಲಯಗಳೂ ಚತುರ್ವೇದಗಳನ್ನು ಅನುಸರಿಸಿ ವೀಣೆಯ ಮನೆಗಳ ತತ್ವಗಳನ್ನು ಹೊಂದಿರುವುವು.

ವೇದವಿಚಾರವನ್ನು ಸಮರ್ಥಿಸಲು ವೇದವಾಕ್ಯಗಳ ಪ್ರಮಾಣವನ್ನೇ ಆಧಾರವಾಗಿ ಕೊಡುತ್ತಾರೆ. ವೇದಕ್ಕೆ ವೇದವೇ ಪ್ರಮಾಣವೇ. ? ಮತ್ತೊಂದು ಪ್ರಮಾಣದಿಂದ ವೇದವನ್ನು ದೃಢೀಕರಿಸಬೇಕೆಂಬುದೇ ಕೆಲವು ಆಧುನಿಕರ ಪ್ರಶ್ನೆ. ಇದಕ್ಕೆ ಉತ್ತರವೇನೆಂದರೆ:—ನಿನಗೆ ನೀನೇ ಪ್ರಮಾಣ. ನನಗೆ "ನಾನು" ಎನ್ನುವುದೇ ಪ್ರಮಾಣ. "ನಾನು" ಎನ್ನುವುದಕ್ಕಿಂತ ಹೆಚ್ಚಿನದು ಪೃಥ್ವಿಯಲ್ಲಿಲ್ಲ. ಆದುದರಿಂದ ವೇದವಿಚಾರವನ್ನು ದೃಢೀಕರಿಸಲು ನಮ್ಮನ್ನೇ ನಾವು ಪ್ರಮಾಣವಾಗಿಟ್ಟುಕೊಳ್ಳುವುದೇ ಇತರ ಆಧಾರಗಳಿಗಿಂತಲೂ ಹೆಚ್ಚಿನದು. ನನ್ನ ದೇಹವೆಂದು ಹೇಳುವುದರಿಂದ ದೇಹಕ್ಕಿಂತಲೂ, ಪೃಥಕ್ಕಾದ ನನ್ನ ಸ್ವರೂಪವೇನು ? ನಾನು ಯಾವಕಾಲದಲ್ಲಿ ಹೇಗೆ ಸೃಷ್ಟಿಯಾದೆ ? 'ನಾನು' ಎನ್ನುವುದು ಎಲ್ಲಿ ಅಂತ್ಯವನ್ನು ಪಡೆಯುವುದು ? ನನಗೂ ದೇಹಕ್ಕೂ ಏನು ಸಂಬಂಧ ? ನಾನು ಪಡೆದಿರುವ ದೇಹದ ರಕ್ತಕಣದ ಸ್ವಭಾವವು ಎಂತಹುದು ? ಮುಂತಾದ ನನ್ನ ಸೃಷ್ಟಿ ಸ್ಥಿತಿ ಲಯಗಳ ಸಕಲ ವಿಚಾರಗಳ ವಿವರಣೆಗಳನ್ನೂ ಆಧಾರವಾಗಿಟ್ಟುಕೊಂಡು ವೇದವನ್ನು ವಿಮರ್ಶೆ ಮಾಡಿದರೆ ವೇದದ ಸತ್ಯತೆಯು ಮನಸ್ಸಿಗೆ ಮುಂದಟ್ಟಾಗುವುದು. "ನಾನು" ಎಂಬುದರ ಸಕಲ ವಿಚಾರವನ್ನು ಯಥಾರ್ಥವಾಗಿ ಅರಿಯಬೇಕಾದರೆ ವೇದ ಮತ್ತು ವೇದ ಸಂಪನ್ನರಿಂದಲ್ಲದೆ ಬ್ರಹ್ಮಾಂಡವನ್ನೇ ತಲೆಕೆಳಗು ಮಾಡಿದರೂ ಖಂಡಿತವಾಗಿಯೂ ಮತ್ತೆಲ್ಲಿಯೂ ದೊರಕುವುದಿಲ್ಲ ಆದುದರಿಂದಲೇ ವೇದವು ಸ್ವತಂತ್ರವಾದುದು, ಸ್ವಯಂಪ್ರಮಾಣವಾದುದು ಮತ್ತು ಸರ್ವಕ್ಕೂ ಮೂಲಾಧಾರವಾದುದು. "ನಾನು" ಎಂಬುದರ ಸಕಲ ವಿವರಣೆಯನ್ನೂ ಯಥಾರ್ಥವಾಗಿ ಅರಿಯಬೇಕೆಂಬ ನೈಜವಾದ ಇಚ್ಛೆಯಂಕುರಿಸುವಿಕೆಯೂ ಸುಕೃತ ವಿಶೇಷದಿಂದಲ್ಲದೆ ಲಭ್ಯವಾಗಲಾರದು ಯಾವಾಗ ನೈಜವಾದ ಮನಸ್ಸುಂಟಾಗುವುದೋ ಆಗ ವೇದಕ್ಕೆ ಶರಣರಾದಂತೆಯೆ ಮತ್ತು ವೇದ ಶರಣರನ್ನೇ ಗುರುವಾಗಿ ಮಾಡಿಕೊಳ್ಳಬೇಕಾಗುವುದು.

ಸ್ವರವು ಕಾಲ ಕ್ರಿಯಾ ಪರಿಮಾಣರೂಪವಾದ ತಾಳದೊಡನೆ ಸಂಮಿಳಿತವಾಗಿ ಮುಳುಗುವುದು. ಸೀತಾದೇವಿಯು ರಾವಣನ ಬಂಧನಕ್ಕೊಳಗಾಗಿ ಶ್ರೀರಾಮನೂ ರಾವಣನ ತೊಂದರೆಗೆ ಸಿಲುಕಿದನು. ವೇದವೂ ವಿಕೃತಿಗಳಾದ ಪದ, ಕ್ರಮ

ಮುಂತಾದುವುಗಳಲ್ಲಿ ಮಗ್ನವಾಗುವುದು. ಇದರಂತೆಯೆ ವೇದತತ್ವದಲ್ಲಿರುವ ಜೀವಾತ್ಮನೂ ವೃತ್ತಿತಾದಾತ್ಮ್ಯನಾಗಿ ಅಜ್ಞಾನವೆಂಬ ಅಂಧಕಾರ ರೂಪವಾದ ದೇಹ ಮತ್ತು ವಿಷಯವ್ಯಾಪಾರಗಳಲ್ಲಿ ಮುಳುಗಿರುವನು. ಹೀಗೆ ಮುಳುಗಿ ಎಷ್ಟು ಜನ್ಮಗಳಾಗಿವೆಯೋ ಗೊತ್ತಿಲ್ಲ ಜೀವನು ಈ ಪಾಶದಿಂದ ಬಿಡಿಸಿಕೊಳ್ಳಲು ಸ್ಥೂಲದೇಹದಲ್ಲಿಯೂ, ಸೂಕ್ಷ್ಮದೇಹದಲ್ಲಿಯೂ ರಾವಣನ ತತ್ವವಾದ ಅಜ್ಞಾನದ ಕಲ್ಮಷವನ್ನು ಜನ್ಮಜನ್ಮಕ್ಕೂ ತೊಳೆಯುತ್ತಾಬರಬೇಕು. ಸ್ಥೂಲದೇಹದ ಕೊಳೆಯನ್ನು ತೊಳೆಯಲು ಶುದ್ಧವಾದ ಸಂಸ್ಕಾರದೊಡಗೂಡಿದ ರಕ್ತಕಣದ ಕುಲದಲ್ಲಿ ಜನ್ಮವನ್ನು ತೆಗದುಕೊಳ್ಳುತ್ತಾ ಬರಬೇಕು. ಸೂಕ್ಷ್ಮದೇಹದ ಅಜ್ಞಾನಕಲ್ಮಷವನ್ನು ನಾಶಪಡಿಸಿಕೊಳ್ಳಲು ವೇದಸಂಪನ್ನರಾದ ಸದ್ಗುರುವಿನ ಅನುಗ್ರಹವನ್ನೂ ದೇವತಾನುಗ್ರಹವನ್ನೂ ಸಂಪಾದಿಸಿಕೊಳ್ಳಬೇಕು.

## ೭. ವೇದಾರ್ಥ ವಿಚಾರ

ವೇದವು ಶಬ್ದಮಯವಾದುದು ಮತ್ತು ಶಬ್ದಾರ್ಥ (ಜ್ಞಾನ) ಸಂಬಂಧವಾದುದು. ಉಚ್ಚಾರಣೆಯಿಂದ ಯಾವ ಶಬ್ದದ ಶ್ರವಣವಾಗುತ್ತದೋ ಆ ಶಬ್ದವು ಅರ್ಥವನ್ನು ತಿಳಿಸತಕ್ಕದ್ದಾಗಿದೆ ಶ್ರೀಶಾರದಾದೇವಿಯ ಹಸ್ತದಲ್ಲಿ ಪುಸ್ತಕವೂ, ವರ್ಣಮಾಲೆಯೂ, ವೀಣೆಯೂ ಇರುವುವು. ಚಿತ್ರಗಾರನು ಬರೆಯುವ ಚಿತ್ರದ ವಿವರವೆಲ್ಲಾ ಚಿತ್ರಗಾರನಲ್ಲಿ ಭಾವರೂಪಜ್ಞಾನವಾಗಿದ್ದು ಅನಂತರ ಕಾರ್ಯರೂಪವಾದ ಚಿತ್ರವಾಗುವುದು. ಇದರಂತೆ ಶ್ರೀಶಾರದಾದೇವಿಯ ಹಸ್ತದಲ್ಲಿರುವ ಪುಸ್ತಕದ ತತ್ವವೇ ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಲಯಗಳ ಸರ್ವ ವಿವರಣೆಗಳನ್ನೊಳಗೊಂಡ ಜ್ಞಾನಭಂಡಾರವಾಗಿರುವುದು ಅರ್ಥ (ಜ್ಞಾನ)ಕ್ಕೆ ಶಬ್ದವು ಅವಶ್ಯಕವಿರುವಂತೆ ಶ್ರೀಶಾರದಾದೇವಿಯ ಹಸ್ತದಲ್ಲಿ ಶಬ್ದಪ್ರತಿಪಾದಕವಾದ ವರ್ಣಮಾಲೆಯೂ ಇರುವುದು ಶಬ್ದವೇ ವರ್ಣ. ಶಬ್ದಾರ್ಥದಿಂದ ಕಾರ್ಯಜ್ಞಾನವಾಗಿ ಕಾರ್ಯವೂ ಆಗುವುದು ಹೀಗೆ ಶಬ್ದಾರ್ಥಗಳಿಂದ ಉಂಟಾಗಿರುವ ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಲಯ ರೂಪವಾದ ಕಾರ್ಯದ ತತ್ವವೇ ಶ್ರೀಶಾರದಾದೇವಿಯ ಹಸ್ತದಲ್ಲಿರುವ ವೀಣೆಯು ಅಕ್ಷರಗಳಿಂದ ಪದವೂ, ಪದಗಳಿಂದ ವಾಕ್ಯವೂ, ವಾಕ್ಯಗಳಿಂದ ಒಂದು ವಿಚಾರಬೋಧಕವಾದ ಗ್ರಂಥವೂ ಆಗುವಂತೆ ಶ್ರೀಶಾರದಾದೇವಿಯ ಹಸ್ತಗಳಲ್ಲಿರುವ ಪುಸ್ತಕ, ಮಾಲಾ, ವೀಣೆಗಳು ಒಟ್ಟಿನಲ್ಲಿ ಸೇರಿ ಶಬ್ದ, ಅರ್ಥ ಮತ್ತು ಕಾರ್ಯರೂಪವಾಗಿ ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಲಯಗಳ ವಿವರಣೆಯ ತತ್ವವಾಗಿವೆ ಇದೇ ಶಬ್ದಾರ್ಥಮಯವಾದ ವೇದ.

ಮನುಷ್ಯನು ಕರ್ಮಜ್ಞಾನಮಾರ್ಗದಲ್ಲಿದ್ದು ಮೋಕ್ಷಪಡೆಯುವ ಮಾರ್ಗವೂ ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಲಯಗಳ ನಿಯತಿಗಳಲ್ಲಿ ಒಂದಂಶವಾಗಿದೆ.

ಹೀಗಿರುವುದರಿಂದಲೇ ಮನುಷ್ಯನ ಕಲ್ಯಾಣಕ್ಕಾಗಿ ಕರ್ಮಜ್ಞಾನ (ಧರ್ಮಾರ್ಥ ಕಾಮಮೋಕ್ಷ) ಬೋಧಕವಾದ ವೇದಭಾಗವನ್ನು ಈಶ್ವರನು ದಯಪಾಲಿಸಿ ಕೊಟ್ಟಿರುವನು. ಹೀಗೆ ಅನುಗ್ರಹೀತವಾಗಿ ಬಂದಿರುವುದೇ ಈಗ ಪ್ರಚುರದಲ್ಲಿರುವ ವೇದವು. ಮನುಷ್ಯನು ಉದ್ಧಾರವಾಗಲು ಅರಿಯಬೇಕಾಗಿರುವುದು ಧರ್ಮಾರ್ಥ ಕಾಮಮೋಕ್ಷ ಬೋಧಕವಾದದ್ದನ್ನೇ ಹೊರತು ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಲಯದ ಕಾರ್ಯಕ್ರಮದ ವಿವರಣೆಗಳನ್ನಲ್ಲ ಈ ಕಾರ್ಯಕ್ರಮಗಳೆಲ್ಲಾ ಈಶ್ವರಾಧೀನ ವಾದವುಗಳು. ಪ್ರಪಂಚದಲ್ಲಿ ಯಾವ ಯಾವ ಸಸ್ಯಗಳೂ, ವೃಕ್ಷಗಳೂ, ಪ್ರಾಣಿಗಳೂ, ಪರ್ವತಗಳೂ, ನದಿಗಳೂ, ಭೂಭಾಗಗಳೂ, ಸಮುದ್ರಗಳೂ, ನಕ್ಷತ್ರಗಳೂ, ಲೋಕಗಳೂ, ಭೂತಗಳೂ, ಕೊನೆಗೆ ಸೂರ್ಯ ಚಂದ್ರರೂ ಹೇಗೆ ಹೇಗೆ ಸೃಷ್ಟಿಯಾಗಬೇಕೋ, ಹೇಗೆ ಹೇಗೆ ವ್ಯಾಪಾರದಲ್ಲಿರಬೇಕೋ, ಹೇಗೆ ಹೇಗೆ ಲಯಪಡೆಯಬೇಕೋ ಅವುಗಳ ವಿವರಣೆಯಲ್ಲಾ ಶ್ರೀಶಾರದಾದೇವಿಯ ಹಸ್ತದಲ್ಲಿರುವ ಪುಸ್ತಕದಲ್ಲಿರುವುದೆಂದರೆ ಜ್ಞಾನರೂಪವಾದ ವೇದಭಂಡಾರ ದಲ್ಲಿದೆ. ಈ ವಿವರಣೆಯನ್ನೆಲ್ಲಾ ಮನುಷ್ಯನು ಅರಿಯಲಾರನು. ಜ್ಞಾನ ರೂಪವಾದ ಈ ವೇದಭಂಡಾರದಲ್ಲಿರುವ ಮನುಷ್ಯನು ತಿಳಿದು ಕೃತಕೃತ್ಯನಾಗುವ ಚತುರ್ವಿಧಪುರುಷಾರ್ಥದ ವಿವರಣೆಯನ್ನು ಮಾತ್ರ ಈಶ್ವರನು ಅನುಗ್ರಹಿಸಿ ಕೊಟ್ಟಿರುವುದೇ ಈಗ ಪ್ರಚುರದಲ್ಲಿರುವ ವೇದವು. ಮನುಷ್ಯನೂ ಕೂಡ ಪಶು ಪಕ್ಷ್ಯಾದಿಗಳಂತೆ ಇದ್ದಿದ್ದಭಾಗದಲ್ಲಿ ಈ ವೇದಾಂಶವನ್ನು ಮನುಷ್ಯನಿಗೆ ಅನುಗ್ರಹಿಸುವ ಕಾರ್ಯವೂ ಈಶ್ವರನಿಗಿರುತ್ತಿರಲಿಲ್ಲ. ಬ್ರಹ್ಮಾಂಡದ ಸಕಲ ವಿವರಣೆಗಳನ್ನು ಒಳಗೊಂಡಿರುವ ಶ್ರೀಶಾರದಾದೇವಿಯ ಹಸ್ತದಲ್ಲಿರುವ ಪುಸ್ತಕದ ತತ್ವವಾದ ವೇದಭಂಡಾರದ ರಚನೆಯನ್ನು ಯಾವನೂ ಅರಿಯಲಾರನು. 'ಕಶ್ಛಂದಸಾಂಯೋಗಮಾವೇದಧೀರಃ' ಯಾವ ವಿದ್ವಾಂಸನು ತಾನೆ ವೇದರಚನೆ ಯನ್ನು ಬಲ್ಲನು' ಎಂದೂ 'ಅನಂತಾವೈವೇದಾಃ' ವೇದವು ಅಖಂಡವಾಗಿ ನೋಡಲು ತಿಳಿಯಲು ಅಸದಳವಾಗಿದೆಯೆಂದು ವೇದದಲ್ಲಿಯೇ ಹೇಳಿದೆ. ಆದುದರಿಂದ ಪರಮಾತ್ಮನ ಕಟ್ಟಳೆಯಲ್ಲಿ ಲಭ್ಯವಾಗಿರುವ ಚತುರ್ವಿಧಪುರುಷಾರ್ಥ ಬೋಧಕವಾದ ವೇದದ ಅರ್ಥವನ್ನು ನಾವು ಅರಿತು ಅದರಂತೆ ಆಚರಿಸಿ ಧನ್ಯರಾಗಬೇಕು.

ಗಹನವಾದ ವೇದಾರ್ಥವನ್ನು ನಿರ್ಣಯಮಾಡಲು ಮಹರ್ಷಿಗಳು ವೇದಾಂಗಗಳೆನಿಸುವ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ, ಮೀಮಾಂಸಾ, ನ್ಯಾಯ, ಪುರಾಣ, ಧರ್ಮಶಾಸ್ತ್ರಗಳನ್ನು ಪ್ರಕಾಶಪಡಿಸಿರು ವರು. ಈ ಶಾಸ್ತ್ರಗಳ ಸಹಾಯವಿಲ್ಲದೆ ವೇದಾರ್ಥವನ್ನು ನಿಶ್ಚಯಿಸುವುದಾಗ ಲಾರದು. ಮನುಷ್ಯನ ಕಲ್ಯಾಣದ ಉದ್ದೇಶದಿಂದ ಹೊರಪಟ್ಟಿರುವ ವೇದವು

ಧರ್ಮಾರ್ಥಕಾಮಮೋಕ್ಷದ ಅರ್ಥಪ್ರಧಾನವಾಗಿಯೇ ಇರುವುದು. ಅಜ್ಞಾನ ಸ್ವರೂಪವನ್ನು ತಿಳಿಸಿ ಅದರ ಪರಿಹಾರವನ್ನೂ ತಿಳಿಸಬೇಕಾಗಿರುವುದರಿಂದ ಜ್ಞಾನಾಜ್ಞಾನದ ಸ್ವರೂಪಗಳೆರಡರ ವಿಚಾರವೂ ವೇದದಲ್ಲಿ ಬರುವುದು. ಇದ ರಂತೆ ಧರ್ಮಾಧರ್ಮಗಳೆರಡರ ವಿಚಾರವನ್ನೂ ತಿಳಿಸಿ ಧರ್ಮಕ್ಕೆ ಪ್ರಾಶಸ್ತ್ಯ ವಿರುವುದನ್ನೂ ವೇದವು ತಿಳಿಸುವುದು. ಪ್ರಪಂಚದ ಸೃಷ್ಟಿಸ್ಥಿತಿಲಯಗಳೂ, ಪಂಚಭೂತಗಳ ಪಂಚೀಕರಣ ವಿಚಾರಗಳೂ, ಸೂರ್ಯಾಗ್ನಿಮುಂತಾದ ದೇವತಾ ಶಕ್ತಿಗಳ ವಿಚಾರಗಳೂ ವೇದದಲ್ಲಿ ಬರುವುದರಿಂದ ವಿಜ್ಞಾನಶಾಸ್ತ್ರದ ಸಕಲ ಸಾರಗಳೂ ವೇದದಲ್ಲಿ ಅಡಗಿಯೆ ಇವೆ.

ವೇದಾರ್ಥವನ್ನು ಅರಿಯಲು ಪ್ರಥಮ ತರಗತಿಯಿಂದಲೇ ಪ್ರಾರಂಭಿಸ ಬೇಕು. ಪ್ರಥಮದಲ್ಲಿ ಕರ್ಮಸಂಸ್ಕಾರದಿಂದ ಪಡೆಯುವ ವೇದಮಾತೆಯಾದ ಗಾಯತ್ರೀದೇವಿಯ ಉಪಾಸನೆಯೇ ವೇದಾರ್ಥಜ್ಞಾನಕ್ಕೆ ಅಸ್ತಿಭಾರ. ಗಾಯತ್ರೀ ದೇವತೋಪಾಸನೆಯೊಡನೆ ನಿಯಮದಿಂದ ಅಧ್ಯಯನಮಾಡುತ್ತಾ ಬರಬೇಕು. ನಿಯಮಾಧ್ಯಯನದ ಜೊತೆಗೆ ಉಪಾಸನಾಬಲವೂ ಹೆಚ್ಚಿದರೆ ಮಂತ್ರಮೂರ್ತಿ ಯಾಗುವನು. ಅನಂತರ ಗುರುಮುಖೇನ ಅರ್ಥವಿಚಾರ ತಿಳಿದುಕೊಳ್ಳುತ್ತಾ ದೇವತೋಪಾಸನಾಬಲವು ವೀರ್ಯವತ್ತಾದರೆ ವೇದದ ನಿಶ್ಚಯವಾದ ರಹಸ್ಯಾರ್ಥ ಗಳು ಸ್ಫುರಣೆಗೆ ಬರುವುವಲ್ಲದೆ ಜ್ಞಾನವಂತನೂ ಆಗಿ 'ವೇದವಿತ್' ಎನಿಸುವನು. ವೇದಸಂಪನ್ನನಾಗಲು ಈ ಕಟ್ಟಳೆಯನ್ನೇ ಅನುಸರಿಸಬೇಕು. ಆಧುನಿಕರ ವಿದ್ಯೆಯಲ್ಲಿಯೂ ವಿಜ್ಞಾನ ಮುಂತಾದ ಯಾವುದಾದರೂ ಒಂದು ಶಾಸ್ತ್ರವನ್ನು ಅರಿಯಬೇಕಾದರೆ ಅದರ ಸಂಪ್ರದಾಯದ ನಿಯಮಕ್ಕನುಸಾರವಾಗಿ ಹೇಗೆ ನಡೆದುಕ್ಕೊಳ್ಳಬೇಕೋ ಹಾಗೆಯೇ ವೇವವನ್ನರಿಯಲು ವೇದ ಮತ್ತು ಋಷಿಗಳಿಂದ ಏರ್ಪಟ್ಟ ಒಂದು ಸಂಪ್ರದಾಯವಿದೆ. ಆ ಸಂಪ್ರದಾಯವನ್ನನುಸರಿಸಿ ಮುಂದರಿ ಯದಯೂ, ಅವರು ಹೇಳುವ ನಿಯಮಗಳನ್ನು ಪಾಲಿಸದೆಯೂ ಇದ್ದರೆ ವೇದಾ ಭ್ಯಾಸದಿಂದ ಹೊಂದಬಹುದಾದ ಫಲವು ದೊರೆಯುವುದಿಲ್ಲ ಮತ್ತು ವೇದದ ನಿಶ್ಚಯವಾದ ಅರ್ಥವು ಭಾಸವಾಗದೆ ಅನರ್ಥಕರವೇ ಆಗುವುದು. ಆದ್ದರಿಂದ ಮಹರ್ಷಿಗಳ ಅಂತರ್ಭಾವವನ್ನು ಕಂಡುಹಿಡಿದು ಅದರ ವಿಚಾರದಲ್ಲಿ ಟೀಕೆ ಮಾಡಲು ಅದಕ್ಕೆ ಸರಿಯಾದ ಅಧಿಕಾರವೇ ಬೇಕು.

ಶಬ್ದ ಮತ್ತು ಅರ್ಥಗಳಲ್ಲಿ, ಅರ್ಥಕ್ಕೆ ಇರುವ ಮರ್ಯಾದೆಯು ಅರ್ಥಕ್ಕೂ ಮೂಲಕಾರಣವಾದ ಶಬ್ದಕ್ಕೂ ಇದ್ದೇ ಇರುವುದು. ಶಬ್ದಮಯವಾದ ವೇದ ದಲ್ಲಂತೂ ಅರ್ಥಕ್ಕೆ ಇರುವ ಪ್ರಾಶಸ್ತ್ಯದಂತೆಯೆ ಶಬ್ದಕ್ಕೂ (ನಾದಕ್ಕೂ) ಇರುವುದ ರಿಂದಲೇ ಅರ್ಥಗ್ರಾಹ್ಯವಿಲ್ಲದಿದ್ದರೂ ಶಬ್ದಶಕ್ತಿಯ ಮಹಿಮೆಯನ್ನು ಪ್ರತಿಪಾದಿ

ಸುವ ಅಧ್ಯಯನಕ್ಕೆ ಸರಿಯಾದ ಜನ್ಮ, ಕರ್ಮಸಂಸ್ಕಾರ, ಪವಿತ್ರತೆ ಮುಂತಾದ ನಿಯಮಗಳಿರಬೇಕೆಂಬ ವಿಧಿಯು ಇರುವುದು. ಅರ್ಥಜ್ಞಾನದ ಮೂಲವಾದ ಶಬ್ದಕ್ಕೂ ಕಾರಣವಾದುದೇ ದೇವತಾಶಕ್ತಿಗಳು. ವೇದಭಾಷೆಯು ನಾದಬ್ರಹ್ಮದ ಅಸದೃಶ ಶಕ್ತಿಯುಳ್ಳದ್ದಾಗಿ ದೇವತಾಶಕ್ತಿಗಳಿಗೆ ಸಂಬಂಧಪಡುವುದರಿಂದ ಜನ್ಮ ಸಂಸ್ಕಾರ ಮುಂತಾದ ಅಧಿಕಾರಲಕ್ಷಣವೇ ಬೇಕು. ಆದರೆ ಅಧ್ಯಯನದಲ್ಲೇ ಪರ್ಯವಸಾನವನ್ನು ಹೊಂದಲಾಗುವುದಿಲ್ಲ. ಅಧ್ಯಯನದಿಂದ ಮುಂದಕ್ಕೆ ವೇದಾರ್ಥಜ್ಞಾನಕ್ಕೂ ಹೋಗಿ ಆಚರಿಸಿ ಕೃತಕೃತ್ಯರಾಗಬೇಕು. ಅಧ್ಯಯನಾಧಿಕಾರವಿಲ್ಲದವರು ವೇದಾರ್ಥ ಪ್ರತಿಪಾದಕವಾದ ಗ್ರಂಥಗಳ ಶ್ರವಣ ಮತ್ತು ಪಠನೆಗಳಿಂದಲೂ, ವೇದಸಂಪನ್ನರಾದ ವಿಪ್ರರಿಂದ ವೇದಾರ್ಥವನ್ನು ಬೋಧಿಸಿ ಕೊಳ್ಳುತ್ತಲೂ, ದೇವತೋಪಾಸನೆಮಾಡುತ್ತಲೂ ಜ್ಞಾನವಂತರಾಗಲು ಖಂಡಿತವಾಗಿಯೂ ಅವಕಾಶವಿದೆ.

ವೇದದ ಅರ್ಥವು ಕರ್ಮಜ್ಞಾನ ಪ್ರತಿಪಾದಕವಾಗಿಯೇ ಇರುವುದೆಂದು ಮೇಲೆ ತಿಳಿಸಿದೆ. ವೇದದಲ್ಲಿ ನದಿ, ನಗರ, ಪರ್ವತಾದಿ ಭೂಲಕ್ಷಣ ವರ್ಣನೆಯೂ, ರಾಜರ ಹೆಸರೂ ಬಂದಿರುವುವು. ಆದುದರಿಂದ ಕರ್ಮಜ್ಞಾನ ಪ್ರತಿಪಾದಕವಾಗಿ ವೇದಾರ್ಥವಿರುವುದಿಲ್ಲವೆಂಬ ಅನುಮಾನವೂ ರಾಜರ ಹೆಸರೂ ಭೂಲಕ್ಷಣ ವರ್ಣನೆಯೂ ವೇದದಲ್ಲಿ ಬಂದಿರುವುದರಿಂದ ದೇಶ, ಪಟ್ಟಣ, ರಾಜರುಗಳಿರುವುದಕ್ಕೆ ಮುಂಚೆ ವೇದವಿರಲಿಲ್ಲವೆಂಬ ಶಂಕೆಯೂ ಕೆಲವು ಆಧುನಿಕರಲ್ಲಿದೆ. ಇದಕ್ಕೆ ಸಮಾಧಾನವೇನೆಂದರೆ :— ಶಬ್ದಕ್ಕೆ ನಾನಾರ್ಥಗಳಿರುತ್ತವೆ. ಅಲ್ಲದೆ ಶಬ್ದಕ್ಕೆ ಸಾಮಾನ್ಯವಾದ ಅರ್ಥ, ವಿಶೇಷಾರ್ಥ, ಇನ್ನೂ ಹೆಚ್ಚಿನದಾದ ಸಾಂಕೇತಿಕವಾದ ಗೂಢಾರ್ಥಗಳೂ ಸಂದರ್ಭಾನುಸಾರ ಇರುತ್ತವೆ. ವೇದದಲ್ಲಿ ಬರುವ ರಾಜ, ನದಿ, ನಗರ ಮುಂತಾದ ಹೆಸರುಗಳು ಚರಿತ್ರೆ ಭೂಗೋಳರೂಪವಾದುದೆಂದು ತಿಳಿಯಬಾರದು. ಇವುಗಳೆಲ್ಲಾ ಕರ್ಮಜ್ಞಾನ ಮಾರ್ಗಕ್ಕನುಸಾರವಾದ ರಹಸ್ಯಾರ್ಥ ಪ್ರತಿಪಾದಕವಾಗಿಯೇ ಇರುವುವಲ್ಲದೆ ಅನ್ಯಥಾ ಇಲ್ಲ. ಉದಾಹರಣೆಗಾಗಿ ಒಂದೆರಡು ವಿಚಾರವು ಬರೆಯಲ್ಪಟ್ಟಿರುವುದು.

ಶ್ರೀರಾಮಕಥೆ ಇದೆ. ರಾಮನು ಇಂತಹ ದೇಶದಲ್ಲಿ ಹುಟ್ಟಿ ವನವಾಸದಲ್ಲಿ ಇಂತಿಂತಹ ದೇಶ ಸಂಚಾರಮಾಡಿ ಹೆಂಡತಿಯನ್ನು ಕಳೆದುಕೊಂಡು ಕೋತಿಗಳ ಸ್ನೇಹಮಾಡಿ ರಾಕ್ಷಸರನ್ನುಕೊಂದು ಹೆಂಡತಿಯನ್ನು ಬಿಡಿಸಿಕೊಂಡು ರಾಜ್ಯವಾಳಿದನೆಂದು ಸಾಧಾರಣವಾಗಿ ನೋಡುವುದಕ್ಕೆ ಒಂದು ಚರಿತ್ರೆಯ ರೂಪವಾಗಿರುವುದೆಂದು ಭಾವಿಸುವರು. ಈ ವಿಚಾರವು ಋಗ್ವೇದದಲ್ಲಿ ಇರುವುದನ್ನು ಹಿಂದೆಯೇ ತಿಳಿಸಿದೆ. ಶ್ರೀರಾಮಚರಿತ್ರೆಯನ್ನು ಮನುಷ್ಯದೇಹಕ್ಕೆ

ಅನ್ವಯಮಾಡಿರುವ ಶ್ರೀಮದ್ರಾಮಾಯಣದ ಅಂತರಾರ್ಥಗ್ರಂಥವನ್ನು ನೋಡಿದರೆ ಸಂಶಯಗಳೆಲ್ಲಾ ಹಾರಿಹೋಗುವುವು. ರಾಮನೆಂಬ ಧೊರೆಯ ಚರಿತ್ರೆಯು ಹೋಗಿ ನನ್ನ ನಿಮ್ಮ ಮತ್ತು ಮನುಷ್ಯನ ಪ್ರಥಮಸೃಷ್ಟಿಯಿಂದಲೂ ಎಷ್ಟೋ ಕಲ್ಪಗಳಾದರೂ ಇರತಕ್ಕ ಎಲ್ಲಾ ಮನುಷ್ಯರ ಚರಿತ್ರೆಯೇ ಆಗಿರುವುದು. ಮನುಷ್ಯನ ದೇಹದಲ್ಲಿಯೇ ರಾಮಾಯಣದಲ್ಲಿರುವ ಸ್ಥಳಗಳೆಲ್ಲಾ ಇರುವುವು ಶ್ರೀರಾಮಚರಿತ್ರೆಯು ಮನುಷ್ಯರ ಚರಿತ್ರೆಮಾತ್ರವೇ ಆಗಿರದೆ ಸಾಕ್ಷಾತ್ ಪರಬ್ರಹ್ಮನ ಚರಿತ್ರೆಯೇ ಆಗಿದೆ. ಶ್ರೀರಾಮಚರಿತ್ರೆಯಂತೆ ಶ್ರೀಕೃಷ್ಣಚರಿತ್ರೆಯೂ, ಮತ್ಸ್ಯಕೂರ್ಮಾದ್ಯವತಾರಗಳ ರಹಸ್ಯಾರ್ಥದ ಮಹಿಮಾಶಕ್ತಿಗಳೂ ವಿಶ್ವಕ್ಕೆ ಸಂಬಂಧಪಟ್ಟಿರುವುದರಿಂದಲೇ ಪ್ರತಿಪ್ರಾಣಿಯೂ ಹೊಂದುವ ಗರ್ಭದಲ್ಲಿನ ಬೆಳವಣಿಗೆಗಳ ನಿಯತಿಯಾಗಿ ನಡೆಯುತ್ತಿದೆ. ಆದುದರಿಂದ ವೇದದಲ್ಲಿರುವ ಚರಿತ್ರೆರೂಪವೂ ಬ್ರಹ್ಮಾಂಡಪಿಂಡಾಂಡಗಳಿಗೆ ಸಂಬಂಧವಾದುದೇ ಹೊರತು ವ್ಯಕ್ತಿಸಂಬಂಧವಾದುದಲ್ಲ

ಪ್ರಪಂಚದಲ್ಲಿ ಎಷ್ಟೋವಾದ್ಯಗಳಿವೆ. ವೀಣೆಯೂ ಅದರಂತೆ ಮನುಷ್ಯ ಕೃತವೆಂಬ ಭಾವನೆ ಇದೆ. ವೀಣೆಯವಿಚಾರ ಬಂದಿರುವ ವೇದವಾಕ್ಯನ್ನೇ ಈ ಗ್ರಂಥದಲ್ಲಿಯೂ ಕೊಟ್ಟಿದೆ ಆದುದರಿಂದ ವೀಣಾರಚನೆಯನ್ನು ಮನುಷ್ಯನು ಕಂಡುಹಿಡಿದಮೇಲೆ ವೇದವನ್ನು ಮನುಷ್ಯನು ಕವಿತಾಶಕ್ತಿಯಿಂದ ರಚಿಸಿರಬೇಕೆಂಬುದಾಗಿ ಅನೇಕರು ಊಹಿಸಬಹುದು ಈ ಊಹೆಯು ಸರಿಯಾದುದಲ್ಲ. ವಿಶ್ವದರಚನೆಯು ವೀಣಾರಚನೆಯ ಮೇಲೆಯೇ ನಿಂತಿರುವುದು ಪಿಂಡಾಂಡವಾದ ಮನುಷ್ಯಶರೀರವೂ ವೀಣಾರಚನೆಯ ಆಧಾರದಮೇಲಿರುವುದು. ಈ ತತ್ತ್ವ ವಿಚಾರಕ್ಕೆ ಚಿತ್ರಪಟವನ್ನೇ ಕೊಟ್ಟಿರುವುದು. ಆದುದರಿಂದ ಶ್ರೀಶಾರದಾದೇವಿಯ ಅನುಗ್ರಹದಿಂದ ಲಭಿಸಿ ಋಷಿಪಾರಂಪರ್ಯವಾಗಿ ಬಂದಿರುವ, ಅಲ್ಪಪದಾರ್ಥವೆಂದು ಕೆಲವರು ಭಾವಿಸಿರುವ, ಈ ವೀಣಾವಾದ್ಯವು ಯಾವಮಹತ್ತಿನ ಮೂಲಾಧಾರದ ತತ್ತ್ವವನ್ನು ಅನುಸರಿಸಿರುವುದೆಂಬುದನ್ನು ಮನಸ್ಸಿಗೆ ತಂದುಕೊಳ್ಳಬೇಕು

ಸರಸ್ವತೀ, ಲಕ್ಷ್ಮೀ, ಗಾಯತ್ರೀ, ವಿಷ್ಣು, ಶಿವ ಮುಂತಾದ ದೇವತಾ ಮೂರ್ತಿಗಳ ಆಕಾರವು ಲೋಕವಿಲಕ್ಷಣವಾಗಿ ತೋರುವುದರಿಂದ ಎಂತಹ ದೇವರೆಂದು ಕೆಲವರು ಊಹಿಸುವುದಲ್ಲದೆ ಹಾಸ್ಯವಾಗಿಯೂ ಭಾವಿಸುವರು. ಇದು ನಿಶ್ಚಯವಾದ ತತ್ತ್ವವನ್ನು ಅರಿಯದೆ ಇರುವುದರ ದೋಷ. ಈ ಮೂರ್ತ್ಯಾಕಾರಗಳಲ್ಲೆಲ್ಲಾ ಬಹುಮಹತ್ವವಾದ ತತ್ವಗಳಿವೆ. ಲಕ್ಷ್ಮೀ, ಗಾಯತ್ರೀ ದೇವಿಯರು ಕಮಲಾಸನದಲ್ಲಿರುವರು. ಮನುಷ್ಯನ ಶಿರಸ್ಸಿನಲ್ಲಿ ಕಮಲವಿರುವುದನ್ನು ಚಿತ್ರಪಟದಲ್ಲಿ ತೋರಿಸಿದೆ. ಗಾಯತ್ರೀ ಲಕ್ಷ್ಮೀದೇವಿಯರು ಮನುಷ್ಯನಲ್ಲಿಯೂ ಈ ಕಮಲದಲ್ಲಿ ಇರುವರು ಈ ಕಮಲದ ತತ್ವವೇನು? ಎಂತಹಸ್ಥಳ?

ಎಂತಹ ಮಹತ್ವವುಳ್ಳ ದೇವತಾಶಕ್ತಿಗಳಾಗಿರುವರು? ಎಂಬ ರಹಸ್ಯಾರ್ಥವನ್ನರಿತರೆ ತಪ್ಪುಭಾವನೆಯ ದೋಷವೆಲ್ಲಾ ತೊಲಗುವುದು. ಸರಸ್ವತೀದೇವಿಯ ಮಹತ್ತು ಈ ಗ್ರಂಥದಲ್ಲಿಯೇ ಬಂದಿರುವುದು. ವಿಷ್ಣುವಿನ ಕೈಯಲ್ಲಿರುವ ಶಂಖವು ದಾಸಯ್ಯನ ಕೈಯಲ್ಲಿರುವ ಶಂಖದಂತಲ್ಲ. ಸಾಕ್ಷಾತ್ ಓಂಕಾರ ನಾದಾತ್ಮಕವಾದುದು.

ವೇದದಲ್ಲಿ ಸರ್ಪಗಳು ಯಾಗಮಾಡಿದವೆಂದುಕ್ತವಾಗಿದೆ. ಇದರಲ್ಲಿ ಯಾಗ ಮಾಡುವ ಸರ್ಪವಾವುದು? ಯಾಗವೆಂದರೇನು? ಎಂಬುದರ ರಹಸ್ಯಾರ್ಥ ವನ್ನರಿತರೆ ಸಂಶಯ ಪರಿಹಾರವಾಗಿ ಆನಂದದಲ್ಲಿ ಮುಳುಗಬಹುದು. ಸರ್ಪವೇ ಬ್ರಹ್ಮಾಂಡದಲ್ಲಿ ಶೇಷಶಕ್ತಿಯಾಗಿಯೂ, ಪಿಂಡಾಂಡದಲ್ಲಿ ಕುಂಡಲಿನೀ ಶಕ್ತಿಯಾಗಿಯೂ ಇರುವುದು. ಸೃಷ್ಟಿ ಮತ್ತು ಮೋಕ್ಷಕ್ರಮವೇ ಯಾಗದ ಕ್ರಮವಾಗಿರುವುದು ಸೃಷ್ಟಿ ಮತ್ತು ಮೋಕ್ಷಕ್ರಮದಲ್ಲಿ ಕುಂಡಲಿನೀಶಕ್ತಿಯ ಕಾರ್ಯವನ್ನರಿತರೆ ಈ ಯಾಗದ ರಹಸ್ಯಾರ್ಥವು ಗೊತ್ತಾಗುವುದು.

ವೇದದಲ್ಲಿ ಪರ್ವತ, ನದಿಗಳ ವಿಚಾರಗಳೂ ಬಂದಿರುವುವಷ್ಟೆ. ಉದಾಹರಣೆ ಗಾಗಿ ಎರಡು ಮಂತ್ರಗಳನ್ನು ಕೆಳಗೆ ಬರೆದಿದೆ.

**ಋಗ್ವೇದದಲ್ಲಿ :—**

ಯತ್ರಗಂಗಾಚ ಯಮುನಾಚ ಯತ್ರಪ್ರಾಚೀ ಸರಸ್ವತೀ |
ತತ್ರಮಾಮಮೃತಂ ಕೃಧಿ ಇಂದ್ರಾಯೇಂದ್ರೋ ಪರಿಸ್ರವ ||

**ತೈತ್ತರೀಯ ಶ್ರುತಿಯಲ್ಲಿ :—**

ಗಂಗಾಯಮುನಯೋರ್ಮಧ್ಯೇ ಯೇ ವಸಂತಿ |
ತೇಮೇಪ್ರಸನ್ನಾತ್ಮಾನಃ ಚಿರಂಜೀವಿತಂ ವರ್ಧಯಂತಿ |

ಎಂಬದಾಗಿರುವುದು. ಅಲ್ಲದೆ ಸಿಂಧು ಮುಂತಾದ ಇತರ ನದಿಗಳ ವಿಚಾರವೂ ವೇದದಲ್ಲಿ ಬರುವುದು ಈ ನದಿಗಳ ಸ್ಥಳಪ್ರಾಶಸ್ತ್ಯವಿಚಾರವೂ ಈಶ್ವರನ ಸೃಷ್ಟಿಯಲ್ಲಿ ಒಂದು ಮಹತ್ವವನ್ನು ಹೊಂದಿರುವುದರಿಂದಲೇ ವೇದದಲ್ಲಿ ಬಂದಿದೆ. ಅಲ್ಲದೆ ಇವುಗಳ ತತ್ವಾರ್ಥಗಳು ಬ್ರಹ್ಮಾಂಡಕ್ಕೂ ಪಿಂಡಾಂಡವಾದ ಮನುಷ್ಯನಿಗೂ ಅನ್ವಯವಾಗುವುವು. ಮನುಷ್ಯನಲ್ಲಿ ಗಂಗಾ ಯಮುನಾ ಸರಸ್ವತೀ ನದಿಗಳ ರಹಸ್ಯಾರ್ಥವು ಸೂರ್ಯ, ಚಂದ್ರ, ಬ್ರಹ್ಮರಂಧ್ರನಾಡಿಗಳಾಗಿವೆ.

[ಈ ತತ್ವಾರ್ಥವನ್ನು ಶ್ರೀಮದ್ರಾಮಾಯಣದ ಅಂತರಾರ್ಥಗ್ರಂಥದಲ್ಲಿ ವಿವರಿಸಿರುವುದು.]

ಇದರಂತೆಯೇ ವೇದದಲ್ಲಿ ಬರುವ ಸಿಂಧು ಮುಂತಾದ ನದಿಗಳೂ, ಪರ್ವತಗಳೂ ಅಮೋಘವಾದ ರಹಸ್ಯಾರ್ಥಗಳನ್ನೊಳಗೊಂಡಿವೆ. ಸಿಂಧೂನದೀ

ತೀರದಲ್ಲಿ ಪ್ರಥಮದಲ್ಲಿ ಆರ್ಯರಿದ್ದರೆಂದೂ, ಅನಂತರ ಗಂಗಾನದೀತೀರಕ್ಕೆ ಬಂದರೆಂದೂ, ಇದೇ ಋಗ್ವೇದ ರಚನೆಯ ಕಾಲವೆಂದೂ ಆಧುನಿಕರು ಸ್ವಬುದ್ಧಿಯಿಂದ ಅರ್ಥಕಲ್ಪನೆಮಾಡಿರುವ ಋಗ್ವೇದಮಂತ್ರಗಳನ್ನೆಲ್ಲಾ ಕೊಟ್ಟು ಅವುಗಳ ಅಮೋಘವಾದ ರಹಸ್ಯಾರ್ಥಗಳನ್ನು ಹೊರಸೂಸಬಹುದು. ಆದರೆ ಗ್ರಂಥಬಾಹುಳ್ಯದ ಹೆದರಿಕೆಯಿಂದ ಇಲ್ಲಿ ವಿಸ್ತರಿಸಲಿಲ್ಲ

ಮುಖ್ಯವಾಗಿ ವೇದದಲ್ಲಿರುವ ರಾಜರ ಚರಿತ್ರೆ, ನದಿ, ನಗರ ಮುಂತಾದವುಗಳ ವಿಚಾರಗಳು ಚರಿತ್ರೆಭೂಗೋಳ ರೂಪವಾಗಿರುವುದೆಂದು ತಿಳಿಯಬಾರದು. ಇಂತಹ ಮಂತ್ರಗಳು ಕರ್ಮಜ್ಞಾನಕ್ಕನುಸಾರವಾದ ರತ್ನಪ್ರಾಯವಾದ ಸಾಂಕೇತಿಕವಾದ ರಹಸ್ಯಾರ್ಥಗಳನ್ನು ಪ್ರತಿಪಾದಿಸುವವುಗಳಾಗಿಯೇ ಇವೆ. ಒಂದುವೇಳೆ ವೇದವು ಚರಿತ್ರೆಭೂಗೋಳರೂಪವಾದುದನ್ನು ತಿಳಿಸುವುದೆಂದು ಹೇಳಿದರೂ ಬಾಧಕವಿಲ್ಲ. ಕಾರಣವೇನೆಂದರೆ, ವೇದಮಾತೆಯು ತ್ರಿಕಾಲಜ್ಞೆಯಾಗಿರುವುದರಿಂದಲೂ ವೇದದಲ್ಲಿ ಸೃಷ್ಟಿಸ್ಥಿತಿಲಯಗಳ ವಿಚಾರಗಳು ಬಂದಿರುವುದರಿಂದಲೂ ವೇದವು ಭೂತಭವಿಷ್ಯದ್ವರ್ತಮಾನಗಳನ್ನೆಲ್ಲಾ ತಿಳಿಸುವುದು ಸಹಜವಾಗಿಯೇ ಇದೆ.

ಅಲ್ಲದೆ ಮಹರ್ಷಿಗಳು ಕೆಲಕೆಲವು ವೇದಮಂತ್ರಗಳನ್ನು ಕೆಲಕೆಲವು ಕರ್ಮಗಳಲ್ಲಿ ಆ ಕರ್ಮವು ವೀರ್ಯವತ್ತಾಗಲು ಪ್ರಯೋಗಿಸಬೇಕೆಂದು ಸೂತ್ರ ಮತ್ತು ಸ್ಮೃತ್ಯಾದಿಗಳ ಮೂಲಕ ವಿಧಿಸಿರುವರು. ಕೇವಲ ಶಬ್ದಾರ್ಥಗಳಿಂದಲೇ ಮಂತ್ರಗಳಲ್ಲಿರುವ ಮಹತ್ವವಾದ ಅರ್ಥಗಳು ಗೋಚರವಾಗುವುದಿಲ್ಲ. ಮಹರ್ಷಿಗಳ ಅಂತರ್ಭಾವವನ್ನರಿತುಕೊಳ್ಳಲಾರದೆ ಮನಸ್ಸಿ ಅರ್ಥಮಾಡುವುದರಿಂದ ಅನರ್ಥಕರವೇ ಆಗುವುದು. ಉದಾಹರಣೆಗಾಗಿ

ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ ।
ತೃತಿಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥
ಇಮಾಂ ತ್ವಮಿಂದ್ರ ಮೀಢ್ವಸ್ಸುಪುತ್ರಾಗ್ಂ ಸುಭಗಾಂಕೃಣು ।
ದಶಾಸ್ಯಾಂ ಪುತ್ರಾನಾಧೇಹಿ ಪತಿಮೇಕಾದಶಂ ಕೃಧಿ ॥

ಎಂಬ ಈ ಎರಡು ಮಂತ್ರಗಳನ್ನು ವಿವಾಹಕರ್ಮದಲ್ಲಿಯೂ ಮತ್ತು ಶ್ರೋತ್ರಿಯರಾದ ಬ್ರಾಹ್ಮಣರು ಇತರರಿಗೆ ಆಶೀರ್ವದಿಸುವ ಕಾಲದಲ್ಲಿಯೂ ವಿನಿಯೋಗಿಸಬೇಕೆಂದು ವಿಧಾಯಕವಾಗಿ ಋಷಿಪಾರಂಪರ್ಯದಿಂದಲೂ ಸಂಪ್ರದಾಯವಾಗಿ ಬಂದಿರುವುದು.

ಇಂತಹ ಮಂತ್ರಗಳಿಗೆ ಆಧುನಿಕರ ಅರ್ಥವೇನೆಂದರೆ :— ಕನ್ಯೆಗೆ ಚಂದ್ರನು ಮೊದಲನೆಯ ಪತಿ, ಗಂಧರ್ವನು ಎರಡನೆಯ ಪತಿ, ಅಗ್ನಿಯು ಮೂರನೆಯ ಪತಿ,

ಮನುಷ್ಯನು ನಾಲ್ಕನೆಯಪತಿ ಎಂಬದಾಗಿ ಪ್ರಥಮ ಮಂತ್ರಕ್ಕೆ ಅರ್ಥ ಬರೆದಿರುವ ಪ್ರಷ್ಟಿಯೊಂದು. ಪ್ರಥಮ ಮಂತ್ರಕ್ಕೆ ಎರಡನೆ ಅರ್ಥದ ದೃಷ್ಟಿಯೇನೆಂದರೆ; — ಒಬ್ಬ ಸ್ತ್ರೀಯು ಹನ್ನೊಂದುಜನ ಗಂಡಂದಿರನ್ನು ಕೂಡಿಕೊಳ್ಳಬಹುದಂತೆ. ಪ್ರಥಮತಃ ವಿವಾಹವಾದ ಗಂಡನಿಗೆ ಸೋಮನೆಂದೂ, ಎರಡನೆಯಸಲ ನಿಯೋಗ ಮಾಡಿಕೊಂಡ ಪುರುಷನಿಗೆ ಗಂಧರ್ವನೆಂದೂ, ಮೂರನೆಸಲ ನಿಯೋಗಮಾಡಿ ಕೊಂಡ ಪುರುಷನಿಗೆ ಅಗ್ನಿಯೆಂದೂ, ನಾಲ್ಕನೇಸಲದಿಂದ ಹನ್ನೊಂದನೇಸಲವ ವರಿಗೆ ಸ್ತ್ರೀಯು ನಿಯೋಗಮಾಡಿಕೊಳ್ಳುವ ಪುರುಷರಿಗೆ ಮನುಷ್ಯನೆಂದೂ ಹೆಸರು ಗಳು ಎಂಬದಾಗಿ ಅಭಿಪ್ರಾಯಪಡುತ್ತಾರೆ ಎರಡನೇ ಮಂತ್ರಕ್ಕೆ ವಿವಾಹಿತ ಸ್ತ್ರೀಯಾಗಲೀ ವಿಧವಾಸ್ತ್ರೀಯಾಗಲೀ ಪುರುಷರೊಡನೆ ಕೂಡಿ ಹತ್ತು ಸಂತಾನ ಗಳನ್ನು ಪಡೆಯಬಹುದೆಂಬ ಅರ್ಥವಂತೆ.

ಆಧುನಿಕರ ಅಭಿಪ್ರಾಯವನ್ನು ಮೇಲೆ ತಿಳಿಸಿದ್ದಾಯಿತು ಮೇಲಿನ ಮಂತ್ರಗಳು ಕರ್ಮಮಾರ್ಗದಲ್ಲಿಯೂ ಜ್ಞಾನಮಾರ್ಗದಲ್ಲಿಯೂ ಎಂತಹ ಮಹತ್ವವಾದ ಅರ್ಥವನ್ನು ಹೊರಸೂಸುತ್ತವೆಂಬುದನ್ನು ತಕ್ಕಮಟ್ಟಿಗೆ ವಿಮರ್ಶಿಸೋಣ. ಈ ಮಂತ್ರಗಳು ಶ್ರೋತ್ರಿಯರಾದ ಬ್ರಾಹ್ಮಣರಿಂದ ಕರ್ಮಗಳಲ್ಲಿ ಆಶೀರ್ವಾದಮಾಡುವಕಾಲದಲ್ಲಿ ಉಪಯೋಗಿಸಲ್ಪಡುವುವು ಅಲ್ಲದೆ ವಿವಾಹಕರ್ಮದಲ್ಲಿಯೂ ವಿನಿಯೋಗಿಸಲ್ಪಡುವುದಷ್ಟೆ! ಯಾವ ಅರ್ಥದ ಮೇಲೆ ಈ ಮಂತ್ರಗಳು ಕರ್ಮದಲ್ಲಿ ವಿನಿಯೋಗಿಸಲ್ಪಡುವುದೆಂದರೆ.—'ಪಾತೀತಿ ಪತಿಃ' ಅಂದರೆ ರಕ್ಷಕ. ಹೇಗೆಂದರೆ 'ಭೂಪತಿ' ಶಬ್ದವತ್. ವಿವಾಹಕಾಲದಲ್ಲಿ ಪ್ರಥಮದಿವಸ ರೋಹಿಣೀಸೋಮರೂ, ಎರಡನೆಯ ದಿನದಲ್ಲಿ ಅಪ್ಸರೋ ಗಂಧರ್ವರೂ ಮೂರನೆಯ ದಿನದಲ್ಲಿ ಸ್ವಾಹಾಗ್ನಿಗಳೂ ವಧೂವರರಲ್ಲಿದ್ದು ರಕ್ಷಿಸು ವರು. ಈ ಮೂರುದಿನಗಳ ದೀಕ್ಷೆಯು ಪೂರ್ಣವಾದ ಅನಂತರ ನಾಲ್ಕನೆಯ ದಿವಸ ಲೋಕರೂಢಿಯಂತೆ ದೀಕ್ಷಾನಿಯಮವು ಪೂರ್ತಿಯಾಗುವುದರಿಂದ ವಧೂ ವರರು ಮನುಷ್ಯತ್ವವನ್ನು ಹೊಂದುವರು ಎಂಬ ಅರ್ಥದಮೇಲೆಯೂ, ಎರಡನೆಯ ಮಂತ್ರಕ್ಕೆ ದೇವತೆಗಳಿಗೆ ಒಡೆಯನಾದ ಇಂದ್ರನು ಐಶ್ವರ್ಯವನ್ನೂ, ಉತ್ತಮವಾದ ದಶಸಂತಾನಗಳನ್ನೂ, ಪತಿಯಿಂದಕೂಡಿರುವಿಕೆಯನ್ನೂ ವಧುವಿಗೆ ಉಂಟುಮಾಡಲೆಂಬ ಅರ್ಥದಮೇಲೆಯೂ ಈ ಮಂತ್ರಗಳನ್ನು ಶುಭಕರ್ಮದಲ್ಲಿ ಉಪಯೋಗಿಸಬೇಕೆಂಬ ನಿಯಮವು ಅನೂಚಾನವಾದ ಸಂಪ್ರದಾಯವಾಗಿ ಬಂದಿರುವುದು.

ಈ ಮಂತ್ರದಲ್ಲಿ ಮೇಲೆ ಹೇಳಲ್ಪಟ್ಟ ಕರ್ಮಕಾಂಡಕ್ಕನುಸಾರವಾದ ಅರ್ಥ ವಿರುವುದಲ್ಲದೆ ಜ್ಞಾನಕಾಂಡದ ಅರ್ಥವೂ ಇರುವುದು. ಕಾರಣವೇನೆಂದರೆ: — ಸಕಲ ವೇದಮಂತ್ರಗಳೂ ಕೆಲವೆಡೆ ಸಾಕ್ಷಾತ್ತಾಗಿಯೂ, ಕೆಲವೆಡೆ ಪರಂಪರೆ

ಯಾಗಿಯೂ ಪರಬ್ರಹ್ಮನಿಗೇ ಸಂಬಂಧವಾಗಿರುವುದು ಮತ್ತು ವೇದವಾಕ್ಯಗಳೆಲ್ಲಕ್ಕೂ ಪರಬ್ರಹ್ಮನಲ್ಲಿಯೇ ಮುಖ್ಯತಾತ್ಪರ್ಯವೂ ಆಗುವುದು. ಅಲ್ಲದೆ ಕರ್ಮದಲ್ಲಿ ಉಪಯೋಗಿಸುವ ಯಾವಮಂತ್ರಕ್ಕೇ ಆಗಲಿ ಮಂತ್ರದೇವತಾಜ್ಞಾನವು ಇದ್ದೇ ಇರುವುದರಿಂದ ಜ್ಞಾನಮಾರ್ಗಸಂಬಂಧವಾದುದಾಗಿಯೇ ಇರುವುದು. ಈ ರೀತಿಯಾಗಿ ಕರ್ಮಜ್ಞಾನ ಸಮುಚ್ಚಯವಿದ್ದೇ ಇರುವುದರಿಂದ ಪ್ರತಿಯೊಂದು ಕರ್ಮವೂ ತನ್ನ ಕರ್ಮಶಕ್ತಿಯನ್ನುಂಟುಮಾಡುವುದಲ್ಲದೆ ಜ್ಞಾನಸಮುಚ್ಚಯವಾಗಿಯೂ ಇರುವುದು. "ಸರ್ವಂ ಕರ್ಮಾಖಿಲಂಪಾರ್ಥ ಜ್ಞಾನೇ ಪರಿಸಮಾಪ್ಯತೇ" ಎಂದು ಶ್ರೀಕೃಷ್ಣಪರಮಾತ್ಮನೂ ಹೇಳಿರುವುದರಿಂದ ಸರ್ವ ಕರ್ಮಶಕ್ತಿಗೂ ಪರಿಸಮಾಪ್ತಿಯ ಫಲರೂಪವಾದುದೇ ಜ್ಞಾನವು ಆದುದರಿಂದ ಕರ್ಮದಲ್ಲಿ ಉಪಯೋಗಿಸುವ ಮಂತ್ರಗಳ ತಾತ್ಪರ್ಯವೂ ಜ್ಞಾನಕಾಂಡದ ಉದ್ದೇಶಗಳನ್ನು ಅನುಸರಿಸಿಯೇ ನಿಂತಿರುವುದು. ಕರ್ಮಕ್ಕೂ ಅತಿಶಯವಾದ ಕಾಂತಿಯನ್ನುಂಟು ಮಾಡುವ ಮೇಲಿನಮಂತ್ರಗಳಲ್ಲಿನ ಜ್ಞಾನಮಾರ್ಗದ ಅರ್ಥವನ್ನೂ ವಿವರಿಸೋಣ.

'ಸೋಮಃ' ಎಂದರೆ "ಸಕಾರಸ್ಸತ್ಯಮಮೃತಂ ಪ್ರಾಪ್ತಃ ಸೋಮಶ್ಚ ಕೀರ್ತ್ಯತೇ" ಎಂಬ ಶ್ರುತ್ಯಾಧಾರದಂತೆ ಅಮೃತವಾಚ್ಯನಾದ ಪರಬ್ರಹ್ಮನಿಗೆ ಸೋಮನೆಂದು ಹೆಸರು. ಅಂದರೆ ಸೋಮವಾಚ್ಯನಾದ ಪರಬ್ರಹ್ಮಸ್ವರೂಪವೇ ಬೀಜರೂಪವಾದ ಪರಾಶಕ್ತಿಗೆ ಪ್ರಥಮಸ್ಥಿತಿಯಾಗಿರುವುದು

ಅನಂತರ 'ಗಂಧರ್ವ' ವಾಚ್ಯವಾದ ಓಂಕಾರನಾದದಲ್ಲಿ ಈಶ್ವರಸ್ಥಿತಿಯೇ ಪರಾಶಕ್ತಿಗೆ ಎರಡನೆಯ ಸೋಪಾನವಾಗಿರುವುದು ಹೇಗೆಂದರೆ "ಗಾನಂ ಓಂಕಾರ ನಾದಃ ಧರ್ಮಃ ಯಸ್ಯಸಃ ಗಂಧರ್ವಃ (ಅಪು, ಅರ್ವ, ಶರ್ವ, ಗತೌ)" ಎಂಬ ವ್ಯುತ್ಪತ್ತಿಯಂತೆ ಓಂಕಾರನಾದವೇ ಧರ್ಮವಾಗಿ ಉಳ್ಳದ್ದು ಈಶ್ವರಸೋಪಾನ ಅಲ್ಲದೆ ಗಾಂಧಾರವೆಂಬ ಸ್ವರವನ್ನು ಮನುಷ್ಯರು ಗಾನಮಾಡುವುದಕ್ಕೆ ಆಗುವುದಿಲ್ಲವೆಂದೂ ಇದು ದೇವತೆಗಳಲ್ಲಿಯೂ ಬಹುವಿರಳವಾದುದರಿಂದ ಅಮೋಘವಾದ ಸ್ವರನೆಂದೂ ಸಂಗೀತಶಾಸ್ತ್ರವೇ ತಿಳಿಸುವುದು ವೀಣೆಯ ಅನ್ವಯದಲ್ಲಿಯೂ ಗಾಂಧಾರ ಸ್ವರವು ಈಶ್ವರ ಸೋಪಾನದ ತತ್ವದಲ್ಲಿ ಬಂದಿರುವುದು. ಆದುದರಿಂದ ನಾದಬ್ರಹ್ಮಸೋಪಾನವಾದ ಗಾಂಧಾರದ ತತ್ವವಾದ ಈಶ್ವರಸೋಪಾನವೇ ಪರಾಶಕ್ತಿಗೆ ಎರಡನೆಯ ಸೋಪಾನವಾಗಿದೆ.

ಪರಾಶಕ್ತಿಗೆ ಮೂರನೆಯ ಸೋಪಾನವೇ 'ಅಗ್ನಿ'. ಎಂದರೆ ವೈಶ್ವಾನರ ಸ್ವರೂಪವಾದ ವಿರಾಟ್‌ಸ್ಥಿತಿ. ಅಂದರೆ ಪರಾಶಕ್ತಿಯು ಪ್ರಪಂಚವನ್ನು ಸೃಷ್ಟಿಸಿ ಕರ್ಮಸ್ವರೂಪವಾದ ವ್ಯಾಪಾರದಲ್ಲಿರುವಿಕೆಯೇ ಮೂರನೆಯ ಸ್ಥಿತಿಯಾಗಿ ಕರ್ಮಬ್ರಹ್ಮಸ್ವರೂಪದಲ್ಲಿರುವುದು. ಅಗ್ನಿಯೇ ಕರ್ಮಬ್ರಹ್ಮಸ್ವರೂಪನೆಂದರೆ

ಸೃಷ್ಟಿಯಾದುದನ್ನು ವ್ಯಾಪಾರದಲ್ಲಿ ಸಿಲ್ಲಿಸುವವನು ಅಗ್ನಿಗೆ "ಕರ್ಮಬ್ರಹ್ಮ ಸ್ವರೂಪಿಣೀ" ಎಂಬ ಆಧಾರವಾಕ್ಯವೂ ಇರುವುದು. ಆದುದರಿಂದ ಪರಾಶಕ್ತಿಗೆ ಮೂರನೇಸ್ಥಿತಿಯೇ ವಿಶ್ವವೆಂದರೆ ಪ್ರಪಂಚ ವ್ಯಾಪಾರದ ಸ್ಥಿತಿಯಾಗಿರುವುದು.

"ತುರೀಯಸ್ತೇ ಮನುಷ್ಯಜಾಃ" ಎಂದರೆ ವೃಕ್ಷಸ್ವರೂಪವು ಬೀಜರೂಪಕ್ಕೆ ಬರುವಂತೆ ವಿಶ್ವಸ್ವರೂಪವನ್ನು ಉಪಸಂಹಾರಮಾಡಿಕೊಂಡು ಪರಬ್ರಹ್ಮಸ್ವರೂಪ ವಾಗುವುದೇ ಪರಾಶಕ್ತಿಗೆ ತುರೀಯವೆನ್ನಲ್ಪಡುವ ನಾಲ್ಕನೇ ಸ್ಥಿತಿಯಾಗಿರುವುದು. ಹೇಗೆಂದರೆ-ಮನುಷ್ಯಜಾಃ ಎಂದರೆ ಮನುಷ್ಯನಿಗೆ ತಿಳಿವಳಿಕೆಯಿಂದ ಉಪ್ಟವಿಸುವ ಅಥವಾ ಹೊಂದಲ್ಪಡುವ ಜ್ಞಾನದ ಸ್ವರೂಪವೇ ತುರೀಯವೆನ್ನಲ್ಪಡುವುದು. 'ತುರೀಯವೆನ್ನುವ' ಶಬ್ದವು ಆತ್ಮಸಾಕ್ಷಾತ್ಕಾರದ ಸ್ಥಿತಿಯನ್ನು ಪ್ರತಿಪಾದಿಸುವ ಶಬ್ದವಾಗಿ ಬಹು ಪವಿತ್ರವಾದ ಶಬ್ದವಾಗಿದೆ. ಈ ತತ್ವಾರ್ಥ ಸಮರ್ಥನೆಗೆ "ಚತುರ್ಥೀತುರೀಯಂ; ಅಮಾತ್ರಶ್ಚತುರ್ಥೋ; ಚತುರ್ಥಾವಸ್ಥಿತ ಸರ್ವದೇವಯೋಸಿಪ್ರಣವಾತ್ಮಕಂ; ಬ್ರಹ್ಮತುರೀಯಂ" ಮುಂತಾದ ಅನೇಕಾನೇಕ ಶ್ರುತಿಪ್ರಮಾಣಗಳಿವೆ ಆದುದರಿಂದ ಸೃಷ್ಟಿಯು ಉಪಸಂಹಾರವಾಗಿ ಪರಬ್ರಹ್ಮ ಒಂದೇ ಇರುವಸ್ಥಿತಿಯೇ ಪರಾಶಕ್ತಿಗೆ ನಾಲ್ಕನೆಯಸ್ಥಿತಿ.

ಮುಖ್ಯವಾಗಿ ಈ ಮಂತ್ರದ ತತ್ವಾರ್ಥವು ಪರಾಶಕ್ತಿಯು ಇಂತಹ ಮಹಿಮೆ ಯುಳ್ಳವಳೆಂದೂ, ಅಂತಹ ಪರಾಶಕ್ತಿಯು ಕನ್ಯೆಗೆ ಅಥವಾ ಸ್ತ್ರೀಗೆ ಸರ್ವಮಂಗಳ ವನ್ನುಂಟುಮಾಡಲೆಂದೂ ಶ್ರೋತ್ರಿಯ ಬ್ರಾಹ್ಮಣರು ಆಶೀರ್ವದಿಸುವ ಕರ್ಮಗಳಲ್ಲಿ ಈ ಮಂತ್ರವನ್ನು ವಿನಿಯೋಗಿಸಬೇಕೆಂದೂ ಮಹರ್ಷಿಗಳು ವಿಧಿಸಿರುವರು. ಅಲ್ಲದೆ ವಿವಾಹಪ್ರಧಾನ ಹೋಮದಲ್ಲಿ ವರನು ಈ ಮಂತ್ರವನ್ನು ಹೇಳಿ ಅಗ್ನಿಸಾಕ್ಷಿಯಾಗಿ ಕನ್ಯೆಯ ಪಾಣಿಗ್ರಹಣಮಾಡಬೇಕೆಂದು ವಿಧಿಸಿರುವರು ಅಂದರೆ ಪರಾಶಕ್ತಿಯಾದ ಗೌರೀದೇವಿಯನ್ನು ತಮಗೆ ಶ್ರೇಯಸ್ಸನ್ನುಂಟುಮಾಡಲೆಂದು ವರನು ಪ್ರಾರ್ಥಿ ಸುತ್ತಾ ಕನ್ಯೆಯ ಪಾಣಿಗ್ರಹಣಮಾಡಬೇಕೆಂಬ ಉದ್ದೇಶದಿಂದ ಈ ಮಂತ್ರವು ವಿವಾಹಕರ್ಮದಲ್ಲಿ ವಿನಿಯೋಗಿಸಲ್ಪಟ್ಟಿರುವುದು.

ಎರಡನೆಯ ಮಂತ್ರದ ತತ್ವಾರ್ಥವೇನೆಂದರೆ:— ಪರಮೈಶ್ವರ್ಯಶಾಲಿಯೂ ಸೃಷ್ಟಿಕರ್ತನೂ ಆದ ಈಶ್ವರನೆ! ನೀನು ಹೇಗೆ ಉತ್ತಮ ಸಂಸಾರಿಯೋ ಹಾಗೆಯೆ ಈ ಕನ್ಯೆಗೂ ಅನುಗ್ರಹಮಾಡೆಂದು ಹೇಳಿರುವುದರಲ್ಲಿ ಹತ್ತುಜನ ಸುಪುತ್ರರು ಯಾರೆಂದರೆ:— ದಶೇಂದ್ರಿಯಗಳು. ಇವು ಸತ್ವಗುಣಪ್ರಧಾನವಾದ ದೇವತೆಗಳ ಶಕ್ತಿಯಾಗಿರುವುವು ಇಂತಹ ಹತ್ತು ಇಂದ್ರಿಯಗಳಿಗೂ ಒಡೆಯನಾದ ಪರಮಾತ್ಮನ ಪ್ರತಿಫಲಿತನಾದ ಜೀವಚೈತನ್ಯನೇ ಹನ್ನೊಂದನೆಯವನಾಗಿ ಶುದ್ಧ ಸತ್ವಪ್ರಧಾನವಾದ ಪ್ರಕೃತಿಗೆ ಪತಿಯಾಗಿರುವನು. ಇಂತಹ ದೇವತೆಗಳಿಗೆ ಸಮಾನನಾದ ಹತ್ತು ಸುಪುತ್ರರನ್ನೂ, ಇಂದ್ರಸಮಾನವಾದ ಐಶ್ವರ್ಯವನ್ನೂ,

ಷೋಡಶಕಳಾಪುರುಷನಾದ ಪರಮಾತ್ಮನ ಪ್ರತಿಫಲಿತಚೈತನ್ಯಸಮಾನನಾದ ಪತಿಯನ್ನೂ ಈ ಕನ್ಯೆಗೆ ಅನುಗ್ರಹಿಸೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತಾ ಶ್ರೋತ್ರಿಯರು ಆಶೀರ್ವಾದಮಾಡುವ ಕರ್ಮದಲ್ಲಿ ಈ ಮಂತ್ರವು ವಿನಿಯೋಗಿಸ ಬೇಕೆಂದು ಮಹರ್ಷಿಗಳು ವಿಧಿಸಿರುವರು.

ಕರ್ಮ ಮತ್ತು ಜ್ಞಾನಮಾರ್ಗಗಳ ಇಂತಹ ಮಹತ್ವಗಳನ್ನು ಮಂತ್ರವು ಒಳಗೊಂಡಿರುವುದರಿಂದಲೇ ವೇದಮಂತ್ರವೆನಿಸಿದೆ ಅಲ್ಲದೆ ಸ್ಮೃತಿಯು ಆಯಾ ಕರ್ಮಗಳಲ್ಲಿ ಆಯಾ ಮಂತ್ರಗಳನ್ನು ವಿನಿಯೋಗಿಸಬೇಕೆಂದು ವಿಧಿಸಿದೆ. ಇಂತಹ ಮಹತ್ವಗಳನ್ನರಿಯಲಾರದೆ ವಿವಾಹವಾದ ಸ್ತ್ರೀಯರೂ ಮತ್ತು ವಿಧವಾಸ್ತ್ರೀಯರೂ ಬಹು ಗಂಡಂದಿರನ್ನು ಸೇರಿ ಸಂತಾನಗಳನ್ನು ಹೊಂದಬಹುದೆಂಬದಾಗಿ ಪಾವನ ವಾದ ವೇದಮಂತ್ರಕ್ಕೆ ಅಪಾರ್ಥವನ್ನು ಕಲ್ಪಿಸಿರುವುದು ಧರ್ಮದೇವತೆಗೆ ಶೋಚ ನೀಯವಾಗಿರುವುದು ಸ್ವಬುದ್ಧಿಯಿಂದ ಅರ್ಥಮಾಡಿದರೂ ಋಷಿಪಾರಂಪರ್ಯ ದಿಂದಲೂ ಬಂದ ಅರ್ಥಕ್ಕೆ ವಿರೋಧವಿಲ್ಲದಂತೆಯೂ ವೇದಶಾಸ್ತ್ರಗಳ ಇತರ ವಾಕ್ಯಗಳ ಆಧಾರಕ್ಕೆ ಅನುಸರಿಸಿಯೂ ಇರಬೇಕು. ಆದುದರಿಂದ ವೇದಮಂತ್ರಗಳ ವಿನಿಯೋಗವನ್ನು ತಿಳಿಯಲು ಸ್ಮೃತ್ಯಾದಿಗಳ ಸಹಾಯವು ಅತ್ಯವಶ್ಯಕವಾಗಿ ಬೇಕು ಅಲ್ಲದೆ ಬಹು ಸುಕೃತವಿಶೇಷವಿಲ್ಲದೆ ಮಂತ್ರಗಳಲ್ಲಿರುವ ಯಥಾರ್ಥದ ರಹಸ್ಯಾರ್ಥಗಳು ಖಂಡಿತ ಹೊಳೆಯಲಾರವು. ವೇದಶಾಸ್ತ್ರಗಳ ಗೂಢಾಶಯವನ್ನು ಅರಿಯುವ ಸಾಮರ್ಥ್ಯವು ಸದ್ಗುರುವಿನ ಮತ್ತು ದೇವತೆಯ ಅನುಗ್ರಹದಿಂದಲೇ ಲಭಿಸತಕ್ಕದ್ದಾಗಿದೆ.

ಮುಖ್ಯವಾಗಿ ಯಾವಕಾರ್ಯಕ್ಕಾಗಲೀ ಅಸ್ತಿಭಾರವು ಸರಿಯಾಗಿಲ್ಲದಿದ್ದರೆ ಪ್ರಯೋಜನಕಾರಿಯಾಗುವುದಿಲ್ಲವಷ್ಟೆ ! ಇದರಂತೆ ವೇದಾಧ್ಯಯನ ಮತ್ತು ವೇದಾರ್ಥಗಳ ತಿಳಿವಳಿಕೆಗೆ ಯಾವುದು ಅಸ್ತಿಭಾರದಂತಿರುವುದೆಂಬುದನ್ನು ಸಾವಧಾನಚಿತ್ತದಿಂದ ಸರ್ವರೂ ಯೋಚಿಸಬೇಕು ಇದಕ್ಕೆ ದೇವತೋಪಾಸನೆಯೇ ಅಸ್ತಿಭಾರ. ಹೀಗಿರುವುದರಿಂದಲೇ ಉಪನಯನಸಂಸ್ಕಾರದಿಂದ ಗಾಯತ್ರೀ ದೇವತೋಪಾಸನೆಯನ್ನು ದ್ವಿಜರಿಗೆ ಅಸ್ತಿಭಾರದಂತೆ ಇರುವುದೆಂದು ವೇದರ್ಷಿಗಳು ವಿಧಿಸಿರುವರು. ಹೀಗೆ ವಿಧಿಸಿರುವ ಮೂಲಾಧಾರ ಸ್ತಂಭವಾದ ವೇದಮಾತೆ ಯಾದ ಗಾಯತ್ರೀದೇವಿಯನ್ನು ಅನನ್ಯಶರಣುಹೊಂದಿ ಉಪಾಸನೆಮಾಡಿ ಆ ತಾಯಿಯ ಅನುಗ್ರಹಕ್ಕೆ ಪಾತ್ರರಾದರೇನೆ ವೇದದ ರಹಸ್ಯಾರ್ಥಗಳು ಗೊತ್ತಾಗು ವುದು ಮತ್ತು ಜ್ಞಾನವಂತನೂ ಆಗಿ ವೇದವಿತ್ ಎನಿಸಿಕೊಳ್ಳುವನು. ಓದಿದ ಮಾತ್ರದಿಂದಲೇ ವೇದವನ್ನು ತಿಳಿದಂತಾಗುವುದಿಲ್ಲ. ದೇವತಾನುಗ್ರಹವನ್ನು ಸಂಪಾದಿಸಿದರೆ ವೇದವನ್ನು ತಿಳಿದಂತಾಗುವುದು.

## ೮. ವೇದಾಧಿಕಾರ.

ಈಶ್ವರನು ವೇದವನ್ನು ಹೊರಗೆಡವಿರುವುದು ಯಾರಿಗೋಸ್ಕರವೆಂಬುದನ್ನು ತಿಳಿಯಬೇಕಾದುದು ಎಲ್ಲರಿಗೂ ಪ್ರಥಮ ಕರ್ತವ್ಯವಾಗಿದೆ. ಈ ವೇದವಿದ್ಯೆಯು ಮನುಷ್ಯನ ಕಲ್ಯಾಣಕ್ಕಾಗಿ ಲಭ್ಯವಾಗಿರುವುದಲ್ಲದೆ ಪಶುಪಕ್ಷ್ಯಾದಿ ಜಂತುಗಳಿಗಲ್ಲ ಕಾರಣವೇನೆಂದರೆ — ಪರಮಾತ್ಮನು ಸೃಷ್ಟಿಕಟ್ಟಳೆಯಲ್ಲಿ ಆಹಾರ ಮುಂತಾದ ಅನಂತಾನಂತ ಪ್ರಯೋಜನಗಳನ್ನು ಸರ್ವಪ್ರಾಣಿಗಳಿಗೂ ಏಕಸಮವಾಗಿ ಕೊಟ್ಟಿದ್ದರೂ ಧರ್ಮಾರ್ಥಕಾಮಮೋಕ್ಷಗಳ ನಿಯಮವನ್ನನುಸರಿಸಿ ಮೋಕ್ಷವೆಂಬ ಅತುಲಿತಾನಂದವನ್ನು ಹೊಂದುವುದಕ್ಕೋಸ್ಕರ ಮನುಷ್ಯನಿಗೆ ಮಾತ್ರ ವಿಶೇಷವಾದ ಬುದ್ಧಿಶಕ್ತಿಯೊಂದನ್ನು ಅನುಗ್ರಹಿಸಿರುವನು ಆದುದರಿಂದ ಪಕ್ಷಪಾತರಹಿತ ಧರ್ಮಬೋಧಕವಿದ್ಯೆಯಾದ ವೇದವನ್ನು ಮನುಷ್ಯನ ಕಲ್ಯಾಣಕ್ಕಾಗಿಯೇ ಭಗವಂತನು ಪ್ರಪಂಚಕ್ಕೆ ಹೊರಗೆಡವಿದನು. ಆದಕಾರಣ ಇಹದಲ್ಲಿಯೂ ಜನ್ಮದ ನಡೆವಳಿಕೆಗಳನ್ನು ಒಂದು ಕಟ್ಟಳೆಯಲ್ಲಿಡಿಸುವ, ಪರದಲ್ಲಿಯೂ ನಿರತಿಶಯಾನಂದವನ್ನುಂಟುಮಾಡುವ, ಈಶ್ವರನ ಕಟ್ಟಳೆಯಾಗಿರುವ ಧರ್ಮಾರ್ಥಕಾಮಮೋಕ್ಷಗಳನ್ನು ಅನುಸರಿಸಿ ಕರ್ಮಜ್ಞಾನ ಮಾರ್ಗಗಳ ಪ್ರವರ್ತನೆಯಲ್ಲಿರುವುದೇ ವೇದಾಧಿಕಾರದ ತತ್ವವಾಗಿರುವುದು.

ಜ್ಞಾನಮಾರ್ಗವೆಂದರೆ ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳುವ ದಾರಿ ಕರ್ಮವೆಂದರೆ "ಡುಕೃಞ್" ಧಾತುವಿನ ಮೇಲೆ (ಕರಣೆ) ಮಾಡುವಿಕೆಯೆಂದರ್ಥ. ಸಾಮಾನ್ಯವಾಗಿ ಲೋಕದಲ್ಲಿ ಮಾಡಲ್ಪಡುವ ಇಂದ್ರಿಯಗಳ ಸ್ವಾಭಾವಿಕ ಕಾರ್ಯಗಳು ಕ್ರಿಯಾಶಬ್ದ ಬೋಧ್ಯವಾಗುವುವು. ಇದನ್ನು ಕರ್ಮವೆಂದು ಕರೆಯಲಾಗುವುದಿಲ್ಲ ಕಾರಣವೇನೆಂದರೆ, ಪಶುಪಕ್ಷ್ಯಾದಿಗಳು ಲೋಕವ್ಯಾಪಾರ ಸ್ವರೂಪವಾದ ವಿಷಯಜ್ಞಾನಕ್ರಿಯೆಗಳಲ್ಲಿ ಇದ್ದೇ ಇರುತ್ತವೆ. "ಚೋದನಾ ಲಕ್ಷಣೋ ಅರ್ಥಃ ಧರ್ಮಃ" ಎಂಬ ಸೂತ್ರದಂತೆ ಶಾಸ್ತ್ರದಿಂದ ಪ್ರೇರಿಸಲ್ಪಟ್ಟ ಕ್ರಿಯೆಗಳೇ ಧರ್ಮವೆಂದರೆ ಕರ್ಮ ಇಂದ್ರಿಯಗಳ ಸ್ವಾಭಾವಿಕವಾದ ಕ್ರಿಯೆಗಳು ಧರ್ಮವೆಂದರೆ ಕರ್ಮವೆನಿಸಿಕೊಳ್ಳುವುದಿಲ್ಲ. ಆಹಾರ, ನಿದ್ರಾ, ಭಯ, ಮೈಥುನ, ಮುಂತಾದ ವಿಚಾರಗಳಲ್ಲಿ ಮನುಷ್ಯನೂ ಪಶುಪಕ್ಷ್ಯಾದಿಗಳೂ ಸಮಾನವೆಂದೂ, ಅಧ್ಯಾತ್ಮಜ್ಞಾನವೇ ಮನುಷ್ಯನಿಗೆ ಇರುವ ವಿಶೇಷತೆಯೆಂದೂ ಹೇಳಿರುವ ಶ್ರೀಕೃಷ್ಣಪರಮಾತ್ಮನ ವಾಕ್ಯವನ್ನು ಎರಡನೆಯ ಪ್ರಕರಣದಲ್ಲಿ ಕೊಟ್ಟಿದೆ ಆದುದರಿಂದ ಲೋಕವ್ಯವಹಾರವನ್ನೇ ಕರ್ಮವೆಂದು ಕರೆಯಲು ಶಾಸ್ತ್ರಕ್ಕೆ ಸಹನೆ ಇಲ್ಲ. ಯಾವಕರ್ಮವು ಲೋಕವ್ಯಾಪಾರವನ್ನು ಒಂದು ನಿಯಮ

ವಲ್ಲಿರಿಸುವುದೋ ಯಾವಕರ್ಮವು ಜಗದೀಶ್ವರನ ಆರಾಧನಾರೂಪವಾಗಿಯೂ ದೇವಲೋಕದಲ್ಲಿನ ದೇವತೆಗಳಿಗೂ ಹಿತಕರವಾಗಿರುವುದೋ ಅದೇ ಕರ್ಮವೆಂದು ಕರೆಯಲ್ಪಡುವುದು.

ಜ್ಞಾನಮಾತ್ರಕ್ಕೆ ಸಕಲರಿಗೂ ಅಧಿಕಾರವಿದ್ದರೂ ಕರ್ಮಮಾರ್ಗದ ಅಸ್ತಿಭಾರದಿಂದಲೇ ವರ್ಣಾಶ್ರಮ ಭೇದವನ್ನು ಈಶ್ವರನು ಮಾಡಿರುವುದು ಮತ್ತು ಋಷಿಪಾರಂಪರ್ಯದಿಂದಲೂ ಈ ಭೇದವು ಅನುಸರಿಸಿ ಬಂದಿರುವುದು ಅನೂಚಾನವಾಗಿ ಅನುಸರಿಸಿ ಬಂದಿರುವ ಕುಲಪದ್ಧತಿಗಳ ಆಚರಣೆಯೆ ಈಗಲೂ ಪ್ರಧಾನವಾಗಿರುವುದಕ್ಕೆ ಕಾರಣವು ಬ್ರಾಹ್ಮಣರು ವೇದಮಂತ್ರದಿಂದ ಕರ್ಮ ಮಾಡುತ್ತಿರುವುದೂ, ಕ್ಷತ್ರಿಯವೈಶ್ಯರು ವೇದಾರ್ಥಪ್ರತಿಪಾದಕವಾದ ಶ್ಲೋಕ ರೂಪವಾದ ಮಂತ್ರಗಳಿಂದ ಅದೇಕರ್ಮವನ್ನು ಮಾಡುತ್ತಿರುವುದೂ ಈಗ ಕಂಡು ಬಂದಿರುವುದು. ಶೂದ್ರರು ಭಗವಂತನ ನಾಮಸ್ಮರಣೆ ಮಾಡುತ್ತಾ ಭಗವಂತನ ಕೈಂಕರ್ಯರೂಪವಾದ ಕರ್ಮವನ್ನು ಮಾಡುತ್ತಿರುವರು ಅಲ್ಲದ ಬ್ರಾಹ್ಮಣರಲ್ಲಿಯೂ ಪುರುಷರೊಡನೆ ಸರ್ವಕರ್ಮಗಳಲ್ಲಿಯೂ ಭಾಗಿಗಳಾಗಿರುವ ಸ್ತ್ರೀಯರೂ ವೇದಾಧ್ಯಯನ ಮಾಡಬಾರದೆಂದು ನಿಷೇಧಿಸಿರುವುದಷ್ಟೆ. ಆದುದರಿಂದ ಬ್ರಾಹ್ಮಣರಲ್ಲಿ ಪುರುಷರು ಹೊರತು ಉಳಿದ ಕ್ಷತ್ರಿಯರು ವೈಶ್ಯರು ಶೂದ್ರರು ಮತ್ತು ಸ್ತ್ರೀಯರುಗಳೆಲ್ಲಾ ವೇದಕ್ಕೆ ಅನಧಿಕಾರಿಗಳೆಂದಾಗಲಿಲ್ಲವೇ, ಎಂಬ ಸಂದೇಹವು ತೋರಬಹುದು. ಇದು ವೇದತತ್ತ್ವವನ್ನು ಅರಿಯದವರ ದೋಷವೆಂದೇ ಹೇಳಬೇಕಾಗುವುದು ಚಾತುರ್ವರ್ಣ್ಯದವರೂ ಖಂಡಿತ ವೇದಬಾಹ್ಯರಲ್ಲ ಎಲ್ಲರೂ ವೇದಾಧಿಕಾರಿಗಳೇ ಆಗಿರುವರು. ಈ ಗ್ರಂಥದಲ್ಲಿರುವ ಅಂಶಗಳನ್ನೆಲ್ಲಾ ವಿಶಾಲಹೃದಯದಿಂದ ಪಠಿಸಿ ಮನನಮಾಡಿ ಸಾರವನ್ನು ಗ್ರಹಿಸಿದರೆ ನಿಜಾಂಶವು ವೇದ್ಯವಾಗದೇ ಇರಲಾರದು.

ವೀಣೆಗೆ ಅನ್ವಯಮಾಡಿರುವ ತತ್ತ್ವದಂತೆ ಪರಬ್ರಹ್ಮಸ್ವರೂಪವಾದ ವೇದವೇ ಋಗ್ಯಜುಸ್ಸಾಮಾಥರ್ವಣಗಳೆಂಬ ಚತುರ್ಭಾಗಗಳಾಗಿ ನಾದಬ್ರಹ್ಮದಲ್ಲಿ ಮಹಾರಣ್ಯವಾಗಿ ಬೆಳೆದು ತಮ್ಮ ತಮ್ಮ ವಿವಿಧಸ್ವರಗಳಿಂದ ಸೃಷ್ಟಿ ಸ್ಥಿತಿ ಲಯಗಳ ಕಾರ್ಯರೂಪವಾಗಿ ಕರ್ಮಕಾಂಡದ ನಿಶ್ಚಿತಾರ್ಥವನ್ನೇ ಪ್ರತಿಪಾದಿಸುತ್ತಾ ಆ ಪರಮಪುರುಷನಾದ ಈಶ್ವರನ ಗಾನವಾಗಿಯೇ ಇವೆ. ವೇದವು ನಾಲ್ಕು ಭಾಗವಾಗಿದ್ದರೂ ವಾಸ್ತವವಾಗಿ ನಾಲ್ಕೂ ಸೇರಿ ಒಂದೇ ದೇಹದಂತೆ ಇರುವುದಲ್ಲದೆ ಒಂದೇ ಜ್ಞಾನರಾಶಿಯಾಗಿರುವುದು. ಶಿರಸ್ಸು, ಪಾಣಿ, ಪಾದ, ಉದರ ಮುಂತಾದವುಗಳು ಸೇರಿ ಶರೀರವೆನಿಸಿರುವಂತೆ ಕರ್ಮದಿಂದ ವಿಭಕ್ತರಾದ ನಾಲ್ಕು ವರ್ಣದವರೂ ಸೇರಿ ಒಂದೇ ದೇಹದಂತೆ ಇರುವರು. ಚತುರ್ವೇದಗಳೂ ಒಂದೇರಾಶಿಯೆನಿಸಿದ್ದರೂ ಕಾರ್ಯರೂಪದಿಂದ ಪ್ರತ್ಯೇಕವಾದ ತನ್ನ ತನ್ನ ಮಹತ್ವದ

ಸ್ವರೂಪವಿಶೇಷ ಒಂದನ್ನು ಹೊಂದಿರುವುದು ಹೀಗೆಯೆ ಅಂಗಗಳೆಲ್ಲಾ ಸೇರಿ ದೇಹವೆನಿಸಿದ್ದರೂ ಪ್ರತಿಯೊಂದಂಗವೂ ತನ್ನ ತನ್ನ ಕಾರ್ಯದಿಂದ ವಿಶೇಷವಾದ ಒಂದು ಪ್ರಖ್ಯಾತಿಯನ್ನು ಹೊಂದಿರುವುದು. ಇದರಂತೆಯೇ ಕರ್ಮಕಾಂಡದ ಅಸ್ತಿಭಾರವನ್ನು ಅನುಸರಿಸಿ ವರ್ಣಾಶ್ರಮಗಳಾಗಿರುವುವು.

ವೇದಗಳಲ್ಲಿ ಒಂದು ಶ್ರೇಷ್ಠ ಮತ್ತೊಂದು ಕನಿಷ್ಠ ಎಂಬುದು ಎಂದಿಗೂ ಇಲ್ಲ. ಪ್ರಚಾರದಲ್ಲಿ ಋಗ್ಯಜುರ್ವೇದಗಳು ಅಧಿಕವೆನಿಸಿಕೊಂಡಿದ್ದರೂ ಪ್ರಾಶಸ್ತ್ಯದಲ್ಲಿ ಎಲ್ಲವೂ ಒಂದೇ. ವೇದವಿಭಾಗಗಳ ತತ್ವವನ್ನನುಸರಿಸಿಯೇ ಚತುರ್ವರ್ಣಗಳಾಗಿವೆ. ಶ್ರೀಕೃಷ್ಣಪರಮಾತ್ಮನು "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮ ವಿಭಾಗಶಃ" ಎಂದು ಹೇಳಿರುವ ವಾಕ್ಯ ಮೇಲಿನ ತತ್ವವನ್ನು ದೃಢೀಕರಿಸುವುದು ಸತ್ವರಜಸ್ತಮೋಗುಣಗಳು ಎಲ್ಲರಲ್ಲಿಯೂ ಹೆಚ್ಚು ಕಡಿಮೆ ಇದ್ದರೂ ಕರ್ಮಕಾಂಡದ ಅಸ್ತಿಭಾರದಿಂದಲೇ ಧರ್ಮಾರ್ಥಕಾಮಮೋಕ್ಷಗಳ ವಿಭಾಗಗಳು ಮತ್ತು ದೇಹಯಾತ್ರೆಯಲ್ಲಿನ ಬ್ರಾಹ್ಮಣನ ದೇವತಾಕರ್ಮ, ಕ್ಷತ್ರಿಯನ ರಾಜ್ಯಾಡಳಿತ, ವೈಶ್ಯನ ವಾಣಿಜ್ಯ, ಮೂರುವರ್ಣದವರಿಗೂ ಸಹಾಯಕವಾದ ಶೂದ್ರನ ಕಾರ್ಯಗಳ ವಿಭಾಗಗಳೂ ಮತ್ತು ಈ ನಾಲ್ಕು ವರ್ಣದವಲ್ಲಿರುವ ಈಶ್ವರಾರಾಧನರೂಪವಾದ ಕರ್ಮಗಳಲ್ಲಿನ ತಾರತಮ್ಯಗಳೂ ಉಂಟಾಗಿರುವುವು. ಈ ಕರ್ಮಗಳಿಗೆ ಅನುರೂಪವಾದ ಸತ್ವರಜಸ್ತಮೋಗುಣಗಳಲ್ಲಿನ ಆಯಾಯ ಗುಣಗಳ ಸ್ವಭಾವಗಳು ಕಲೆತರೆ ಉತ್ತಮ ಪರಿಣಾಮವುಳ್ಳವುಗಳಾಗುವುವು. ನಾಲ್ಕುವರ್ಣದವರಲ್ಲಿಯೂ ಜ್ಞಾನದೃಷ್ಟಿಯಿಂದ ಏಕತೆಯು ನಿಸ್ಸಂದೇಹವಾಗಿದ್ದರೂ ದೇಹಯಾತ್ರಾ ಮತ್ತು ಆಧ್ಯಾತ್ಮಿಕವಾದ ಕರ್ಮಗಳಿಂದ ತಾರತಮ್ಯವಿರುವುದು ಆದುದರಿಂದ ಬ್ರಾಹ್ಮಣನು ವೇದಮಂತ್ರಗಳಿಂದ ಮಾಡುವ ಕರ್ಮವೂ, ಕ್ಷತ್ರಿಯ ವೈಶ್ಯರು ವೇದಾರ್ಥವಿರುವ ಶ್ಲೋಕರೂಪವಾದ ಮಂತ್ರಗಳಿಂದ ಮಾಡುತ್ತಿರುವ ಕರ್ಮವೂ, ಸ್ತ್ರೀ ಶೂದ್ರರು ನಾಮಸ್ಮರಣೆ ಭಜನೆಗಳಿಂದಮಾಡುವ ಕೈಂಕರ್ಯವೂ ಒಂದೇ ಪ್ರಯೋಜನವುಳ್ಳದ್ದಾಗಿರುವುದಲ್ಲದೆ ವೇದಬಾಹ್ಯವೆಂದಿಗೂ ಅಲ್ಲ. ಕೆಲವರು ಅನೂಚಾನವಾದ ಪದ್ಧತಿಯನ್ನು ಅಲ್ಲಗಳೆದು ವೇದಮಂತ್ರಗಳಿಂದ ಕರ್ಮಮಾಡಲುದ್ಯುಕ್ತರಾಗಬಹುದು. ವೇದಮಂತ್ರಗಳಲ್ಲಿರುವ ಗಹನತೆಯನ್ನು ಇದುವರೆಗೂ ತಿಳಿಸಿದೆ ಆದರೂ ಕರ್ಮಮಾರ್ಗಕ್ಕೆ ಅನುಸರಿಸಿಯೂ ಇದರಲ್ಲಿರುವ ಮಹಿಮೆಯನ್ನು ವಿವರಿಸೋಣ.

ಕರ್ಮಮಾಡುವುದು ತನ್ನ ಸ್ವಪ್ರಯೋಜನ ಒಂದಕ್ಕೇ ಅಲ್ಲ. ಇತರರ ಯೋಗಕ್ಷೇಮ ಚಿಂತನೆಯೂ ಅದರಲ್ಲಿ ಸೇರುವುದು. ಹೇಗೆಂದರೆ, ಒಬ್ಬ ಗೃಹಸ್ಥಾಶ್ರಮಿಯು ತನ್ನ ಉದರಪೋಷಣೆಗೆ ಮಾತ್ರವಲ್ಲದೆ ತನ್ನ ಬಂಧುಮಿತ್ರರ ಯೋಗಕ್ಷೇಮರೂಪವಾದ ಕಾರ್ಯದಲ್ಲಿಯೂ ಬದ್ಧನಾಗಿರುವನು. ಅನ್ಯೋನ್ಯ

ಸಹಾಯವಿಲ್ಲದೆ ಮನುಷ್ಯನಿಗೆ ಸುಖ ಉಂಟಾಗುವುದಿಲ್ಲ ಪ್ರಾಣಿಸಾಮಾನ್ಯಕ್ಕೂ ಸಸ್ಯಾದಿಗಳಿಗೂ ಅನ್ಯೋನ್ಯ ಸಹಾಯವಿದ್ದೇ ಇರುವುದು. ದೇಹದಲ್ಲಿ ಒಂದೊಂದು ಅಂಗಕ್ಕೂ ಇತರ ಅಂಗಗಳಿಂದಾಗುವ ಪರಸ್ಪರ ಸಹಾಯವಿದ್ದೇ ಇರುವುದು. ಹೀಗೆ ಅನ್ಯೋನ್ಯ ಸಹಾಯದಲ್ಲಿ ಬಹುಪ್ರಾಮುಖ್ಯವುಳ್ಳ ಕರ್ತವ್ಯವೊಂದು ಇರುವುದು. ಏನೆಂದರೆ — ನಮ್ಮ ಸ್ಥೂಲದೃಷ್ಟಿಗೆ ಗೋಚರಿಸುವ ಗೋಚರಿಸದೇ ಇರುವ ತೇಜೋರೂಪರಾದ ದೇವತೆಗಳು ಲೋಕಕ್ಕೆ ಹಿತವನ್ನುಂಟು ಮಾಡುವುದರಿಂದ ದೇವತೆಗಳಿಗೂ ಮನುಷ್ಯರಿಗೂ ಪರಸ್ಪರ ಯೋಗಕ್ಷೇಮ ಚಿಂತನರೂಪವಾದ ಸಹಾಯದ ಕರ್ತವ್ಯವು ಇದ್ದೇ ಇರುವುದು ಆದುದರಿಂದ ಪ್ರಪಂಚಕಾರ್ಯವಲ್ಲಿ ಯಾವರೀತಿಯಲ್ಲಿ ಅನ್ಯೋನ್ಯಸಹಾಯದ ಅವಶ್ಯಕತೆ ಇರುವುದೋ, ಅದೇರೀತಿಯಲ್ಲಿ ಸೂಕ್ಷ್ಮತೇಜೋರೂಪಿನಲ್ಲಿರುವ ದೇವತೆಗಳನ್ನೂ ಋಷಿಗಳನ್ನೂ ಭೂತಗಳನ್ನೂ ಅಗ್ನಿಹೋತ್ರ, ತರ್ಪಣ, ಜಪ ಮುಂತಾದ ಕರ್ಮ ಗಳಿಂದ ತೃಪ್ತಿಪಡಿಸಬೇಕಾದ ಅನ್ಯೋನ್ಯಸಹಾಯದ ಕರ್ತವ್ಯವು ಬಹು ಪ್ರಾಮುಖ್ಯ ವಾದುದೆಂದು ವೇದವು ವಿಧಿಸುವುದು

ಮನುಷ್ಯರಿಗೂ ದೇವತೆಗಳಿಗೂ ಇರುವ ಈ ಅನ್ಯೋನ್ಯ ಸಹಾಯದ ತತ್ವವೇ ಕರ್ಮಕಾಂಡದ ಸಾರ. ಇಂತಹ ಮಹಿಮೆಯನ್ನನುಸರಿಸಿಯೇ ಶಾಸ್ತ್ರದಲ್ಲಿ ಇದನ್ನು ಋಣವೆಂದು ಹೇಳಿದೆ. ಈ ಕರ್ತವ್ಯ ಕರ್ಮಕ್ಕೆ ವೇದಮಂತ್ರವೇ ನಿಕಟ ವಾದ ಸಂಬಂಧವುಳ್ಳದ್ದಾಗಿದೆ. ವೀಣೆಯ ತತ್ವದಲ್ಲಿ ಕಳಾರೂಪದಲ್ಲಿ ತೇಜೋ ಮಯವಾದ ಸೂಕ್ಷ್ಮಶರೀರಿಗಳಾಗಿ ದೇವತೆಗಳೂ ಋಷಿಗಳೂ ಇರುವರೆಂಬ ವಿಚಾರವು ಬಂದಿರುವುದಲ್ಲದೆ, ವೇದಕ್ಕೆ ಅಭಿಮಾನಿದೇವತೆಗಳಾಗಿಯೂ ಇರುವ ವಿಚಾರವು ಬಂದಿರುವುದಷ್ಟೆ! ಈಶ್ವರನ ರಾಜ್ಯಾಧಿಕಾರಿಗಳಾಗಿಯೂ, ವೇದಾಭಿ ಮಾನಿಗಳಾಗಿಯೂ ಇರುವ ದೇವತೆಗಳಿಗೆ ವೇದಮಂತ್ರಗಳಿಂದ ವೇದಪ್ರೋಕ್ತ ವಾದ ಕರ್ಮಮಾಡಿ ತೃಪ್ತಿಯನ್ನುಂಟುಮಾಡುವ ಸಹಾಯದ ಕರ್ತವ್ಯದ ಭಾರ ವನ್ನು ಬ್ರಾಹ್ಮಣರಿಗೆ ಹೊರಸಿರುವುದು. ಅಗ್ನಿಹೋತ್ರ ಮುಂತಾದ ಈ ಕರ್ಮ ಗಳು ಅಧಿಕಾರಿಯ ಜ್ಞಾನಾಭಿವೃದ್ಧಿಗೂ ವರ್ಣಾಶ್ರಮದವರ ಹಿತಕ್ಕೂ ಲೋಕ ಹಿತಕ್ಕೂ ಮಾಡಬೇಕಾದ ಕರ್ತವ್ಯವಾಗಿರುವುದು.

ದೇವಾನ್ ಭಾವಯ ತಾನೇನ ತೇ ದೇವಾ ಭಾವಯಂತುವಃ ।
ಪರಸ್ಪರಂ ಭಾವಯನ್ತಃ ಶ್ರೇಯಃ ಪರಮವಾಪ್ಸ್ಯಥ ॥

ತಾ॥ ಕರ್ಮಗಳಿಂದ ದೇವತೆಗಳನ್ನು ತೃಪ್ತಿಗೊಳಿಸಿರಿ. ಆ ದೇವತೆಗಳು ನಿಮಗೆ ತೃಪ್ತಿಯನ್ನು ಮಾಡಲಿ. ಒಬ್ಬರಿಗೊಬ್ಬರು ತೃಪ್ತಿಗೊಳಿಸುತ್ತ ಹೆಚ್ಚಿನ ಶ್ರೇಯಸ್ಸನ್ನು ಪಡೆಯಿರಿ. ಎಂಬ **ಶ್ರೀಕೃಷ್ಣಪರಮಾತ್ಮನ** ವಾಕ್ಯವಿರುವುದು. ಈ ತತ್ವಸಮರ್ಥನೆಗೆ

ತಪ್ತ ಏವೈನ ಮಿಂದ್ರಃ, ಪ್ರಜಯಾ ಪಶುಭಿ ಸ್ತರ್ಪಯತಿ ।
ತೇತೃಪ್ತಾಸ್ತ ರ್ಪಯ ನ್ತ್ಯೇನಂ, ಸರ್ವಕಾಮ ಫಲೈಃ ಶುಭೈಃ ॥

ಎಂಬ **ವೇದಾಧಾರವೂ** ಇರುವುದು. ದೇವತೆಗಳಲ್ಲಿ ಸೂರ್ಯ, ಚಂದ್ರ ನಕ್ಷತ್ರಗಳು ನಮಗೆ ಪ್ರತ್ಯಕ್ಷವಾಗಿ ಗೋಚರವಾಗುವುವು ಈ ಚರ್ಮ ಚಕ್ಷುಸ್ಸಿಗೆ ಗೋಚರವಾಗದೆ ಜ್ಞಾನಚಕ್ಷುಸ್ಸುಗಳಿಂದ ಅರಿಯಬಹುದಾದ ಈಶ್ವರನ ರಾಜ್ಯಾಧಿಕಾರವರ್ಗದ ಇಂದ್ರನೇ ಮೊದಲಾದ ಎಷ್ಟೋ ದೇವತೆಗಳಿರುವರು. ಪ್ರತ್ಯಕ್ಷವಾಗಿ ಗೋಚರಿಸುವ, ಗೋಚರಿಸದೇ ಇರುವ ಎಲ್ಲಾ ದೇವತೆಗಳೂ ಪ್ರಕೃತಿಮಾತ್ರ ಸ್ವರೂಪವಾದವುಗಳೆಂದೂ, ಮನುಷ್ಯರಿಗಿಂತ ಹೆಚ್ಚಿನ ಮಹತ್ವ ಮತ್ತು ಪೂಜಾರ್ಹವಾದ ದೇವತಾಶಕ್ತಿಯುವರಲ್ಲನೆಂದೂ, ಜಪಹೋಮಾರ್ಚನಾದಿ ಕರ್ಮಗಳಿಂದ ಈ ದೇವತೆಗಳಿಗೆ ಏನೂ ಪ್ರಯೋಜನವಾಗುವುದಿಲ್ಲವೆಂದೂ, ಉದರ ಪೋಷಣೆ ಗೋಸ್ಕರ ಉತ್ತಮವರ್ಣದವರು ಹೂಡಿರುವ ತಂತ್ರವೆಂದೂ ಕೆಲವರು ಅಭಿಪ್ರಾಯ ಪಡುವರು ಇದು ಸಮಂಜಸವಾದುದಲ್ಲ. ಹೀಗೆ ಹೇಳುವವರು ಈ ವಿಚಾರದಲ್ಲಿ ಇನ್ನೂ ಅಜ್ಞರು ಅಥವಾ ಬಾಲಕರೆಂದು ತಿಳಿಯಬೇಕು

ಪರಮಾತ್ಮನನ್ನು ಆರಾಧಿಸಿದರೆ ಸರಿ. ಈ ದೇವತೆಗಳನ್ನೇಕೆ ಆರಾಧಿಸಬೇಕೆಂದು ಸಂಶಯಪಡಬಾರದು. ಈ ದೇವತೆಗಳೆಲ್ಲಾ ಪರಮಾತ್ಮನ ರಾಜ್ಯಾಧಿಕಾರಿಗಳು. ಪ್ರಪಂಚವೇ ಈ ಅಧಿಕಾರಿಗಳ ಅಧೀನದಲ್ಲಿರುವಾಗ ನಾವೂ ಇವರ ಅಧೀನದಲ್ಲಿದ್ದೇ ಇರುವೆವು ಪ್ರಪಂಚ ವ್ಯವಹಾರವಲ್ಲಿಯೂ ರಾಜ್ಯಾಧಿಕಾರಿಗಳನ್ನು ಅನುಕೂಲರಾಗಿರುವಂತೆ ಮಾಡಿಕೊಂಡರೆ ಜನರು ಹೇಗೆ ಜಾಗ್ರತೆಯಾಗಿ ರಾಜನ ಕಟಾಕ್ಷಕ್ಕೆ ಪಾತ್ರರಾಗುವರೋ ಹಾಗೆಯೆ ನಾವೂ ಪರಮಾತ್ಮನ ಅಧಿಕಾರಿಗಳನ್ನು ಅನುಕೂಲರಾಗಿರುವಂತೆ ಮಾಡಿಕೊಂಡರೆ ನಮಗೆ ಇಹಪರಗಳೆರಡರಲ್ಲಿಯೂ ಸುಖವುಂಟು. ರಾಜ್ಯಾಧಿಕಾರಿಗಳು ರಾಜನ ಪ್ರತಿನಿಧಿಗಳೇ ಆಗಿರುವರು ಅಧಿಕಾರಿಗಳಿಗೆ ವಂದಿಸುವುದು ರಾಜಗೌರವಕ್ಕೆ ಸೇರಿ ಹೇಗೆ ರಾಜನಿಗೆ ಸಲ್ಲುವುದೋ ಹಾಗೆಯೇ ದೇವತೆಗಳಿಗೆ ಪ್ರೀತಿಕರವಾದ ಕರ್ಮಮಾಡುವುದರಿಂದ ಆ ಕರ್ಮವು ಪರಮಾತ್ಮನನ್ನೇ ಹೊಂದುವುದು. ಆದುದರಿಂದ ವೇದ ಮತ್ತು ಶ್ರೀಕೃಷ್ಣಪರಮಾತ್ಮನ ಆಜ್ಞೆಯಂತೆ ಅನ್ಯೋನ್ಯ ಸಹಾಯಕವಾಗಿರುವ ದೇವತಾಕರ್ಮಗಳು ಅಗತ್ಯವಾಗಿ ಅನುಷ್ಠೇಯವಾದವುಗಳಾಗಿವೆ.

ಜಪ, ತರ್ಪಣ, ಹೋಮಾದಿಗಳಲ್ಲಿ ತೇಜೋರೂಪರಾದ ದೇವತೆಗಳಿಗೆ ಹೋಮವೇ ಪ್ರಧಾನವಾದುದು. "ಹೋಮೈರ್ದೇವಾನ್ಯಥಾವಿಧಿ ತೃಪ್ಯತ" ಎಂಬ ಆಧಾರವಾಕ್ಯದಂತೆ ಸಮಸ್ತದೇವತೆಗಳಿಗೂ ಪ್ರತಿನಿಧಿಯಾದ ಅಗ್ನಿದೇವನಲ್ಲಿ ನಿತ್ಯವೂ ಹೋಮವನ್ನು ಸಲ್ಲಿಸಿ ದೇವತೆಗಳನ್ನು ತೃಪ್ತಿಪಡಿಸಬೇಕು

ಅಗ್ನಿಯಲ್ಲಿ ಹೋಮಮಾಡಲ್ಪಟ್ಟ ದ್ರವ್ಯಗಳು ತಪ್ತವಾಗಿ ಸೂಕ್ಷ್ಮರೂಪವಾಗಿ ವಿನಿಮಯವನ್ನು ಹೊಂದಿ ಅದೃಶ್ಯರಾದ ದೇವಕೋಟಿಗಳಿಗೆ ಅಮೃತಪ್ರಾಯವಾದ ಆಹಾರವಾಗುವುವು "ಅಗ್ನಿಮುಖಾ ವೈದೇವಾಃ; ಅಗ್ನಿರಗ್ರೇ ಪ್ರಥಮೋ ದೇವತಾನಾಂ" ಎಂಬ ವೇದವಾಕ್ಯನಂತೆ ಅಗ್ನಿಮೂಲಕವಾಗಿ ದೇವತೆಗಳು ತೃಪ್ತರಾಗುವರು ಇದು ಬ್ರಹ್ಮಾಂಡದ ವ್ಯಾಪಾರಕ್ಕೆ ಸೇರಿದುದು. 'ಪಿಂಡಾಂಡವಾದ ನಮ್ಮ ಶರೀರದಲ್ಲಿಯೂ ಅಗ್ನಿಮುಖದಿಂದಲೇ ನಮ್ಮಲ್ಲಿರುವ ದೇವತಾಶಕ್ತಿಗಳಿಗೆ ತೃಪ್ತಿಯಾಗಬೇಕು ಹೇಗೆಂದರೆ ನಮ್ಮ ಇಂದ್ರಿಯಗಳೆಲ್ಲಾ ದೇವತೆಗಳ ಅಂಶವಾಗಿವೆ, ನಾವು ಭುಜಿಸಿದ ಆಹಾರವು ನಮ್ಮಲ್ಲಿರುವ ಅಗ್ನಿಯಿಂದಲೆ ಪಚನವಾಗಿ ಅದರ ಸಾರಗಳನ್ನು ಇಂದ್ರಿಯಗಳಿಗೆ ಅಗ್ನಿಯೇ ಒದಗಿಸಿಕೊಡುವುದು. ಇದು ಸರ್ವರಿಗೂ ತಿಳಿದ ವಿಚಾರವಾಗಿಯೇ ಇದೆ. ಇದನ್ನೇ 'ಪ್ರಾಣಾಗ್ನಿಹೋತ್ರ' ಎಂದು ಶ್ರುತಿಯೂ ತಿಳಿಸುವುದು ಈ ತತ್ವದಂತೆಯೇ ಸೂಕ್ಷ್ಮಲೋಕದಲ್ಲಿರುವ ದೇವತೆಗಳಿಗೂ ಅಗ್ನಿಮುಖದಿಂದ ತೃಪ್ತಿಪಡಿಸಬೇಕು ದೇಹದಲ್ಲಿ ಅಗ್ನಿಯಜೊತೆಗೆ ಜಲವೂ ಸಹಾಯಕವಾಗಿರುವುದು ಇದರಂತೆ ಅರ್ಘ್ಯ, ತರ್ಪಣಾದಿಗಳಿಂದಲೂ ದೇವತೆಗಳು ತೃಪ್ತರಾಗುವರು

ದೇವತೆಗಳ ಪ್ರೀತ್ಯರ್ಥವಾಗಿ ಅನುಷ್ಠಿಸುವ ಕರ್ಮಗಳಲ್ಲಿ ಪ್ರಯೋಗಿಸುವ ನಾದಬ್ರಹ್ಮಸ್ವರೂಪವಾದ ವೇದಮಂತ್ರಗಳನ್ನು ವೇದಾಧ್ಯಾಯಿಯು ಹೊಂದಿ ಅವುಗಳನ್ನು ಕಾಪಾಡಿಕೊಳ್ಳುವುದರಲ್ಲಿರುವ ಕಷ್ಟವನ್ನೂ ಕೊಂಚಮಟ್ಟಿಗೆ ವಿವರಿಸೋಣ ಲೋಕದಲ್ಲಿ ಒಂದೊಂದು ಶಬ್ದವನ್ನು ಉಚ್ಚರಿಸುವುದರಿಂದ ಉಂಟಾಗುವ ಧ್ವನಿಯು ಸಾಮಾನ್ಯವಾಗಿ ಅದೃಶ್ಯಪ್ರಪಂಚದಲ್ಲಿಯೂ ಅನೇಕ ವೇಳೆ ದೃಶ್ಯಪ್ರಪಂಚದಲ್ಲಿಯೂ ಒಂದುರೂಪವಾಗಿ ಪರಿಣಮಿಸುವುದು. ನಾನಾ ವಿಧವಾದ ಶಬ್ದಗಳು ನಾನಾರೂಪವನ್ನುಂಟುಮಾಡುವುವು ಇದು ವೀಣೆಯ ತತ್ವದಲ್ಲಿ ವ್ಯಕ್ತಪಡುವುದು ಉಚ್ಚರಿಸಲ್ಪಡುವ ಶಬ್ದಗಳಿಗನುಸಾರವಾಗಿ ವೇದಗಳಿಗಿರುವ ಶುಕ್ಲಕೃಷ್ಣಾದಿ ವರ್ಣಗಳೊಡನೆ ಪ್ರಕಾಶಿಸುವ ರೂಪಗಳು ಸೂಕ್ಷ್ಮಪ್ರಪಂಚದಲ್ಲುಂಟಾಗುವುವು. ವೇದಗಾನವು ಇತರ ಶಬ್ದಗಳಂತೆ ಫಲಪ್ರಯೋಜನ ಮಾತ್ರವೇ ಉಳ್ಳದ್ದಾಗಿಲ್ಲ ವೇದಗಾನದಲ್ಲಿ ಶಬ್ದಕ್ಕೂ ಅತ್ಯಂತ ಮಹತ್ವವುಂಟು. ಇವು ಅಕ್ಷರಲೋಪವಿಲ್ಲದೆ ಕ್ರಮತಪ್ಪದೆ ವಿಧಿಸಲ್ಪಟ್ಟ ಸುಸ್ವರವನ್ನತಿಕ್ರಮಿಸದೆ ಅಧಿಕಾರಿಯು ಪವಿತ್ರತೆಯಿಂದ ಉಚ್ಚರಿಸಬೇಕು ಹಾಗಲ್ಲವಾದರೆ ಮಂತ್ರಾಭಿಮಾನಿದೇವತೆಯನ್ನೂ ಮಂತ್ರಪ್ರತಿಪಾದಕವಾದ ದೇವತೆಯನ್ನೂ ಪ್ರೀತಿಸತಕ್ಕ ಶಕ್ತಿಯುಂಟಾಗುವುದಿಲ್ಲ ಮತ್ತೂ ಅಧಿಕಾರಿಯ ಶ್ರೇಯೋಭಿವೃದ್ಧಿಗೂ ಅವಕಾಶವಿಲ್ಲದಂತಾಗಿ ಹಾನಿಗೂ ಕಾರಣವಾಗುವುದು.

ಮಂತ್ರಗಳು ಉಚ್ಚರಿಸಲ್ಪಟ್ಟಾಗ ಅಧಿಕಾರಿಯ ಕಳಾಶರೀರದಲ್ಲಿ (ಬ್ರಹ್ಮರಂಧ್ರ ನಾಡಿಯಲ್ಲಿ) ಚಲನೆಯು ಸರಿಯಾಗಿ ಉಂಟಾಗಬೇಕು. ಒಂದೇ ಮಂತ್ರವು ಋಗ್ಯಜುಸ್ಸಾಮಾಥರ್ವಣಗಳಲ್ಲಿ ಸ್ವರಾನುಗುಣವಾಗಿ ಉಚ್ಚರಿಸಲ್ಪಡುವುದುಂಟು. ಅಂತಹ ಮಂತ್ರಕ್ಕೆ ಸ್ವರಭೇದದಿಂದ ಅರ್ಥಭೇದವೂ, ಅರ್ಥಭೇದದಿಂದ ಅನೇಕ ದೇವತಾಶಕ್ತಿಗಳಿಗೂ ಸಂಬಂಧಿಸಿ ಫಲಭೇದವೂ ಉಂಟಾಗುವುದು. ಸುಸ್ವರದಿಂದ ಉಚ್ಚರಿಸಲ್ಪಟ್ಟ ವೇದಗಾನವು ಮಂತ್ರದಲ್ಲಡಗಿರುವ ಅವ್ಯಕ್ತಬೀಜಾಕ್ಷರಗಳ ಪ್ರಭಾವದಿಂದ ಮಂತ್ರಾಧಿದೇವತೆಯ ಅನುರೂಪವಾದ ಚಲನೆಯು ಉಚ್ಚರಿಸುವ ಅಧಿಕಾರಿಯ ಶರೀರದಲ್ಲಿ ಪ್ರಥಮದಲ್ಲುಂಟಾಗಿ ಬ್ರಹ್ಮರಂಧ್ರನಾಡಿಯಲ್ಲಿರುವ ದೇವತಾಂಶಗಳಾದ ಶಕ್ತಿಗಳೊಡನೆ ಸಂಬಂಧವನ್ನು ಪಡೆಯುವುದು. ಅನಂತರ ಅದೃಶ್ಯಪ್ರಪಂಚದಲ್ಲೆಂದರೆ ವೀಣೆಯ ತತ್ವದಲ್ಲಿ ತಿಳಿಸಿರುವ ವಿಶ್ವವ್ಯಾಪಿಯಾದ ಅನಾಹತನಾದದಲ್ಲಿ ಚಲನರೂಪವು ಉತ್ಪತ್ತಿಯಾಗಿ ಆಕಾಶದಲ್ಲಿ ವ್ಯಾಪಿಸಿರುವ ವಿದ್ಯುಚ್ಛಕ್ತಿಯ ಪ್ರವಾಹದಮೂಲಕ ಸೂಕ್ಷ್ಮಲೋಕದಲ್ಲಿರುವ ದೇವತಾಶಕ್ತಿಗಳೊಡನೆ ನಿಕಟಸಂಬಂಧವಾಗುವುದು. ಇದೇ ವೇದಮಂತ್ರದ ಪ್ರಭಾವ. ಮಂತ್ರಗಳಲ್ಲಿಯೂ ಮಹಾಬೀಜಾಕ್ಷರಗಳ ಸಂಯೋಗದಿಂದ ಇರುವ ಗಾಯತ್ರ್ಯಾದಿ ಕೆಲವು ಮೂಲಮಂತ್ರಗಳಿವೆ ಇಂತಹ ಮೂಲಮಂತ್ರಗಳ ಪುನಶ್ಚರಣೆಯ ಚಲನಾಶಕ್ತಿಯು ಬಹು ಮಹತ್ವವೂ ಪವಿತ್ರವೂ ಉಳ್ಳದ್ದಾಗಿರುವುದರಿಂದಲೇ ಮಂತ್ರೋಪದೇಶಕಾಲದಲ್ಲಿ ಗುರುವು ಶಿಷ್ಯನನ್ನು ಏಕಾಂತದಲ್ಲಿ ಕೂರಿಸಿಕೊಂಡು ಶಿಷ್ಯನ ಶ್ರೋತ್ರದಲ್ಲಿ ಇಂತಹ ಮಂತ್ರಗಳನ್ನು ಉಪದೇಶಿಸುತ್ತಾರೆ.

ವೇದಗಾನದಿಂದ ಮೇಲುಂಟಾಗುವುದೇ, ಕೇಡುಂಟಾಗುವುದೇ, ಅದು ನಿರ್ದಿಷ್ಟವಾದ ದೇವತಾಶಕ್ತಿಗಳಿಗೆ ಪ್ರೀತಿಕರವಾದುದೇ, ಅಲ್ಲವೇ, ಎಂಬಿವುಗಳು ಮಂತ್ರದ ಅಕ್ಷರ, ಪದ, ಸ್ವರ, ಲಕ್ಷಣ, ಮಂತ್ರವನ್ನು ಉಚ್ಚರಿಸುವ ಅಧಿಕಾರಿಯಲ್ಲಿರುವ ಶುದ್ಧವಾದ ರಕ್ತಕಣದ ಸ್ವಭಾವ, ಕರ್ಮಸಂಸ್ಕಾರ, ಭಕ್ತಿ, ಜ್ಞಾನ, ಪರಿಶುದ್ಧತೆ, ಪವಿತ್ರತೆ, ನಿಯಮವಂತನಾಗಿರುವಿಕೆ, ಇವುಗಳನ್ನು ಅನುಸರಿಸುವುದು. ಲೋಪಗಳುಂಟಾದರೆ ಅಂತಹ ಮಂತ್ರೋಚ್ಚಾರಣೆಯು ನಿರರ್ಥಕವಾಗುವುದಲ್ಲದೆ ಹಾನಿಕರವಾಗುವುದೆಂದು ವೇದವು ಸಾರುತ್ತಲಿದೆ. ಇದಕ್ಕೆ ಕಾರಣವೇನೆಂದರೆ, ಸರಿಯಾದ ಅಧಿಕಾರದಿಂದ ಮಾಡಿದ ಮಂತ್ರೋಚ್ಚಾರಣೆಯು ನಾದಿಗಳನ್ನು ವಿಕಸಿತ ಮಾಡಿ ದೇವತಾಶಕ್ತಿಗಳೊಡನೆ ಸಂಬಂಧವನ್ನುಂಟುಮಾಡುವುದು. ಹಾಗಿಲ್ಲವಾದರೆ ವಿರಸವಾಗಿ ಪಾಪಫಲಗಳುಂಟಾಗುವುವು.

ಮಂತ್ರಗಳನ್ನು ಉಚ್ಚರಿಸುವವರಲ್ಲಿ ಶುದ್ಧವಾದ ರಕ್ತಕಣದ ಸ್ವಭಾವವೂ ಬೇಕೆಂದು ಮೇಲೆ ತಿಳಿಸಿತಷ್ಟೆ? ಶುದ್ಧವಾದ ರಕ್ತಕಣವೆಂದರೆ, ರೋಗರಹಿತವೆಂಬ

ತಾತ್ಪರ್ಯಮಾತ್ರವಲ್ಲ. ವಂಶಪಾರಂಪರ್ಯವಾಗಿ ಬಂದ ವೇದಪ್ರೋಕ್ತವಾದ ಸಂಸ್ಕಾರ, ಗಾಯತ್ರೀದೇವಿಯ ಉಪಾಸನಾ ಮತ್ತು ತಪಶ್ಶಕ್ತಿಯ ಕಣಗಳು ಅಂದರೆ ಈ ಸ್ವಭಾವದ ಶಕ್ತಿಯ ಕಣಗಳು ರಕ್ತದಲ್ಲಿರುವಿಕೆಯೂ ಅತ್ಯವಶ್ಯಕ. ಈ ಸ್ವಭಾವದ ಕಣಗಳನ್ನು ವೈದ್ಯರು ರಕ್ತಪರೀಕ್ಷೆಯಿಂದ ಕಂಡುಹಿಡಿಯಲಾರರು. ಇಂತಹಕಣಗಳು ರಕ್ತದಲ್ಲಿ ಶಕ್ತಿರೂಪದಲ್ಲಿರುವುದರಿಂದ ಚರ್ಮಚಕ್ಷುಸ್ಸಿನಿಂದ ಅರಿಯಲು ಅಸಾಧ್ಯವು. ಅನೂಚಾನವಾದ ವಂಶಪಾರಂಪರ್ಯದ ಈ ರಕ್ತಕಣದ ಸ್ವಭಾವದ ಅಸ್ತಿಭಾರದ ಮೇಲೆಯೇ ವರ್ಣಾಶ್ರಮ ವಿಭಾಗಗಳು ನಿಂತಿರುವುವು ಜಾತಿ ಅಥವಾ ಜನ್ಮಗಳು ಆಯಾಯ ಸ್ವಭಾವಶಕ್ತಿಯ ರಕ್ತಕಣದ ಆಧಾರವನ್ನೇ ಹೊಂದಿರುವುವು. ಜಾತಿ ಮತ್ತು ಜನ್ಮ ಎಂಬ ಶಬ್ದಗಳಲ್ಲಿನ "ಜ" ಎಂದರೆ ಹುಟ್ಟುವಿಕೆ ಈ ಅರ್ಥವೇ ಜಾತಿಗೆ ಮೂಲಾಧಾರವಾಗಿರುವುದು. ಇದರಂತೆ ಎಲ್ಲಾ ಮನುಷ್ಯರಿಗೂ ಜನ್ಮಾಂತರ ಪಾಪಪುಣ್ಯಗಳನ್ನು ಅನುಸರಿಸಿ ಶಾಸ್ತ್ರವು ನಿರೂಪಿಸುವ ಆಯಾಯ ವರ್ಣಗಳ ಸ್ವಭಾವದ ರಕ್ತಕಣಗಳುಳ್ಳ ಯೋನಿಯಲ್ಲಿ ಜನ್ಮವು ದೊರಕುವುದು ಆಯಾಯ ಕುಲದಲ್ಲಿ ಜನ್ಮವೆಂದರೆ - ಕುಲವೆಂದರೂ (ಕುಲ-ಸಂಸ್ತ್ಯಾನೆ) ಎಂಬ ವ್ಯುತ್ಪತ್ತಿಯಿಂದ ಕೂಡಿಕೊಂಡಿರುವುದೆಂದರ್ಥವಾಗಿ ವಂಶಪಾರಂಪರ್ಯದಿಂದ ಆಯಾಯ ರಕ್ತಕಣದ ಸ್ವಭಾವದಿಂದ ಕೂಡಿಕೊಂಡಿರುವುದೆಂದಾಗುವುದು

ಆದುದರಿಂದ ವೇದಮಂತ್ರೋಚ್ಚಾರಣೆಗೆ ವಂಶಪಾರಂಪರ್ಯದ ಸಂಸ್ಕಾರದಿಂದ ಬಂದ ಶುದ್ಧರಕ್ತಕಣದ ಸ್ವಭಾವವೂ ಅತ್ಯವಶ್ಯಕ. ಇಂತಹ ಪವಿತ್ರವಾದ ರಕ್ತಕಣದಿಂದ ಹೊಂದಿದ ದೇಹಕ್ಕೂ ಅಧ್ಯಯನಾಧಿಕಾರ ಬರಬೇಕಾದರೆ ಶಾಸ್ತ್ರವಿಧಿಯಂತೆ ಉಪನಯನ ಮುಂತಾದ ಶಾಸ್ತ್ರೋಕ್ತವಾದ ಅನೇಕ ಸಂಸ್ಕಾರಗಳೂ ವೇದವ್ರತಗಳೂ ಅವಶ್ಯಕವಾಗಿ ಬೇಕು. ಜನ್ಮ, ಮತ್ತು ಸಂಸ್ಕಾರಗಳ ಜೊತೆಗೆ ಪವಿತ್ರತೆ, ನಿಯಮ, ಭಕ್ತಿ, ಮತ್ತು ಮಂತ್ರಾರ್ಥಜ್ಞಾನ ದೊಡಗೂಡಿ ಮಂತ್ರಪುನಶ್ಚರಣೆಯನ್ನೂ, ನಿಯಮಿಸಲ್ಪಟ್ಟ ಕರ್ಮವನ್ನೂ ಅನುಷ್ಠಿಸುತ್ತಾ ಬಂದರೆ ವ್ಯತಿರೇಕವಾದ ಕೇಡುಂಟಾಗದೆ ಮಂತ್ರಾಭಿಮಾನ ದೇವತಾಶಕ್ತಿಗಳ ಮಂತ್ರಗಳನ್ನು ಪುನಶ್ಚರಿಸಿ ಸಿದ್ಧಿಪಡೆದ ಮಹರ್ಷಿಗಳ ಪೂರ್ಣಾನುಗ್ರಹಕ್ಕೆ ಪಾತ್ರವಾಗಿ ತಕ್ಕ ತಪಶ್ಶಕ್ತಿಯನ್ನು ಅಧಿಕಾರಿಯು ಹೊಂದುತ್ತಾನೆ.

ಅನೇಕ ಮಂತ್ರಗಳು ಪರಮಾತ್ಮನನ್ನು ಪ್ರತಿಪಾದಿಸುತ್ತವೆ. ಇಂತಹ ಮಂತ್ರಗಳಿಗೂ ದೇವತೆಗಳಿಗೂ ಹೇಗೆ ಸಂಬಂಧವಿರುವುದೆಂದರೆ - ಪ್ರತಿಯೊಂದು ರಾಜ್ಯದಾಡಳಿತವೂ ರಾಜನದೇ ಆಗಿದ್ದರೂ ಪ್ರತಿಯೊಂದು ಶಾಖೆಯ ಆಡಳಿತದ ವಿಚಾರವೂ ಆಯಾಯ ಶಾಖಾಧಿಕಾರಿಯ ಮೂಲಕವೇ ರಾಜನಿಗೆ ಸೇರುವುದು. ಇದರಂತೆ ಪರಮಾತ್ಮನ ಸಂಬಂಧವುಂಟಾಗಬೇಕಾದರೂ ಶಾಖಾಧಿಕಾರಿಗಳ

ತತ್ತ್ವದಲ್ಲಿರುವ ಆಯಾಯ ದೇವತಾಶಕ್ತಿಗಳ ಮೂಲಕವೇ ಪಡೆಯಬೇಕಾಗಿರುವುದು. 'ಓಂ ಇತ್ಯೇಕಾಕ್ಷರಂ ಬ್ರಹ್ಮ। ಅಗ್ನಿರ್ದೇವತಾ' ಎಂಬ ಮಂತ್ರವಿದೆ. ಈ ಮಂತ್ರಪ್ರತಿಪಾದ್ಯ ದೇವತೆಯು ಪರಬ್ರಹ್ಮವು. ಪರಬ್ರಹ್ಮಸ್ವರೂಪವಾದ ಈ ಓಂಕಾರ ಮಂತ್ರಕ್ಕೆ ಅಗ್ನಿಯು ಅಭಿಮಾನಿದೇವತಾಶಕ್ತಿಯಾಗಿರುವುದರಿಂದ ಅಗ್ನಿದೇವತಾಶಕ್ತಿಯ ಮೂಲಕವೇ ಓಂಕಾರಾರ್ಥವಾದ ಪರಬ್ರಹ್ಮಸ್ಥಿತಿಯು ಪ್ರಾಪ್ತವಾಗುವುದು.

[ಇದರ ವಿವರಣೆಯು ಬಹು ಗಹನವಾದದ್ದು. ಈ ವಿಷಯವು ಸಂಧ್ಯಾವಂದನೆಯ ತತ್ತ್ವಾರ್ಥದಲ್ಲಿಯೂ, ರಾಮಾಯಣದ ಅಂತರಾರ್ಥಗ್ರಂಥದಲ್ಲಿಯೂ ವಿವರಿಸಲ್ಪಟ್ಟಿರುವುದು.]

ಆದುದರಿಂದ ಪ್ರತಿವೇದಮಂತ್ರಗಳಿಗೂ ಋಷಿ, ಛಂದಸ್ಸು, ಅಭಿಮಾನಿ ದೇವತಾಶಕ್ತಿಗಳು ಇದ್ದೇಇರುವುವು. ಕೆಲವು ಮಂತ್ರಗಳಿಗೆ ಋಷಿ, ಛಂದಸ್ಸು, ದೇವತೆಗಳನ್ನು ತಿಳಿಸದಿದ್ದರೂ ಮಂತ್ರಗಳಿಗೆ ಇವು ಇದ್ದೇ ಇರುತ್ತವೆ. ಆದುದರಿಂದ ವೇದಮಂತ್ರೋಚ್ಚಾರಣೆಯು ಈ ಎಲ್ಲಾ ಶಕ್ತಿಗಳಿಗೂ ಹಿತರಕವಾಗುವಂತಿರಬೇಕು. ಈ ಪ್ರಕರಣದ ಆದಿಯಿಂದ ಹೇಳಲ್ಪಟ್ಟ ಮತ್ತು ವೀಣೆಯ ಅನ್ವಯದ ತತ್ತ್ವಗಳ ಮುಖ್ಯಾಂಶಗಳನ್ನು ಸಾವಧಾನಚಿತ್ತದಿಂದ ಪರಿಶೀಲಿಸಿ ಗ್ರಹಿಸಿದರೆ ವೇದಮಂತ್ರೋಚ್ಚಾರಣೆ ಮತ್ತು ವೇದಮಂತ್ರಗಳಿಂದ ಕರ್ಮಮಾಡುವುದರಲ್ಲಿ ಹೇಳಲ್ಪಟ್ಟಿರುವ ವಿಧಿ ಮತ್ತು ನಿಷೇಧಗಳಿಗೆ ಕಾರಣಗಳನ್ನು ತಿಳಿಯಲು ಅಸಾಧ್ಯವಾಗಿರಲಾರದು.

ವೇದವು ಭಾರತೀಯರಿಗೆ ಮತ್ತು ಭರತಖಂಡದ ಚರಿತ್ರೆಗೆ ಮಾತ್ರ ಸಂಬಂಧಿಸಿದುದಲ್ಲ. ಅನಾಹತನಾದವಾದ ವೇದವು ಪ್ರಪಂಚಮಯವಾಗಿರುವುದರಿಂದಲೂ, ನಾದಮಯವಾದ ವೇದದಿಂದಲೇ ಸಕಲ ಸೃಷ್ಟಿಸ್ಥಿತಿಗಳಾಗಿರುವುದರಿಂದಲೂ ಅವ್ಯಕ್ತಜ್ಞಾನಭಂಡಾರದ ವ್ಯಕ್ತಾಕ್ಷರಗಳೆನಿಸುವ ವೇದವು ಚರಾಚರ ಪ್ರಾಣಿಗಳ ಚರಿತ್ರೆಗೇ ಸಂಬಂಧಿಸಿದುದು. ಆದುದರಿಂದ ವೇದವು ಭಾರತೀಯರಿಗೆ ಮಾತ್ರವಲ್ಲದೆ ಪ್ರಪಂಚದಲ್ಲಿರುವ ಮನುಷ್ಯವರ್ಗಕ್ಕೇ ಸಂಬಂಧಪಟ್ಟುದಾಗಿದೆ ಸತ್ಯವಿದ್ಯೆಯಾದ ವೇದವು ಭರತಖಂಡದಲ್ಲಿಯೇ ಪ್ರಥಮದಲ್ಲಿ ಅವತಾರಪುರುಷರುಗಳಿಂದಲೂ ಋಷಿಗಳಿಂದಲೂ ಆವಿರ್ಭವಿಸಿ ಅಲ್ಲಿಂದಲ್ಲೇ ಭೂಮಂಡಲದ ಇತರಕಡೆಗೂ ವ್ಯಾಪ್ತಿಯನ್ನು ಹೊಂದಿರುವುದು. ಅತ್ಯಂತ ಪ್ರಾಚೀನಕಾಲದಿಂದಲೂ ಧರ್ಮ ಮತ್ತು ಅಧ್ಯಾತ್ಮಿಕ ವಿಚಾರಗಳಿಗೆ ವಿಶೇಷ ಪ್ರಾಮುಖ್ಯತೆಯನ್ನು ಕೊಟ್ಟಿರುವ ದೇಶಗಳಲ್ಲೆಲ್ಲಾ ಮುಖ್ಯವಾದುದು ಭರತಖಂಡವೆಂಬುದು ಸರ್ವಸಮ್ಮತವಾದ ವಿಚಾರವಾಗಿದೆ. ಅಲ್ಲದೆ ಈಶ್ವರನ ಅವತಾರಗಳಿಗೂ ಮಹಾಮಹಾ ಋಷಿಗಳಿಗೂ ಭರತಖಂಡವು ಜನ್ಮಸ್ಥಾನವಾಗಿದೆ.

ಇದನ್ನೆಲ್ಲಾ ನೋಡಿದರೆ ಭೂಮಂಡಲದೊಳಗೆ ಭರತಖಂಡವು ಜಗದೊಡೆಯನಾದ ಈಶ್ವರನ ವಿಶೇಷ ಪ್ರೀತಿಗೆಪಾತ್ರವಾದ ಸ್ಥಳವಾಗಿರುವುದರಿಂದಲೇ ಸತ್ಯವಿದ್ಯೆಯಾದ ವೇದಕ್ಕೆ ಜನ್ಮಸ್ಥಳವಾಗಿದೆ.

ಆತ್ಯಂತಿಕ ಪ್ರಳಯವಲ್ಲದ ಯುಗಗಳ ಬದಲಾವಣೆಯ ಕಾಲಗಳಲ್ಲಿಯೂ ಮಹಾತ್ಮರಾದವರಿಗೆ ಭರತಖಂಡದಲ್ಲಿನ ಹಿಮಾಚಲ ಮುಂತಾದ ಪುಣ್ಯಸ್ಥಳಗಳು ಆಶ್ರಯವುಳ್ಳದ್ದಾಗುವುವು. ಈ ಸ್ಥಳಗಳನ್ನು ಆಶ್ರಯಿಸಿದ್ದ ಮಹಾತ್ಮರು ಮತ್ತು ಮಹಾತ್ಮರ ವಂಶಸ್ಥರಾದ ವೇದಸಂಪನ್ನರು ನವಯುಗ ಪ್ರಾರಂಭವಾದ ಅನಂತರ ಈಶ್ವರೀವಿದ್ಯೆಯಾದ ವೇದವನ್ನು ಪುನಃ ಪ್ರಚಾರಕ್ಕೆ ತರುವರು ಮಹಾಪ್ರಳಯವಲ್ಲದ ಯುಗಪ್ರಳಯಕಾಲಗಳಲ್ಲಿ ಕೆಲವು ಭೂಭಾಗಗಳು ಜಲದಲ್ಲಿ ಮುಳುಗುವಿಕೆಯೂ, ಜಲದಲ್ಲಿ ಮುಳುಗಿದ್ದ ಕೆಲವು ಭೂಭಾಗಗಳು ಮೇಲಕ್ಕೆಬರುವಿಕೆಯೂ, ಅಗ್ನಿಶಿಖೆ ಮುಂತಾದ ಉತ್ಪಾದಗಳುಂಟಾಗಿ ಕೋಟ್ಯಾಂತರ ಪ್ರಾಣಿಗಳು ಲಯವಾಗಿ ಬಹು ಅತ್ಯಲ್ಪ ಪ್ರಜೆಗಳು ಉಳಿಯುವಿಕೆಯೂ, ಹೀಗೆ ಉಳಿದ ಅತ್ಯಲ್ಪ ಪ್ರಜೆಗಳ ಸ್ವಭಾವಗಳು ಯುಗಧರ್ಮವನ್ನನುಸರಿಸಿ ವ್ಯತ್ಯಸ್ತವಾಗಿ ಪ್ರಪಂಚವೇ ಅಲ್ಲೋಲ ಕಲ್ಲೋಲ ವಾಗುವಂತಹ ವ್ಯತ್ಯಾಸಗಳಾಗುವುವು. ಆದುದರಿಂದ ದ್ವಾಪರಯುಗ ಹೋಗಿ ಈಗ ನಡೆಯುತ್ತಿರುವ ಕಲಿಯುಗ ಉದಯವಾದಾಗ ಇದೇ ರೀತಿಯಾಗಿ ಪರಿಣಮಿಸಿ ಕಲಿಯುಗ ಪ್ರಾರಂಭದಿಂದ ಕ್ರಮೇಣ ಈಗಿರುವಸ್ಥಿತಿಗೆ ಬಂದು ನಿಂತಿರುವುದು. ಹೀಗೆ ಯುಗಬದಲಾವಣೆಯ ಕಾಲದಲ್ಲಿಯೂ ವೇದ ಮಂತ್ರಗಳನ್ನು ಧರಿಸಿ ವೇದಸಂಪನ್ನರಾದಂತಹ ಮಹಾತ್ಮರು 'ಶ್ರುತಿ' ಎಂಬ ನಾಮದ ಸಾರ್ಥಕತೆಯನ್ನನುಸರಿಸಿ ಅಧ್ಯಾಪನೆಯಿಂದ ಬೋಧಿಸುತ್ತಾ ಬಂದಿರುವರು.

ಭರತಖಂಡದಿಂದ ಹೊರಗಿರುವ ಪ್ರದೇಶಗಳಲ್ಲಿ ಈಗ ಕಾಣಬರುವ ವೇದಸಮ್ಮತವಾದ ಧರ್ಮ ಮತ್ತು ಜ್ಞಾನಮಾರ್ಗಗಳ ಕಿಂಚಿನ್ಮಾತ್ರ ಪ್ರಭೆಯ ನಡೆವಳಿಕೆಗಳೂ ಭರತಖಂಡದ ಮಹಾತ್ಮರಿಂದಲೇ ಪ್ರಚಾರವಾದುವೆಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ಭರತಖಂಡದವರಿಂದ ಉಪದೇಶ ಮಾಡಲ್ಪಟ್ಟ ವೇದದ ಕಿಂಚಿನ್ಮಾತ್ರ ಪ್ರಭೆಯನ್ನೂ ಸಹ ಸರಿಯಾಗಿ ಗ್ರಹಿಸಲು ಶಕ್ತಿಸಾಲದೆ ತಂತಮ್ಮ ತಿಳಿವಳಿಕೆಗೆ ಬಂದುದೇ ಸರಿಯೆಂದು ತಿಳಿದು ಕೊಂಡಿರುವುದೇ ಇತರ ಮತಗಳೆನಿಸಿ ಪ್ರಚಾರದಲ್ಲಿರುವುವು. ಈಗ ಪ್ರಪಂಚದಲ್ಲಿ ಅನೇಕಾನೇಕ ಮತಗಳಿರುವುವು. ಎಲ್ಲಾ ಮತದವರೂ ತಮ್ಮ ತಮ್ಮ ಮತಗಳೇ ಸರಿಯಾದುವೆಂದು ತಿಳಿಯುವುದರಿಂದ ಧರ್ಮ ಮತ್ತು ಜ್ಞಾನಗಳ ವ್ಯವಸ್ಥಿತವಾದ ಮಾರ್ಗವಾವುದೆಂಬುದೇ ದೃಢವಾಗದೆ ಅನನ್ವಯದ ಸ್ಥಿತಿಯೇ ಆಗಿರುವುದು. ಇದಕ್ಕೆ ಅಪೂರ್ಣಜ್ಞಾನವೇ ಕಾರಣ. ಜಗತ್ಕರ್ತನಾದ

ಈಶ್ವರನು ಇತರ ಪ್ರಾಣಿಗಳಿಗಿಂತಲೂ ಮನುಷ್ಯನಲ್ಲಿ ದೇವತಾಜ್ಞಾನವನ್ನು ಹೊಂದಲು ಬುದ್ಧಿಶಕ್ತಿಯನ್ನೂ ಕೊಟ್ಟಿರುವನು ಮತ್ತು ಇತರ ಎಲ್ಲಾ ಪ್ರಾಣಿಗಳಿಗಿಂತಲೂ ಮನುಷ್ಯನಲ್ಲಿ ಅಜ್ಞಾನಶಕ್ತಿಯನ್ನೂ ಪ್ರಬಲತರವಾಗಿ ಟ್ಟಿರುವನು. ಪ್ರಬಲವಾದ ಈ ಅಜ್ಞಾನಶಕ್ತಿಯು ಸುಲಭವಾಗಿ ಯಥಾರ್ಥವಾದ ತಿಳಿವಳಿಕೆಗೆ ಅವಕಾಶಕೊಡುವುದಿಲ್ಲ ಆದುದರಿಂದಲೇ ವಿವಿಧ ಮತಗಳಿಗೆ ಕಾರಣ. ಮೋಕ್ಷದದಾರಿಯೂ, ಮೋಕ್ಷದದಾರಿಗೆ ಸಹಕಾರಿಯಾದ ಧರ್ಮಮಾರ್ಗವೂ, ಈಶ್ವರನ ರಾಜ್ಯಾಡಳಿತದ ಕಟ್ಟಳೆಗೆ ಸೇರಿದುದು. ಸ್ವಾಭಾವಿಕವಾಗಿ ಮನುಷ್ಯನು ಅಜ್ಞಾನಾವೃತನಾಗಿರುವುದರಿಂದ ಈಶ್ವರನ ನಿಯಮವನ್ನನುಸರಿಸಿ ಕೃತಕೃತ್ಯನಾಗ ಬೇಕಲ್ಲದೆ ತಾನೇ ಸ್ವತಂತ್ರ ನಿಯಾಮಕನಲ್ಲ ಮನುಷ್ಯನು ಅಲ್ಪಜ್ಞನೇಹೊರತು ಸರ್ವಜ್ಞನಲ್ಲ. ಇತರ ಮತಗಳು ಶುದ್ಧನಾಸ್ತಿಕ ಮತಗಳೆಂಬ ಅಭಿಪ್ರಾಯವಲ್ಲ. ಆದರೆ ಕರ್ಮ (ಧರ್ಮ) ಜ್ಞಾನಮಾರ್ಗಗಳ ಪೂರ್ಣತತ್ವಗಳಿಗನುಸಾರವಾಗಿಲ್ಲ. ಆದುದರಿಂದ ಸಾರ್ವಜನಿಕವಾದ ಈಶ್ವರೀವಿದ್ಯೆಯಾದ ವೇದದ ಅನುವರ್ತಿಗಳಾಗಿ ಪ್ರಪಂಚದಲ್ಲಿರುವ ಮನುಷ್ಯರೆಲ್ಲರೂ ನಡೆದುಕೊಂಡರೆ ಇಹಪರಸುಖಗಳೆರಡಕ್ಕೂ ಸಾಧಕವಾಗುವುದು

ಚಾತುರ್ವರ್ಣದವರೂ ವೇದಾನುವರ್ತಿಗಳಾಗಿರುವವರಾಗಿಯೂ ಒಂದೇ ಕುಟುಂಬಕ್ಕೆ ಸೇರಿದವರಾಗಿಯೂ ಇರುತ್ತಾರೆ ಒಂದು ಕುಟುಂಬದಲ್ಲಿ ಪ್ರತ್ಯೇಕ ಕಾರ್ಯದವರು ಬೇರೆ ಬೇರೆಯಾಗಿ ವಿಂಗಡವಾಗಿರುವಂತೆಯೂ, ಪ್ರಪಂಚದ ಹಿತಕ್ಕೋಸ್ಕರ ಒಂದಾದ ವೇದವೇ ನಾಲ್ಕು ಭಾಗವಾಗಿರುವಂತೆಯೂ, ಕರ್ಮಕಾಂಡದ ತತ್ವಕ್ಕನುಸಾರವಾಗಿ ನಾಲ್ಕು ವರ್ಣದ ಅವಶ್ಯಕತೆಯು ಈಶ್ವರ ನಿಂದಲೇ ನಿಯಮಿಸಲ್ಪಟ್ಟು ಬಂದಿರುವುದು. ಬ್ರಾಹ್ಮಣನ ಕರ್ಮವೂ, ಕ್ಷತ್ರಿಯನ ಶೌರ್ಯವೂ, ವ್ಯಾಪಾರಿಯ ಸತ್ಯವೂ, ಸೇವಕನೆಂದರೆ ಕೆಲಸಗಾರನ ತಾಳ್ಮೆ ಮತ್ತು ಕ್ರಿಯಾಶಕ್ತಿ, ಇವುಗಳೆಲ್ಲವೂ ಸಂಘದ ಅಭಿವೃದ್ಧಿಗೆ ಸಹಕಾರಿಗಳಾಗಿವೆ. ಇವುಗಳಲ್ಲಿ ಪ್ರತಿಯೊಂದಕ್ಕೂ ತಮತಮಗೆ ಸಂಬಂಧಪಟ್ಟ ವಿಶೇಷಪೂರ್ಣತೆ ಯೊಂದು ಇದ್ದೇ ಇರುವುದು. ಪ್ರತಿಯೊಂದು ಭಾಗವೂ ತನ್ನ ತನ್ನ ಪ್ರತ್ಯೇಕ ಕಾರ್ಯವನ್ನು ಮಾಡುವುದರಿಂದಲೇ ಇತರ ಭಾಗಗಳು ತಮ್ಮತಮ್ಮ ಕಾರ್ಯ ಗಳನ್ನು ನೇರವಾಗಿ ಮಾಡುವಂತೆ ಗೊತ್ತುಮಾಡುವುದು ಮತ್ತು ಈ ಇತರ ಭಾಗಗಳೂ ತಮ್ಮತಮ್ಮ ಕಾರ್ಯಗಳನ್ನು ಮಾಡಿದಂತೆ ಪ್ರತಿಯೊಂದು ಭಾಗವೂ ತನ್ನ ತನ್ನ ಕಾರ್ಯದಲ್ಲಿ ವ್ಯವಸ್ಥೆಯನ್ನು ಹೊಂದುವುದು. ಇವುಗಳಲ್ಲಿ ಬ್ರಾಹ್ಮಣನ ಕರ್ಮವು ಲೋಕವ್ಯವಹಾರ ಕಾರ್ಯಗಳಂತಲ್ಲ. ಪರಸ್ಪರ ಸಹಾಯವಿಲ್ಲದೆ ಸುಖವು ಎಷ್ಟುಮಾತ್ರಕ್ಕೂ ಉಂಟಾಗುವುದಿಲ್ಲವಷ್ಟೆ! ಇದರಂತೆ ಪರಮಾತ್ಮನ ರಾಜ್ಯಾಧಿಕಾರ ವರ್ಗದವರಾದ ದೇವತೆಗಳು, ಭೂತಗಳು, ಪಿತೃದೇವತೆಗಳು, ಋಷಿಗಳು

ಮುಂತಾದವರು ಲೋಕಗಳನ್ನು ಕಾಪಾಡುತ್ತಾ, ಕಾಲಾನುಗುಣವಾಗಿ ವೃಷ್ಟಿ, ವಾತ, ಶಾಖಗಳನ್ನು ಕೊಟ್ಟು ಸಸ್ಯಾದಿಗಳನ್ನೂ ಪ್ರಾಣಿಗಳನ್ನೂ ರಕ್ಷಿಸುತ್ತಾ, ಜನಗಳಿಗೆ ಕರ್ಮಾನುಸಾರ ಫಲವನ್ನು ಕೊಡುತ್ತಾ, ಜನರಿಗೆ ಹಿತವನ್ನೆಸಗುತ್ತಾ ಅದೃಶ್ಯ ಪ್ರಪಂಚದಲ್ಲಿರುವರು. ಇವರು ಮಾಡುವ ಉಪಕಾರದ ಋಣವನ್ನು ತೀರಿಸುವ ಮುಖ್ಯ ಕರ್ತವ್ಯವು ಬ್ರಾಹ್ಮಣನ ಕಾರ್ಯವಾಗಿರುವುದು. ಈ ಕರ್ತವ್ಯಗಳನ್ನು 'ಮಾಡಲು ವೇದಾಧ್ಯಯನಮಾಡಿ ಗಾಯತ್ರೀದೇವಿಯನ್ನು ಉಪಾಸಿಸುತ್ತಾ ಆ ದೇವಿಯ ಅನುಗ್ರಹಕ್ಕೆ ಪಾತ್ರರಾಗಿ, ಅಗ್ನಿಹೋತ್ರಾದಿ ಕರ್ಮಗಳನ್ನು ನಿಯಮದಿಂದ ಮಾಡಿಕೊಂಡು ಸರ್ವಜೀವವರ್ಗದ ಶಾನ್ತಿ, ಪುಷ್ಟಿ, ತುಷ್ಟಿ ಗಳಿಗಾಗಿ ದುಡಿಯುವುದೇ ಬ್ರಾಹ್ಮಣನ ಜೀವಯಾತ್ರೆಯ ಮುಖ್ಯಕಾರ್ಯವು. ಈ ಕರ್ಮಾನುಷ್ಠಾನಗಳಿಂದ ಬ್ರಾಹ್ಮಣನಿಗೆ ಲೋಕವ್ಯವಹಾರಕ್ಕೆ ವಿಶೇಷ ಅವಕಾಶವಾಗುವುದಿಲ್ಲ. ಇಂತಹ ಕರ್ತವ್ಯವು ಅಗತ್ಯವಾಗಿ ಮಾಡಬೇಕೆಂಬ ಆಸ್ತಿಕತೆಯು ಕ್ಷತ್ರಿಯ, ವೈಶ್ಯ, ಶೂದ್ರರುಗಳಲ್ಲಿದ್ದುದರಿಂದಲೇ ಇದುವರೆಗೂ ಬ್ರಾಹ್ಮಣರನ್ನು ಪೋಷಿಸಿಕೊಂಡು ಬಂದಿರುತ್ತಾರೆ. ಬ್ರಾಹ್ಮಣರು ತಾವು ಮಾಡುವ ಕರ್ಮವು ದೇವತೆಗಳ ಪ್ರೀತ್ಯರ್ಥವಾಗಿಯೂ, ಇತರವರ್ಣದವರ ಹಿತಕ್ಕಾಗಿಯೂ, ಮತ್ತು ಲೋಕಹಿತಕ್ಕಾಗಿಯೂ ಮಾಡುವುದಾಗಿದೆ. ಅಲ್ಲದೆ ಬ್ರಾಹ್ಮಣರು ತಮ್ಮ ಕರ್ಮಾನುಷ್ಠಾನದಿಂದ ತಪಶ್ಶಕ್ತಿಯನ್ನು ಸಂಪಾದಿಸಿಕೊಂಡು ಇತರ ವರ್ಣದವರಿಗೂ ಧರ್ಮಬೋಧಕರಾಗಿರಬೇಕು.

ಕರ್ಮಕಾಂಡದ ನಿಯಮಗಳನ್ನನುಸರಿಸಿಕೊಂಡು ಕರ್ಮಕಾಂಡದ ಜೀವ ಯಾತ್ರೆಯಲ್ಲಿಯೇ ಇತರವರ್ಣದವರು ಇರಲು ಸಾಧ್ಯವಿಲ್ಲವೆಂದು ಕ್ಷತ್ರಿಯರಿಂದ ಶೂದ್ರವರ್ಣದವರಿಗೂ ಕರ್ಮಾಚರಣೆಯ ಭಾರವನ್ನು ತಗ್ಗಿಸುತ್ತಾ, ಅವರವರಿಗೆ ಯಾವ ಯಾವ ವಿಧದಲ್ಲಿ ಎಷ್ಟೆಷ್ಟು ಕರ್ಮಗಳನ್ನಾಚರಿಸಿದರೆ ಉತ್ತಮವಾಗು ವುದೋ ಅದನ್ನು ಸರ್ವ ಭೂತಹಿತವನ್ನೇ ಕೋರುವ ಈಶ್ವರಾಂಶ ಸಂಭೂತರಾದ ಜ್ಞಾನಿಗಳಿಂದ ಶಾಸ್ತ್ರಾಧಾರದಂತೆ ನಿರ್ಣಯಿಸಲ್ಪಟ್ಟ ಅನೂಚಾನವಾದ ಪದ್ಧ ತಿಯು ಈಗಲೂ ಅವರವರಲ್ಲಿ ಆಚರಣೆಯಲ್ಲಿರುವುದು. ಉತ್ತಮ ವರ್ಣದವರು ಇತರ ವರ್ಣದವರನ್ನು ತಮ್ಮ ಚಿಕ್ಕ ಸಹೋದರರಂತೆಯೇ ಭಾವಿಸಿ ಅವರವರಿಗೆ ತಕ್ಕಂತೆ ಶ್ರೇಯಸ್ಕರವಾದ ಸತ್ಕರ್ಮಗಳ ದಾರಿಯನ್ನು ಬೋಧಿಸಿ ಆಚರಣೆಗೆ ತಂದಿರುವ ಅನೂಚಾನವಾದ ಸತ್ಸಂಪ್ರದಾಯಗಳು ಶ್ರೇಯಸ್ಕರಗಳಾಗಿವೆ. ಸ್ವಾರ್ಥತೆ ಲೇಶವೂ ಇಲ್ಲದ ಲೋಕಹಿತವನ್ನೇ ಕೋರುವ ಉತ್ತಮವರ್ಣದ ಮಹಾತ್ಮರು ಪ್ರತಿವರ್ಣದವರಿಗೂ ವಿಶೇಷಪೂರ್ಣತೆಯೊಂದನ್ನು ಕೊಟ್ಟು ಯಾವ ಯಾವ ಕಾರ್ಯದಲ್ಲಿ ಯಾವ ಯಾವ ವರ್ಣದವರು ಸೇರಬೇಕೋ ಹಾಗೆ ಏಕೋದರ ರಂತೆ ಸೇರಿ ಏಕಹೃದಯರಾಗಿ ಲೋಕಯಾತ್ರೆಯ ಕಾರ್ಯಗಳನ್ನೂ ಪಾರಮಾರ್ಥಿಕ

ಕರ್ಮಗಳನ್ನೂ ನಡೆಸುತ್ತಿದ್ದರು. ಆಯಾಯ ವರ್ಣದವರ ಕರ್ತವ್ಯವನ್ನು ಮಾಡಿಸುತ್ತಾ ಕ್ಷತ್ರಿಯರು ಇತರವರ್ಣದವರಿಗೆಲ್ಲ ಮೂಲಸ್ತಂಭವಾಗಿದ್ದರು. ಕಾಲವೈಪರೀತ್ಯದಿಂದ ಭರತಖಂಡಕ್ಕೆ ಸಧ್ಯಃ ಈ ಒಂದು ಲೋಪಪ್ರಾಪ್ತವಾಗಿರುವುದರಿಂದಲೇ ಸಕಲಾನರ್ಥಗಳಿಗೂ ಕಾರಣವಾಗಿದೆ.

ಶೂದ್ರನೂಕೂಡ ಉತ್ತಮವರ್ಣದವರಂತೆ ನಿಯಮಿತವಾದ ತನ್ನ ಕರ್ಮಾಚರಣೆಯಲ್ಲಿರುತ್ತಾನೆ. ಶೂದ್ರರೂ ವೇದಪ್ರತಿಪಾದಿತವಾದ ಕರ್ಮದಿಂದ ಬಾಹ್ಯರಾಗಿಲ್ಲ. ಬ್ರಹ್ಮ, ಕ್ಷತ್ರಿಯ, ವೈಶ್ಯರು ಆಚರಿಸುವ ಮುಖ್ಯವಾದ ಶುಭ ಮತ್ತು ಅಶುಭ ಕರ್ಮಗಳನ್ನೂ ಕಠಿನನಿಯಮಗಳಿಲ್ಲದೆ ಒಂದು ವಿಧವಾದ ಸುಲಭೋಪಾಯದಲ್ಲಿ ಶೂದ್ರರೂ ಆಚರಣೆಯಲ್ಲಿಟ್ಟುಕೊಂಡಿರುವರು. ಒಬ್ಬ ಶೂದ್ರನು ಪ್ರಾತಃಕಾಲದಲ್ಲೆದ್ದು ಶುಚಿರ್ಭೂತನಾಗಿ ಸೂರ್ಯಾಭಿಮುಖವಾಗಿ ನಿಂತು ಕೈಮುಗಿದು 'ನೀನೇ ಪ್ರತ್ಯಕ್ಷದೇವರು ಕಾಪಾಡು' ಎಂದು ಪ್ರಾರ್ಥಿಸಿ ತನ್ನ ನಿತ್ಯ ಕಾರ್ಯಗಳಿಗೆ ಹೊರಡುತ್ತಾನೆ. ಸಾಯಂಕಾಲ ಜ್ಯೋತಿಸ್ವರೂಪವಾದ ದೀಪಕ್ಕೆ ಕೈಮುಗಿದು ಪ್ರಾರ್ಥಿಸುತ್ತಾನೆ. ದ್ವಿಜರು ಮಾಡುವ ಸಂಧ್ಯಾಕರ್ಮದ ಸಾರವು ಅವನಿಗೂ ಬಂದಂತಾಯಿತು.

ನನ್ನ ಪ್ರತ್ಯಕ್ಷಾನುಭವದ ಒಂದು ವಿಚಾರವನ್ನು ವಾಚಕರ ಮುಂದೆ ತಿಳಿಸುತ್ತೇನೆ ನಾನು ಒಂದು ಗ್ರಾಮಕ್ಕೆ ನನಗೆ ಬೇಕಾದ ರೈತನ ತೋಟಕ್ಕೆ ಹೋಗಿದ್ದೆನು. ರೈತನ ಹೆಂಡತಿಯು ಅಡಿಗೆಮಾಡಲು ಪ್ರಾರಂಭಿಸಿದ್ದಳು. ಕುದಿಯುವ ನೀರಿನೊಳಗೆ ಅಕ್ಕಿಯನ್ನು ಹಾಕುವುದಕ್ಕೆ ಮೊದಲು ಅಗ್ನಿಗೆ ಕೊಂಚ ಅಕ್ಕಿಯನ್ನುಹಾಕಿ ಕೈಮುಗಿದಳು. ಇದಕ್ಕೆ ಕಾರಣವೇನೆಂದು ನಾನು ಪ್ರಶ್ನೆ ಮಾಡಲು " ಬೆಂಕಿಯು ದೇವರಲ್ಲವೇಸ್ವಾಮಿ : ಊಟಮಾಡುವುದನ್ನು ಬೆಂಕಿಗೆ ಮೊದಲುಕೊಟ್ಟು ಆಮೇಲೆ ನಾವು ಅಡಿಗೆ ಮಾಡಬೇಕು " ಎಂದಳು. ಇದು ಪೂರ್ವಪದ್ಧತಿಯ ಮಹತ್ತನ್ನೇ ಪ್ರತಿಪಾದಿಸುವುದು ಆಕೆಯೂ ಅಗ್ನಿಯ ಉಪಾಸನೆಯ ಫಲವನ್ನು ಪಡದೇ ಪಡೆಯುವಳು. ಶೂದ್ರರೂ ಪ್ರತಿಯೊಂದು ಕಾರ್ಯದಲ್ಲಿಯೂ ದೇವರನ್ನು ಮುಂದಾಗಿಟ್ಟುಕೊಂಡು ಕಾರ್ಯಮಾಡುವಿಕೆಯ ಆಚರಣೆಯು ಇದ್ದೇ ಇದೆ ಆದುದರಿಂದ ಯಾವ ವರ್ಣದವರೂ ಕರ್ಮಬಾಹ್ಯರಲ್ಲ. ಮತ್ತು ವೇದಬಾಹ್ಯರಲ್ಲ. ಆದರೆ ವಿದ್ಯುಕ್ತ ಕರ್ಮಗತಿಯು ಬಹುಗಹನವಾಗಿರುವುದರಿಂದಲೂ, ಬಹು ನಿಯಮಗಳು ಇರುವದರಿಂದಲೂ ತಾರತಮ್ಯಾನುಸಾರ ನಾಲ್ಕು ವರ್ಣಗಳನ್ನು ಈಶ್ವರನು ಸೃಷ್ಟಿಸಿರುತ್ತಾನೆ ಮತ್ತು ಪಾರಂಪರ್ಯವಾಗಿಯೂ ಕರ್ಮಪದ್ಧತಿಯು ಅನುಸರಿಸಿಕೊಂಡು ಬಂದಿದೆ.

ಕರ್ಮಕಾಂಡದ ವಿಚಾರವನ್ನು ಮೇಲೆ ತಿಳಿಸಿತು. ಜ್ಞಾನಮಾರ್ಗಕ್ಕೆ ಸರ್ವರೂ ಅಧಿಕಾರಿಗಳು. ಪ್ರಪಂಚವಿಷಯಾದಿಗಳಲ್ಲಿ ವಿರಕ್ತರಾಗಿ ಶ್ರೋತ್ರಿ

ಯರಿಂದ ಆತ್ಮವಿಚಾರಮಾಡಿ ಮೋಕ್ಷಪಡೆಯಲು ಜನಸಾಮಾನ್ಯಕ್ಕೆಲ್ಲಾ ಅಧಿಕಾರವಿರುವುದು. ಬ್ರಾಹ್ಮಣನು ಕರ್ಮಮಾರ್ಗದಲ್ಲಿ ನಿರತನಾಗಿದ್ದರೂ ಜ್ಞಾನಮಾರ್ಗವನ್ನು ಅವಲಂಬಿಸದಿದ್ದರೆ ಕರ್ಮಠನೆಂದೆನಿಸಿಕೊಳ್ಳುವನು. ಆದುದರಿಂದ ಬ್ರಾಹ್ಮಣರಾದಿಯಾಗಿ ಸರ್ವರೂ ವೇದವಿಹಿತವಾದ ಅನೂಚಾನವಾದ ಸತ್ಸಂಪ್ರದಾಯದಂತೆ ತಳಪಾಯವಾದ ಕರ್ಮಮಾರ್ಗದಲ್ಲಿದ್ದುಕೊಂಡು, ತ್ರಿಕರಣ ಶುದ್ಧರಾಗಿ ಆಚಾರವಂತರಾಗಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಖಂಡಿತವಾಗಿ ಅವಕಾಶವಿದೆ. ಅಲ್ಲದೆ ಮಾಂಸಾದಿ ದುರಾಹಾರಗಳನ್ನೂ, ಬಲಿ, ಹನನಾದಿ ಕ್ರೂರಕಾರ್ಯಗಳನ್ನೂ ತ್ಯಜಿಸಿ ಉತ್ತಮಸ್ಥಿತಿಗೆ ಹತ್ತಲು ಸಹ ಅವಕಾಶವಿದೆ. ಆದುದರಿಂದ ವೇದಪ್ರತಿಪಾದಕವಾದ ವರ್ಣಾಶ್ರಮ ಧರ್ಮವು ಇಹಪರಗಳೆರಡಕ್ಕೂ ಉತ್ತಮ ಸಾಧಕವಾದ ಮಾರ್ಗವೇ ಹೊರತು ಕೇವಲ ನಂಬಿಕೆಮಾತ್ರದಿಂದ ನಡೆಯುವಿಕೆಯೂ ಅಲ್ಲ ಮತ್ತು ಉತ್ಕೃಷ್ಟ ನಿಕೃಷ್ಟಗಳೆಂಬ ಭೇದಭಾವವುಳ್ಳದುದೂ ಅಲ್ಲ. ಅಲ್ಲದೆ ವರ್ಣಾಶ್ರಮ ಸಮಾಜವು ಜನರ ಪರಸ್ಪರ ಹೋರಾಟಕ್ಕಾಗಿ ಏರ್ಪಟ್ಟಿರುವ ರಂಗಸ್ಥಳವಾಗಿ ಈಶ್ವರನು ಎಂದಿಗೂ ಮಾಡಿಲ್ಲ. ಯಾವ ವರ್ಣದವರೂ ಇತರ ವರ್ಣದವರೊಡನೆ ಹೋರಾಡಲು ಅವಕಾಶಕ್ಕೆ ಕಾರಣವೂ ಇಲ್ಲ. ತಲೆಯು ಕೈಕಾಲುಗಳೊಡನೆ ಎಂದಿಗೂ ಜಗಳವಾಡುವುದಿಲ್ಲ. ಕೈಕಾಲುಗಳು ಉದರದ ಸಹಾಯವಿಲ್ಲದೆ ಜೀವಿಸಲು ಸಾಧ್ಯವೇಇಲ್ಲ ಅನ್ಯೋನ್ಯ ಸಹಾಯವೇ ಪಿಂಡಾಂಡ ಬ್ರಹ್ಮಾಂಡಗಳ ಮೂಲತತ್ವ ಈ ಅನ್ಯೋನ್ಯ ಸಹಾಯದ ತತ್ವವೇ ವರ್ಣಾಶ್ರಮದತತ್ವ. ಪ್ರತಿಯೊಬ್ಬರ ಶ್ರೇಯಸ್ಸೂ ಮತ್ತೊಬ್ಬರ ಶ್ರೇಯಸ್ಸಿಗೆ ಸಾಧನಭೂತವಾಗುವಂತೆ ಈಶ್ವರನು ರಚಿಸಿರುವ ಕ್ರಮವು ಕೇವಲ ನಮ್ಮ ಶ್ರೇಯಸ್ಸಿಗಾಗಿಯೆ ಆಗಿದೆ

ಪೂರ್ಣವಾದ ತಿಳಿವಳಿಕಯನ್ನು ಪಡೆದಿರುವವರು ಈಶ್ವರನ ನಿಯಾಮಕವಾಗಿ ಅನೂಚಾನವಾಗಿ ಬಂದ ಸತ್ಕರ್ಮ ಮತ್ತು ಜ್ಞಾನಗಳ ವಿಚಾರಗಳಲ್ಲಿ ಸಂತುಷ್ಟರಾಗಿ ಪೂರ್ಣಕುಂಭದಂತೆ ಗಂಭೀರ ಚರಿತರಾಗಿರುವರು. ಮೂಢಭಕ್ತಿಯಿಂದಿರುವ ಪ್ರಥಮಾಭ್ಯಾಸಿಗಳು ಸನಾತನವಾಗಿ ಬಂದುದನ್ನು ನಂಬಿ ಅದನ್ನನುಸರಿಸಿಕೊಂಡು ಅಭಿವೃದ್ಧಿಗೆಬಂದರೆ ಪೂರ್ಣತಿಳಿವಳಿಕೆಯುಳ್ಳವರಾಗುವರು ಹಾಗೆ ಅಂತ್ಯದವರೆಗೂ ಅನುಸರಿಸದಿದ್ದರೆ ಅಪೂರ್ಣಜ್ಞಾನವಾಗಿ ಅರ್ಧಕೊಡದ ಉದಾಹರಣೆಯುಂತಾಗುವುದು. ತುಂಬಿದಕೊಡ ತುಳುಕುವುದಿಲ್ಲವೆಂಬ ಗಾದೆಯಂತೆ ಕುಂಭದಲ್ಲಿ ಪೂರ್ಣವಾಗಿ ಜಲವಿಲ್ಲದಿದ್ದರೆ ಅತಿಯಾದ ಶಬ್ದವುಂಟಾಗುವುದಲ್ಲದೆ ತೆಗೆದುಕೊಂಡು ಹೋಗಲು ಬಹುತೊಂದರೆಯುಂಟಾಗುವುದು. ಇದರಂತೆ ಅಪೂರ್ಣವಾದ ತಿಳಿವಳಿಕೆಯ ಸ್ಥಿತಿಯಿಂದಲೇ ಸರಿಯಾದ ರಾಜಮಾರ್ಗವನ್ನು ಬಿಟ್ಟು ಅಡ್ಡದಾರಿಗಳಿಗೆ ಹೋಗುವ ಕಾಲವಾಗಿದೆ. ಹೀಗೆ ಅಪೂರ್ಣಜ್ಞಾನದಿಂದ

ಅಡ್ಡದಾರಿಗಳಿಗೆ ಪ್ರವೇಶಮಾಡಿ ಬಲಿಷ್ಠರಾಗಿ ಜನಗಳನ್ನು ತಮ್ಮ ಅನುಯಾಯಿಗಳನ್ನಾಗಿ ಸೇರಿಸಿಕೊಂಡು ಅನೇಕ ಮತಗಳನ್ನು ಸ್ಥಾಪಿಸಿರುವರು. ಪರಸ್ಪರ ವೈಷಮ್ಯಕ್ಕೂ ಅಪೂರ್ಣತಿಳಿವಳಿಕೆಯೇ ಕಾರಣವಾದ್ದರಿಂದ ಕೆಲವು ಮತಗಳು ವೈಷಮ್ಯದಿಂದಲೇ ಉದ್ಭವಿಸಿದವುಗಳಾಗಿವೆ ಚಾತುರ್ವರ್ಣದಲ್ಲಿ ಪ್ರತಿಯೊಂದು ವರ್ಣದವರೂ ಇತರ ವರ್ಣದವರೊಡನೆ ಸಹಾನುಭೂತಿಯನ್ನು ಹೊಂದಿ ಅನುವರ್ತಿಸಿಕೊಂಡಿರದೆ ವೈಷಮ್ಯದಿಂದ ಜನಿಸಿದವುಗಳೇ ವಿವಿಧ ಮತಗಳಾಗಿವೆ. ಇದಕ್ಕೆ ಕಲಿಯುಗದ ಧರ್ಮವೆಂತಲೇ ಹೇಳಬೇಕಾಗುವುದು. ಕಲಿಪುರುಷನಲ್ಲಿ ಮತಗಳು ನೀರಿನಗುಳ್ಳೆಯಂತೆ ಹುಟ್ಟಿ ಲಯವಾಗುವುವು. ರಾಜಮರ್ಯಾದೆಯನ್ನು ಉಲ್ಲಂಘಿಸಿದವರನ್ನು ರಾಜದ್ರೋಹಿಗಳೆಂದು ಕರೆಯುವಂತೆ ಬ್ರಾಹ್ಮಣಿಕೆಯ ಕರ್ಮಜ್ಞಾನ ಮಾರ್ಗಗಳಿಗೆ ಅನುವರ್ತಿಯಾಗಿರದೆ ಉಲ್ಲಂಘಿಸಿಯೂ, ವೇದಗಳಿಗೆ ಅಪಾರ್ಥಮಾಡಿಯೂ ಇರುವ ಪಂಗಡಗಳಿಗೆ ಸೇರಿದವರನ್ನು ವೇದಬಾಹ್ಯರಂದೂ, ಪಾಷಂಡಿಗಳೆಂದೂ ಮಹಾತ್ಮರು ಭಾವಿಸುವರು.

ಮುಖ್ಯವಾಗಿ ಕರ್ಮಜ್ಞಾನಕಾಂಡಗಳೆರಡೂ ಭಾರತಮಾತೆಯ ಎಡಬಲ ಭುಜಗಳಾಗಿ ನಮ್ಮ ಭರತಭೂಮಿಯ ನಿಧಿಗಳಾಗಿವೆ ಇವು ತಮ್ಮ ಜೀವಮಾನವನ್ನೆಲ್ಲಾ ಧಾರೆಯೆರದು ವೇದಮಾತೆಯಾದ ಗಾಯತ್ರೀದೇವಿಯ ಅನುಗ್ರಹಕ್ಕೆ ಪಾತ್ರರಾಗಿ ಅಗ್ನಿಹೋತ್ರ ಮುಂತಾದ ಕರ್ಮಗಳ ತಪಶ್ಶಕ್ತಿಯನ್ನು ಹೊಂದಿ ಜ್ಞಾನಾಮೃತವನ್ನು ಪಾನಮಾಡಿ ಈಶ್ವರಾನುಗ್ರಹದಿಂದ ಸಂಪಾದಿಸಲ್ಪಟ್ಟ ಮಹಾತ್ಮರ ನಿಧಿಗಳು. ಈ ನಿಧಿಗಳೇ ಪ್ರಪಂಚದ ಎಲ್ಲಾ ಕಡೆಯಿಂದಲೂ ಭರತಖಂಡಕ್ಕೆ ಗೌರವವನ್ನು ತಂದಿರುವುವು ಮತ್ತು ಮುಂದೆಯೂ ಗೌರವವನ್ನು ತರುವವುಗಳಾಗಿವೆ ಈ ನಿಧಿಯನ್ನು ಕಳೆದುಕೊಂಡರೆ ಭಾರತೀಯರು ನಿರ್ಜೀವಿಗಳು. ಜ್ಞಾನಕರ್ಮಕಾಂಡಗಳಲ್ಲಿ ಕರ್ಮಕಾಂಡದ ಮಹತ್ತು ಹೊರಗಿನವರಿಗೆ ತಿಳಿಯಲು ಸುಲಭಸಾಧ್ಯವಲ್ಲ. ನಮಗೆ ಭಾರತೀಯರೆಂದು ಹೆಸರು ಬರಲು ಕಾರಣವೇನೆಂದರೆ:— 'ಭಾ' ಎಂದರೆ ತೇಜಸ್ಸು ಇದರಲ್ಲಿ (ರತ) ನಿರತರಾಗಿರುವರೆಂದರ್ಥ ಅಂದರೆ ಜ್ಞಾನಾವಿಲಂಬಿಗಳೆಂದರ್ಥ. ಭಾರತ ಎನ್ನುವುದಕ್ಕೆ ಎರಡನೆಯ ಅರ್ಥವೇನೆಂದರೆ 'ಬಿಭರ್ತಿ ಭರಃ' ಹೊತ್ತಿರುವುದೆಂದರ್ಥ. ಕ್ರಿಯಾರೂಪವೇ ಪ್ರಪಂಚದ ಇರುವಿಕೆಯಾಗಿದೆ ಆದುದರಿಂದ ವೇದವಿಹಿತ ಕರ್ಮವನ್ನು ಧರಿಸಿ ಅದರಲ್ಲಿ ನಿರತರಾಗಿರುವುದರಿಂದ ನಮಗೆ 'ಭಾರತೀಯ'ರೆಂದು ಹೆಸರು. ಭರತ ಭೂಮಿಯಲ್ಲಿ ಎಲ್ಲೆಲ್ಲಿ ನೋಡಿದರೂ ದೇವತೆಗಳ ಆರಾಧನೆಗೋಸ್ಕರ ಅಗ್ನಿಹೋತ್ರಗಳೂ, ವ್ರತಾಚರಣೆಗಳೂ, ಜಪಹೋಮಾದಿಗಳೂ ತುಂಬಿತುಳುಕುತ್ತಿದ್ದುದು ಖಿಲವಾಗುತ್ತ ಬಂದಿದೆ. ಕಾಲವೈಪರೀತ್ಯದಿಂದ ಬ್ರಾಹ್ಮಣರಲ್ಲಿ ವಿಧವಿಧವಾದ ವಾದವಿವಾದಗಳ ಗೊಂದಲಗಳಂಕುರಿಸಿ ಏಕಮತವಾಗಿದ್ದುದು

ಛಿದ್ರಛಿದ್ರಗಳಾಗಿ ಕರ್ಮಮಾರ್ಗದ ಜೀವಶಕ್ತಿಯನ್ನೇ ಮರೆಯುತ್ತಾ ಬಂದಿರುವುದು ಅಲ್ಲದೆ ನಮ್ಮಲ್ಲಿ ಅನೇಕರಿಗೆ ವೇದದ ಮತ್ತು ಭರತಖಂಡದ ಮಹಿಮೆಯ ವಿಚಾರವೇ ಗೊತ್ತಿಲ್ಲ ಮತ್ತು ತಿಳಿಯಲು ಪ್ರಯತ್ನವೂ ಪಡುತ್ತಿಲ್ಲ ಭರತಖಂಡದ ಸಂಗೀತವಿದ್ಯೆಯಲ್ಲಿನ ಒಂದು ವೀಣೆಯು ಇಂತಹ ಮಹತ್ತಿನ ತತ್ವಗಳನ್ನೊಳಗೊಂಡಿರುವಾಗ ಭಾರತಮಾತೆಯು ತನ್ನ ಮಕ್ಕಳಿಗೆ ಎಂತೆಂತಹ ಮಹತ್ವವುಳ್ಳ ಸಲಕರಣೆಗಳನ್ನು ಕೊಟ್ಟಿರುವಳೋ ಅವುಗಳನ್ನೆಲ್ಲಾ ಭಾರತಸುತರೇ ಸಾವಧಾನದಿಂದ ಯೋಚಿಸಿಕೊಳ್ಳಲಿ. ಭಾರತಮಾತೆಯೂ ವೇದಮಾತೆಯಾದ ಗಾಯತ್ರೀದೇವಿಯೂ ಒಬ್ಬಳೇ. ಅವಳ ಅನುಗ್ರಹದಿಂದ ಈಶ್ವರೀವಿದ್ಯೆಯಾದ ವೇದವು ಎಂದಿಗೂ ನಶಿಸುವುದಿಲ್ಲ ವೇದವಿದ್ಯೆಗೆ ಯಾವಾಗ ಗ್ಲಾನಿಯುಂಟಾಗುವುದೋ ಆಗ ದೇವತಾ ಅವತಾರವಾಗಿಯೇ ಆಗಿ ಧರ್ಮಸಂಸ್ಥಾಪನೆಯಾಗುವುದು. ಬೌದ್ಧಮತವು ಉಲ್ಬಣವನ್ನು ಹೊಂದಿದಾಗ ಈಶ್ವರನು ಶ್ರೀಶಂಕರಾಚಾರ್ಯರಾಗಿ ಅವತರಿಸಿ ವೇದಧರ್ಮವಾದ ಭಾರತಧರ್ಮವನ್ನೇ ಉದ್ಧಾರಮಾಡಿದರು. ಭಾರತಜನಾಂಗವು ತಮ್ಮ ಉಚ್ಚ ಧ್ಯೇಯವಾದ ಕರ್ಮಜ್ಞಾನಾವಲಂಬನೆಗಳನ್ನು ಚೆನ್ನಾಗಿ ಧರಿಸಿ ಪ್ರಪಂಚಕ್ಕೆಲ್ಲಾ ಭರತಖಂಡವು ಗುರುಸ್ಥಾನವನ್ನು ಹೊಂದುವ ಧ್ಯೇಯವನ್ನೇ ಮುಂದಾಗಿಟ್ಟುಕೊಂಡು ಭಾರತ ಸ್ವಾತಂತ್ರ್ಯಕ್ಕೂ ಅಭ್ಯುದಯಕ್ಕೂ ಪ್ರಯತ್ನಿಸುತ್ತಾ ಬಂದರೆ ಭಾರತಮಾತೆಯು ತನ್ನ ಸುಪುತ್ರರ ಉದ್ದೇಶಕ್ಕೆ ಸಹಾಯಕಳಾಗುವಳು.

ಪ್ರಣವ ಚೈತನ್ಯನು ಭಾರತಸುತರಿಗೆ ವೇದವಿಹಿತ ಕರ್ಮಾಸಕ್ತಿಯನ್ನು ಅನುಗ್ರಹಿಸಿ ಸಂಶಯಗ್ರಸ್ತ ವರ್ತನೆಗಳನ್ನು ತೊಲಗಿಸಿ, ಸರ್ವತ್ರ ಶ್ರೇಯಸ್ಸನ್ನೀಯಲೆಂದೂ, ತನ್ನನ್ನು ತಾನು ತಿಳಿಯುವ ಮಾರ್ಗವನ್ನು ತೋರಿಸಿ ಸಲಹಲೆಂದೂ, ಅನನ್ಯಭಾವದಿಂದ ಅನವರತ ಪ್ರಾರ್ಥಿಸುತ್ತಲೂ, ಯಾವ ಸಪ್ತಮಾತೃಕಾಂಬಾ ಅನುಗ್ರಹವು ಈ ಲೇಖನಕ್ಕೆ ಕಾರಣವೋ ಆ ಜಗನ್ಮಾತೆಗೆ ನಮಸ್ಕರಿಸುತ್ತಲೂ, ಶ್ರೀವಿದ್ಯಾರಣ್ಯಗುರುಗಳವರು ಜನ್ಮಾಂತರದಲ್ಲಿಟ್ಟ ಅನುಗ್ರಹವಾದ ಬೀಜದಮೊಳಕೆಯ ಅಭಿವೃದ್ಧಿಯೇ ಈ ಗ್ರಂಥರೂಪವಾಗಿರುವುದರಿಂದ ಆ ವಿದ್ಯಾರಣ್ಯಗುರುಗಳವರಿಗೆ ನಮಸ್ಕರಿಸುತ್ತಲೂ ಸಂಧ್ಯಾವೀಣಾ ತತ್ವಾರ್ಥವೆಂಬ ಈ ಗ್ರಂಥವನ್ನು ಇಲ್ಲಿಗೆ ಪೂರ್ಣಮಾಡುವೆನು

ಓಂಕಾರಂ ಬಿಂದುಸಂಯುಕ್ತಂ ನಿತ್ಯಂಧ್ಯಾಯನ್ತಿ ಯೋಗಿನಃ ।
ಕಾಮದಂ ಮೋಕ್ಷದಂ ತಸ್ಮಾದೋಂಕಾರಾಯ ನಮೋನಮಃ ॥

**ಓಂ ತತ್ಸತ್.**



ಶ್ರೀಃ

ಈ ಗ್ರಂಥದ ಮತ್ತು ಈ ಗ್ರಂಥದಲ್ಲಿ ಉದಹರಿಸಿರುವ **ಶ್ರೀಮದ್ರಾಮಾಯಣದ ಅಂತರಾರ್ಥ ಗ್ರಂಥದ** ವಿಚಾರದಲ್ಲಿ ಅನೇಕ ಮಹನೀಯರು ಸಂತೋಷಪಟ್ಟಿರುವರು ಹೀಗೆ ಸಂತೋಷಪಟ್ಟಿರುವುದು ಈ ಗ್ರಂಥಗಳಿಗೆ ಕಾರಣವಾದ ಆ ಸದ್ಗುರುಗಳ ಅನುಗ್ರಹಕ್ಕೂ, ಶ್ರೀರಾಮೇಶ್ವರನ ಮತ್ತು ಶ್ರೀ ಸಪ್ತಮಾತೃಕಾಂಬಾ ಕರುಣಾಕಟಾಕ್ಷಕ್ಕೂ ನೇರಿದುದಲ್ಲದೆ ಅನ್ಯಥಾ ಇಲ್ಲ. ಆದುದರಿಂದ ಆ ಸದ್ಗುರು ಮತ್ತು ದೇವತಾಮಹಿಮೆಯನ್ನು ಈ ಮೂಲಕವೂ ಕೊಂಡಾಡಲು ಮಹನೀಯರು ಸಂತೋಷದಿಂದ ದಯಪಾಲಿಸಿರುವ ಅಭಿಪ್ರಾಯಗಳನ್ನು ಕಡೆಗೆ ಕೊಟ್ಟಿದೆ

**ಶ್ರೀಮದ್ರಾಮಾಯಣದ ಅಂತರಾರ್ಥಗ್ರಂಥ**ವನ್ನು ಶ್ರೀಮತ್ಪರಮಹಂಸ ಇತ್ಯಾದಿ ಬಿರುದಾಂಕಿತರಾದ ಶ್ರೀಶೃಂಗೇರೀ ಪೀಠವನ್ನಲಂಕರಿಸಿರುವ **ಶ್ರೀಮಜ್ಜಗದ್ಗುರು ಶ್ರೀ ಚಂದ್ರಶೇಖರಭಾರತೀ** ಮಹಾಸ್ವಾಮಿಗಳವರ ಚರಣಕಮಲ ಸನ್ನಿಧಾನಂಗಳಲ್ಲಿ ಶ್ರೀ ಗುರುಗಳವರ ಅನುಜ್ಞೆಯನ್ನು ಪಡೆದು ಭಕ್ತಿಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ ಅಲ್ಲದೆ ಈ ಗ್ರಂಥವಿಚಾರದಲ್ಲಿ **ಶ್ರೀ ಜಗದ್ಗುರು ಶ್ರೀ ಚಂದ್ರಶೇಖರಭಾರತೀ** ಮಹಾಸ್ವಾಮಿಗಳವರ ಅನುಗ್ರಹವಾದ ಅಭಿಪ್ರಾಯವೇನೆಂದರೆ —"ಈ ಗ್ರಂಥರಚನೆಯಲ್ಲಿ ನೀವು ತೋರಿಸಿರುವ ಅತಿಶಯವಾದ ಅನುಭವವನ್ನೂ, ಭಕ್ತಿವಿಶೇಷವನ್ನೂ ನೋಡಿ ಅತ್ಯಂತ ಸಂತೋಷಪಟ್ಟು, ಪರಮಶ್ರೇಯಸ್ಸುಂಟಾಗಬೇಕೆಂದು ಅನುಗ್ರಹಿಸಿರುತ್ತಾರೆ."

---

ಮೈಸೂರು ಶ್ರೀಮನ್ಮಹಾರಾಜರವರ ಆಸ್ಥಾನದ ಧರ್ಮಾಧಿಕಾರಿಗಳಾಗಿ ಮಹಾವಿದ್ವಾನ್ ಮಹಾ ಮಹೋಪಾಧ್ಯಾಯ ವಿದ್ಯಾನಿಧಿ ವಿದ್ಯಾವಾಚಸ್ಪತಿ **ವೇ|| ಬ್ರಹ್ಮಶ್ರೀ|| ವಿರೂಪಾಕ್ಷಶಾಸ್ತ್ರಿಗಳೆಂಬ** ನಾಮಾಂಕಿತದಿಂದಿದ್ದು ಸನ್ಯಾಸಾಶ್ರಮ ಸ್ವೀಕರಿಸಿ ಶ್ರೀಕೂಡಲಿಶೃಂಗೇರೀ ಪೀಠವನ್ನಲಂಕರಿಸಿದ್ದ ಶ್ರೀಮತ್ಪರಮಹಂಸ ಇತ್ಯಾದಿ ಬಿರುದಾಂಕಿತರಾದ ಶ್ರೀಮಜ್ಜಗದ್ಗುರು **ಶ್ರೀವಿದ್ಯಾಭಿನವ ವಾಲುಕೇಶ್ವರ ಭಾರತೀ ಮಹಾಸ್ವಾಮಿಗಳವರ** ಅನುಗ್ರಹಪೂರ್ವಕವಾದ ಅಭಿಪ್ರಾಯವು

**ಸಂಧ್ಯಾವೀಣಾತತ್ವಾರ್ಥಗ್ರಂಥ** ವಿಚಾರದಲ್ಲಿ

"ಶ್ರುತಿಸ್ಮೃತ್ಯಾದಿ ಪ್ರಮಾಣಾವಿರೋಧೇನ ಪರದೇವತಾ ಪರಮಾನುಗ್ರಹ ಮಾತ್ರ ಸಂಸ್ಫುರಿತ ಸದ್ಯುಕ್ತಿನಿಚಯೇನ ವಿರಚಿತಃ **ಸಂಧ್ಯಾವೀಣಾತತ್ವಾರ್ಥ** ನಾಮಕೋಽಯಂ ಗ್ರಂಥಃ ಸಮ್ಯಗ್ವ್ಯಲೋಕೀ। ಅತ್ರ ಅನೇಕ ದುರವಗಾಹಾ ವಿಷಯಾಃ ಪ್ರತಿಪಾದಿತಾಃ। ಕಿಂಚಾಸ್ಮಿನ್ಗ್ರಂಥೇ ವಾಣೀಪಾಣಿಸ್ಥ ವೀಣಾದಂಡಃ ಗಾಯತ್ರೀ ಸಮತಯಾ ಶ್ಲಾಘತಯಾ ನಿರೂಪಿತಃ। ಅಪಿಚ ಶಾಸ್ತ್ರಾನುಸಾರೇಣ ವೇದಾಪೌರುಷೇಯತ್ವಂ ಸಮ್ಯಕ್ ನಿರೂಪಿತಂ। ಏತದ್ಗ್ರಂಥಕರ್ತುಃ ಏತಾದೃಶ ಗ್ರಂಥರಚನಾಶಕ್ತಿಃ ದೇವತಾನುಗ್ರಹ ಬಲಾದೇವ ಸಂಜಾತಾ ನಾನ್ಯಥೇತಿ ಮನ್ಯಾಮಹೇ। ಅಯಂಗ್ರಂಥಃ ಸಕಲ ಜನಾನಾಮಾನಂದದಾಯಕೋ ವರ್ತತ ಇತಿ ದೃಢ ಮಾವೇದಯಾಮಃ॥"

**ಶ್ರೀಮದ್ರಾಮಾಯಣ ಅಂತರಾರ್ಥಗ್ರಂಥ** ವಿಚಾರದಲ್ಲಿ

ಶ್ರೀಮದಗಣಿತ ಗುಣಮಣಿ ಗಣಾಲಂಕೃತ ರುಚಿರತರ ಶುಭಸ್ವರೂಪ ಶ್ರೀರಾಮ ದಿವ್ಯಚರಿತಂ ವರ್ಣಯಿತುಂ ಕಃ ಶಕ್ನೋತಿ? ಶ್ರೀಮದಾದಿ ಶೇಷಾಣಾಮಪಿ ಅಸಾಧ್ಯವರ್ಣನಂ ಪಾವನಚರಿತಂ ಶ್ರೀಮದ್ರಾಮಾಯಣಂ ಅಹಂ ವರ್ಣಯಾಮೀತಿ ಯೋ ಅಭಿಮನ್ಯತೆ, ಸ ಹಾಸ್ಯಾಸ್ಪದಂ ವಿದುಷಾಂ ನಿರಂತರಾ ಮನಸ್ಕ ಸಮಾಧಿಪರಿಪೂರ್ಣ। ಪರಮಯೋಗೀಂದ್ರಹೃದಯ ಕರ್ಣಿಕೋಪರಿಸ್ಥಿತ ಜಗತ್ಪವಿತ್ರೀಕುರ್ವದದ್ಭುತ ಮಹಾಪ್ರಭಾವಪದ ಶ್ರೀರಾಮತತ್ವ ವಿಜ್ಞಾನೇ ಶ್ರೀಮದ್ರಾಮಾಯಣಾಂತರಾರ್ಥ ಪ್ರಕಾಶಕೋ ಅಯಂಗ್ರಂಥಃ ಸುಲಭೋಪಾಯ ಏವಭವೇತ್.

ಸರ್ವ ವೇದಾಂತ ವಾಕ್ಯಾನಾಂ ಬ್ರಹ್ಮಣ್ಯೇವ ಮಹಾತಾತ್ಪರ್ಯಮಿತಿ ಭಗವತ್ಪಾದೈಃ ಶ್ರೀಮಚ್ಛಂಕರಾಚಾರ್ಯ ಸ್ವಾಮಿಭಿಃ ಅಭಿದಾನಾದಯಂ ಗ್ರಂಥೋ ಅಪಿ ಬ್ರಹ್ಮತತ್ವ ಪ್ರತಿಪಾದನ ಪರತ್ವಾತ್ ಶಾಸ್ತ್ರಾನು ರೋಧ್ಯೇ ವೇತ್ಯಸ್ಮಾಕ ಮಾಶಯಃ



ಶ್ರೀಮೇಲುಕೋಟೆ ಯತಿರಾಜಮಠದ ಪೀಠಸ್ಥರಾದ ಶ್ರೀಮತ್ಪರಮಹಂಸೇತ್ಯಾದಿ ಬಿರುದಾಂಕಿತರಾದ **ಶ್ರೀಯತಿರಾಜ ಸಂಪತ್ಕುಮಾರ ರಾಮಾನುಜ** ಸ್ವಾಮಿಗಳವರ ಅನುಗ್ರಹವಾದ ಅಭಿಪ್ರಾಯವು.

**ಶ್ರೀಮದ್ರಾಮಾಯಣದ ಅಂತರಾರ್ಥ** ಎಂಬ ಗ್ರಂಥವನ್ನು ಅನೇಕ ಸ್ಥಳಗಳಲ್ಲಿ ವಿಚಾರಮಾಡಿ ನೋಡಿದೆವು. ಅಂತರಾರ್ಥವು ಉಪನಿಷತ್ತು ಮುಂತಾದ ಪ್ರಮಾಣದ ಆಧಾರದಮೇಲೆ ರಾಮಾಯಣದ ವಾಕ್ಯಗಳನ್ನು ಸಮ ಗೂಡಿಸಿ ವಿಚಾರಮಾಡಲ್ಪಟ್ಟಿದೆ. ಈ ವಿಧವಾದ ರಾಮಾಯಣದ ಅಂತರಾರ್ಥ

ನಿರೂಪಣೆಮಾಡಿದ ಗ್ರಂಥವು ಇದೇ ಮೊದಲನೆಯದಾಗಿರುತ್ತೆ. ಈ ವಿಧವಾದ ಪ್ರಯತ್ನವು ನಿಮಗೆ ಉಂಟಾಗುವುದಕ್ಕೆ ಜನ್ಮಾಂತರದ ಸುಕೃತವಿಶೇಷವು ಮೂಲವಾಗಿ ಸದ್ಗುರುಗಳ ಅನುಗ್ರಹವು ವೃದ್ಧಿಗೆ ಕಾರಣವಾಗಿರುತ್ತೆ. ಕಥಾಭಾಗವಲ್ಲದೆ ತತ್ವಾರ್ಥವನ್ನು ಅಪೇಕ್ಷಿಸುವವರಿಗೆ ಈ ಗ್ರಂಥವು ಸುಲಭವಾಗಿ ಮಾರ್ಗವನ್ನು ತೋರಿಸುತ್ತದೆ. ಇದನ್ನು ನೋಡಿ ನಾವು ಬಹಳ ಸಂತೋಷಪಟ್ಟೆವು. ರಾಮಾಯಣಪ್ರತಿಪಾದ್ಯನಾದ ಶ್ರೀರಾಮಚಂದ್ರಭಗವಂತನು ನಿಮ್ಮ ಭಕ್ತಿಗೆ ಮೆಚ್ಚಿ ನಿಮಗೆ ಇಹಪರ ಸೌಖ್ಯಗಳನ್ನು ಉಂಟುಮಾಡಲೆಂದು ಮಾಡುವ ಮಂಗಳಾಶಾಸನ.

**ಸಂಧ್ಯಾವೀಣಾತತ್ವಾರ್ಥಗ್ರಂಥ ವಿಚಾರದಲ್ಲಿ :—**

ಗಾಯತ್ರೀ ಮಪಿವಲ್ಲಕೀ ಮುಮುತಾಂ ದೇಹಾಸ್ಥಿನಿಶ್ರೇಣಿಕಾಂ |
ಪರ್ಯಾವೃತ್ಯಧಿಯೈಕ ಯೋನಿ ಭವತಾಂ ತಸ್ಯತ್ರಿಕಸ್ಯಸ್ವತಃ ||
ವಿಜ್ಞಾಯ ಶ್ರುತಿಮಂತ್ರಯೋಗ ಭರತಾಚಾರ್ಯಾಗಮ ಪ್ರಕ್ರಿಯಾ |
ಪಿಂಡೀಕೃತ್ಯ ನಿದರ್ಶನೈ ರ್ವ್ಯವೃಣುತ ಶ್ರೀ ಸುಬ್ಬರಾಯಃಕೃತೀ ||

---

ಶ್ರೀ ಜಗದ್ಗುರು ಶ್ರೀ ಶಂಕರಾಚಾರ್ಯ ದಕ್ಷಿಣಾಮ್ನಾಯ ಶ್ರೀ ಶೃಂಗೇರೀ ಶಾಖಾಮಠ ಶ್ರೀ ಶಿವಗಂಗಾ ಸಂಸ್ಥಾನದ ಪೀಠಾಧಿಷ್ಠಿತರಾದ ಶ್ರೀ ಮತ್ಪರಮಹಂಸೇತ್ಯಾದಿ ಬಿರುದಾಂಕಿತರಾದ ಶ್ರೀ ಸಚ್ಚಿದಾನಂದಾಭಿನವ **ಗಂಗಾಧರ ಸುಬ್ರಹ್ಮಣ್ಯಭಾರತೀ** ಮಹಾಸ್ವಾಮಿಗಳವರು ಅನುಗ್ರಹಿಸಿ ಕೊಟ್ಟಿರುವ ಅಭಿಪ್ರಾಯವು.

ನೀವು ಸಮರ್ಪಿಸಿದ "**ಶ್ರೀಮದ್ರಾಮಾಯಣದ ಅಂತರಾರ್ಥ**" ಎಂಬ ಪುಸ್ತಕವನ್ನು ಪರಾಮರ್ಶಿಸಿದುದಾಯಿತು. ಶ್ರೀರಾಮಚಂದ್ರಮೂರ್ತಿಯ ಮಹಿಮಾತಿಶಯಗಳನ್ನು ಮತ್ತು ಶ್ರೀರಾಮಚರಿತ್ರೆಯಲ್ಲಿರುವ ಅರ್ಥವನ್ನು ವ್ಯಕ್ತಗೊಳಿಸುವ ಗ್ರಂಥಗಳು ಇದುವರೆಗೆ ಅನೇಕವಿದ್ವಾಗ್ಯೂ ಶ್ರೀಮದ್ವಾಲ್ಮೀಕಿ ರಾಮಾಯಣದ ಶ್ಲೋಕದಿಂದಲೇ ದುರವಗಾಹವಾದ ವೇದಾಂತಾರ್ಥವನ್ನು ಹೊರಸೂಸಿ ಜನಸಾಮಾನ್ಯಕ್ಕೂ ತಿಳಿಯುವಂತೆ ತುಂಬಾ ಕಷ್ಟಪಟ್ಟು ರಚಿಸಿರುವ ನಿಮ್ಮ ಈ ಮಹದ್ಗ್ರಂಥವು ಶಾಶ್ವತವಾಗಿ ಪ್ರಪಂಚದಲ್ಲಿ ಪ್ರಚುರವಾಗಿರಲೆಂಬುದಾಗಿಯೂ, ಭಗವಂತನು ನಿಮಗೆ ಆಯುರಾರೋಗ್ಯಗಳನ್ನು ಕಲ್ಪಿಸಲೆಂಬುದಾಗಿಯೂ ಶ್ರೀ ಶಾರದಾಚಂದ್ರಮೌಳೀಶ್ವರರನ್ನು ಪ್ರಾರ್ಥಿಸುತ್ತೇವೆ.

---

ಶ್ರೀಮತ್ಪರಮ ಹಂಸೇತ್ಯಾದಿ ಬಿರುದಾಂಕಿತರಾದ ಆವನಿ ಸಂಸ್ಥಾನದ ಪೀಠಾಧಿಷ್ಠಿತರಾದ ಜಗದ್ಗುರು **ಶ್ರೀ ವಿದ್ಯಾರಣ್ಯಭಾರತೀ** ಮಹಾಸ್ವಾಮಿಗಳವರು ಅನುಗ್ರಹಿಸಿಕೊಟ್ಟ ಅಭಿಪ್ರಾಯವು.

"ಮಾಯಾಧೀನ ಜೀವನ ಸಂಸಾರ ಪರಿಭ್ರಮಣ ವೃತ್ತದ ಚರಿತ್ರೆಯಲ್ಲಿ ಅಹಂಕಾರಾದಿ ದುಷ್ಟ ಚತುಷ್ಟಯಗಳನ್ನು ಸಂಹಾರಮಾಡಿ, ಯೋಗಾರೂಢನಾಗಿ ಸ್ವಸ್ವರೂಪ ಜ್ಞಾನಾಸ್ಥಿತನಾಗುವ ವಿಧಾನವನ್ನು ತೋರುವ, ಶ್ರೀಮದ್ವಾಲ್ಮೀಕಿರಾಮಾಯಣದ ಸದಭಿಪ್ರಾಯವನ್ನು ಪ್ರತಿಪಾದಿಸುವ, ಈ ಗ್ರಂಥವು ನಿಮ್ಮ ಇಷ್ಟಾರ್ಥ ಸಿದ್ಧಿಯನ್ನುಂಟುಮಾಡುವುದಲ್ಲದೆ ಸಕಲ ಮುಮುಕ್ಷುಗಳಿಗೂ ಸುಪಥ ಪಾಥೇಯವಾಗಿ ಶಾಶ್ವತವಾಗಿ ರಂಜಿಸಲೆಂದು ಶ್ರೀಶಾರದಾ ಚಂದ್ರಮೌಳೀಶ್ವರ ಸ್ವಾಮಿಯವರನ್ನು ಅನವರತ ಪ್ರಾರ್ಥಿಸುತ್ತೇವೆ"



ಶ್ರೀ ಕೂಡಲಿ ಶೃಂಗೇರಿ ಜಗದ್ಗುರು ಸಂಸ್ಥಾನದ ಸರ್ವಾಧಿಕಾರಿಗಳು ಮತ್ತು ಧಾರವಾಡದ ಶ್ರೀ ಶಂಕರಾಚಾರ್ಯರವರ ಪಾಠಶಾಲಾ ಪ್ರಿನ್ಸಿಪಾಲರಾದ **ವೇ॥ ಬ್ರಂಹ್ಮ॥ ಶ್ರೀ॥ ವಿದ್ವಾನ್॥ ನಾಗೇಶಶಾಸ್ತ್ರಿಗಳವರ** ಅಭಿಪ್ರಾಯವು.

ಮಹಾರಾಜಶ್ರೀ ಶ್ರೀರಾಮಭಕ್ತ ಪರಾಯಣ ಎಡತೊರೆ ಸುಬ್ಬರಾಯರು ರಚಿಸಿದ **ಶ್ರೀಮದ್ರಾಮಾಯಣದ ಅಂತರಾರ್ಥ** ವೆಂಬ ಪುಸ್ತಕವನ್ನು ಅವಲೋಕನ ಮಾಡಿದೆನು. ಲೋಕೋದ್ಧಾರಕವಾಗಿ ಲೀಲಾಮಾನುಷವಿಗ್ರಹವನ್ನು ಧರಿಸಿ ಅನೇಕ ಅದ್ಭುತ ಚರಿತ್ರೆಗಳನ್ನು ಮಾಡಿ ವ್ಯವಹಾರವಲ್ಲದೆ ಪರಮಾರ್ಥವನ್ನು ಕೂಡ ಅಧಿಕಾರಾನುಗುಣವಾಗಿ ಜನರಿಗೆ ತೋರ್ಪಡಿಸಿರುವುದಾಗಿ ಶ್ರೀರಾಮ ಕೃಷ್ಣಾದಿಗಳ ಅವತಾರಗಳಲ್ಲಿನ ಲೀಲೆಯಿಂದ ತಿಳಿದುಬರುವುದು. ಅವತಾರದ ವ್ಯವಹಾರಿಕ ಚರಿತ್ರವನ್ನು ಮಾತ್ರ ಪರ್ಯಾಲೋಚಿಸಿ ಕೆಲವು ಅಲ್ಪಜ್ಞರು ಸಂಕುಚಿತವಾದ ಸ್ವಬುದ್ಧಿಗೆ ಅನುಸರಿಸಿ ದೋಷಾರೋಪಣೆಗಳನ್ನು ಕೂಡ ಮಾಡಲು ಸಂಕೋಚಮಾಡುವುದಿಲ್ಲ ಈ ಮಾತನ್ನೇ ಭಗವಂತನು ಗೀತೆಯಲ್ಲಿ "ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಂ | ಪರಂಭಾವ ಮಜಾನಾಂತೋ ಮಮಭೂತ ಮಹೇಶ್ವರಂ" ಎಂದಪ್ಪಣೆ ಕೊಟ್ಟಿರುವನು. ಮಹಾತ್ಮರು ಮಾತ್ರ ಭಗವಚ್ಚರಿತ್ರೆಯಲ್ಲಿರುವ ಪಾರಮಾರ್ಥಿಕ ಅಂಶವನ್ನು ಕಂಡುಹಿಡಿದು ಅದರಿಂದ ತಮಗೆ ಅಧ್ಯಾತ್ಮಜ್ಞಾನದ ವಿಕಾಸವಾಗುವಂತೆ ಪ್ರಯತ್ನಿಸುವರು. ಶ್ರೀ ಸುಬ್ಬರಾಯರವರು ಶ್ರೀರಾಮ ಚರಿತ್ರೆಯಲ್ಲಿನ ಅಧ್ಯಾತ್ಮಭಾಗವನ್ನು ತಿಳಿಯಲಪೇಕ್ಷಿಸುವ ಭಕ್ತರಿಗೋಸ್ಕರವಾಗಿ ಬಹು ಶ್ರಮದಿಂದ ಅಂತರಾರ್ಥವನ್ನು ರಚಿಸಿ ಶ್ರೀರಾಮಾಯಣ ಮತ್ತು

ತತ್ವಪ್ರೇಮಿಯಾದ ಜನತೆಯನ್ನು ಬಹು ಉಪಕೃತವನ್ನಾಗಿ ಮಾಡಿರುವರು. ಈ ಅಂತರಾರ್ಥವು ಅಧ್ಯಾತ್ಮಜ್ಞಾನಸ್ವರೂಪವನ್ನೂ ಅದಕ್ಕೆ ಸಾಧನವಾದ ಯೋಗಶಾಸ್ತ್ರದ ರಹಸ್ಯವನ್ನೂ ಬಹು ಚೆನ್ನಾಗಿ ತಿಳಿಸಿಕೊಡುವುದು. ಈ ಗ್ರಂಥಕಾರರು ಲೌಕಿಕ ಕಾರ್ಯದಲ್ಲಿ ವ್ಯಾಪೃತರಾಗಿದ್ದರೂ ಸುಕೃತ ವಿಶೇಷದಿಂದ ಈವಿಧವಾದ ಸಾರಗರ್ಭಿತವಾದ ಗ್ರಂಥವನ್ನು ರಚಿಸಿದ್ದು ಬಹು ಶ್ಲಾಘನೀಯವಾಗಿದೆ. ಈ ಗ್ರಂಥವನ್ನು ಜಿಜ್ಞಾಸುಗಳು ಪರವಾದರದಿಂದ ಸಂಗ್ರಹಿಸಿ ಇದರ ವಾಚನದಿಂದ ತತ್ವವನ್ನು ತಿಳಿದುಕೊಂಡು ಸಚ್ಚಿದಾನಂದ ಸ್ವರೂಪನಾದ ಶ್ರೀಜಾನಕೀ ಜಾನಿಯ ಅನುಗ್ರಹಕ್ಕೆ ಪಾತ್ರರಾಗಲೆಂತಲೂ, ಈ ಗ್ರಂಥಕಾರರಿಗೆ ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿಯಾಗಲೆಂತಲೂ ಆಶಿಸುತ್ತೇನೆ.



ಶ್ರೀ ಶೃಂಗೇರೀ ಶ್ರೀ ಜಗದ್ಗುರು ಸಂಸ್ಥಾನದ ಪಾಠಶಾಲಾ ವಿಶ್ರಾಂತ ಅಧ್ಯಕ್ಷರು **ವೇ|| ಬ್ರಂ|| ಶ್ರೀ|| ನರಸಿಂಹಮೂರ್ತಿ ಶಾಸ್ತ್ರಿಗಳವರ** ಅಭಿಪ್ರಾಯವು.

ಮ|| ರಾ|| ಯಡತೊರೆ ಸುಬ್ರಾಯರವರು " **ಶ್ರೀಮದ್ರಾಮಾಯಣದ ಅಂತರಾರ್ಥ** " ಗ್ರಂಥವನ್ನು ಶ್ರೀ ಶ್ರೀ ಜಗದ್ಗುರು ಮಹಾಸ್ವಾಮಿಗಳವರ ಕರುಣಾಕಟಾಕ್ಷಕ್ಕೆ ಪಾತ್ರವಾದದ್ದನ್ನಾಗಿ ಮಾಡಬೇಕೆಂದು ಶೃಂಗೇರಿಗೆ ಬಂದಿದ್ದ ಕಾಲದಲ್ಲಿ ಗ್ರಂಥವನ್ನು ಪ್ರಥಮದಲ್ಲಿ ನಾನು ಪರಿಶೀಲಿಸಿದೆನು. ಅಲ್ಲದೆ ಮುದ್ರಿತವಾದ ಅನಂತರದಲ್ಲೂ ಅವಲೋಕಿಸಿದೆನು ಈ ಗ್ರಂಥವು ಜ್ಞಾನಯೋಗಗಳ ಸಾರವಾಗಿ ತನ್ನನ್ನು ತಾನು ತಿಳಿದುಕೊಳ್ಳುವ ಅಮೃತಪ್ರಾಯವಾದ ಸ್ವಾನುಭವದ ಮಾರ್ಗವನ್ನು ವ್ಯಕ್ತಪಡಿಸುವುದು. ಈ ಗ್ರಂಥವನ್ನು ನಾನು ಓದಿಸಿ ಕೇಳುವ ಕಾಲದಲ್ಲಿ ಈ ಗ್ರಂಥಕರ್ತರಿಗೆ ಸಂಸ್ಕೃತದಲ್ಲಷ್ಟೊಂದು ಪರಿಶ್ರಮವಿದ್ದಂತೆ ಕಂಡು ಬರಲಿಲ್ಲ. ಆದರೆ ಈ ಗ್ರಂಥರಚನಾಕ್ರಮವನ್ನು ಕೇಳಿ ನನಗೆ ಆಶ್ಚರ್ಯವಾಯಿತು. ಶ್ರೀರಾಮಚಂದ್ರಸ್ವಾಮಿಯ ಲೀಲಾವತಾರದಲ್ಲಿನ ರತ್ನಪ್ರಾಯವಾದ ಮೋಕ್ಷ ಮಾರ್ಗದ ಅಂತರಾರ್ಥವನ್ನು ಇದುವರೆಗೂ ಯಾರೂ ಹೊರಪಡಿಸಿರಲಿಲ್ಲ. ಪ್ರಥಮದಿಂದ ಅಂತ್ಯದವರೆಗೂ ಶ್ರೀಮದ್ರಾಮಾಯಣಕ್ಕೆ ಶಾಸ್ತ್ರಸಮ್ಮತವಾದ ಅಂತರಾರ್ಥವು ಹೊಳೆದು ಅಮೋಘವಾದ ಉಪನಿಷದ್ವಾಕ್ಯಗಳೊಡನೆ ಅನ್ವಯಿಸಿ ಬರೆಯುವುದು ಪುಸ್ತಕಾವಲೋಕನ ಪಾಂಡಿತ್ಯಮಾತ್ರದಿಂದ ಸಾಧ್ಯವಾಗಲಾರದೆಂದೂ, ಜಗನ್ಮಾತೆಯ ವರಪ್ರಸಾದದ ಫಲವೇ ಆಗಿದೆಯೆಂದೂ ನಾನು ಅಭಿಪ್ರಾಯಪಡುತ್ತೇನೆ. ಶ್ರೀ ಶ್ರೀ ಜಗದ್ಗುರು ಮಹಾಸ್ವಾಮಿಗಳವರೂ ಕೂಡ ಈ ಗ್ರಂಥವಿಚಾರದಲ್ಲಿ ಅತ್ಯಂತ ಸಂತೋಷಪಟ್ಟು ನನ್ನೊಡನೆ ಅಪ್ಪಣೆ ಮಾಡಿರುತ್ತಾರೆ.

ಅಲ್ಲವೆ ಮ|| ರಾ|| ಸುಬ್ರಾಯರಿಂದ ಈಚೆಗೆ ರಚಿತವಾದ ರತ್ನಪ್ರಾಯವಾದ ರಹಸ್ಯಾರ್ಥಗಳನ್ನೊಳಗೊಂಡ "**ಸಂಧ್ಯಾವೀಣಾತತ್ವಾರ್ಥ**" ಗ್ರಂಥವನ್ನೂ ಅವಲೋಕಿಸಿದೆನು ಮುಖ್ಯವಾಗಿ ಶ್ರೀ ಗುರುಗಳವರ ಶ್ರೀ ಶಾರದಾಂಬಾ ಅನುಗ್ರಹದ ಫಲವೇಯೆಂದು ಹೇಳಬೇಕಾಗಿದೆ.

ಈ ಗ್ರಂಥಕರ್ತರು ಪರಮ ಭಕ್ತರು, ಅಂತರ್ಮುಖಿಗಳು. ಈ ಸದ್ಗ್ರಂಥಗಳು ಲೋಕದಲ್ಲಿ ಪ್ರಖ್ಯಾತಿಹೊಂದಿ ಆಸ್ತಿಕಮಹನೀಯರ ಹೃದಯಾಹ್ಲಾದಕರವಾಗಿರಲೆಂದು ಶ್ರೀಜಗದಂಬೆಯನ್ನು ಪ್ರಾರ್ಥಿಸುತ್ತೇನೆ



ಹೈದರಾಬಾದ್ ಸಂಸ್ಥಾನದಲ್ಲಿ ಶ್ರೀಮತ್ಕೃಷ್ಣಾ ನದೀತೀರದಲ್ಲಿರುವ ವೀರಘಟ್ಟದ ಶ್ರೀಮತ್ಕಣ್ವಮಠ ಪೀಠಾಧಿಷ್ಠಿತ ಶ್ರೀಮನ್ಮಾಧವ ತೀರ್ಥ ಗುರುಕುಲ ಸಂಭೂತ ಶ್ರೀಮದ್ವಿದ್ಯಾಧಿರಾಜ ತೀರ್ಥ ಕರಕಮಲ ಸಂಜಾತ ಶ್ರೀಮದ್ವಿದ್ಯಾವಿರಾಜತೀರ್ಥ **ಶ್ರೀಪಾದಸ್ವಾಮಿಗಳವರು** ಅನುಗ್ರಹಿಸಿಕೊಟ್ಟ ಅಭಿಪ್ರಾಯವು.

ಶ್ರೀಮದನಂತ ಕಲ್ಯಾಣಗುಣಪರಿಪೂರ್ಣಸ್ಯ ಯೋಗೀಶ ಹೃದಬ್ಜ ಕೋಶನಿವಾಸಿನೊ ಭಗವತಃ ಶ್ರೀರಾಮಸ್ಯ ತತ್ವವಿಚಾರಾವಬೋಧಕಃ **ಶ್ರೀಮದ್ರಾಮಾಯಣಾಂತರಾರ್ಥ** ಪ್ರಕಾಶಕೋಽಭಿಧೋಽಯಂಗ್ರಂಥಃ ಪ್ರಾಕೃತಭಾಷಾ ಸೌಷ್ಟವೇನ ಸಕಲ ಪಾಣ್ಯಾಚಭವದ್ಭಿರ್ವಿರಚಿತೋನೇನ ಗ್ರಂಥೇನೇದಾನೀಂತನೇಕಾಲೇ ಸರ್ವೇಷಾಮಪಿ ಮಂದಮನೀಷಾಣಾಂ ಮಹದುಪಯೋಗೋಭವೇದೇವ



ನ್ಯಾಯಾಚಾರ್ಯ, ಮೀಮಾಂಸವಿದ್ವಾನ್, ಮೀಮಾಂಸತೀರ್ಥ, ವೇದಾಂತ **ವಾ**ಗೀಶ, ವೇದಕೇಸರಿ, ಸಾಂಖ್ಯಯೋಗಶಿಖಾಮಣಿ, ಮೀಮಾಂಸರತ್ನ **ವೇ||ಬ್ರ||ಶ್ರೀ**ಮಾನ್||ಮೈಸೂರು **ತಿರಮಲ ಕೃಷ್ಣಮಾಚಾರ್ಯರವರ** ಅಭಿಪ್ರಾಯವು

ಶ್ರೀಮತ್, ಬ್ರಹ್ಮಶ್ರೀ, ವೇದಮೂರ್ತಿಗಳಾದ ಯಡತೊರೆ ಸುಬ್ರಾಯರವರಿಂದ ರಚಿತವಾದ "**ಶ್ರೀಮದ್ವಾಲ್ಮೀಕಿ ರಾಮಾಯಣಾಂತರಾರ್ಥ**" ಎಂಬ ಈ ಸದ್ಗ್ರಂಥದಲ್ಲಿ ಕಥಾಸಾರಾಂಶದೊಂದಿಗೆ ಅಧ್ಯಾತ್ಮ ತತ್ವವೂ ಮತ್ತು ಅದಕ್ಕೆ ಮುಖ್ಯಮಾರ್ಗವಾದ ಯೋಗರಹಸ್ಯಸಾರವೂ ಬಹು ಸುಂದರವಾಗಿಯೂ, ಸಾರವತ್ತಾಗಿಯೂ ನಿರೂಪಿತವಾಗಿದುತ್ತೆ.

ಅತ್ಯುತ್ತಮವಾದ ಈ ಮಾನವ ಜನ್ಮವನ್ನು ಹೊಂದಿದ ಜೀವಿಯು ಮಾಡಬೇಕಾದ ಕರ್ತವ್ಯವೂ ಅದರ ಫಲವೂ ಎಂತಹುದೆಂಬುದು ಈ ಗ್ರಂಥದಲ್ಲಿ ಉದಹರಿಸಿರುವ ಚಿತ್ರಪಠಗಳಿಂದಲೇ ಸುಲಲಿತವಾಗಿ ಗೋಚರವಾಗುವುದು.

ಈ ಗ್ರಂಥಕರ್ತರಿಗೆ ಈ ಗ್ರಂಥರಚನಾ ಸಾಮರ್ಥ್ಯವು ಪೂರ್ವಜನ್ಮದ ಸಿದ್ಧಿ ಮತ್ತು ಶ್ರೀರಾಮಾನುಗ್ರಹದ ಫಲವೇ ಸರಿ. ಮಂತ್ರ, ಲಯ, ಹಠ, ರಾಜಯೋಗಗಳೆಂಬ ನಾಲ್ಕು ಯೋಗಮಾರ್ಗಗಳನ್ನೂ ಒಂದಕ್ಕೊಂದು ಮಿಶ್ರವಾಗದಂತೆ ಪ್ರಕಟಿಸಿರುವ ಈ ಸದ್ಗ್ರಂಥವು ನಮ್ಮ ಸಂಶಯಗ್ರಂಥಿ ಭೇದನವನ್ನುಮಾಡಿ ಆತ್ಮಸ್ವರೂಪವನ್ನು ತೋರಿಸುವುದರಲ್ಲಿ ಸಂದೇಹವಿಲ್ಲವೆಂದು ನಾನು ಪ್ರಮಾಣಿಸಬಲ್ಲೆನು.

ದ್ವೈತ, ಅದ್ವೈತ, ವಿಶಿಷ್ಟಾದ್ವೈತಗಳೆಂಬ ಮೂರು ಸಿದ್ಧಾಂತಗಳೂ ಪರಸ್ಪರ ವಿರೋಧಿಸದಂತೆ ಈ ಗ್ರಂಥಕರ್ತರು ಅನೇಕ ಉಪನಿಷತ್ ಸಾರವಾಕ್ಯಗಳನ್ನು ಉದಾಹರಿಸಿ ಸ್ವಾನುಭವದೊಂದಿಗೆ ವಿಚಾರಿಸಿರುತ್ತಾರೆ. ಆಸ್ತಿಕ ಮಹನೀಯರಿದನ್ನು ಅವಲೋಕಿಸಿ ಸಾರಗ್ರಾಹಿಗಳಾಗಿ ಶಾರೀರ, ಆಧ್ಯಾತ್ಮಿಕ ತತ್ವನಿಷ್ಠರಾಗಲು ಸಂದೇಹವಿಲ್ಲ. ಇಂತಹ ಗ್ರಂಥಕರ್ತರು ಪ್ರಕೃತಸ್ಥಿತಿಯಲ್ಲಿ ವಿರಳರೆಂದೇ ವಚಿಸಬಲ್ಲೆನು ಪ್ರತಿಯೊಬ್ಬರಲ್ಲಿಯೂ ಈ ಗ್ರಂಥವು ಇರತಕ್ಕದ್ದಾಗಿದೆ.



ಮೈಸೂರು ಶ್ರೀಮನ್ಮಹಾರಾಜರವರ ಆಸ್ಥಾನಮಹಾವಿದ್ವಾನ್ ವೇ || ಬ್ರಹ್ಮ || ಶ್ರೀ || **ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳವರ** ಅಭಿಪ್ರಾಯವು

ಎಡತೊರೆ ಸುಬ್ಬರಾಯ ಶಾಸ್ತ್ರಿಭಿಃ ಪ್ರತಿಪಾದಿತಂ ಶ್ರೀಮದ್ರಾಮಾಯಣ ನಿಗೂಢ ತತ್ವ ಪ್ರಕಾಶನಂ (ರಾಮಾಯಣಾಂತರಾರ್ಥಾಭಿಧಾನಂ) ಸಮಗ್ರ ಮಾಲೋಕಯಂ | ತತ್ರಚ ಪ್ರಾಸಂಗಿಕ ವಿಷಯಾಣಾಂ ವೇದಾಂತ ಯೋಗ ರಹಸ್ಯಾರ್ಥನಿರೂಪಣಂ ಸಯುಕ್ತಿಕಂ ಸಪ್ರಮಾಣಂಚ ಸಮ್ಯಕ್ಪ್ರದರ್ಶಿ | ಅಂಡ ಬ್ರಂಹ್ಮಾಂಡ ಯೋರ್ನಿರವಶೇಷಂ ಸಾಮರಸ್ಯಂಚ ನಿತರಾಮುಭ್ಯದಾಯಿ | ಬ್ರಹ್ಮ ವಿಜಿಜ್ಞಾಸೂನಾ ಮತ್ಯಂತೋಪಕಾರಕ ಮಿದಮಿತಿ ಪ್ರತೀಮಃ | ಅಪೂರ್ವೋಯಂ ಸಂದರ್ಭಃ ಪರಾಂಮುದಮಾವಹತಿ | ದುರೂಹೆ ದುಸ್ಸಾಧ್ಯೆಮಹತ್ಯಸ್ಮಿನ್‌ಕಾರ್ಯಾಭಿಯೋಗೆ ಪ್ರವೃತ್ತಿಃ ಸುಕೃತೋಪಚಯಾದ್ವಾ | ಪರದೆವತಾ ಪ್ರಸಾದಾದ್ವಾ ಕ್ವಚಿತ್ ಕದಾಚಿತ್ ಕಸ್ಮಿಂಶ್ಚಿತ್ ಪುರುಷ ವಿಶೇಷ ಏವಸಂಪತ್ಸ್ಯತೆ | ನಾನ್ಯತ್ರ | ಮಹಾನಯಮಪಿ ಪ್ರಬಂಧಸ್ಸುಕರ ಮಧ್ಯಾತ್ಮ ಬೋಧಮುಪ ಜನಯತಿ ಪಠಿತ್ರೂಣಾಂ | ಶ್ಲಾಘ್ಯಜನ್ಮನಾಂ ಪ್ರಬಂಧ ಕರ್ತೄಣಾ ಮುಪಕಾರಶ್ಚಿರ ಸ್ಮರಣೀಯೋ ಭೂಯಾದಿತಿ ಪ್ರಬಂಧ ಪಠನಾದರ ಸ್ಸರ್ವೇಷಾಂ ಸಂಪತ್ಸ್ಯತಾಮಿತಿಚ ನಿತ್ಯ ಮಾಶಾಸ್ತೆ.

---

ಶ್ರೀಮದ್ ಮೈಸೂರು ಮಹಾರಾಜರವರ ಆಸ್ಥಾನದ ಮಹಾವಿದ್ವಾನ್ ಪೌರಾಣಿಕರತ್ನ ವೇ|| ಬ್ರಂ|| ಶ್ರೀ|| ಹೊಳವನಹಳ್ಳಿ **ಶೇಷಾಚಾರ್ಯರವರ** ಅಭಿಪ್ರಾಯವು.

ಶ್ರೀಮನ್|| ಮ|| ರಾ|| ಯಡತೊರೆ ಸುಬ್ರಾಯರು ಪೂರ್ವಾರ್ಜಿತ ಪುಣ್ಯದಿಂದ ಶ್ರೀರಾಮಭಕ್ತರಾದರು. ಇವರು ಶ್ರೀರಾಮೋತ್ಸವ ಸೇವಾದಿಗಳನ್ನು ತ್ರಿಕರಣಶುದ್ಧಿಯಿಂದ ಬಹುವರ್ಷಗಳಿಂದ ಮಾಡಿದರು. ಪ್ರಸನ್ನನಾದ ಶ್ರೀರಾಮಚಂದ್ರಮೂರ್ತಿಯ ಪ್ರೇರಣೆಯಿಂದಲೇ ಶ್ರೀಮದ್ರಾಮಾಯಣದ ಗೂಢಾರ್ಥವನ್ನು ಅಧ್ಯಾತ್ಮಪರವಾಗಿ ನಿರೂಪಿಸುವ ವಿಸ್ತಾರವಾದ ಗ್ರಂಥವನ್ನು ರಚಿಸಿರುತ್ತಾರೆ. ಇವರು ಸಂಸ್ಕೃತ ವಿದ್ಯಾವ್ಯಾಸಂಗ ವಿಶೇಷವಾಗಿ ಮಾಡದೆ ಇದ್ದರೂ ಇವರಿಗೆ ಗೂಢಾರ್ಥ ಸ್ಫುರಣವು ಶ್ರೀರಾಮಾನುಗ್ರಹದಿಂದಲೇ ಆಗಿರುವುದಾಗಿ ತಿಳಿಯಬೇಕಾಗಿದೆ. ದ್ರವ್ಯೋಪಪತ್ತಿ ಇಲ್ಲದಿದ್ದರೂ ಲೋಕೋಪ ಕಾರ ಕುತೂಹಲಿಗಳಾಗಿ ಮುದ್ರಣಮಾಡಿಸಿರುತ್ತಾರೆ. ತತ್ವಾರ್ಥ ಗ್ರಹಣಮಾಡುವ ಜನರಿಗೆ ಅತ್ಯುಪಕಾರಕವಾಗಿರುವ ಈ ಗ್ರಂಥವನ್ನು ನಾನು ನೋಡಿ ಬಹು ಸಂತುಷ್ಟನಾಗಿರುತ್ತೇನೆ. ವಿದ್ಯಾಪಕ್ಷಪಾತಿಗಳೂ ಮತ್ತು ಶ್ರೀರಾಮಭಕ್ತರೂ ಆದ ಮಹಾಜನರು ಈ ಪುಸ್ತಕವನ್ನು ತೆಗೆದುಕೊಂಡು ಆಮೂಲಾಗ್ರವಾಗಿ ಪಠನ ಮಾಡಿ ಗ್ರಂಥಕಾರರ ಶ್ರಮವನ್ನು ಸಾರ್ಥಕಪಡಿಸಬೇಕೆಂದು ಕೋರುತ್ತೇನೆ.



ದ್ರಾವಿಡ ದಿವ್ಯಪ್ರಬನ್ಧವನ್ನು ಸಂಸ್ಕೃತ ಶ್ಲೋಕವಾಗಿ ತರ್ಜುಮೆ ಮಾಡಿ ರುವ ಮತ್ತು ವೇದಾಂತ ಗ್ರಂಥಗಳನ್ನು ರಚಿಸಿರುವ, ಬೆಂಗಳೂರು ಸೆಂಟ್ರಲ್ ಕಾಲೇಜ್ ರಿಟೈರ್ಡ್ ಸಂಸ್ಕೃತ ಪ್ರೊಫೆಸರ್ **ಶ್ರೀಮಾನ್ || ವೇ || ಎಂ. ಟಿ. ನರಸಿಂಹ ಅಯ್ಯಂಗಾರ್ರವರ** ಅಭಿಪ್ರಾಯವು.

“ಮಲ್ಲೇಶ್ವರದಲ್ಲಿರುವ ಮ|| ರಾ|| ಎಡತೊರೆ ಸುಬ್ಬರಾಯರನ್ನು ಅನೇಕ ಸಂವತ್ಸರಗಳಿಂದ ಬಲ್ಲೆನು. ಇವರು ಶ್ರೀರಾಮಚಂದ್ರಸ್ವಾಮಿಯ ಪರಮ ಭಕ್ತರು ಯೋಗಾನುಷ್ಠಾನಪರರು ಇದೇ ಮಲ್ಲೇಶ್ವರದಲ್ಲಿ ರಾಮಭಜನ ಸಭೆಯ ಕಾರ್ಯಗಳಲ್ಲಿ ಮುಖ್ಯಪಾತ್ರವನ್ನು ವಹಿಸಿದ್ದರು ಇವರು ರಚಿಸಿರುವ “ ಶ್ರೀಮ ದ್ರಾಮಾಯಣದ ಅಂತರಾರ್ಥ ” ಗ್ರಂಥವನ್ನು ಕೈಬರವಣಿಗೆಯಲ್ಲಿದ್ದಾಗಲೇ ಕೆಲವು ಸಂವತ್ಸರಗಳ ಹಿಂದೆ ಅಲ್ಲಲ್ಲಿ ನನಗೆ ಅವರು ಓದಿ ಹೇಳಿದ್ದುದು ಜ್ಞಾಪಕವಿದೆ. ಈಗ ಅದು ಅಂದವಾಗಿ ಮುದ್ರಿತವಾಗಿದೆ. ಅಮೋಘವಾಗಿಯೂ, ವಿವರವಾಗಿಯೂ, ಯೋಗವೇದಾಂತಗಳ ಸಾರವಾಗಿಯೂ ಇರುವ ಈ ಗ್ರಂಥದ ಕೆಲವು ಭಾಗಗಳನ್ನು ಈಗಲೂ ಪರಿಶೀಲಿಸಿದೆನು. ನನಗೆ ಅತ್ಯಂತ ಸಂತೋಷ

ವಾಯಿತು. ಎಲ್ಲಾ ಭಕ್ತರಿಗೂ, ವಿಚಾರಪರರಿಗೂ **ಈ** ಗ್ರಂಥವು **ಅತ್ಯುಪಯುಕ್ತ**ವಾದುದೆಂದು ಸಂತೋಷದಿಂದ ಸೂಚಿಸುತ್ತೇನೆ.

ಶ್ರೀಮಾನ್ ವೈಸುಬ್ಬರಾಯೊವ್ಯರ ಚಯುದತುಲಂ ಸತ್ಪ್ರಬಂಧಂ ಕಿಲೈನಂ ।
ಶ್ರೀಮದ್ರಾಮಾಯಣಸ್ಯ ಸ್ವರಸ ಶುಭತಮಂ ಯೋಗವೇದಾಂತಸಾರಂ ।
ನೂತ್ನಂ ಕರ್ಣಾಟ ವಾಣ್ಯಾ ಲಲಿತರಚನಯಾ ಸ್ವಾನುಭೂತ್ಯಾನುಚಿಂತ್ಯ ।
ಪ್ರೀತಾಸ್ತುಷ್ಯಂತು ಭಕ್ತಾ ಇತಿಚ ಬಹುಧನಂ ಮುದ್ರಣಾರ್ಥಂ
[ವ್ಯಯಿತ್ವಾ ॥೧॥

ಶ್ರೀಶೃಂಗೇರಿ ಯತೀಶ್ವರಾಯು ತಮಿಮಂ ಭಕ್ತ್ಯಾಸಮರ್ಪ್ಯಸ್ವಯಂ ।
ಧನ್ಯೋಽಸೌವಿಬುಧಾಗ್ರಣೀರಪಿ ವಿರೂಪಾಕ್ಷೋಽಭಿನಂದತ್ಯಮುಂ ।
ಶ್ರೀಮಾನ್‌ಕಲ್ಕಿನೃಸಿಂಹರಾಡಹಮಪಿ ಪ್ರೀತೋಸ್ಮಿಭಾವ್ಯೈಶ್ಶುಭೈಃ ।
ಗಂಭೀರೈರ್ಗಹನೈರಿಹೇತಿನಿತರಾಂ ತುಷ್ಟೋಽಸ್ಮಿವಕ್ತುಂ ಹರಿಃ ॥೨॥

ಪ್ರಾಯೇಣ ದುರ್ಲಭಾ ಭಕ್ತಾ ಯೋಗವೇದಾಂತ ವಿದ್ವರಾಃ ।
ನಾರಜ್ಞಾಸ್ಸಂತು ಸರ್ವೇಽಪೀತ್ಯುದ್ಯಮೋಽಯಂಕವೇಶ್ಶುಭಃ ॥೩॥



ನಂಜನಗೂಡು, ಸಂಸ್ಕೃತಪಾಠಶಾಲಾಧ್ಯಕ್ಷರು ವೇ॥ ಬ್ರಂ॥ ಶ್ರೀ॥ **ನಾರಾಯಣ ಶಾಸ್ತ್ರಿಗಳವರ** ಅಭಿಪ್ರಾಯವು.

ಶ್ರೀಮಾನ್ ಮ॥ಯಡತೊರೆ ಸುಬ್ಬಾಯರವರು ಕೆಲವು ಸಂವತ್ಸರಗಳ ಹಿಂದೆ ಅವರ ಸಂಸಾರದಲ್ಲಿ ಪ್ರಾಪ್ತವಾದ ದುಃಖ ನಿಮಿತ್ತವಾಗಿ ನಂಜನಗೂಡಿಗೆ ಬಂದು ವಾಸಮಾಡುತ್ತಿದ್ದಾಗ ಪಾಠಶಾಲೆಗೆ ಬಂದು ವೇದಾಂತ ಶ್ರವಣಮಾಡುತ್ತಿದ್ದರು ಸಂಸ್ಕೃತ ಭಾಷಾಪರಿಚಯ ವಿಲ್ಲದ್ದರಿಂದ ವೇದಾಂತ ಶಾಸ್ತ್ರದಲ್ಲಿ ಸಾಮಾನ್ಯವಾಗಿ ಪರಿಚಯವಾಯಿತು. ಕೆಲವು ಕಾಲಾನಂತರ ಇದೇ ನಂಜನಗೂಡು ಶ್ರೀಚಾಮುಂಡೇಶ್ವರೀ ದೇವಸ್ಥಾನದಲ್ಲಿದ್ದ ಶ್ರೀ ಸಾಂಬ ಸದಾಶಿವಾನಂದತೀರ್ಥ ಸ್ವಾಮಿಗಳವರ ಅನುಗ್ರಹಕ್ಕೆ ಪಾತ್ರರಾಗಿ ಯೋಗಾನುಷ್ಠಾನದಲ್ಲೂ ಪ್ರವರ್ಧಮಾನರಾಗಿರುವುದನ್ನು ನಾನುಬಲ್ಲೆನು.

ಇವರು ಭಗವತ್ಪ್ರೇರಣೆಯಿಂದ ಬರೆದಿರುವ " **ಶ್ರೀಮದ್ವಾಲ್ಮೀಕಿರಾಮಾಯಣದ ಅಂತರಾರ್ಥ** " ಗ್ರಂಥವನ್ನು ಚೆನ್ನಾಗಿ ಅವಲೋಕನಮಾಡಿರುತ್ತೇನೆ. ಇವರು ಶ್ರೀಮದ್ರಾಮಾಯಣವು ಕೇವಲ ಬಾಹ್ಯವಾದ ಲೌಕಿಕವಾದ ಧರ್ಮಮಾರ್ಗಗಳನ್ನು ಮಾತ್ರವೇ ಬೋಧೆ ಮಾಡತಕ್ಕದ್ದಲ್ಲವೆಂದೂ, ಅಧ್ಯಾತ್ಮಪರವಾದ ಅಂತರಾರ್ಥವೂ ಇರುವುದೆಂಬುದಾಗಿ ಆ ಭಾಗವನ್ನು ಸರ್ವರಿಗೂ ಅನುಭವಕ್ಕೆ ಬರುವಂತೆ ಸಪ್ತಕಾಂಡಗಳ ಕಥಾಸಾರಗಳನ್ನು ಕೊಂಚವೂ ಬಿಡದೆ ಮನುಷ್ಯ

ದೇಹದಲ್ಲಿ ಅನ್ವಯಮಾಡಿ ಬರೆದಿರುವುದು ಇವರ ಭಗವದ್ಭಕ್ತಿ ಮತ್ತು ಭಗವತ್ಕೃಪಾ ಪಾತ್ರತೆಯನ್ನು ವ್ಯಕ್ತಪಡಿಸುತ್ತದೆ. ಅಧ್ಯಾತ್ಮ ಭಾಗವನ್ನೂ ಮತ್ತು ಯೋಗವನ್ನೂ ಜಿಜ್ಞಾಸಮಾಡಬೇಕೆಂಬ ಆಸ್ತಿಕರುಗಳಿಗೆ ಈ ಗ್ರಂಥವು ಅತ್ಯಂತೋಪಕಾರಕವಾಗಿರುವುದೆಂದು ಮನಃಪೂರ್ವಕವಾಗಿ ಅಭಿಪ್ರಾಯ ಪಡುತ್ತೇನೆ.

ಅಲ್ಲದೆ ಮ|| ರಾ|| ಸುಬ್ರಾಯರಿಂದ ರಚಿತವಾದ **ಸಂಧ್ಯಾವೀಣಾತತ್ವಾರ್ಥ** ಗ್ರಂಥವನ್ನೂ ಅವಲೋಕಿಸಿದೆನು ಇದುವರೆಗೂ ಹೊರಪಡದ ಸಂಧ್ಯಾವಂದನೆಯ ಅನೇಕ ರಹಸ್ಯಾರ್ಥಗಳೂ, ನಾದಬ್ರಹ್ಮಸ್ವರೂಪಿಣಿಯಾದ ಶ್ರೀ ಶಾರದಾದೇವಿಯ ಮಹಿಮೆಯನ್ನು ಕೊಂಡಾಡುವ ವೀಣೆಯ ಅಂತರ್ಯವಾದ ತತ್ವಗಳೂ ಈ ಗ್ರಂಥದಲ್ಲಿರುವುವು. ಈ ತತ್ವಸ್ಫುರಣೆಯು ಜನ್ಮಾಂತರ ಸುಕೃತ ವಿಶೇಷದಿಂದಲೇ ಲಭ್ಯವಾಗಿರುವುದಲ್ಲದೆ ಅನ್ಯಥಾ ಇಲ್ಲ. ಕಾರಣವೇನೆಂದರೆ ಮ|| ಸುಬ್ರಾಯರು ಜನ್ಮಾಂತರದಲ್ಲಿ ಪಾಳೆಯಗಾರರಾಗಿದ್ದ ಸ್ಥಳದಲ್ಲಿ ಶ್ರೀರಾಮೇಶ್ವರ ದೇವಾಲಯವೂ ಶ್ರೀಸಪ್ತಮಾತೃಕಾಂಬಾ ದೇವಾಲಯವೂ ಇರುವವೆಂಬ ವಿಚಾರ ಈಗ್ಗೆ ೫ ಸಂವತ್ಸರಗಳ ಹಿಂದೆಯೆ ರಚಿತವಾದ ಶ್ರೀಮದ್ರಾಮಾಯಣದ ಅಂತರಾರ್ಥಗ್ರಂಥದಲ್ಲಿ ತಿಳಿಸಿರುವರು ಆಯಾಯಾ ದೇವತಾಶಕ್ತಿಗಳ ಉಪಾಸನಾಬಲದಿಂದ ಆಯಾಯಾ ದೇವತಾನುಗ್ರಹವಾಗಿ ಆ ದೇವತಾಮಹಿಮೆ ಗಳೇ ಉಪಾಸಕನಿಗೆ ಸ್ಫುರಣೆಗೆ ಬರುವುದರಿಂದ ಶ್ರೀರಾಮೇಶ್ವರನ ಅನುಗ್ರಹವಾಗಿ ಶ್ರೀರಾಮಕಥಾ ಅಂತರಾರ್ಥವೂ ಬ್ರಾಹ್ಮೀಶಕ್ತಿಯಾದ ಶ್ರೀಸಪ್ತಮಾತೃಕಾಂಬಾ ಅನುಗ್ರಹವಾಗಿ ವೀಣಾರಹಸ್ಯವೂ ಹೊರಪಟ್ಟಿರುವುದರಲ್ಲಿ ಸಂದೇಹವಿಲ್ಲ. ಮುಖ್ಯವಾಗಿ ಸದ್ಗುರುಗಳ ಮತ್ತು ದೇವತಾನುಗ್ರಹಕ್ಕೆ ಪಾತ್ರರಾದರೆ ಕಾಲಾಂತರದಲ್ಲಿ ಅದು ಫಲಕ್ಕೆ ಬರುತ್ತೆಂಬ ವಿಚಾರಕ್ಕೆ ಮ|| ಸುಬ್ರಾಯರ ವಿಚಾರವೂ ಒಂದು ಉದಾಹರಣೆಯಾಗಿದೆ.



ನಿರುಪಮವಾಣಿ, ಶ್ರೀರಾಮಕಥಾಭೂಷಣ, ವೇ|| ಬ್ರ|| ಶ್ರೀ ಪಂಡಿತ|| ತುರುವೇಕೆರೆ **ಬೇಟೆರಾಯದೀಕ್ಷಿತರವರ** ಅಭಿಪ್ರಾಯವು

ಆಲೋಕಿತಾ ಮಯಾ **ಶ್ರೀಮದ್ರಾಮಾಯಣಾಂತರಾರ್ಥ** ಪ್ರಕಾಶಿಕಾ ಮೋಕ್ಷಪ್ರದೀಪಿಕಾ| **ಸಂಧ್ಯಾವೀಣಾತತ್ವಾರ್ಥ** ಪ್ರಕಾಶಿಕಾ ಚೇತಿ | ಅಮಾನುಷ ಮನೋವೈಚಿತ್ರ್ಯ ಚಿತ್ರಿತೇನ ಶ್ರೀಮರ್ಾ ಯಡತೊರೆ ಸುಬ್ರಾಯ ಶರ್ಮಣಾ ವಿರಚಿತಾ ಪ್ರಬಂಧದ್ವಯೀ | ಉಲ್ಲಸತಿಸೇಯಂ ಮುಂಜುಳತರಭಾವ ಶೈಲೀ ಮಂಜುಳ | ಅಪಿಚ ವೇದ ವೇದಾಂತ ಯೌಗಿಕ ನಿಬಂಧನಕಾರ್ಯವಾಕ್ಯ ತದರ್ಥ ಪ್ರಕಾಶನ ಸಹಿತಾಚ ಸುಹೃದಯ ಹಿತಾ | ಕಿಂತು ಅಂತಸ್ಥಿತ ಸ್ವಾನುಭೂತಿಮಾಂ

ಕೃಷ್ಯ ಬಹಿಃ ಅನ್ಯಾಂ ನಿವೇಶನಂ ಪರಮನುಗ್ರಹಃ ಖಲು ಉಪಾಸನಾ ದೇವತಾಯಾಃ | ಕಿಂ ಬಹು ಲೇಖನೇನ | ಅಸ್ಯಾಃ ಪ್ರಬಂಧದ್ವಯ್ಯಾಃ ಪಠನೇನ ಸಂಭವಂತ್ಸಿ ಸರ್ವಾರ್ಥಾಃ | ಜೇಜೀಯತಾಮೇಷಾ ಕೃತಿದ್ವಯೀ ಆ ಸೂರ್ಯಾಚಂದ್ರತಾರಕಂ |



ಮೈಸೂರು, ಬರೋಡ, ತಿರುವಾಂಕೂರು ಸಂಸ್ಥಾನಗಳ ಮಂತ್ರಿಗಳಾಗಿದ್ದ **ಮ|| ರಾ|| ರಾ|| ವಿ. ಪಿ. ಮಾಧವರಾವ್ ಸಿ. ಐ. ಇ** ಯವರ ಅಭಿಪ್ರಾಯವು

ಯಡತೊರೆ ಸುಬ್ರಾಯರಿಂದ ರಚಿತವಾದ **"ಶ್ರೀಮದ್ರಾಮಾಯಣದ ಅಂತರಾರ್ಥ"** ಗ್ರಂಥದ ಅನೇಕ ಭಾಗಗಳನ್ನು ಓದಿಸಿ ಕೇಳಿದೆನು. ಶ್ರೀ ಶ್ರೀ ಜಗದ್ಗುರು ಶೃಂಗೇರೀ ಮಹಾಸ್ವಾಮಿಗಳವರೂ, ಮೇಲುಕೋಟೆ ಯತಿರಾಜ ಮಠದ ಮಹಾಸ್ವಾಮಿಗಳವರೂ, ಮಹಾಮಹೋಪಾಧ್ಯಾಯ ವಿದ್ಯಾನಿಧಿ ವೇ|| ಬ್ರಂ|| ಶ್ರೀ|| ವಿರೂಪಾಕ್ಷಶಾಸ್ತ್ರಿಗಳೇ ಮುಂತಾದ ಅನೇಕ ಮಹನೀಯರು ಈ ಗ್ರಂಥ ವಿಚಾರದಲ್ಲಿ ಅತ್ಯಂತ ಸಂತೋಷಪಟ್ಟು ಅನುಗ್ರಹವಾದ ಅಭಿಪ್ರಾಯಗಳನ್ನು ದಯಪಾಲಿಸಿ ಕೊಟ್ಟಿರುವಾಗ ಗ್ರಂಥದ ಮಹತ್ವದ ವಿಚಾರದಲ್ಲಿ ನಾನು ಹೆಚ್ಚಾಗಿ ಬರೆಯಲಾರೆ. ಮುಖ್ಯವಾಗಿ ಸದ್ಗುರುಗಳ ಅನುಗ್ರಹಕ್ಕೆ ಪಾತ್ರರಾಗುವಿಕೆಯು ಕಾಲಾಂತರದಲ್ಲಾದರೂ ಫಲಕ್ಕೆ ಬರುತ್ತೆನ್ನುವುದಕ್ಕೆ ಮ|| ರಾ|| ಸುಬ್ರಾಯರವರ ವಿಚಾರವೂ ಒಂದು ನಿದರ್ಶನವಾಗಿದೆ. ಅಲ್ಲದೆ ಪುರಾಣ ವಿಚಾರದಲ್ಲಿ ಕೆಲವರಿಗಿರತಕ್ಕ ನಾಸ್ತಿಕ್ಯವಾದವನ್ನು ಹೋಗಲಾಡಿಸುವ ಮತ್ತು ಮಹನೀಯರುಗಳು ಸಂತೋಷಪಡುವಂತೆ ಶಾಸ್ತ್ರ ಸಮ್ಮತವಾಗಿರುವ ಇಂತಹ ಜ್ಞಾನಮಾರ್ಗದ ರಹಸ್ಯಾರ್ಥಗಳು ದೈವಾನುಗ್ರಹವಿಲ್ಲದೆ ಸ್ಫುರಿಸುವುದಿಲ್ಲ. ಸರ್ವರೂ ಈ ಅಮೃತಕ್ಕೆ ಭಾಗಿಗಳಾಗಬೇಕೆಂದು ಕೋರುತ್ತೇನೆ.



ಮೈಸೂರು ಯೂನಿವರ್ಸಿಟಿ ರಿಟೈರ್ಡು ರಿಜಿಸ್ಟ್ರಾರ್ ಮತ್ತು ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ ಪ್ರೆಸಿಡೆಂಟರಾದ ಮ|| ರಾ|| **ವಿ. ಸುಬ್ರಹ್ಮಣ್ಯಯ್ಯರವರ** ಅಭಿಪ್ರಾಯವು.

ಶ್ರೀಮಾನ್ ಯಡತೊರೆ ಸುಬ್ರಾಯಶರ್ಮ ಎಂಬುವರು ರಚಿಸಿರುವ ಶ್ರೀಮದ್ರಾಮಾಯಣದ ಅಂತರಾರ್ಥ ಎಂಬ ಗ್ರಂಥವನ್ನು ಬಹು ಆನಂದದಿಂದ ಪಠಿಸಿದೆನು. ಈ ಗ್ರಂಥದಲ್ಲಿ ದೊಡ್ಡದಾದ ಶ್ರೀರಾಮಚರಿತ್ರೆಯಲ್ಲಿನ ಅಂತರಾರ್ಥವನ್ನು ನವೀನರೀತಿಯಲ್ಲಿ ಹೊರಪಡಿಸಿರುವುದು ಅತ್ಯಂತ ಸಂತೋಷಕರವಾಗಿದೆ

ಈ ಗ್ರಂಥರಚನೆಯ ವಿಷಯದಲ್ಲಿ ಇವರು ತಮ್ಮ ಪ್ರತಿಭೆಯನ್ನು ತೋರಿಸಿರುವರಲ್ಲದೆ ಬಹು ಗೌರವದಿಂದ ನೋಡಲ್ಪಡುವ ಶ್ರೀಮದ್ರಾಮಾಯಣದಲ್ಲಿ ರಾಜಯೋಗಸಂಬಂಧವಾದ ಅರ್ಥವನ್ನು ದೊಡ್ಡಪ್ರಯತ್ನದಿಂದ ಕಂಡುಹಿಡಿದಿರುವರು. ಈ ಗ್ರಂಥದ ಯೋಗ್ಯತೆಯ ವಿಷಯದಲ್ಲಿ ಮೈಸೂರು ದೇಶೀಯ ಸುಪ್ರಸಿದ್ಧರಾದ ಪಂಡಿತರೂ ಪೂಜ್ಯರಾದ ಅನೇಕ ಮಠಾಧಿಪತಿಗಳೂ ತಮ್ಮ ತಮ್ಮ ಅನುಮೋದನೆಯನ್ನು ಕೊಟ್ಟಿರುತ್ತಾರೆ. ರಾಜಯೋಗದಲ್ಲಿಯೂ ಮತ್ತು ಶ್ರೀರಾಮತತ್ವಾಮೃತದಲ್ಲಿಯೂ ಆಸಕ್ತಿಯುಳ್ಳ ಸಮಸ್ತರಿಗೂ ಈ ಗ್ರಂಥವು ಬಹು ಉಪಕಾರಕವಾಗಿದೆ



ಮೈಸೂರು ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ ಮೀಮಾಂಸಾ ಪ್ರಧಾನೋಪಾಧ್ಯಾಯರು ವೇ|| ಬ್ರಂಹ್ಮ|| ಶ್ರೀ|| ವಿದ್ವಾನ್ ಅರ್ಕ್ಕೇಕೊಪ್ಪಂ **ಸುಬ್ರಹ್ಮಣ್ಯಶಾಸ್ತ್ರಿಗಳವರ** ಅಭಿಪ್ರಾಯವು.

ವೇ|| ಬ್ರಂ|| ಯಡತೊರೆ ಸುಬ್ಬರಾಯ ಶರ್ಮಭಿಃ ವಿರಚಿತಂ **ಸಂಧ್ಯಾವೀಣಾತತ್ವಾರ್ಥ** ನಾಮಕಂ ಗ್ರಂಥಂ ಆಮೂಲಾಗ್ರಮ ಪಠಿಷಂ | ತತ್ರವೀಣಾಯಾಃ ಗಾಯತ್ರ್ಯಾಶ್ಚ ಅತ್ಯಂತ ಸಾದೃಶ್ಯಮಸ್ತೀತಿ ಸರ್ವಪ್ರಮಾಣಾವಿರೋಧೇನ ನಿರೂಪಿತಂ - ಸದ್ಯುಕ್ತ್ಯಾ ವೇದಾಪೌರುಷೇಯತ್ವಂಚ ಸಮರ್ಥಿತಂ | ಅನ್ಯೇಚ ಸೂಕ್ಷ್ಮತರಾ ವಿಷಯಾಃ ಅತ್ರಪ್ರದರ್ಶಿತಾಃ | ಅತಃ ಏತದ್ಗ್ರಂಥ ಕರ್ತಾರಃ ದೇವತಾನುಗ್ರಹಾದೇವ ಅಮಾನುಷೀಂಶಕ್ತಿಮವಲಂಬ್ಯ ಇಮಂಗ್ರಂಥಂ ವ್ಯರಚಯನ್ನಿತಿ | ಅಯಂ ಗ್ರಂಥಸ್ಸರ್ವೋಪಕಾರಕಶ್ಚ ವರ್ತತ ಇತಿ ಸುದೃಢಮಾವೇದಯಾಮಿ ||

